IX I K. G. Bhat

# ನಗರದ ರಾಣಿ

ವೀರಕೇಸರಿ ಸೀತಾರಾಮಶಾಸ್ತ್ರಿ




ಮೂರ್ತಿ ಏಜನ್ಸೀಸ್ ● ಪ್ರಕಾಶಕರು ● ಮೈಸೂರು

# ಮುನ್ನುಡಿ

ಇದು ಕನ್ನಡ ರಾಜ್ಯದ ಹಿಂದಿನ ಚರಿತ್ರೆಯ ಮೇಲೆ ಆಧಾರ ಮಾಡಿ ಬರೆದಿರುವ ಕಾದಂಬರಿ. ನಾನು ಬರೆದಿರುವ ಚರಿತ್ರೆಯ ಸಂಬಂಧವಾದ ಕಾದಂಬರಿಗಳಲ್ಲಿ ಇದು ಎರಡನೆಯ ಕಾದಂಬರಿ. ಮೊದಲನೆಯದಾದ "ದೌಲತ್" ಕಾದಂಬರಿಯನ್ನು ಓದಿ ಕನ್ನಡ ನಾಡಿನ ಎಷ್ಟೋ ಮಂದಿ ಓದುಗರು ಅಭಿನಂದಿಸಿದ್ದಾರೆ. ಅದು ಶ್ರೀರಂಗ ಪಟ್ಟಣದ ಚರಿತ್ರೆಗೆ ಸಂಬಂಧಪಟ್ಟ ಕಥೆ. ಆ ಕಥೆಯಲ್ಲಿ ನಗರವು ಮುಖ್ಯವಾದ ಸ್ಥಾನ. ಈ ಕಥೆಯೂ ನಗರಕ್ಕೆ ಸಂಬಂಧಿಸಿದುದಾಗಿಯೇ ಇದೆ. ಇದು ನಗರದ ಬಸಪ್ಪನಾಯಕರ ವಂಶದ ಕಟ್ಟಕಡೆಯ ಕಾಲದಲ್ಲಿ ನಡೆದ ಕಥೆ. ಈ ಕಥೆಯು ಕ್ರಿ. ಶ. ೧೭೪೪ ರಿಂದ ೧೭೬೩ರ ವರೆಗೆ ನಡೆದ ಅನೇಕ ಸನ್ನಿವೇಶಗಳನ್ನು ಅವಲಂಬಿಸಿ ರಚಿಸಿರುವ ಕಾದಂಬರಿ.

ಕನ್ನಡದಲ್ಲಿ ಕನ್ನಡನಾಡಿನ ಇತಿಹಾಸದ ಆಧಾರಗಳಮೇಲೆ ಕಾದಂಬರಿಗಳು ಅತಿ ವಿರಳವೆಂದೇ ಹೇಳಬಹುದು. ಕೆಲವು ಕಾದಂಬರಿಗಳು ಇರಬಹುದು. ಮುಂದೆ ಇನ್ನೂ ಕೆಲವು ಬರಬಹುದು. ನನ್ನ ಕಾದಂಬರಿ ಲೇಖನದ ಅನುಭವದಿಂದ ಈ ಐತಿಹ್ಯಗಳನ್ನು ಕಾದಂಬರಿಗಳಾಗಿ ರಚಿಸುವುದರಲ್ಲಿ ಪ್ರಾಪ್ತವಾಗುವ ಕೆಲವು ಕಷ್ಟಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ.

ಕಾದಂಬರಿಯು ಭಾವನಾಮಯವೂ ರಸಪ್ರಧಾನವೂ ಆಗಿರಬೇಕೆಂದು ನನ್ನ ಅಭಿಪ್ರಾಯ. ಸನ್ನಿವೇಶಗಳು ಅಚ್ಚುಕಟ್ಟಾಗಿರಬೇಕು. ಚರಿತ್ರೆಯಲ್ಲಿ ಗ್ರಥಿತವಾಗಿರುವ ವಿಷಯ ಪ್ರಮೇಯಗಳೆಲ್ಲವೂ ಇದಕ್ಕೆ ಅಣಿಯಾಗಿ ಸಿದ್ಧವಾಗಿ ದೊರೆಯುತ್ತವೆಂದು ಹೇಳುವುದು ಕಷ್ಟ. ಆದಾಗ್ಯೂ ಈ ಕಾದಂಬರಿಗಳಲ್ಲಿ ನಾವು ಯಾವ ನಾಯಕ, ನಾಯಕಿ ಪುರುಗಳ ಕಥೆಯನ್ನು ವರ್ಣಿಸುತ್ತೇವೆಯೋ ಆ ವ್ಯಕ್ತಿಗಳ ಗುಣ, ಸ್ವಭಾವ, ಕಾರ್ಯಗಳ ಜಾತಿ, ತತ್ಪರಿಣಾಮ ಅವುಗಳನ್ನು ಮಾತ್ರ ಮುಖ್ಯವಾಗಿ ಪರಿಗಣಿಸಬೇಕು. ದೇಶಕಾಲಗಳೂ ಮುಖ್ಯವಾದವುಗಳೇ. ಇವಿಷ್ಟು ಅಂಶಗಳು ಐತಿಹಾಸಿಕ ಕಾದಂಬರಿಗಳಲ್ಲಿ ಇರಲೇಬೇಕೆಂದು ನಾನು ಭಾವಿಸಿದ್ದೇನೆ. ಸನ್ನಿವೇಶಗಳಿಗೂ ಕಾದಂಬರಿಯಲ್ಲಿ

ಮುಖ್ಯಸ್ಥಾನವುಂಟು. ಈ ಚರಿತ್ರೆಯ ಅಂಶಗಳಿಗೆ ವಿರೋಧವಿಲ್ಲದಂತೆ ಸನ್ನಿವೇಶಗಳನ್ನು ನಿರ್ಮಾಣಮಾಡಿಕೊಳ್ಳಬೇಕಾಗುತ್ತದೆ. ಇವಿಷ್ಟು ಅಂಶಗಳು ಇಂಥಾ ಕಾದಂಬರಿಗಳನ್ನು ಬರೆಯುವವರೆಲ್ಲರಿಗೂ ಪರಿಗ್ರಾಹ್ಯವೆಂದು ನಾನು ಭಾವಿಸುತ್ತೇನೆ. ನನ್ನ ಮತ್ತೊಂದು ಕಲ್ಪನೆಯೂ ಉಂಟು. ಚರಿತ್ರೆಯ ಘಟನೆಗಳಿಂದ ಜನತೆ ಮತ್ತು ದೇಶದ ಮೇಲೆ ಆ ಕಾಲದಲ್ಲಿ ಮಹತ್ತರವಾದ ಪರಿಣಾಮವು ಉಂಟಾಗಿರಬೇಕೆಂಬುದೂ ಒಂದು ನನ್ನ ಮುಖ್ಯ ಕಲ್ಪನೆಯಾಗಿದೆ. ಆದರೆ, ಈ ಕಾದಂಬರಿಗಳಿಗೆಲ್ಲಾ ಅದೇ ಮುಖ್ಯ ಸೂತ್ರವೆಂದು ಹೇಳುವ ಸಾಹಸವು ನನಗಿಲ್ಲ. ಈ ಐತಿಹಾಸಿಕ ಕಾದಂಬರಿಗಳಲ್ಲಿ ಒಂದು ಮಹತ್ತರವಾದ ತೊಡಕಿದೆ. ಈ ಕಾದಂಬರಿಯನ್ನೇ ಉದಾಹರಣಾರ್ಥವಾಗಿ ತೆಗೆದುಕೊಳ್ಳಬಹುದು. ಕಥಾನಾಯಕಿಯು ರಾಣಿ ಚೆಲುವಮ್ಮಣ್ಣಿ. ರಾಣಿಗೆ ಮಿತ್ರಭಾವದಲ್ಲಾಗಲೀ, ಶತೃಭಾವದಲ್ಲಾಗಲೀ, ಪ್ರೇಮದಲ್ಲಾಗಲೀ, ದ್ವೇಷದಲ್ಲಾಗಲೀ, ಸಮಜೋಡಿಯಾಗಿ ನಿಲ್ಲಬಲ್ಲ ನಾಯಕನಿಲ್ಲವೆಂಬುದು ದೊಡ್ಡ ದೋಷವಾಗಿದೆ. ಅದು ಅಪರಿಹಾರ್ಯ. ಇಂಥಾ ಅಂಶಗಳು ಎಷ್ಟೋ ಇವೆ.

ಒಟ್ಟಿನಲ್ಲಿ ಈ ಕಾದಂಬರಿಗೆ ದೊಡ್ಡ ವಿಮರ್ಶಾತ್ಮಕವಾದ ಪೀಠಿಕೆಯನ್ನೇ ಬರೆಯಬೇಕೆಂದಿದ್ದೆ ಅದನ್ನು ಈಗ ಮಾನಸಿಕಮಾಡಿದ್ದೇನೆ ಇನ್ನೆರಡು ಐತಿಹಾಸಿಕ ಕಾದಂಬರಿಗಳನ್ನು ಛಾಯಾರೂಪದಲ್ಲಿ ಬರೆದಿಟ್ಟುಕೊಂಡಿದ್ದೇನೆ. ಅವುಗಳನ್ನು ಪ್ರಕಟಿಸಿದನಂತರ ದೇವರು ಅವಕಾಶವಿತ್ತಿದ್ದರೆ ನನ್ನಿಂದ ರಚಿತವಾದ ಕಾದಂಬರಿಗಳಿಗೆ ನಾನೇ ವಿಮರ್ಶೆಯನ್ನು ಬರೆದುಕೊಡುತ್ತೇನೆ. ದೈವಕೃಪೆಯಿಲ್ಲದಿದ್ದರೆ ಆ ಕಾರ್ಯವನ್ನು ಮಾಡುವುದಕ್ಕೆ ನನ್ನ ಸ್ನೇಹಿತರುಗಳು ಅನೇಕರಿದ್ದಾರೆ.

ನಾನು ರಚಿಸುವ ಕಾದಂಬರಿಗಳಲ್ಲಿ ಎರಡು ಅಂಶಗಳನ್ನು ಓದುಗರು ಲಕ್ಷ್ಯದಲ್ಲಿಡಬೇಕೆಂದು ಕೋರುತ್ತೇನೆ. ಶೃಂಗಾರ–ವೀರರಸಗಳೇ ನನ್ನ ಕಾದಂಬರಿಗಳಲ್ಲಿ ಮುಖ್ಯವಾದ ರಸಗಳು. ಕರುಣರಸಕ್ಕೂ ಸ್ವಲ್ಪ ಸ್ವಲ್ಪ ಆಸ್ಪದವಿದೆ. ಮತ್ತು ರಾಜಕೀಯ ಸನ್ನಿವೇಶಗಳು ಇಲ್ಲದಿದ್ದರೆ

ನನ್ನ ಲೇಖನಿಯು ಓಡುವುದೇ ಇಲ್ಲ. ಇವೆರಡೇ ನನ್ನ ಕಾದಂಬರಿಗಳಲ್ಲಿ ಮುಖ್ಯವಾದ ಅಂಶಗಳು.

ನನ್ನ ಸ್ನೇಹಿತರುಗಳು ಅನೇಕರು ಈ ಕಾದಂಬರಿಗಳನ್ನು ಓದಿನೋಡಿ, ಓದಿಸಿಕೇಳಿ 'ಇವೆಲ್ಲಾ ಹಳೆಯಕಾಲದ ಕಥೆಗಳು. ಜೀವನದ ಸರಪಣಿಯು ಸಾವಧಾನವಾಗಿ ಹೆಣಿಯಲ್ಪಟ್ಟಿಲ್ಲ. ಪರ್ವತಗಳಿಂದ ನದಿಯು ಧುಮುಕುವಂತೆ, ಭೂಮಿಯಿಂದ ಮೇಲಕ್ಕೆದ್ದು ಹಾರುವಂತೆ ಏರಿಳಿತಗಳು ಅತಿಯಾಗಿವೆ. ಒಂದೊಂದುಬಾರಿ ಇವು ಕಲ್ಪನಾ ಪ್ರಪಂಚಕ್ಕೆ ಏರಿ ಸ್ವಭಾವೋಕ್ತಿಗೆ ವಿರುದ್ಧವಾಗಿವೆ. ಇಂದಿನ ಜನಜೀವನದ ಚಿತ್ರಗಳಿಗೂ ಇವುಗಳಿಗೂ ಸಂಬಂಧವೇ ಇಲ್ಲದೆ ಈ ಜೀವನ ಚಿತ್ರಗಳೆಲ್ಲಾ ಕಾಲ್ಪನಿಕಗಳಂತೆ ಕಂಡುಬರುತ್ತವೆ' ಎಂದು ಹೇಳಿದ್ದಾರೆ. ಈ ಅಂಶಗಳನ್ನು ಸ್ನೇಹಪೂರಿತವಾದ ಸಲಹೆಗಳೆಂದು ಭಾವಿಸಿರುವೆನಾದರೂ ನನ್ನ ಹಾದಿಯನ್ನು ಬೇರೆಕಡೆಗೆ ತಿರುಗಿಸಲು ಅಸಮರ್ಥನಾಗಿದ್ದೇನೆ. ಅವರುಗಳು ಹೇಳುವಂಥಾ ಕಾದಂಬರಿಗಳು ಚರಿತ್ರೆಯ ಸಂಬಂಧವಾದವುಗಳಿದ್ದರೆ ಅವುಗಳನ್ನು ಓದಿಸಿ, ಕೇಳಿ ಆನಂದಪಡಬೇಕೆಂಬ ಕುತೂಹಲವು ಬಹಳವಾಗಿದೆ.

ಇತ್ತೀಚಿನ ಚರಿತ್ರೆಯ ಘನವಿದ್ವಾಂಸರುಗಳು ನಿರ್ಧಾರಮಾಡಿರುವ ಚರಿತ್ರಾಂಶಗಳಿಗೂ ನಾನು ಕೊಟ್ಟಿರುವ ಚರಿತ್ರಾಂಶಗಳಿಗೂ ಸ್ವಲ್ಪ ಭೇದವಿದೆಯೇನೋ ಎಂಬ ಸಂದೇಹವು ಕೂಡಾ ನನಗುಂಟು ನಾನು ಮಲೆನಾಡಿನಲ್ಲಿ ಇರುವ ಕೆಲವು ಕಥೆಗಳನ್ನು ಕೇಳಿ ಅವುಗಳನ್ನು ಚರಿತ್ರೆಯ ವಿದ್ವಾಂಸರುಗಳೊಡನೆ ಸಮಾಲೋಚನೆ ಮಾಡಿ ಈ ಕಥಾವಸ್ತುವನ್ನು ಸಿದ್ಧಪಡಿಸಿಕೊಂಡಿದ್ದೇನೆ. ಇದರಲ್ಲಿಯೂ ನನ್ನ ಹಟವನ್ನು ನಾನು ಬಿಟ್ಟಿಲ್ಲ.

ಈ ಕಥಾನಾಯಕಿಯ ಹೆಸರಿನಲ್ಲಿ ಒಂದು ವಿಶೇಷವಿದೆ. ಚರಿತ್ರೆಯಲ್ಲಿ ಪ್ರಸಿದ್ಧವಾಗಿರುವ ಈ ರಾಣಿಯ ಹೆಸರು ವೀರಮ್ಮಾಜೀ ಎಂದು ನಗರದ ರಾಜಮನೆತನದಲ್ಲಿ ರಾಣಿಪಟ್ಟಕ್ಕೆ ಬಂದವರ ಹೆಸರುಗಳನ್ನು ಅರಮನೆಯಲ್ಲಿ ಕರೆಯುತ್ತಿದ್ದುದೇ ಬೇರೆ. ದೇಶದಲ್ಲಿ ಕರೆಯುತ್ತಿದ್ದುದೇ ಬೇರೆ. ಈ ಚೆಲುವಮ್ಮಣ್ಣಿ ಎಂಬ ಹೆಸರು ಅರಮನೆಯ

ಹೆಸರು. ಅಂತಃಪುರದ ಹೆಸರು. ಇದನ್ನೇ ನಾನು ಕಥೆಯಲ್ಲಿ ಪರಿಗ್ರಹಿಸಿದ್ದೇನೆ. ಈ ರಾಣಿಗೆ ದತ್ತುಸ್ವೀಕಾರವಾಗಿತ್ತೆಂದೂ ಆ ಸ್ವೀಕೃತಪುತ್ರನೊಂದಿಗೆ ರಾಣಿಯು ಕಬ್ಬಾಳದುರ್ಗಕ್ಕೆ ಓಡಿಹೋದಳೆಂದೂ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆದರೆ ದಂತಕಥೆಯು ರಾಣಿಯು ಸ್ವೀಕಾರವನ್ನು ಮಾಡಿಕೊಂಡಿರಲಿಲ್ಲವೆಂದೇ ಪ್ರತೀತಿಯಿದೆ. ನಾನು ಅದನ್ನು ಪರಿಗ್ರಹಿಸಿದ್ದೇನೆ. ಅದು ಕಥೆಯ ಅಂತಿಮಘಟ್ಟವಾದುದರಿಂದ ಅಷ್ಟೇನೂ ಪ್ರಾಮುಖ್ಯವಾದುದಲ್ಲ. ಇನ್ನೂ ಎಷ್ಟೋ ಕಡೆಗಳಲ್ಲಿ ಚರಿತ್ರೆಯ ಅಂಶಗಳಿಗೂ ಈ ಕಾದಂಬರಿಯ ಕಥೆಗೂ ವ್ಯತ್ಯಾಸವಿದೆ. ಅದನ್ನು ವಿಮರ್ಶಕರಿಗೆ ಬಿಟ್ಟಿರುತ್ತೇನೆ.

ನನ್ನ ಕಾದಂಬರಿಗಳಲ್ಲಿ ವಾಕ್ಯದೋಷಗಳು ಅನೇಕವಾಗಿವೆಯೆಂದು ಕನ್ನಡ ವಿದ್ವಾಂಸರಾದ ನನ್ನ ಸ್ನೇಹಿತರುಗಳು ನನಗೆ ತಿಳಿಯಪಡಿಸಿದ್ದಾರೆ. ಅದಕ್ಕಾಗಿ ವಿದ್ವಾಂಸರಲ್ಲಿ ಕ್ಷಮೆಬೇಡುತ್ತೇನೆ. ಅದನ್ನೆಲ್ಲಾ ಹೇಗೆ ಬರೆದಿದ್ದೆನೋ ಹಾಗೆಯೇ ಪ್ರಕಟಿಸಿದ್ದೇನೆ. ಅವುಗಳೆಲ್ಲಾ ಭಾವನಾಮಯವಾದ ಚಿತ್ರಗಳು. ಅವುಗಳನ್ನು ತಿದ್ದುವುದು ಉಚಿತವಾಗಿದ್ದರೆ ಮತ್ತೊಮ್ಮೆ ನೋಡೋಣ. ಈಗ ಇಷ್ಟೇ ನನ್ನ ವಿನಯಪೂರ್ವಕವಾದ ವಿನಂತಿ.

ಈ ಕಾದಂಬರಿಯನ್ನು ಬರೆದು ಮುಗಿಸಿ ಎರಡು ವರ್ಷಗಳಾಯಿತು. ಅದನ್ನು ಪ್ರಕಟಗೊಳಿಸಲು ಈಗತಾನೇ ಅನುಕೂಲವು ಒದಗಿದೆ. ಇದು ಕನ್ನಡ ಗ್ರಂಥಕರ್ತರೆಲ್ಲರ ಪಾಲಿಗೂ ಬಂದಿರುವ ಭಾಗ್ಯ. ನಾನು ವಾಚಕರಿಗೆ ಮತ್ತೊಂದು ಸ್ವವಿಷಯವನ್ನು ಇಲ್ಲಿ ತಿಳಿಯಪಡಿಸುತ್ತೇನೆ. ನಾನು ಈ ಕಥೆಯನ್ನು ಬರೆಸುವಾಗ ಕಣ್ಣು ಕಾಣದ ಅಂಧನಾಗಿದ್ದೇನೆ. ಇವೆಲ್ಲವೂ ಹೇಳಿಬರೆಯಿಸಿದ ಪರಿಚ್ಛೇದಗಳು. ನಾನೇ ಬರೆದಿದ್ದರೆ ಈ ಕಥೆಯೂ, ಭಾಷಾಶೈಲಿಯೂ ಇನ್ನೂ ವೀರ್ಯವತ್ತಾಗುತ್ತಿದ್ದಿತೆಂದು ನನ್ನ ಭಾವನೆ.

ಈ ಗ್ರಂಥದ ಪ್ರಥಮಮುದ್ರಣವನ್ನು ಮಾಡಲು ಒಪ್ಪಿಕೊಂಡು ಸಹಾಯನೀಡಿದ ಮೂರ್ತಿ ಏಜೆನ್ಸೀಸ್ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ ನನ್ನ ಮುಂದಿನ ಕಾದಂಬರಿಯು "ಶ್ರೀರಂಗರಾಯ"

ಇತಿ ಕನ್ನಡಿಗರ ಸೇವಕ,

**ಸೀತಾರಾಮಶಾಸ್ತ್ರೀ.**

# ನಗರದ ರಾಣಿ

## ೧

### ಅಮೃತದಲ್ಲಿ ವಿಷ

ವಸಂತಋತುವಿನ ಸಂಧ್ಯಾಕಾಲ. ಸೂರ್ಯನು ಅಸ್ತಾಚಲವನ್ನು ಆಡರುತ್ತಿದ್ದಾನೆ. ಪಶ್ಚಿಮಘಟ್ಟಗಳ ದಟ್ಟವಾದ ಗಿಡಗಳ ಸಂದುಗಳಲ್ಲಿ ದಿನಮಣಿಯು ತನ್ನ ರಕ್ತವರ್ಣದಿಂದ ಆಕಾಶವನ್ನು ರಂಜಿಸುತ್ತಾ ಭೂಮಿಯಮೇಲೆ ಹೊನ್ನಿನ ಕಿರಣಗಳನ್ನು ಪಸರಿಸುತ್ತಾ ಹಿಂದು ಹಿಂದಕ್ಕೆ ಸರಿಯುತ್ತಿದ್ದಾನೆ. ಪಶ್ಚಿಮಘಟ್ಟಗಳ ಗಿರಿಕಾನನಗಳಿಂದ ಬಹುದೂರದವರೆಗೆ ಘಂಟಾನಾದವು ಕೇಳಿಸುತ್ತಿದೆ. ಆ ಘಂಟಾನಾದದ ಧ್ವನಿಗ್ರಹಣಮಾಡುತ್ತಾ ಅಶ್ವಾರೋಹಿಯಾದ ಪಥಿಕನೊಬ್ಬನು ಪೂರ್ವ ದಿಂದ ಪಶ್ಚಿಮದ ಕಡೆ ಹೋಗುತ್ತಿದ್ದಾನೆ. ಅವನನ್ನು ನೋಡಿದರೆ ಯೋಧಾಗ್ರೇಸರನಂತೆ ಕಾಣುತ್ತಾನೆ. ಆತನ ಹಣೆಯಲ್ಲಿ ವಿಭೂತಿ, ಕೊರ ಳಲ್ಲಿನ ರುದ್ರಾಕ್ಷಿ ಮಾಲೆಗಳನ್ನು ಕಂಡರೆ ಒಬ್ಬ ಗುರುವಿನಂತೆ ಕಂಗೊಳಿ ಸುತ್ತಾನೆ. ಅವನು ಮುಂದೆ ಮುಂದೆ ಬಂದಂತೆಲ್ಲಾ ಘಂಟಾನಾದವು ಸಮೀಪಿಸುತ್ತಿದೆ. ಪಥಿಕನು ಸ್ವಲ್ಪದೂರ ನಡೆದುಹೋಗುತ್ತಲೆ, ದೂರದಲ್ಲಿ ಅಸ್ತಂಗತನಾಗುತ್ತಿರುವ ಭಗವಾನ್ ಸೂರ್ಯದೇವನ ಕೆಂಪು ಕಿರಣಗಳು ಬಿದ್ದು ದೇವಮಂದಿರದ ಬಂಗಾರದ ಕಲಶಗಳು ಪ್ರಜ್ವಲಿ ಸುತ್ತಿವೆ. ಆ ದೇವಮಂದಿರವು ಮಹಾದೇವನ ಮಂದಿರವೆಂದು ಪಥಿಕ ನಿಗೆ ಗೋಚರವಾಯಿತು. ಮಂದಿರದ ಹೊರಗಡೆ ಕಿಕ್ಕಿರದ ಜನಜಂಗುಳಿ. ಪಥಿಕನು ದೂರದಿಂದಲೇ ಕುದುರೆಯನ್ನಿಳಿದು ಅದನ್ನು ಮರಕ್ಕೆ ಕಟ್ಟಿ ಹಾಕಿ ಕಾಲುನಡಿಗೆಯಿಂದ ಮಂದಿರವನ್ನು ಪ್ರವೇಶಿಸಿದನು.

ಆ ದೇವಾಲಯದೊಳಗೆ ಬಹುಮಂದಿ ಸ್ತ್ರೀಯರು, ಪುರುಷರು ಭಕ್ತಿಭಾವದಿಂದ ನೆರೆದಿದ್ದರು. ಪಥಿಕನು ದೇವಾಲಯದ ಮುಖ

ಮಂಟಪವನ್ನು ಪ್ರವೇಶಿಸಿದನು. ಅವನು ದೇವರ ಸಾನ್ನಿಧ್ಯಕ್ಕೆ ಹೋದೊಡನೆಯೇ ಅಲ್ಲಿದ್ದ ಎಷ್ಟೋ ಕಣ್ಣುಗಳು ಅವನಮೇಲೆ ಬಿದ್ದವು. ಅವನು ಆ ಹೊಸ ನೋಟವನ್ನು ನೋಡಿ ಬೆರಗಾಗಲಿಲ್ಲ. ಆದರೆ ದೇವರ ಹೊಸಲಲ್ಲಿ ನಿಂತಿದ್ದ ಮಹಾಪುರುಷನೊಬ್ಬನ ದೃಷ್ಟಿ ಒಂದೇ ಬಾರಿ ಅವನ ಕಡೆಗೆ ಹೊರಳಿತು. ಆ ಮಹಾಪುರುಷನು ಒಂದು ಬಾರಿ ಹೊಸಬನನ್ನು ದಿಟ್ಟಿಸಿ ನೋಡಿ ಪುನಃ ದೇವಾಲಯದೊಳಗೆ ವಿರಾಜಿಸುತ್ತಿದ್ದ ಮಹಾದೇವನ ಕಡೆಗೆ ತಿರುಗಿದನು. ಆ ನೇತ್ರಾಹುತಿಯಿಂದ ಭೀತಿಗೊಂಡವನಂತೆ ತತ್ತರಿಸಿದ ಹೊಸಬನು ಧೈರ್ಯವನ್ನು ತಂದುಕೊಂಡನು. ಮಂಟಪಮಧ್ಯದಲ್ಲಿ ನಿಂತು ಭಗವದಾರಾಧನೆಯಲ್ಲಿ ಲೀನನಾದನು.

ಭಕ್ತವೃಂದವು ಮಹಾದೇವನ ಆರಾಧನೆಯಲ್ಲಿ ಮಗ್ನವಾಗಿರುವಾಗ ದೇವಾಲಯದ ಹೊರಗಡೆ ದಿಕ್ತಟಗಳನ್ನು ತುಂಬುವಂತಹ ಜಯಧ್ವನಿಯು ಕೇಳಿಬಂದಿತು. ರಾಜಸೇವಕರು ದಾರಿ ಬಿಡಿಸುತ್ತಾ ಮುಂದೆ ಮುಂದೆ ನಡೆಯುತ್ತಿದ್ದರು. ಸಖಿಯರಿಂದೊಡಗೂಡಿ ದಿವ್ಯದುಕೂಲಾಭರಣಗಳಿಂದ ಅಲಂಕೃತಳಾದ ತರುಣಿಯೊಬ್ಬಳು ದೇವಾಲಯವನ್ನು ಪ್ರವೇಶಿಸಿದಳು. ಭಕ್ತವೃಂದದ ದೃಷ್ಟಿ ಎಲ್ಲವೂ ಆ ತರುಣಿಯ ಕಡೆಗೆ ಪ್ರವಹಿಸಿತು. ಎಲ್ಲರೂ ಭಯ ಭಕ್ತಿಗಳಿಂದ ಹಿಂದಕ್ಕೆ ಸರಿದು ಮಾರ್ಗವನ್ನು ಬಿಟ್ಟು ನಿಂತರು. ತರುಣಿಯು ಭಕ್ತಿಭಾವದಿಂದ ಅವನತಶಿರಳಾಗಿ, ಗಾಂಭೀರ್ಯದಿಂದ ಅಡಿಯಿಡುತ್ತಾ ದೇವರ ಸಮ್ಮುಖಕ್ಕೆ ಬಂದು ನಿಂತಳು. ಏಕಕಾಲದಲ್ಲಿ ದೇವಾಲಯದಲ್ಲಿ ನೂರಾರು ಘಂಟೆಗಳು ನಾದಮಾಡಲಾರಂಭಿಸಿದವು. ಮಹಾದೇವನ ಸಮ್ಮುಖದಲ್ಲಿ ಸಹಸ್ರಾರು ದೀಪಗಳು ಜ್ವಲಿಸುತ್ತಿದ್ದವು. ದೇವಾಲಯವೆಲ್ಲವೂ ಧೂಪದ ವಾಸನೆಯಿಂದ ತುಂಬಿ ಹೋಗಿದ್ದಿತು. ಪುಷ್ಪಸೌರಭವು ದೇವಮಂದಿರವನ್ನು ತುಂಬುತ್ತಿತ್ತು. ಪೂಜಾರಿಯು ಘಂಟಾನಾದ ಮಾಡುತ್ತಾ ಮಂಗಳಾರತಿಯನ್ನು ಮಾಡಿದನು. ಭಕ್ತಾದಿಗಳಿಗೆ ಮಂಗಳಾರತಿಯನ್ನು ಕೊಟ್ಟು ಪ್ರಸಾದವನ್ನು ನೀಡುತ್ತಲೆ, ಎಲ್ಲರೂ ಹೊರಗೆ ಹೊರಟರು.

ಭಕ್ತನಿಬಿಡವಾಗಿದ್ದ ದೇವಾಲಯವು ನಿರ್ಜನವಾಗಿ, ನೀರವವಾಗುತ್ತಲೇ ಆ ತರುಣಿಯು ಮಹಾದೇವನ ಸಮೀಪದಲ್ಲಿ ನಿಂತಿದ್ದ ಮಹಾಪುರುಷ ನಿಗೆ ವಂದಿಸಿದಳು. "ರಾಣಿಯವರಿಗೆ ಜಯವಾಗಲಿ" ಎಂದು ಆ ಮಹಾಪುರುಷನು ಹರಸಿದನು. ಅಷ್ಟರಲ್ಲಿ ದ್ವಾರಪಾಲಕನೊಬ್ಬನು ಒಳಗೆ ಬಂದು ಒಳಬಾಗಿಲಿನಲ್ಲಿ ನಿಂತಿದ್ದ ಪಥಿಕನನ್ನು ಉದ್ದೇಶಿಸಿ "ಹೊರಗೆ ನಡೆ, ಇಲ್ಲೇಕೆ ನಿಂತಿರುವೆ?" ಎಂದು ಗದರಿಸಿದನು. ಪಥಿಕನು ಧ್ಯಾನಮಗ್ನನಾಗಿದ್ದವನಂತೆ ನಿಧಾನವಾಗಿ ಕಣ್ಣುತೆರೆದು ಹಿಂದು ಹಿಂದಕ್ಕೆ ಅಡಿಯಿಡುತ್ತಾ ಹೊರಕ್ಕೆ ಸರಿಯುತ್ತಿದ್ದನು. ಮಹಾದೇವನ ಪಕ್ಕದಲ್ಲಿ ನಿಂತಿದ್ದ ಮಹಾಪುರುಷನು ಒಮ್ಮೆ ಆ ಹೊಸಬನ ಕಡೆಗೆ ದೃಷ್ಟಿಯನ್ನು ಬೀರಿ ಮುಗುಳು ನಗೆಯನ್ನು ಸೂಸಿದನು. ಆಗಂತುಕನು ಆ ತೀಕ್ಷ್ಣದೃಷ್ಟಿಯಿಂದ ಮರ್ಮಾಹತನಾದವನಂತೆ ಬೆಚ್ಚಿಬಿದ್ದು ಹೊರಕ್ಕೆ ಹೊರಟುಹೋದನು.

ಮಹಾರಾಣಿಯು ಆ ಮಹಾಪುರುಷನನ್ನುದ್ದೇಶಿಸಿ—"ಗುರುದೇವಾ! ಈ ನಗರದ ಸೀಮೆಗೆ ಎಂದೂ ಬಾರದ ಈ ಮಹಾಕ್ಷಾಮವು ಪ್ರಾಪ್ತವಾಗಲು ಕಾರಣವೇನು? ಕಂಗಾಲ ಸ್ಥಿತಿಗೆ ಬರುತ್ತಿರುವ ಈ ಪ್ರಜೆಗಳನ್ನು ಸಾವು ನೋವುಗಳಿಂದ ತಪ್ಪಿಸಿ ಕಾಪಾಡುವುದೆಂತು?" ಎಂದಳು.

"ರಾಣಿಯವರೆ, ಈ ಕ್ಷಾಮವು ನಗರದ ಸೀಮೆಗೆ ಮಾತ್ರ ಬಂದಿಲ್ಲ. ಇಡೀ ಭಾರತದಲ್ಲಿಯೇ ಕ್ಷಾಮದ ಬೇಗೆಯು ಬೇಯುತ್ತಿದೆ. ಮಹಾದೇವನು ಸತ್ಯವಂತರಾದ ಪ್ರಜೆಗಳಿಗೆ ಅನ್ನನೀಡುತ್ತಾನೆ. ನಮ್ಮ ರಾಜ್ಯವು ಈಶಕೃಪೆಯಿಂದ ನಾಶವಾಗುವುದಿಲ್ಲ"

"ಗುರುದೇವಾ, ಮಹಾರಾಜರವರು ಯಾವಾಗಲೂ ವ್ಯಗ್ರ ಚಿತ್ತರಾಗಿರುವುದು ತಮ್ಮ ಚಿತ್ತಕ್ಕೆ ವೇದ್ಯವಾಗಿದೆಯೇ? ಎಷ್ಟು ವಿಧವಾಗಿ ಕೇಳಿದರೂ ಅವರು ಕಾರಣವನ್ನು ಅರುಹುವುದಿಲ್ಲ. ನನಗೆ ನಗರದ ಭವಿಷ್ಯವನ್ನು ಕುರಿತು ಭಯವಾಗುತ್ತಿದೆ."

ಮಹಾಪುರುಷನು ನಗುತ್ತಾ, "ರಾಣಿಯವರೇ, ಮಹಾರಾಜರ

ಚಿತ್ತಕ್ಷೋಭೆಗೆ ಕಾರಣವಿಲ್ಲದೇ ಇಲ್ಲ. ಪಿಂಡಾರಿಯವರು ರಾಜ್ಯದ ಮೇಲೆ ಧಾಳಿನಡೆಸಲು ಪ್ರಯತ್ನಮಾಡುತ್ತಿದ್ದಾರೆಂದು ಕೇಳಿದ್ದೇನೆ. ಮೈಸೂರಿನ ಅರಸರ ದೃಷ್ಟಿಯು ನಮ್ಮ ಮೇಲೆ ಬಿದ್ದಿದೆ. ಶೂರಾಗ್ರೇಸರನಾದ ಹೈದರನು ನಮ್ಮ ರಾಜ್ಯದ ಮೇಲೆ ದಂಡೆತ್ತಿಬರಲು ಹೊಂಚು ಹಾಕುತ್ತಿದ್ದಾನೆ. ಈ ಯುದ್ಧ ವಿಗ್ರಹಗಳು ಮಹಾರಾಜರ ಮನಸ್ಸನ್ನು ಆಕ್ರಮಿಸಿವೆ. ದೇಶದಲ್ಲಿ ಹುಟ್ಟಿರುವ ಕ್ಷಾಮವು ಮಹಾರಾಜರವರ ಚಿತ್ತಕ್ಕೆ ಕ್ಷೋಭೆಯನ್ನುಂಟುಮಾಡಿದೆ" ಎಂದನು.

"ಗುರುದೇವಾ! ಈ ರಾಜಕಾರಣಗಳನ್ನು ಕೇಳಿ ನನ್ನ ಹೃದಯವು ನಡಗುತ್ತದೆ. ನಗರದ ರಾಜ್ಯಲಕ್ಷ್ಮಿಯು ಪ್ರಸನ್ನಳಾಗುವಳೋ ಮಾಯವಾಗುವಳೋ ಎಂದು ಭಯವಾಗುತ್ತಿದೆ."

"ರಾಣಿಯವರೆ, ವೀರರಮಣಿಯು ಭಯಪಡಲೇಕೆ? ನಗರವು ಮಹಾದೇವನ ರಾಜ್ಯ. ಶಿವಧರ್ಮವು ಲೋಪವಿಲ್ಲದೇ ನಡೆಯುತ್ತಿದೆ. ಮಹಾದೇವನ ರಾಜ್ಯದಲ್ಲಿ ಭಯವೆಂದರೇನು?"

"ಗುರುದೇವಾ! ನಗರದ ರಾಜ್ಯದಲ್ಲಿ ಎಲ್ಲೆಲ್ಲಿಯೂ ಅನ್ನದಾನ ನಡೆಯುತ್ತಿದೆ. ಈ ಕ್ಷಾಮಕಾಲದಲ್ಲಿಯೂ, ನೂರಾರು ಛತ್ರಗಳಲ್ಲಿ ಅನ್ನವನ್ನು ನೀಡುತ್ತಾರೆ. ಇದೆಲ್ಲಾ ತಮ್ಮ ಧರ್ಮವೆಂದು ಜನರು ಹೇಳುತ್ತಾರೆ. ನಿರೀಹ ಸತ್ಪುರುಷರಾದ ತಮ್ಮಲ್ಲಿ ಇಷ್ಟೊಂದು ಧನಧಾನ್ಯಗಳ ಸಂಗ್ರಹವು ಹೇಗೆ ಆಗುತ್ತಿದೆ?"

ಗುರುದೇವನು ನಗುತ್ತಾ, "ರಾಣಿಯವರೇ, ನನ್ನ ಧರ್ಮವೆಂದರೇನು? ಮಹಾದೇವನ ಧರ್ಮ. ಈ ಶಿವ ಧರ್ಮವನ್ನು ನಡೆಸುವವಳು ಭವಾನೀರಾಣಿ. ಆ ಭವಾನೀರಾಣಿಯ ಮಹಿಮೆಯಿಂದ ಈ ರಾಜ್ಯದಲ್ಲಿ ಈ ಪ್ರಾಣಿವರ್ಗವು ಬದುಕುತ್ತಿದೆ" ಎಂದನು.

"ಭವಾನೀರಾಣಿ! ಭವಾನೀರಾಣಿ! ಆ ರಾಣಿ ಯಾರು? ಇಷ್ಟು ಧನಧಾನ್ಯಗಳು ಆ ರಾಣಿಗೆ ಎಲ್ಲಿಂದ ಬರಬೇಕು?" ಎಂದು ಆಶ್ಚರ್ಯದಿಂದ ನುಡಿಯುತ್ತಾ ರಾಣಿಯು ಗುರುದೇವನಿಗೆ ವಂದಿಸಿ ಮಹಾ

ದೇವನ ಪ್ರಸಾದವನ್ನು ಸ್ವೀಕರಿಸಿ ದೇವಮಂದಿರದಿಂದ ನಿರ್ಗಮಿಸಿದಳು.

ರಾಣಿಯು ದೇವಮಂದಿರದಿಂದ ಹೊರಗೆ ಬಂದು ಆ ಜನಜಂಗುಳಿಯನ್ನು ನೋಡುತ್ತಾಳೆ. ನೂರಾರು ಮಂದಿ ಬ್ರಾಹ್ಮಣರು ಪಕ್ವಾನ್ನವನ್ನೂ, ಮಜ್ಜಿಗೆಯ ದೊನ್ನೆಗಳನ್ನೂ ಎತ್ತಿ ಎತ್ತಿ ಜನರಿಗೆ ಕೊಡುತ್ತಿದ್ದಾರೆ. ಮತ್ತೊಂದು ಕಡೆ ಮಕ್ಕಳಿಗೆ ಕ್ಷೀರದಾನಮಾಡುತ್ತಿದ್ದಾರೆ. ರಾಣಿಯು ಆ ಜನಸ್ತೋಮದ ಸಂತಸವನ್ನು ನೋಡಿ ಆನಂದಿಸುತ್ತಿದ್ದಾಳೆ. ಬಹುಜನರು ಈ ರಾಣಿಯನ್ನು ನೋಡಿ "ಇವಳೇ ಭವಾನೀ ರಾಣೀ" ಎಂದು ಜೈಕಾರ ಮಾಡುತ್ತಿದ್ದಾರೆ. ರಾಣಿಯು ನಸುನಗುತ್ತಾ ದೇವಾಲಯದ ಹೊರಪ್ರಾಕಾರವನ್ನು ದಾಟಿ ಮುಂದೆ ಬಂದಳು. ಅಲ್ಲಿ ಬೋಯಿಗಳು ಮ್ಯಾನಾವನ್ನು ಇಟ್ಟುಕೊಂಡು ಸಿದ್ಧರಾಗಿದ್ದರು. ರಾಣಿಯು ಆ ಅಂದೋಳಿಕೆಯಲ್ಲಿ ಕುಳಿತು ನಗರಾಭಿಮುಖವಾಗಿ ಹೊರಟಳು.

ಸೂರ್ಯನು ಅಸ್ತನಾಗಿ ಗಗನದಲ್ಲಿ ನಿಶಾನಾಥನು ಉದಯಿಸಿ ಮೇಲಕ್ಕೇರಿದ್ದನು. ಸುಮಾರು ರಾತ್ರಿ ಒಂಬತ್ತು ಘಂಟೆ ಹೊತ್ತಾಗಿರಬಹುದು. ಪೂರ್ಣವಾದ ಬೆಳದಿಂಗಳು ಬಿದ್ದು ಭೂಮಿಯ ಮೇಲೆ ಹಾಲು ಚೆಲ್ಲಿದಂತೆ ಭಾಸವಾಗುತ್ತಿತ್ತು. ದೇವಮಂದಿರದ ಘಂಟಾನಾದವು ವನಾಂತರಾಳದಲ್ಲಿ ವಿಲೀನವಾಗಿಹೋಗುತ್ತಿತ್ತು. ವನಮಧ್ಯದಿಂದ ಯಾವುದೋ ಸದ್ದು ಕೇಳಿದಂತಾಯಿತು. ಮ್ಯಾನಾದಲ್ಲಿ ಕುಳಿತಿದ್ದ ರಾಣಿಯು ಕಿವಿಗೊಟ್ಟು ಕೇಳಿದಳು. ಖುರಪುಟಗಳು ಸಮೀಪಿಸಿದಂತೆ ಕೇಳಿಬಂದಿತು. ಅಶ್ವಾರೋಹಿಯು ಕುದುರೆಯನ್ನು ಮುಂದಕ್ಕೆ ಹಾರಿಸಿ ಪಲ್ಲಕ್ಕಿಗೆ ಎದುರಾಗಿ ಬಂದುನಿಂತನು. ಬೋಯಿಗಳು ಆ ರಾಜಪುರುಷನನ್ನು ನೋಡಿ ಹಟಾತ್ತನೆ ನಿಂತರು. ಆ ರಾಜಪುರುಷನು ಮ್ಯಾನಾದ ಸಮೀಪಕ್ಕೆ ಬಂದು "ರಾಣಿಯವರಿಗೆ ಜಯವಾಗಲಿ" ಎಂದು ಘೋಷಿಸಿದನು.

ರಾಣಿಯು ತನ್ನ ವಿಶಾಲ ನೇತ್ರಗಳನ್ನರಳಿಸಿ ಆ ಹೊಸಬನನ್ನು

ದಿಟ್ಟಿಸಿ ನೋಡಿದಳು. ಆಗಂತುಕನು ರಾಣಿಯ ಮುಂದೆ ತಲೆಬಾಗಿ "ಮಹಾರಾಣಿಯವರೇ, ನನ್ನ ಅಪರಾಧವನ್ನು ಕ್ಷಮಿಸಿರಿ. ನಾನು ತಮ್ಮ ದರ್ಶನಾರ್ಥವಾಗಿಯೇ ಇಲ್ಲಿಗೆ ಬಂದಿದ್ದೇನೆ. ಈ ರಾಜ್ಯದ ಮೇಲೆ ಅನೇಕ ಕಾರ್ಮೋಡಗಳು ಕವಿಯುತ್ತಿವೆ. ಈ ರಾಜ್ಯದ ಅರಸರೂ, ಮಹಾರಾಣಿಯವರಾದ ತಾವೂ, ಮೋಸಹೋಗಿದ್ದೀರಿ. ಈ ದೇವಾಲಯದ ಮಹಂತನು ಈ ರಾಜ್ಯದ ಶತ್ರು. ಈ ದಾನಧರ್ಮಗಳು, ಈ ದೇವಪೂಜೆಗಳು ಇವೆಲ್ಲಾ ಈ ರಾಜ್ಯದ ಜನರನ್ನು ಆಕರ್ಷಣೆ ಮಾಡುವ ಮಹಾ ಪ್ರಯತ್ನಗಳು. ಈ ಸ್ವಾಮಿಯು ಶ್ರೀಸದಾಶಿವ ರಾಯರ ರಾಜ್ಯವನ್ನು ಮೂಲೋತ್ಪಾಟನವಾಡಿ ತನ್ನ ರಾಜ್ಯವನು ಸ್ಥಾಪನೆಮಾಡಲು ಮಹಾ ತಂತ್ರವನ್ನು ಹೂಡಿದ್ದಾನೆ." ಎಂದನು.

ರಾಣಿಯು ಆಶ್ಚರ್ಯ ಚಕಿತಳಾಗಿ, "ಮಹಾಶಯರೇ, ತಮ್ಮನ್ನು ನೋಡಿದರೆ ಉದಾತ್ತ ರಾಜಪುರುಷರಂತೆ ಕಾಣುತ್ತೀರಿ. ತಾವಾಡುವ ಮಾತುಗಳನ್ನು ಕೇಳಿದರೆ ಬಾಣಗಳಂತೆ ಮನಸ್ಸನ್ನು ಚುಚ್ಚುತ್ತವೆ. ಈ ಇಡೀ ನಗರದ ರಾಜ್ಯದಲ್ಲಿ ಶ್ರೀಮಲ್ಲಿಕಾರ್ಜುನ ಮಂದಿರದ ಅಭಿರಾಮಸ್ವಾಮಿಗಳನ್ನು ನೋಡಿದರೆ ಸಕಲರಿಗೂ ಗೌರವ. ತಾವೊಬ್ಬರು ಅಮೃತದಲ್ಲಿ ವಿಷದಂತೆ ಈ ಕಠೋರ ನುಡಿಗಳನ್ನು ನುಡಿಯುತ್ತಿದ್ದೀರಿ. ತಾವಾರು? ತಾವು ಖುದ್ದು ಮಹಾರಾಜರ ಭೇಟಿಯನ್ನು ಮಾಡಬಾರದೇಕೆ?" ಎಂದಳು.

"ನಗರದ ರಾಣಿಯವರೇ ಕೇಳಿರಿ, ನಾನು ಹೇಳುವುದರಲ್ಲಿ ಹುಸಿಯಿಲ್ಲ, ವಂಚನೆಯಿಲ್ಲ. ಈ ಮಹಂತನು ನಿಜವಾದ ಸತ್ಪುರುಷನಲ್ಲ. ಬ್ರಾಹ್ಮಣರ ರಾಜ್ಯವನ್ನು ಸ್ಥಾಪಿಸಲು ಬಂದಿರುವ ನಗರದ ರಾಜ್ಯದ ಮೃತ್ಯುವೆಂದು ತಿಳಿಯಿರಿ. ಮಹಾರಾಷ್ಟ್ರದಲ್ಲಿ ಬ್ರಾಹ್ಮಣರ ರಾಜ್ಯವು ಡೆಲ್ಲಿಯವರೆಗೆ ವ್ಯಾಪಿಸುತ್ತಿದೆ. ಇತ್ತ ಮೈಸೂರಿನಲ್ಲಿ ಬ್ರಾಹ್ಮಣರ ಪ್ರಾಬಲ್ಯ. ಈ ನಮ್ಮ ಶಿವಪ್ಪನಾಯಕರ ರಾಜ್ಯವು ಅಸ್ತವಾದಂತೆಯೇ ಸರಿ. ರಾಣಿಯವರೇ, ಈ ರಾಜ್ಯವನ್ನು ತಾವು ಉಳುಹಬಲ್ಲಿರಿ. ಈ ರಾಜ್ಯದ ಭಾಗ್ಯಶ್ರೀಯು ತಮ್ಮ ಲಲಾಟದಲ್ಲಿ ಕಂಗೊಳಿಸುತ್ತಿದೆ. ಈ

ರಾಜ್ಯವು ಉಳಿದರೆ ವೀರಶೈವ ಸಾಮ್ರಾಜ್ಯವು ಉಳಿಯುತ್ತದೆ. ಇಲ್ಲದಿದ್ದರೆ ಅಸ್ತವಾಗಿ ಹೋಗುತ್ತದೆ. ನೀವು ಈ ರಾಜ್ಯದ ಭಾಗ್ಯಲಕ್ಷ್ಮಿ" ಎಂದನು.

"ಮಹಾಶಯರೇ, ತಮ್ಮ ಹೆಸರೇನು? ತಮ್ಮ ಪರಿಚಯವನ್ನೇಕೆ ಕೊಡಲಿಲ್ಲ?"

"ರಾಣಿಯವರೇ, ನನ್ನ ಪರಿಚಯವು ಮತ್ತೊಮ್ಮೆ ತಮಗೆ ಆಗುತ್ತದೆ." ಎಂದು ಹೇಳಿ ಕೈಮುಗಿದು ಆ ಆಗಂತುಕನು ಕುದುರೆಯನ್ನೇರಿ ಹೊರಟುಹೋದನು.

ರಾಣಿಯವರ ಅಪ್ಪಣೆಯಂತೆ ಮ್ಯಾನಾ ಮುಂದಕ್ಕೆ ಹೊರಟಿತು. ರಾಣಿಯು ಹಾಗೆಯೇ ಯೋಚಿಸತೊಡಗಿದಳು. ಈ ಮಹಾಪುರುಷನಾರು? ಎಂತಹ ಆಜಾನುಬಾಹು, ಎಂತಹ ಉಜ್ವಲವಾದ ಕಣ್ಣುಗಳು? ಇವನು ಹೇಳಿದ್ದು ಸುಳ್ಳಾದೀತೇ? ಅಭಿರಾಮಸ್ವಾಮಿಯು ಎಂತಹ ತೇಜಸ್ವಿ! ಸರ್ವಸಂಗ ಪರಿತ್ಯಾಗಮಾಡಿದ ಸನ್ಯಾಸಿಗಿಂತಲೂ ಪೂಜ್ಯ, ಇವನ ದಾನಧರ್ಮಗಳ ಗುಟ್ಟೇನು? ಈ ಭವಾನಿರಾಣಿಯೆಂಬುವಳಾರು? ಯಾವುದು ನಿಜ! ಈ ಆಗಂತುಕ ಮಹಾಪುರಷನು ಪರಿಚಯವನ್ನು ಕೊಡಲಿಲ್ಲವೇಕೆ? ಎಂತಹ ಸುಂದರ ಪುರುಷನವನು? ಎಷ್ಟು ಉಜ್ವಲವಾದ ಕಣ್ಣುಗಳು! ನಾನೆಲ್ಲಿಯೂ, ಎಂತಹ ಸುಂದರವದನಾರವಿಂದದಲ್ಲಿಯೂ ಅಂತಹ ತೇಜಃಪುಂಜವಾದ ನೇತ್ರಗಳನ್ನು ನೋಡಿಲ್ಲ ಎಂದು ಚಿಂತಿಸುತ್ತಿರುವಾಗಲೇ ಆ ಮ್ಯಾನವು ಬಿದನೂರಿನ ರಾಜಮಂದಿರದ ಚಂದ್ರಶಾಲೆಯಲ್ಲಿ ಇಳಿಯಿತು. ರಾಣಿಯು ಇಳಿದು ರಾಜಗೃಹವನ್ನು ಪ್ರವೇಶಿಸಿದಳು.

---

೨

## ಕಾರ್ಮೋಡಗಳು

ಕೆಳದಿಯ ರಾಜಧಾನಿಯಲ್ಲಿ ಇಂದು ಬಲು ಗಡಿಬಿಡಿ. ಎಲ್ಲೆಲ್ಲಿಯೂ ಅಶ್ವಾರೋಹಿಗಳ ಪಡೆ. ಅನೇಕ ಮಂದಿ ಪಾಳೆಯಗಾರರು ರಾಜಧಾನಿಗೆ ಬರಲಿದ್ದಾರೆ. ಕೆಳದಿಯ ಅಧೀಶ್ವರರಾದ ಬಸಪ್ಪ ನಾಯಕರು ಇಡೀ ಸಂಸ್ಥಾನದ ಮುಖ್ಯ ಮುಖ್ಯ ಪಾಳೆಯಗಾರರನ್ನೂ, ಸೇನಾಧಿಪತಿಗಳನ್ನೂ ರಾಜಧಾನಿಗೆ ಬರಮಾಡಿಕೊಂಡಿದ್ದಾರೆ. ಸಂಧ್ಯಾ ಕಾಲ. ರಾಜಮಂದಿರದಲ್ಲಿ ಸಭೆ ಸೇರಿದೆ. ಮಂತ್ರಿಗಳು, ಸೇನಾನಾಯಕರು, ನ್ಯಾಯಾಧೀಶರುಗಳು ಮುಂಚಿತವಾಗಿಯೇ ಸಭೆಗೆ ಬಂದು ಉಚಿತಾಸನಗಳನ್ನು ಅಲಂಕರಿಸಿದ್ದಾರೆ. ರಾಜದ್ವಾರದ ಹೆಬ್ಬಾಗಿಲಿನಲ್ಲಿ ಸಂಧ್ಯಾಕಾಲದ ನಗಾರಿನೌಪತ್ತುಗಳಾದನಂತರ ಮಹಾರಾಜರವರು ಅರಮನೆಯ ಒಳ ತೊಟ್ಟಿಯಿಂದ ಸಭಾಂಗಣಕ್ಕೆ ಚಿತ್ತೈಸಿದರು. ದೌವಾರಿಕರು ಪರಾಕು ಹೇಳುತ್ತಾ ಮುಂದೆಬಂದರು. ವಂದಿಮಾಗಧರು ಸಂಸ್ಥಾನದ ಬಿರುದಾವಳಿಯನ್ನು ಉಚ್ಛ ಕಂಠಗಳಿಂದ ಘೋಷಿಸಿದರು. ಮಹಾರಾಜಾಧಿರಾಜ ಬಸಪ್ಪನಾಯಕರು ಗಂಭೀರವಾಗಿ ಅಡಿಯಿಡುತ್ತಾ ಸಿಂಹಪೀಠದ ಮೇಲೆ ಮಂಡಿಸಿದರು. ಸಭಿಕರೆಲ್ಲರೂ ಜಯಘೋಷಮಾಡಿ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ದೊಡ್ಡ ದೊಡ್ಡ ಪಾಳೆಯಗಾರರು ಸಭಾಮಂಟಪವನ್ನು ಪ್ರವೇಶಮಾಡಿ ಮಹಾರಾಜರವರಿಗೆ ನಜರುಗಳನ್ನರ್ಪಿಸಿ ಮುಜರೆ ಮಾಡಿದರು. ಮಹಾರಾಜರು ಪ್ರಸನ್ನವದನರಾಗಿ ಪಾಳೆಯಗಾರರ ನಜರುಗಳನ್ನು ಸ್ವೀಕರಿಸುತ್ತಲೇ ದರಬಾರಿನ ದಿವಾನರು ಮಹಾರಾಜರ ಸಿಂಹಾಸನದ ಎಡಬಲ ಪಾರ್ಶ್ವಗಳಲ್ಲಿರುವ ಆಸನಗಳಲ್ಲಿ ಪಾಳೆಯಗಾರರನ್ನು ಕುಳ್ಳಿರಿಸಿದರು. ಅನಂತರ ಮಂತ್ರಿ ರಾಮಕೃಷ್ಣನು ಎದ್ದು ಮಹಾರಾಜರಿಗೆ ಮುಜರೆಮಾಡಿ, "ಪ್ರಭು! ಶ್ರೀ ಸದಾಶಿವರಾಯರಿಂದ ಸ್ಥಾಪಿತವಾದ ಈ ಕೆಳದಿಯ ರಾಜ್ಯಕ್ಕೆ ಅಂದಿನಿಂದ ಇಂದಿನವರೆಗೆ ಶತೃಗಳ ಭಯವಿರಲಿಲ್ಲ.

ಬಹಮನಿ ರಾಜ್ಯದ ನವಾಬರುಗಳು ಕೂಡ ನಮಗೆ ಸೋತು ಓಡಿ ಹೋಗಿದ್ದಾರೆ. ಇಂತಹ ಧರ್ಮರಾಜ್ಯದ ಮೇಲೆ ಪಿಂಡಾರಿಯವರ ಮುಖಂಡನಾದ ದತ್ತರಾಮನು ಆಜ್ಞಾಪತ್ರವನ್ನು ಕಳುಹಿಸಿದ್ದಾನೆ. ನಗರದ ಸಂಸ್ಥಾನದಿಂದ ಅರವತ್ತುಸಾವಿರ ವರಹಗಳನ್ನು ಕೊಡ ಬೇಕೆಂದು ಮುಯ್ಯಿ ಮಾಡಿದ್ದಾನೆ. ಇಲ್ಲದಿದ್ದರೆ ನಮ್ಮ ರಾಜ್ಯವನ್ನು ಕೊಳ್ಳೆಹೊಡೆಯುವುದಾಗಿ ಉದ್ದಂಡತನದಿಂದ ಓಲೆಯನ್ನು ಬರೆದಿದ್ದಾನೆ. ಮಹಾರಾಜರ ಆಜ್ಞೆಯಾದಂತೆ ನಡೆಸುತ್ತೇವೆ." ಎಂದು ಬಿನ್ನಹ ಮಾಡಿದನು.

ಗಡಿನಾಡಿನ ಪಾಳೆಯಗಾರನಾದ ಹರಪನಹಳ್ಳಿಯ ವೃದ್ಧ ನಾಯಕನು ಎದ್ದು ಸಿಂಹಪೀಠದ ಮುಂದೆನಿಂತು ಒರೆಯಿಂದ ಕತ್ತಿ ಯನ್ನು ಹಿರಿದು "ಮಹಾಪ್ರಭು, ಪಿಂಡಾರಿಯವರು ಕಳ್ಳಕಾಕರ ಗುಂಪಿ ನವರು. ಅವರು ಕೆಳದಿಯ ಅಧೀಶ್ವರರಿಗೆ ಓಲೆಬರೆಯುವುದೆಂದರೇನು? ತಲೆತಲಾಂತರದಿಂದ ಗಡಿಯನ್ನು ಕಾಯುವುದು ನನ್ನ ಭಾರ. ಪಿಂಡಾರಿ ಯವರನ್ನು ನೋಡಿಕೊಳ್ಳುವ ಭಾರವನ್ನು ನನಗೆ ಬಿಡಿರಿ! ಇದಕ್ಕೆ ಮಹಾರಾಜರ ಸೈನ್ಯವೇಕೆ? ಉಳಿದ ಪಾಳೆಯಗಾರರ ಸನ್ನಾಹವೇಕೆ?" ಎಂದು ಘರ್ಜಿಸಿ ಕತ್ತಿಯನ್ನು ಒರೆಗೆ ಸೇರಿಸಿ ತನ್ನಆಸನದ ಮೇಲೆ ಹೋಗಿ ಕುಳಿತನು.

ಉಳಿದ ಸೇನಾಧಿಪತಿಗಳೂ, ಪಾಳೆಯಗಾರರೂ "ಪಿಂಡಾರಿ ಯವರನ್ನು ಮಟ್ಟಹಾಕಿಬಿಡಬೇಕು, ಪಿಂಡಾರಿಯವರು ನಗರದ ಕಡೆಗೆ ತಲೆಯೆತ್ತಿ ನೋಡದಂತೆ ಮಾಡಬೇಕು." ಎಂದು ನಾನಾಕಡೆಯಿಂದ ಘರ್ಜಿಸಿದರು. ಮಹಾರಾಜರವರು ಮಂತ್ರಿ ರಾಮಕೃಷ್ಣನ ಕಡೆಗೆ ತಿರುಗಿ ನೋಡಿದರು. ಮಹಾಮಂತ್ರಿಗಳು ಮೌನದಿಂದ ಅನ್ಯಮನಸ್ಕರಾಗಿ ಕುಳಿತಿದ್ದರು.

ಮಹಾರಾಜರವರು ಧೀರವಾಣಿಯಿಂದ "ಕೆಳದಿಯ ಸಂಸ್ಥಾನದ ಆಧಾರ ಸ್ತಂಭಗಳಿರಾ! ವೀರ ಪುತ್ರರುಗಳಿರಾ! ನಾವು ಪಿಂಡಾರಿಯವರಿಗೆ ಭಯಪಟ್ಟು ನಿಮ್ಮಗಳನ್ನು ಕರೆಸಿಲ್ಲ. ನಗರವು ವೀರಭೂಮಿಯೆಂಬುದು

ಇಡೀದಕ್ಷಿಣಾಪಥದಲ್ಲಿ ಸುಪ್ರಸಿದ್ಧವಾಗಿದೆ. ಆದರೆ ನಗರದ ರಾಜ್ಯದಮೇಲೆ ಮರಾಠರೂ ಮೈಸೂರಿನ ಹೈದರಲ್ಲೀಖಾನನೂ ಕಣ್ಣಿಟ್ಟಿದ್ದಾರೆ. ಸಿಂಹ ದ್ವಾರದಂತಿರುವ ಈ ನಗರಕ್ಕೆ ಪ್ರವೇಶಮಾಡುವ ಧೈರ್ಯವು ಪಿಂಡಾರೆ ಯುಪರಿಗೆಲ್ಲಿ ಬರಬೇಕು? ಇದರಲ್ಲಿ ಪೇಶ್ವೆಗಳ ಪಿತೂರಿ ಇದೆಯೆಂದು ನಾವು ಊಹಿಸಿದ್ದೇವೆ. ಪೇಶ್ವೆಗಳು ಪರಾಕ್ರಮಿಗಳಲ್ಲವೆಂದು ನಾವು ಬಗೆದಿಲ್ಲ. ಆದರೆ ನಮ್ಮ ಪರಾಕ್ರಮದ ಅರಿವು ಅವರಿಗಿಲ್ಲದೇ ಇಲ್ಲ. ಈಗ ನಮ್ಮ ಪರಾಕ್ರಮವೆಷ್ಟಿದೆಯೆಂದು ಪರೀಕ್ಷೆಮಾಡಲು ಪೇಶ್ವೆಗಳು ಈ ಪಿಂಡಾರೆಯವರನ್ನು ಚಿತಾಯಿಸಿ ಕಳುಹಿಸಿದ್ದಾರೆ. ನಾವು ಈ ಸಮಯದಲ್ಲಿ ನಮ್ಮ ಪರಾಕ್ರಮದ ಬಿಸಿಯು ಪುಣೆಗೆ ಮುಟ್ಟುವಂತೆ ಮಾಡಬೇಕು. ಅದಕ್ಕಾಗಿ ತಮ್ಮಗಳನ್ನು ಕರೆಯಿಸಿದ್ದೇವೆ." ಎಂದು ಹೇಳಿದರು.

ಆಗ ಸಭೆಯಲ್ಲಿದ್ದ ಸಮಸ್ತ ವೀರಾಗ್ರಣಿಗಳೂ ಎದ್ದುನಿಂತು "ಕೆಳದಿಯ ಅರಸರಿಗೆ ಜಯವಾಗಲಿ" ಎಂದು ಜಯಧ್ವನಿಯನ್ನು ಮಾಡಿದರು. ಮಹಾರಾಜರು ಆಸನದಿಂದೆದ್ದು ಸಭಿಕರನ್ನೆಲ್ಲಾ ಅಭಿ ವಂದಿಸಿ ಅರಮನೆಯೊಳಗೆ ಪ್ರವೇಶಮಾಡಿದರು.

ಮಹಾರಾಜ ಬಸಪ್ಪನಾಯಕರು ಬಿದನೂರಿನ ಅರಮನೆಯ ಅಂತಃಪುರದ ಒಳ ಮಹಲಿನಲ್ಲಿ ಸುಖಾಸನದಲ್ಲಿ ಮಂಡಿಸಿದ್ದಾರೆ. ಅವರ ಮನಸ್ಸಿಗೆ ಶಾಂತಿಯಿಲ್ಲ. ಬಸಪ್ಪನಾಯಕನು ಹೇಡಿಯಲ್ಲ, ಮಹಾ ಪರಾಕ್ರಮಶಾಲಿ. ಗಡಿನಾಡಿನಲ್ಲಿ ಪಿಂಡಾರೆಯವರ ದಂಡು ಬಂದಿದೆ ಎಂದ ಮಾತ್ರಕ್ಕೆ ನಾಯಕನ ಮನವು ಅಳುಕುವುದಿಲ್ಲ. ನಗರದ ಪರಾಕ್ರ ಮವು ಪುಣೆಯವರಿಗೆ ಪ್ರಸಿದ್ಧವಾಗಿದೆ. ಆದರೆ ಮಂತ್ರಿ ರಾಮಕೃಷ್ಣನು ಮೌನದಿಂದ ಇದ್ದುದು ಮಹಾರಾಜರ ಅಗಾಧಚಿಂತೆಗೆ ಕಾರಣವಾಗಿದೆ. ಮಹಾರಾಜರು ದ್ವಾರಪಾಲಕನನ್ನು ಕರೆದು ಮಂತ್ರಿ ರಾಮಕೃಷ್ಣನನ್ನು ಕರೆತರುವಂತೆ ಅಪ್ಪಣೆ ಮಾಡಿದರು. ಸ್ವಲ್ಪ ಹೊತ್ತಿನೊಳಗಾಗಿ ಮಂತ್ರಿ ರಾಮಕೃಷ್ಣನು ಪಲ್ಲಕ್ಕಿಯಲ್ಲಿ ಕುಳಿತು, ಅರಮನೆಗೆ ಬಂದನು. ಅವನು ಗಂಭೀರವಾಗಿ ಅಡಿಯಿಡುತ್ತಾ ಅರಮನೆಯ ಮಹಾದ್ವಾರವನ್ನು

ಪ್ರವೇಶಿಸಿದನು. ಒಳಗಿನ ಹಜಾರವನ್ನು ಹೊಕ್ಕು ಅಲ್ಲಿಂದ ಮೇಲ್ಮ ಹಡಿಯನ್ನು ಹತ್ತಿ ಮಹಾರಾಜರ ವಿಶ್ರಾಂತಿಭವನದೊಳಗೆ ಪ್ರವೇಶ ಮಾಡಿದನು.

ಆ ಪ್ರಶಸ್ತವಾದ ವಿಶ್ರಾಂತಿಭವನದಲ್ಲಿ ಮಹಾರಾಜರು ಸ್ವರ್ಣ ಪರ್ಯಂಕದಲ್ಲಿ ಕುಳಿತಿದ್ದರು. ರಾಮಕೃಷ್ಣನು ವಿನೀತನಾಗಿ ಮಹಾರಾಜರ ಸಮೀಪವನ್ನೈದಿ ಮುಗುಳುನಗೆಯಿಂದ ಮಹಾರಾಜರನ್ನಭಿವಂದಿಸಿ ನಿಂತುಕೊಂಡನು. ಮಹಾರಾಜರು ಎದುರುಗಿದ್ದ ರಜತ ಪೀಠದಲ್ಲಿ ಕುಳಿತುಕೊಳ್ಳುವಂತೆ ಸನ್ನೆಮಾಡಿದರು. ಮಂತ್ರಿ ರಾಮಕೃಷ್ಣನು ಆಸನ ವನ್ನಲಂಕರಿಸಿದನು.

"ಮಹಾಮಂತ್ರಿಗಳೇ, ಇಂದಿನ ದರಬಾರಿನ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?"

"ದರಬಾರಿನ ಕಾರ್ಯಕಲಾಪಗಳೆಲ್ಲವೂ ಸಹಜವಾಗಿಯೇ ಇದ್ದುವು ಮಹಾಪ್ರಭು."

"ಮಂತ್ರಿಗಳೇ, ನೀವೇನೋ ಸಹಜವಾಗಿಯೇ ಇದ್ದೀರಿ. ನನಗೆ ಆಶ್ಚರ್ಯವಾಗಿದೆ. ದರಬಾರಿನಲ್ಲಿ ನೀವು ಮೌನವಾಗಿದ್ದುದರ ಅರ್ಥ ವೇನು? ನೀವು ಈ ಯುದ್ಧಪ್ರಸಂಗದಲ್ಲಿ ಔದಾಸೀನ್ಯದಿಂದಿರುವಂತೆ ತೋರುತ್ತಿರುವುದರಲ್ಲಿ ಅಭಿನಿವೇಶವೇನು ?"

"ಮಹಾಪ್ರಭು, ನನಗೆ ಈಗ ಯುದ್ಧದ ಪ್ರಮೇಯವೇ ಕಾಣು ವುದಿಲ್ಲ. ಪಿಂಡಾರಿಯವರ ವಿಷಯದಲ್ಲಿ ಮಹಾಪ್ರಭುಗಳು ಚಿತ್ತಕ್ಕೆ ತೆಗೆದುಕೊಳ್ಳುವಂತಹ ವಿಷಯವೇನೂ ಇಲ್ಲ. ಗಡಿನಾಡಿನವರು ಅವರ ವಿಚಾರವನ್ನು ತೆಗೆದುಕೊಳ್ಳುವರು. ಅದಕ್ಕೆ ಸೈನ್ಯದ ಸಹಾಯವು ಅವಶ್ಯಕವಿದ್ದರೆ ರಾಜಧಾನಿಯಿಂದ ಒಬ್ಬ ಸೇನಾನಾಯಕನನ್ನು ಕಳುಹಿಸ ಬಹುದು. ಅದಕ್ಕಿಂತಲೂ ದೊಡ್ಡ ಪ್ರಮೇಯವು ನಮಗೆ ಸನ್ನಿಹಿತವಾಗಿದೆ. ಮರಾಠರು ನಮ್ಮ ದೇಶದಮೇಲೆ ದಂಡೆತ್ತಿ ಬರುತ್ತಾರೆಂಬ ವದಂತಿಯು ಖಚಿತವಾಗಿ ಕೇಳಿಬರುತ್ತಿದೆ. ಮತ್ತೊಂದುಕಡೆ ಹೈದರನ ದುರಾಶಾ

ದೃಷ್ಟಿಯು ನಮ್ಮ ಕಡೆಗೆ ಬೀಳುತ್ತಿದೆ. ಇದಕ್ಕೆ ನಾವು ಯೋಜನೆ ಮಾಡ ಬೇಕಾಗಿದೆ."

"ರಾಮಕೃಷ್ಣ! ಎರಡು ಯುದ್ಧಗಳನ್ನು ಒಂದೇ ಸಾರಿ ಮಾಡ ಲಾದೀತೇ? ಅದಕ್ಕೆ ನೀನೇನು ಯೋಜನೆ ಮಾಡಿರುವೆ?"

ರಾಮಕೃಷ್ಣನು ತಾತ್ಸಾರವಾದ ನಗುವನ್ನು ನಕ್ಕು, "ಮಹಾ ರಾಜರೇ, ನನಗೇಕೋ ಈಗ ಯುದ್ಧದ ಪ್ರಮೇಯವೇ ಇರುವಂತೆ ತೋರು ವುದಿಲ್ಲ. ಮರಾಠರೂ, ಹೈದರನೂ ಪರಸ್ಪರ ವಿರೋಧಿಗಳಾಗಿದ್ದಾರೆ. ಹಾಗೆ ವಿರೋಧಿಗಳಿಬ್ಬರೂ ಒಂದುಗೂಡದೆ ನಮ್ಮ ಮೇಲೆ ದಂಡೆತ್ತಿಬರುವುದು ಅಸಂಭವ. ಹಾಗೆ ಅವರಿಬ್ಬರೂ ಒಂದುಗೂಡದಂತೆ ನಾವು ರಾಜನೀತಿ ಯನ್ನು ತಂದೊಡ್ಡಬೇಕು. ಅವರವರಿಗೆ ಯುದ್ಧವಾಗುವಂತೆ ಮಾಡ ಬೇಕು. ನಾವು ನಮ್ಮ ರಾಜ್ಯವನ್ನು ಭದ್ರಪಡಿಸಿಕೊಳ್ಳಬೇಕು." ಎಂದ

"ನಿಮ್ಮ ತಂತ್ರವೆಲ್ಲಾ ವಿಫಲವಾದರೆ?"

ರಾಮಕೃಷ್ಣನು ವ್ಯಗ್ರಭಾವದಿಂದ, "ಆಗ ಮಹಾಯುದ್ಧ, ಮಹಾ ಯುದ್ಧ" ಎಂದ.

"ಆಗ ಯುದ್ಧ ಮಾಡುವವರಾರು?"

"ನಾನು. ನಾನು ಯುದ್ಧ ಮಾಡುತ್ತೇನೆ. ಮಹಾದೇವ ಮಲ್ಲಿ ಕಾರ್ಜುನನ ಕೃಪೆಯು ಕೆಳದಿಯ ಮೇಲಿದೆ. ಈ ನಗರದ ರಾಜ್ಯವು ವೀರಭೂಮಿ. ಅತ್ತಕಡೆ ಚಿತ್ರದುರ್ಗ ಇತ್ತಕಡೆ ಸಿರಾ ಎರಡು ರಣ ಕ್ಷೇತ್ರಗಳಲ್ಲೂ ಏಕಕಾಲದಲ್ಲಿ ಯುದ್ಧವನ್ನು ಹೂಡುತ್ತೇನೆ. ನಗರದ ರಾಜ್ಯವು ಸಾಮಾನ್ಯವಾದುದಲ್ಲ. ಈ ನಮ್ಮ ಸಂಸ್ಥಾನದಲ್ಲಿ ಪ್ರತಿ ಯೊಬ್ಬ ಪ್ರಜೆಯೂ ಯುದ್ಧಕ್ಕೆ ಎದ್ದುನಿಲ್ಲುವ ವೀರಾಗ್ರಣಿ. ವೀರರಮಣಿ ಯರೂ ಕೂಡಾ ಕತ್ತಿಯನ್ನು ಹಿಡಿದು ನಿಲ್ಲುವಷ್ಟು ಪರಾಕ್ರಮಿಗಳಾಗಿ ದ್ದಾರೆ."

"ಹಾಗಾದರೆ ಈ ಸಂಧಾನ ಪ್ರಯತ್ನಗಳೇಕೆ?"

"ಅದು ರಾಜನೀತಿ. ಸಂಧಿ ಅಥವಾ ವಿಗ್ರಹಗಳಿಗೆ ಮಹಾಪ್ರಭು ಗಳು ಸ್ವತಂತ್ರರಿದ್ದೀರಿ. ಹೇಗೆ ಅಪ್ಪಣೆಯಾದರೆ ನಾನು ಹಾಗೆ ಸಿದ್ಧ."

“ ಮಂತ್ರಿವರ್ಯ, ವಂಶಪಾರಂಪರ್ಯವಾಗಿ ನೀವು ಈ ರಾಜ್ಯದ ಮಹಾಮಂತ್ರಿಗಳು. ಚಾಣಕ್ಯನಿಗೆ ಸಮಾನರಾದ ಮೇಧಾವಿಗಳು. ಅಮಾತ್ಯ ರಾಕ್ಷಸನಿಗೆ ಸಮಾನರಾದ ಪರಾಕ್ರಮಿಗಳು. ಎಲ್ಲ ಸ್ವಾತಂತ್ರ್ಯವೂ ನಿಮಗುಂಟು. ಹೇಗೆ ಮಾಡಬೇಕೆಂದರೆ ಹಾಗೆ ಮಾಡಿರಿ.”

---

೩

## ರಾಮಕೃಷ್ಣನ ವರ್ಚಸ್ಸು

ಕಾರ್ತಿಕ ಶುದ್ಧ ಪೂರ್ಣಿಮಾ ಸೋಮವಾರ. ಇಂದು ಮಂತ್ರಿ ರಾಮಕೃಷ್ಣನ ಮನೆಯಲ್ಲಿ ಬಾಹ್ಮಣ ವೃಂದವು ಸಡಗರದಿಂದ ಸೇರುತ್ತಿದೆ. ವೇದವಿದ್ಯಾವಿಶಾರದರಾದ ಬಹುಮಂದಿ ಬ್ರಾಹ್ಮಣರು ನೆರದಿದ್ದಾರೆ. ರಾಮಕೃಷ್ಣನು ದೇವಮಂದಿರದಲ್ಲಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಮಹಾದೇವನ ಪೂಜೆಯಲ್ಲಿ ಮಗ್ನನಾಗಿದ್ದಾನೆ. ಬ್ರಾಹ್ಮಣರ ವೇದಘೋಷಗಳು ದಿಗಂತವನ್ನು ವ್ಯಾಪಿಸುತ್ತಿವೆ. ಪೂಜಾವಸಾನದಲ್ಲಿ ರಾಮಕೃಷ್ಣನು ಮಹಾದೇವನಿಗೆ ಮೃಷ್ಟಾನ್ನ ನೈವೇದ್ಯಗಳನ್ನು ಸಮರ್ಪಣೆಮಾಡಿ ಮಹಾಮಂಗಳಾರತಿಯನ್ನುಎತ್ತಿ ವೇದಘೋಷ ಪೂರ್ವಕವಾಗಿ ಮಂತ್ರಪುಷ್ಪವನ್ನು ಸಮರ್ಪಿಸಿ ಮಹಾದೇವನ ಪೂಜೆಯನ್ನು ಪೂರೈಸಿ, ಬ್ರಾಹ್ಮಣರಿಗೆ ಭೋಜನಮಾಡಿಸಿದ್ದಾನೆ. ಭೋಜನೋತ್ತರ ಬ್ರಾಹ್ಮಣರೆಲ್ಲರೂ ದಕ್ಷಿಣೆಯನ್ನು ಸ್ವೀಕರಿಸಿ ಆಶೀರ್ವಾದವಿತ್ತು ಮಂತ್ರಿ ಸೌಧದಿಂದ ಹೊರಡುತ್ತಿದ್ದಾರೆ. ಈ ಸಮಯಕ್ಕೆ ಸರಿಯಾಗಿ ತ್ರಿಪುಂಡ್ರಧಾರಿಯಾದ ವೀರಪುರುಷನೊಬ್ಬನು, ಅಶ್ವಾರೋಹಿಯಾಗಿ ಬಂದು ಮಂತ್ರಿಗೃಹದ ಮಹಾದ್ವಾರದಲ್ಲಿ ಕುದುರೆಯನ್ನು ನಿಲ್ಲಿಸಿ ಒಳಗೆ ಪ್ರವೇಶಮಾಡಿದನು. ಅವನ ವೇಷ ಭೂಷಣ ಅಲಂಕಾರಗಳಿಂದ ಅವನಾರೋ ವೀರಶೈವನೆಂದು ಪ್ರತ್ಯಕ್ಷವಾಗಿ ಗೋಚರವಾಗುತ್ತಿದೆ. ಎದುರಿಗೆ ಬರುತ್ತಿರುವ ಬ್ರಾಹ್ಮಣೋತ್ತಮರುಗಳಿಗೆ ಅಭಿವಾದನಮಾಡದೇ

ದಿಟ್ಟತನದಿಂದ ಅವನು ಮಹಾ ಮಂತ್ರಿಗಳ ಗೃಹಪ್ರವೇಶಮಾಡುತ್ತಿದ್ದಾನೆ. ಬ್ರಾಹ್ಮಣರು ಅವನನ್ನು ನೋಡಿ "ಪಾಷಂಡ, ಪಾಷಂಡ" ಎಂದು ಗುಸುಗುಟ್ಟುತ್ತಾ ದುರುದುರುನೆ ನೋಡುತ್ತಾ ಹೋಗುತ್ತಿದಾರೆ. ಆ ವೀರಪುರುಷನು ಯಾರನ್ನೂ ದೃಷ್ಟಿಸಿ ನೋಡದಿದ್ದರೂ, ಯಾರೊಡನೆಯೂ ಮಾತನಾಡದಿದ್ದರೂ ಪ್ರತಿಯೊಬ್ಬರ ದೃಷ್ಟಿಯೂ ಅವನಮೇಲೆ ಬಿದ್ದಿದೆ. ವಿದ್ವಾಂಸರು "ಯಾರೋ ರಾಜಪುರುಷ, ಮಂತ್ರಿಗಳ ಭೇಟಿಗೆ ಹೋಗುತ್ತಿದ್ದಾನೆ" ಎಂದುಕೊಳ್ಳುತ್ತಾರೆ. ದುರಾಗ್ರಹಿಗಳಾದ ಬ್ರಾಹ್ಮಣರು "ಎಂಥಾ ಉದ್ದಂಡತನ! ಎದುರಿಗೆ ಬರುವ ಬ್ರಾಹ್ಮಣವೃಂದವನ್ನು ಅಭಿವಂದಿಸದೇ ದುರ್ಲಕ್ಷಿಸಿ ಹೋಗುತ್ತಿದ್ದಾನೆ" ಎಂದುಕೊಳ್ಳುತ್ತಾರೆ. ಅಷ್ಟರಲ್ಲಿ ಆಗಂತುಕನು ಮಹಾಮಂತ್ರಿಗಳ ದಿವಾನ್‌ಖಾನೆಯನ್ನು ಪ್ರವೇಶಮಾಡಿದನು. ಮುತ್ಸದ್ದಿಗಳು ಆ ರಾಜಪುರುಷನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ಒಳಗೆ ಹೋಗಿ ಮಹಾಮಂತ್ರಿಗಳಿಗೆ "ಯಾರೋ ರಾಜಪುರುಷರೊಬ್ಬರು ಬಂದಿದ್ದಾರೆ" ಎಂದು ಬಿನ್ನವಿಸಿದರು. ಮಹಾಮಂತ್ರಿಯು ಆಲೋಚಿಸುತ್ತಾ 'ಯಾರಿರಬಹುದು?' ಎಂದುಕೊಂಡು ಸ್ವಲ್ಪಹೊತ್ತಿನಲ್ಲಿಯೇ ದಿರ್ವಾಖಾನೆಗೆ ಬಂದು ಆಗಂತುಗನನ್ನು ಸಂಧಿಸಿದನು. ಮಂತ್ರಿ ರಾಮಕೃಷ್ಣನನ್ನು ಕಾಣುತ್ತಲೇ ಆ ರಾಜಪುರುಷನು ಜಗ್ಗನೆದ್ದು ಮಂತ್ರಿಗಳನ್ನು ಅಭಿವಂದಿಸಿದನು. ಮಂತ್ರಿ ರಾಮಕೃಷ್ಣನು ಮುಗುಳುನಗುವನ್ನು ಸೂಚಿಸುತ್ತಾ ಕುಶಲಪ್ರಶ್ನೆಯನ್ನುಮಾಡಿದನು. ಸ್ವಲ್ಪ ಹೊತ್ತಿನೊಳಗಾಗಿ ಅವರಿಬ್ಬರೂ ದಿವಾನ್‌ಖಾನೆಯಿಂದ ಒಳಹಜಾರವನ್ನು ಹೊಕ್ಕು ಅಂತರ್ಗೃಹಕ್ಕೆ ಹೋಗಿ ಕುಳಿತರು. ಬಾಗಿಲುಗಳೆಲ್ಲಾ ಭದ್ರಪಡಿಸಲ್ಪಟ್ಟಿದ್ದವು. ಮಂತ್ರಿ ರಾಮಕೃಷ್ಣನು "ವಿರೂಪಾಕ್ಷ ಒಡೆಯರೇ ಸಮಾಚಾರವೇನು?" ಎಂದು ಕೇಳುತ್ತಲೇ ವಿರೂಪಾಕ್ಷನು ಉದ್ವಿಗ್ನಮನಸ್ಕನಾಗಿಉದ್ರೇಕಪೂರಿತವಾದ ಧೀರವಾಣಿಯಿಂದಹೇಳಿದ: "ಸ್ವಾಮಿ, ಅನೇಕದಿವಸಗಳಿಂದ ತಮ್ಮ ಆಶ್ರಯದಲ್ಲಿದ್ದೇನೆ. ನಾನು ಪಡೆದ ಭಾಗ್ಯವೇನು? ತಮಗಾಗಿ ಎಷ್ಟೋ ಆಪತ್ತಿನ ಸಂಧಿಗಳನ್ನು ಸಾಧಿಸಿದ್ದೇನೆ. ಈ ರಾಜ್ಯದಲ್ಲಿ ನನಗಿರುವ ಪೂಜ್ಯತೆಯೇನು? ಕೆಳದಿಯ ಅರಸರು

ನಮ್ಮ ತಂದೆಯವರನ್ನು ಗುಪ್ತವಾಗಿ ಕೊಲೆಮಾಡಿಸಿದರು. ಅಂದು ನನ್ನನ್ನೂ ಕೊಲೆಮಾಡಿಸುತ್ತಿದ್ದರು. ತಾವು ನನ್ನನ್ನು ರಕ್ಷಿಸಿದಿರಿ. ಅಂದಿನಿಂದ ನಾನು ದೇಶಾಂತರಗತನಾಗಿ ತಮ್ಮ ಸೇವೆಮಾಡುತ್ತಿದ್ದೇನೆ. ಮಂತ್ರಿಗಳೇ, ಇಂದು ನಾನು ನಿಸ್ಸಹಾಯಕನಾಗಿಲ್ಲ. ಹತ್ತು ಸಹಸ್ರ ದಂಡು ನನ್ನ ಅಧೀನದಲ್ಲಿದೆ. ಈ ರಾಜ್ಯದವರು ನನ್ನ ಪೂರ್ವೋತ್ತರಗಳನ್ನರಿಯದೇ ನಮ್ಮ ಸೈನ್ಯವನ್ನು ಪಿಂಡಾರಿಯ ಸೈನ್ಯವೆಂದು ಕರೆಯುತ್ತಾರೆ. ಅವರ ಭ್ರಾಂತಿಯು ಹಾಗೆಯೇ ಉಳಿದಿರಲೆಂದು ನಾನೂ ಹಾಗೆಯೇ ಪ್ರಚಾರ ಮಾಡುತ್ತಿದ್ದೇನೆ. ತಾವು ನನಗೆ ಬಹಳ ಉಪಕಾರ ಮಾಡಿದ್ದೀರೆಂಬುದು ನಿಜ. ನನ್ನ ಪಿತ್ರಾರ್ಜಿತವಾದ ಗುಪ್ತ ಧನವನ್ನು ನನಗೆ ಕೊಡಿಸುವುದಾಗಿ ನೀವು ವಾಗ್ದಾನ ಮಾಡಿದಿರಿ. ಇಂದಿನವರೆಗೂ ಒಂದು ಕುರುಡು ಕಾಸನ್ನೂ ನನಗೆ ಕೊಟ್ಟಿಲ್ಲ. ಇದಕ್ಕೆಲ್ಲಾ ಬ್ರಾಹ್ಮಣರು ನಮ್ಮ ತಂದೆಯ ಮೇಲೆ ಕಾರುತ್ತಿದ್ದ ದ್ವೇಷವೇ ಕಾರಣವಲ್ಲದೆ ಮತ್ತೇನು? ನಮ್ಮ ತಂದೆಯು ಬ್ರಾಹ್ಮಣ ಕುಲಕ್ಕೆ ಮಾಡಿದ ಅಪಚಾರವಾದರೂ ಏನು?"

"ನೋಡಿರಿ ಮಂತ್ರಿಗಳೇ, ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯದ ಮಹಂತನೆಂದು ನಿರೀಹ ಸತ್ಪುರುಷನೆಂದು ಹೇಳಿಕೊಳ್ಳುವ ಅಭಿರಾಮಸ್ವಾಮಿಯೇ ನಮ್ಮ ಕುಲದ ಸರ್ವನಾಶಕ್ಕೆ ಕಾರಣನಲ್ಲವೇ? ಈ ರಾಜ್ಯದಲ್ಲಿ ತಮ್ಮ ಅನುಗ್ರಹವಿಲ್ಲದಿದ್ದರೆ ಆ ಅಭಿರಾಮಸ್ವಾಮಿಯನ್ನು ಈ ಜಗತ್ತಿನಲ್ಲಿ ಒಂದು ಕ್ಷಣ ಹೊತ್ತು ಜೀವಿಸಿರಲು ನಾನು ಬಿಡುತ್ತಿದ್ದೆನೆ? ಈಗ ಹೇಳಿರಿ; ಈ ರಾಜ್ಯಕ್ಕೆ ಈಗ ನಿಜವಾದ ವಿಪತ್ತು ಸಂಭವಿಸಿದೆ. ಈಗ ನನ್ನ ಗುಪ್ತನಿಧಿಯನ್ನು ಕೊಡಿಸಿದರೆ ನಾನು ತಮ್ಮ ಸೇವೆಯನ್ನು ಮಾಡುತ್ತೇನೆ. ಇಲ್ಲದಿದ್ದರೆ ಇಂದಿನಿಂದ ನನ್ನನ್ನು ತಮ್ಮ ಸೇವೆಯಿಂದ ವಿಮುಕ್ತನನ್ನಾಗಿ ಮಾಡಿರಿ. ನಾನು ಸ್ವತಂತ್ರನಾಗುತ್ತೇನೆ."

"ವಿರೂಪಾಕ್ಷ, ನಾನು ನಿನ್ನ ಪ್ರಾಣವನ್ನು ಕಾಪಾಡಿದ ಹಂಗಿನಿಂದ ನಿನ್ನನ್ನು ದಾಸ್ಯದಲ್ಲಿಟ್ಟಿಲ್ಲ. ನೀನು ಸ್ವತಂತ್ರನಾಗಬೇಕೆಂದಿದ್ದರೆ,

ಈ ಕ್ಷಣದಿಂದ ನೀನು ಸ್ವತಂತ್ರನಾಗಿರುವಿ. ಆದರೆ ನಿನ್ನ ತಂದೆ, ನಿನ್ನ ತಾತ, ಮುತ್ತಾತಂದರು ಈ ನಗರದ ಸಿಂಹಾಸನದ ದಾಸಾನುದಾಸ ರೆಂಬುದನ್ನೂ, ಈ ರಾಜರಿಗೆ ಅವರೆಲ್ಲರೂ ಋಣಿಗಳೆಂಬುದನ್ನೂ ನೀನು ಮರೆಯದಿರು. ಈ ರಾಜ್ಯದಲ್ಲಿ ನಮ್ಮ ತಂದೆ, ನಮ್ಮ ತಾತಂದಿರ ಕಾಲ ದಿಂದ ನಾವು ಸೇವೆಮಾಡುತ್ತಾ ಪಡೆದಿರುವ ಭಾಗ್ಯವೇನು? ನಿನ್ನ ತಂದೆಯ ಮರಣದ ಕಥೆಯುು ನಿಜವಾಗಿ ನಿನಗೆ ಗೊತ್ತಿಲ್ಲ. ಅದ ರಲ್ಲಿ ಅಭಿರಾಮಸ್ವಾಮಿಯಾಗಲೀ, ಮತ್ತಾವಬ್ರಾಹ್ಮಣನಾಗಲೀ ಕಾರಣ ನಲ್ಲ. ರಾಣಿಭವಾನಿಯು ನಿನ್ನ ತಂದೆಗೆ ಮೃತ್ಯುವನ್ನು ತಂದೊಡ್ಡಿದಳು. ಅದು ನಿನ್ನ ತಂದೆಯ ಭಯಂಕರ ಅಪರಾಧ. ಅದಕ್ಕಾಗಿ ನಿನ್ನ ಮನಸ್ಸಿನಲ್ಲಿ ಬ್ರಾಹ್ಮಣರ ಮೇಲೆ ದ್ವೇಷವಿದ್ದರೆ ನಾನೇನು ಮಾಡಲಿ? ನಿಮ್ಮ ತಂದೆ ತಾತಂದಿರಂತೆ ಈ ರಾಜ್ಯದ ಸೇವೆಮಾಡಿ ಕೀರ್ತಿಯನ್ನಾ ದರೂ ಗಳಿಸು. ರಾಜದ್ರೋಹಿಯಾಗಿ, ಘಾತುಕನಾಗಿ ಬದುಕುವು ದಾದರೂ ಬದುಕು. ನಾನು ನಿನಗೆ ಅಂದು ಜೀವದಾನಮಾಡಿದ ಪ್ರತಿ ಫಲವನ್ನು ಇಂದು ನಿನ್ನಲ್ಲಿ ಕೇಳುವುದಿಲ್ಲ. ವಿರೂಪಾಕ್ಷ! ನೀನು ಹೋಗು. ಪರಮೇಶ್ವರನ ಅನುಗ್ರಹವಿದ್ದರೆ ಕೆಳದಿಯ ರಾಜ್ಯವು ಉಳಿ ಯಲಿ, ಇಲ್ಲದಿದ್ದರೆ ಅದು ಅಳಿದುಹೋಗಲಿ. ನಡೆ! ನಿನ್ನಿಂದ ನನ ಗೇನೂ ಕೆಲಸವಿಲ್ಲ."

ವಿರೂಪಾಕ್ಷನು ಎದ್ದುನಿಂತು, ಅಳತೊಡಗಿದನು. ಅವನ ಶರೀರ ವೆಲ್ಲವೂ ಕಂಪಿಸುತ್ತಿತ್ತು. ಅವನು ಪ್ರಜ್ಞಾಶೂನ್ಯನಾಗಿ ಮಂತ್ರಿಗಳ ಪಾದಗಳ ಮೇಲೆ ಬಿದ್ದು ಕ್ಷಮಾಪ್ರಾರ್ಥನೆ ಮಾಡಲಾರಂಭಿಸಿದನು. ಮಂತ್ರಿ ರಾಮಕೃಷ್ಣನು ಎರಡು ಕೈಗಳಿಂದಲೂ ಆ ಯುವಾಪುರುಷ ನನ್ನು ಎತ್ತಿ ಆಲಂಗಿಸಿ, ತಲೆಸವರಿ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ಮಂತ್ರಿಯು ವಿರೂಪಾಕ್ಷನನ್ನು ಕುರಿತು ಹೇಳಿದನು,—"ವಿರೂಪಾಕ್ಷ, ನೀನು ವೇಷಾಂತರದಿಂದ ಮೈಸೂರಿಗೆ ಹೋಗು. ಹೈದರನನ್ನು ಕಂಡು ಸಂಧಿಮಾಡಿಕೋ. ನಾನು ನಗರದ ಮೇಲೆ ಪ್ರಾಪ್ತವಾಗಿರುವ ಈ ದುರ್ಘಟನೆಗಳನ್ನೆಲ್ಲಾ ನಿವಾರಣೆಮಾಡಿಸಿ, ನಿನ್ನನ್ನು ರಾಜರ ಆಸ್ಥಾನಕ್ಕೆ

ಕರೆಸಿ ಮರ್ಯಾದೆಮಾಡುವಂತೆ ಮಾಡಿಸುತ್ತೇನೆ. ನೀನು ಇಂದೇ ಹೊರಡು."

"ಮಹಾಮಂತ್ರಿಗಳೇ, ಒಂದು ಮಾತು. ನನ್ನ ದುರುಳತನವನ್ನು ಕ್ಷಮಿಸಬೇಕು. ಆ ಭವಾನೀರಾಣಿಯು ಯಾರೆಂಬುದನ್ನು ನನಗೆ ತಿಳಿಸುವಿರಾ?"

ಮಹಾಮಂತ್ರಿಯು ನಗುತ್ತಾ, "ಹೌದು, ವಿರೂಪಾಕ್ಷ, ನಿನ್ನ ಹೃದಯವು ಪರಿತಪಿಸುತ್ತಿದೆಯೆಂಬುದನ್ನು ನಾನು ಬಲ್ಲೆ. ಒಂದಾನೊಂದು ದಿವಸ ಆ ಭವಾನೀರಾಣಿಯನ್ನು ನೀನೇ ಪ್ರತ್ಯಕ್ಷವಾಗಿ ನೋಡುವೆ, ಹೋಗು. ಆ ರಾಣಿಯಮೇಲೆ ನಿನ್ನ ಪ್ರತಿಕ್ರಿಯೆಯು ಏನೂ ನಡೆಯದು" ಎಂದು ಹೇಳಿ ವಿರೂಪಾಕ್ಷನನ್ನು ಬೀಳ್ಕೊಟ್ಟನು. ವಿರೂಪಾಕ್ಷನು ಅಶ್ವಾರೋಹಿಯಾಗಿ ಗುಪ್ತಮಾರ್ಗದಿಂದ ನಗರದ ರಾಜ್ಯವನ್ನು ಪರಿತ್ಯಾಗಮಾಡಿದನು.

---

## ೪

## ವಿರೂಪಾಕ್ಷನ ರಾಯಭಾರ

ಮೈಸೂರಿನ ರಾಜಕೀಯವು ಹೇಗೆ ನಡೆಯುತ್ತಿತ್ತು ಎಂಬುದನ್ನು ವಿವರಿಸಿ ಗ್ರಂಥರೂಪವಾಗಿ ಬರೆಯುವದು ನಮ್ಮ ಉದ್ದೇಶವಲ್ಲ. ಅದು ನಮ್ಮ ಕಥೆಗೆ ಅಷ್ಟು ಸಂಬಂಧಿಸಿದ ವಿಷಯವೂ ಅಲ್ಲ. ಆದರೆ ಹೈದರಲ್ಲೀಖಾನನ ವಿಷಯವನ್ನು ವಾಚಕರು ಇಲ್ಲಿ ತಿಳಿದಿರಬೇಕಾಗಿದೆ. ಹೈದರಲ್ಲೀಖಾನನು ಮೈಸೂರಿನ ದಳವಾಯಿ. ಸಣ್ಣ ನೌಕರಿಯಿಂದ ಮೇಲೆ ಮೇಲೆ ಏರಿ ಮಹಾದಳಪತಿಯ ಸ್ಥಾನವನ್ನು ಆಕ್ರಮಿಸಿದ ಮಹಾಪುರುಷ. ಹೈದರಲ್ಲೀಖಾನನು ದಳಪತಿಯೆಂಬುದೇನೋ ನಿಜ. ಆದರೇನು? ಇಡೀ ಹಿಂದೂಸ್ತಾನದಲ್ಲಿ ಮೈಸೂರೆಂದರೆ ಹೈದರಲ್ಲೀಖಾನ್, ಹೈದರಲ್ಲೀಖಾನನೆಂದರೆ ಮೈಸೂರು. ಹಿಂದೂಸ್ತಾನದಲ್ಲಿ

ಹೈದರನಂಥಾ ದಳಪತಿಯು ಮತ್ತೊಬ್ಬನು ಜನ್ಮವೆತ್ತಿದ್ದನೋ ಇಲ್ಲವೋ ನಮಗೆ ಗೊತ್ತಿಲ್ಲ. ಚರಿತ್ರಕಾರರೇನೋ ಅಂತಹ ಮಹಾಸತ್ವಶಾಲಿಯಾದ ಮತ್ತೊಬ್ಬ ದಳಪತಿಯ ಜೀವನವನ್ನು ಚರಿತ್ರೆಯಲ್ಲಿ ಚಿತ್ರಿಸಿಲ್ಲ. ಕಾವೇರಿಯ ಒಂದು ಕೊನೆಯಿಂದ ಗೋದಾವರಿಯವರೆಗೆ ಹೈದರನ ಅಸಿಧಾರೆಯು ಹರಿಯುತ್ತಿತ್ತು. ಇಡೀ ದಕ್ಷಿಣಾಪಥವಲ್ಲಿ ಹೈದರನನ್ನು ಎದುರಿಸಬಲ್ಲ ವೀರಾಗ್ರಣಿಯು ಒಬ್ಬನಾದರೂ ಇರಲಿಲ್ಲ. ಬಹುಮನಿ ರಾಜ್ಯಗಳು ಮೂಲೆಯಲ್ಲಿ ಅವಿತುಕೊಂಡಿದ್ದವು. ಮಹಾರಾಷ್ಟ್ರರಾಜ್ಯವು ಹೈದರನೆಂದರೆ ಹೆದರುತ್ತಿತ್ತು. ಇಂಗ್ಲೀಷರಿಗೆ ಹೈದರನನ್ನು ಕಂಡರೆ ಸಿಂಹಸ್ವಪ್ನ. ಪೋರ್ಚುಗೀಸರೂ, ಫ್ರೆಂಚರೂ, ಹೈದರನ ಸ್ನೇಹ ಮಾಡಿಕೊಂಡಿದ್ದರು. ಅಂತಹ ಮಹಾ ಪರಾಕ್ರಮಶಾಲಿಯಾದ ರಾಜರುಗಳಮೇಲೆ ರಾಜನೆನಿಸಿಕೊಳ್ಳುವ ಸೇನಾಧಿಪತಿ ಹೈದರಲ್ಲಿಖಾನ್.

ಅವನ ದೃಷ್ಟಿಯನ್ನು ನಗರದ ಸಂಸ್ಥಾನವು ಕುಕ್ಕುತ್ತಿತ್ತು. ನಗರದ ರಾಜ್ಯವು ಹೈದರನ ದೃಷ್ಟಿಯಲ್ಲಿ ಸಣ್ಣರಾಜ್ಯವೇ ಅಹುದು. ಆದರೆ ಆ ರಾಜ್ಯದಮೇಲೆ ದಂಡೆತ್ತಿ ಹೋಗುವ ಧೈರ್ಯವು ಹೈದರನಿಗೆ ಇರಲಿಲ್ಲ. ಏಕೆಂದರೆ ನಗರದ ಸಿಂಹಾಸನಾಧೀಶ್ವರರು ಧರ್ಮಶೂರರೆಂದು ಹೆಸರಾದವರು. ಇಡೀನಗರದ ರಾಜ್ಯದ ಸಂಪತ್ತೆಲ್ಲವೂ ದಾನಧರ್ಮಗಳಿಗಾಗಿ ವಿನಿಯೋಗಿಸಲ್ಪಡುತ್ತಿತ್ತು. ಬಡವನ ಗುಡಿಸಿಲಿನಲ್ಲಿ ಎಳೆಯ ಹಸುಳೆಯು ಕುಡಿಯುವ ಹಾಲು ಕೆಳದಿಯ ಅರಸರ ಶಿವಧರ್ಮದಿಂದ ಬಂದದ್ದು. ನಿದಾಘಾತಪದಲ್ಲಿ ಪಥಿಕನ ಗಂಟಲನ್ನು ತಣಿಸುವ ಮಜ್ಜಿಗೆಯು ನಗರದ ಶಿವಧರ್ಮದ್ದು. ವೇದಘೋಷವನ್ನು ಮಾಡುವ ಬ್ರಾಹ್ಮಣನ ಮನೆಯಲ್ಲಿ ಭೋಜನ ಮಾಡುವ ಪವಿತ್ರಾನ್ನವು ನಗರದ ಅರಸರದು. ಶಿವಾಲಯದಲ್ಲಿ ಜಂಗಮರಿಗೆ ಮಾಡಿಸುವ ಗಣಾರಾಧನೆಯು ಕೆಳದಿಯ ಅರಸರದು. ನಗರದ ರಾಜ್ಯದಲ್ಲಿ ಸರ್ವತ್ರ ಚೋರಭಯವಿಲ್ಲದ ಜೀವನವು ಕೆಳದಿಯ ಅರಸರ ಧರ್ಮದ ಮಹತ್ವ. ಅಂತಹ ಪ್ರತ್ಯಕ್ಷ ಧರ್ಮರಾಜ್ಯದ ಮೇಲೆ ಯುದ್ಧವನ್ನು ಹೂಡುವ ಧೈರ್ಯವು ಹೈದರನಿಗೆ ಇರಲಿಲ್ಲ. ಯುದ್ಧಕ್ಕೆ ಸರಿಯಾದ ನೆಪವೂ ಸಿಕ್ಕಿರಲಿಲ್ಲ.

ಆದರೆ ಮರಾಠರಿಗೂ, ಈ ಕೆಳದಿಯ ಅರಸರಿಗೂ ಸಂಬಂಧವಿಲ್ಲದಂತೆ ಇಟ್ಟಿರುವುದು ಹೈದರನಿಗೆ ಅತಿಮುಖ್ಯವಾದ ರಾಜನೀತಿಯಾಗಿದ್ದಿತು. ಕೆಳದಿಯ ಅರಸರಿಗೆ ಯಾವದಾದರೊಂದು ಕಾರಣದಿಂದ ಮೈಸೂರಿನ ಸೈನ್ಯವು ನಗರದ ಮೇಲೆ ಯುದ್ಧಕ್ಕೆ ಬರುವುದೆಂದು ಹೈದರನು ಭಯೋತ್ಪಾತವನ್ನು ಮಾಡುತ್ತಲೇ ಇದ್ದನು. ಈಗಲೂ ಅಂತಹದೊಂದು ಸಂಭವವು ಪ್ರಾಪ್ತವಾಗಿದ್ದಿತು. ಹೈದರನಿಗೆ ರಾಜಾನುಚರರು ಕೆಳದಿಯಿಂದ ರಾಯಃಭಾರಿಯು ಬಂದಿದ್ದಾರೆಂದು ತಿಳಿಸಿದರು. ಮಿತ ಪರಿವಾರದೊಡನೆ ಕೆಳದಿಯ ರಾಯಭಾರಿಯು ಬದಿದ್ದಾನೆಂದು ಕೇಳಿಯಂತೂ ಹೈದರನಿಗೆ ಆಶ್ಚರ್ಯವೇ ಆಯಿತು. ಹೈದರನು ನಗರಕ್ಕೆ ಯುದ್ಧದ ಓಲೆಯನ್ನು ಕಳುಹಿಸಿರುವಾಗ ನಗರದ ರಾಯಭಾರಿಯು ಮಿತಪರಿವಾರದೊಡನೆ ಶ್ರೀರಂಗಪಟ್ಟಣಕ್ಕೆ ಬಂದಿರುವುದರ ಅರ್ಥವೇನೆಂದು ಶಂಕಿಸತೊಡಗಿದನು.

ಹೈದರನ ಶಂಕೆಯು ಹೇಗೇ ಇರಲಿ ನಗರದ ರಾಯಭಾರಿಯನ್ನು ಕಾಣುವ ಕುತೂಹಲವು ಹೈದರನಿಗೆ ಪ್ರಬಲವಾಗಿದ್ದಿತು. ಶ್ರೀರಂಗಪಟ್ಟಣದಲ್ಲಿ ನಗರದ ರಾಯಭಾರಿಗೆ ರಾಜಯೋಗ್ಯವಾದ ಬಿಡಾರವು ಸಿದ್ಧಗೊಳಿಸಲ್ಪಟ್ಟಿತ್ತು. ಅರಮನೆಯ ದರೋಗ ರಾಮರಾಯನು ಅತಿಥಿಗಳ ಉಪಚಾರಗಳಿಗೆ ಬೇಕಾದ ಏರ್ಪಾಡುಗಳನ್ನು ಮಾಡಲು ನಿಯಮಿತನಾಗಿದ್ದನು.

ನಗರದಿಂದ ಬರುವ ರಾಯಭಾರಿಯು ಯಾವ ಮಾರ್ಗದಿಂದ ಬರುತ್ತಾನೆಂದು ಯಾರಿಗೂ ಗೊತ್ತಿಲ್ಲ. ಆದರೆ ಹೊರಗಿನ ಯಾವ ರಾಯಭಾರಿಗಳೇ ಬರಲಿ ಕೋಟೆಯ ಉತ್ತರದ ಬಾಗಿಲಿನಿಂದಲೇ ಶ್ರೀರಂಗಪಟ್ಟಣದೊಳಗೆ ಕರೆತರುವ ಪದ್ಧತಿ. ಆ ಪದ್ಧತಿಯ ಪ್ರಕಾರ ಹೈದರನ ಕಡೆಯವರು ಉತ್ತರದ ಬಾಗಿಲಿನಲ್ಲಿ ಎದುರುಗೊಳ್ಳಲು ಸಿದ್ಧರಾಗಿದ್ದರು. ವಿರೂಪಾಕ್ಷನು ಸಂಕೇತ ಪ್ರಕಾರ ಮ್ಯಾನಾದಲ್ಲಿ ಕುಳಿತು ಉತ್ತರದ್ವಾರದಿಂದ ಶ್ರೀರಂಗಪಟ್ಟಣವನ್ನು ಪ್ರವೇಶಿಸಿದನು. ನಗರದ ರಾಜ್ಯದ ರಾಜಪರಿವಾರದ ಯಾವ ಚಿಹ್ನೆಗಳೂ ಆ ರಾಯಭಾರಿಯ ಅನುಯಾಯಿ

ಗಳ ಗುಂಪಿನಲ್ಲಿ ಇರಲಿಲ್ಲ. ಸಾಧಾರಣ ದೊಡ್ಡಮನುಷ್ಯರು ಯಾತ್ರಿಕ ರಾಗಿ ಹೊರಟರೆ ಹೇಗಿರುತ್ತದೋ ಹಾಗಿತ್ತು ವಿರೂಪಾಕ್ಷನ ರಾಯ ಭಾರದ ಪರಿವಾರ. ಹೈದರನು ಈ ರಾಯಭಾರಿಗಳು ಶ್ರೀರಂಗಪಟ್ಟಣದ ಸಮೀಪಕ್ಕೆ ಬರುವುದಕ್ಕಿಂತ ಮುಂಚೆಯೇ ಈ ಸಮಾಚಾರವನ್ನೆಲ್ಲಾ ತಿಳಿದಿದ್ದನು. ಶ್ರೀರಂಗಪಟ್ಟಣದಲ್ಲಿ ಈ ರಾಯಭಾರಿಯನ್ನು ಎದುರು ಗೊಳ್ಳುವುದರಲ್ಲಿಯೂ ಅಂಥದೇ ಒಂದು ವೈಲಕ್ಷಣ್ಯವು ಕಾಣುತ್ತಿದ್ದಿತು. ರಿಸಾಲ್‌ದಾರ್ ನಂಜರಾಜಯ್ಯನು ತನ್ನ ಮೈಗಾವಲಿನವರಾದ ಹತ್ತು ಮಂದಿ ಸೈನಿಕರೊಡನೆ ಎದುರುಗೊಳ್ಳಲು ನಿಂತಿದ್ದನು. ನಗರದ ರಾಯಭಾರಿಯ ಮ್ಯಾನವು ಶ್ರೀರಂಗಪಟ್ಟಣದ ಕೋಟೆಯ ಬಾಗಿಲಿಗೆ ಬರುತ್ತಲೇ ನಂಜರಾಜಯ್ಯನು ಮ್ಯಾನಾವನ್ನು ನಿಲ್ಲಿಸಿ ರಾಯಭಾರಿ ಯನ್ನು ಮರ್ಯಾದೆಯಿಂದ ಯಥೋಚಿತ ಕುಶಲ ಪ್ರಶ್ನೆಗಳನ್ನು ಮಾಡಿ ಜೊತೆಯಲ್ಲಿ ಕರೆದುಕೊಂಡುಹೋಗಿ ಬಿಡಾರದಲ್ಲಿ ಇಳಿಸಿದನು. ವಿರೂ ಪಾಕ್ಷನು ತನಗೆ ಸಿದ್ಧಗೊಳಿಸಲ್ಪಟ್ಟಿದ್ದ ಬಿಡಾರದಲ್ಲಿ ಇಳಿದುಕೊಂಡು ಭೋಜನಾದಿಗಳನ್ನು ತೀರಿಸಿ ಹೈದರನ ಭೇಟಿಗಾಗಿ ನಿರೀಕ್ಷಿಸುತ್ತಿದ್ದನು.

ಸಂಧ್ಯಾಕಾಲ ಸುಮಾರು ಮೂರುಝಾವದ ಹೊತ್ತಿನಲ್ಲಿ ನಂಜ ರಾಜಯ್ಯನು ಬಂದು ರಾಯಭಾರಿಯನ್ನು ಭೇಟಿಮಾಡಿ ರಾತ್ರಿ ಒಂಭತ್ತುಘಂಟೆಗೆ ಹೈದರಲ್ಲೀಖಾನರವರು ರಾಯಭಾರಿಯ ಬಿಡಾರ ದಲ್ಲಿಯೇ ಬಂದು ಭೇಟಿಕೊಡುವರೆಂದು ತಿಳಿಸಿದನು. ನಂಜರಾಜ ಯ್ಯನು ಸ್ವಲ್ಪಹೊತ್ತು ವಿರೂಪಾಕ್ಷನೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಾ ಕುಳಿತಿದ್ದು ಹೊರಟುಹೋದನು.

ರಾತ್ರಿ ಒಂಭತ್ತುಘಂಟೆಗೆ ಸರಿಯಾಗಿ ಹೈದರಲ್ಲೀಖಾನನು ರಾಯ ಭಾರಿಯ ಬಿಡಾರಕ್ಕೆ ಬಂದು ಭೇಟಿಕೊಟ್ಟನು. ಆ ಬಿಡಾರದಲ್ಲಿ ದಿವಾನಖಾನೆಯಲ್ಲಿ ಲೋಡುದಿಂಬುಗಳ ಮೇಲೆ ಮೀರಮುಂಡಿಯನ್ನು ಹಾಕಿ ಹೈದರನು ಕುಳಿತಿದ್ದನು. ಎದುರಿಗೆ ಸಮೀಪದಲ್ಲಿಯೇ ಸಿದ್ಧ ಗೊಳಿಸಿದ್ದ ಲೋಡುದಿಂಬುಗಳಮೇಲೆ ವಿರೂಪಾಕ್ಷನು ಪದ್ಮಾಸನಾಸೀನ ನಾಗಿ ಕುಳಿತುಕೊಂಡನು. ಹೈದರನು ರಾಯಭಾರಿಯನ್ನು ಕುಶಲ

ಪ್ರಶ್ನೆಮಾಡಿ, ರಾಯಭಾರಿಯು ಶ್ರೀರಂಗಪಟ್ಟಣಕ್ಕೆ ಬಂದಿರುವ ಕಾರಣ ವೇನೆಂದು ಪ್ರಶ್ನೆಮಾಡಿದನು. ವಿರೂಪಾಕ್ಷಯ್ಯನು ಆಸನದಿಂದೆದ್ದು ಮುಜರೆಮಾಡಿ ವಿನಯದಿಂದ ತನ್ನ ಕಿಸೆಯಲ್ಲಿದ್ದ ಲಕ್ಕೋಟೆಯೊಂದನ್ನು ತೆಗೆದು ಹೈದರಲ್ಲೀಖಾನರವರ ಹಸ್ತದಲ್ಲಿ ಸಮರ್ಪಿಸಿದನು. ಹೈದರನು ಮುಗುಳ ನಗೆಯನ್ನು ನಗುತ್ತಾ, "ರಾಯಭಾರಿಗಳೇ, ಈ ಲಕ್ಕೋಟೆ ಯಾರದು ?" ಎಂದು ಕೇಳಿದನು.

ರಾಯಭಾರಿಯು ಹಾಗೆಯೇ ನಿಂತುಕೊಂಡು, "ದಳವಾಯಿ ಯವರೇ, ಈ ಪತ್ರವನ್ನು ನಗರದ ಮಹಾಮಂತ್ರಿ ರಾಮಕೃಷ್ಣರವರು ಮೈಸೂರಿನ ಮುಖ್ಯ ದಳವಾಯಿ ಹೈದರಲ್ಲೀಖಾನರವರಿಗೆ ಕಳುಹಿಸಿ ಕೊಟ್ಟಿದ್ದಾರೆ " ಎಂದು ಹೇಳಿದನು.

ಹೈದರನು "ರಾಯಭಾರಿಗಳೇ, ಕುಳಿತುಕೊಳ್ಳಿರಿ" ಎಂದು ಹೇಳಿ ಲಕ್ಕೋಟೆಯ ವಿಳಾಸವನ್ನು ಓದಿದನು.

ಆ ವಿಳಾಸವನ್ನು ನೋಡಿ ನಗುತ್ತಾ " ಲಕ್ಕೋಟೆಯ ಮೇಲೆ ನವಾಬ್ ಹೈದರಲ್ಲೀಖಾನ್ ಎಂದು ಬರೆದಿದೆ. ನಿಮ್ಮ ಮಂತ್ರಿಗಳಿಗೆ ನಾವು ನವಾಬಗಿರಿಯನ್ನು ಚಲಾಯಿಸುತ್ತಿಲ್ಲವೆಂದೂ, ಮೈಸೂರಿನ ದಳ ಪತಿಯು ನಾನೆಂದೂ ತಿಳಿಯದೋ?" ಎಂದು ಕೇಳಿದನು.

"ಹೌದು, ನವಾಬರೇ, ನಮ್ಮ ಕಡೆಯಲ್ಲೆಲ್ಲಾ ಹಾಗೆಯೇ ಪ್ರಖ್ಯಾತಿಯಿದೆ. ಈ ಶ್ರೀರಂಗಪಟ್ಟಣದ ದೌಲತ್ತು ತಮ್ಮದೆಂದೇ ನಮ್ಮ ರಾಜ್ಯದಲ್ಲಿ ಧೃಡವಿಶ್ವಾಸವಿದೆ. ಅದರಲ್ಲಿ ಮಂತ್ರಿಗಳದೇನೂ ತಪ್ಪಿಲ್ಲ. ಮಂತ್ರಿ ರಾಮಕೃಷ್ಣರೆಂದರೆ ರಾಜನೀತಿಯಲ್ಲಿ ಚಾಚೂ ತಪ್ಪುವವರಲ್ಲ."

"ರಾಯಭಾರಿಗಳೇ, ಒಂದುಪಕ್ಷ ನಾನು ಒಪ್ಪಿಕೊಳ್ಳದಿದ್ದರೆ? ಈ ಲಕ್ಕೋಟೆಯನ್ನು ಅಂಗೀಕಾರಮಾಡದಿದ್ದರೆ?"

ವಿರೂಪಾಕ್ಷಯ್ಯನು ಆಸನದಿಂದೆದ್ದು ಕೈಮುಗಿದು "ಮಾಫ್ ಮಾಡಬೇಕು. ನವಾಬರು ಈ ಲಕ್ಕೋಟೆಯನ್ನು ಸ್ವೀಕಾರಮಾಡ

ದಿದ್ದರೆ ನಾನು ಯಥಾಗತನಾಗಿ ಹಿಂದಕ್ಕೆ ಹೋಗಬೇಕು ಅದೇ ನನ್ನ ಕರ್ತವ್ಯ" ಎಂದು ಹೇಳಿದನು.

ಕ್ಷಣಹೊತ್ತು ಇಬ್ಬರೂ ಮೌನವಾಗಿದ್ದರು. ಹೈದರನು ಮನಸ್ಸಿನಲ್ಲಿಯೇ ಯೋಚನೆಮಾಡುತ್ತಾ "ರಾಯಭಾರಿಯು ಗಟ್ಟಿಗ. ಆದುದರಿಂದಲೇ ಇಷ್ಟು ಧೈರ್ಯದಿಂದ ನಮ್ಮ ರಾಜಧಾನಿಗೆ ಬಂದಿದ್ದಾನೆ-ನೋಡೋಣ!" ಎಂದುಕೊಂಡು ಬಹಿರಂಗವಾಗಿ "ಒಳ್ಳೆಯದು, ರಾಯಭಾರಿಗಳೇ, ಕುಳಿತುಕೊಳ್ಳಿರಿ. ನವಾಬರಾದರೇನು? ದಳಪತಿಯಾದರೇನು? ನಾನು ಹೈದರಲ್ಲೀಖಾನ್ ಎಂಬುದೇನೋ ನಿಜ. ಈ ಪತ್ರವು ನನಗೆ ಬರೆಯಲ್ಪಟ್ಟಿದೆಯೆಂಬುದು ಪ್ರತ್ಯಕ್ಷವಾಗಿದೆ. ಒಳಗೆ ಏನಿದೆಯೋ ನೋಡೋಣ!?" ಎಂದು ಹೇಳುತ್ತಾ ಲಕ್ಕೋಟೆಯನ್ನು ಒಡೆದು ಒಳಗಿದ್ದ ಕಾಗದವನ್ನು ಹೊರಗೆ ತೆಗೆದು ಕೈಯ್ಯಲ್ಲಿಟ್ಟುಕೊಂಡನು. ಕಾಗದವನ್ನು ಹಾಗೆಯೇ ದುರದುರನೆ ನೋಡಿದನು. ಒಂದೆರಡಾವರ್ತಿ ಹಿಂದೆ ಮುಂದೆ ತಿರುವಿಹಾಕಿ ನೋಡಿದನು. ಆ ಕಾಗದವನ್ನೆತ್ತಿ ವಿರೂಪಾಕ್ಷಯ್ಯನ ಕೈಗೆಕೊಟ್ಟು, "ಈ ಕಾಗದವನ್ನು ಓದಿ ಸುಲಾವಣೆಮಾಡಿರಿ" ಎಂದು ಹೇಳಿದನು. ವಿರೂಪಾಕ್ಷಯ್ಯನು ಕಂದೀಲಿನ ಪಕ್ಕದಲ್ಲಿ ನಿಂತೇ ಪತ್ರವನ್ನು ಸುಲಾವಣೆಮಾಡಿದನು :—

ಶ್ರೀರಂಗಪಟ್ಟಣದ ನವಾಬ್ ಹೈದರಲ್ಲೀಖಾನರವರ ಸಮುಕ್ಷಮುಕ್ಕೆ ನಗರದ ಮಂತ್ರಿ ರಾಮಕೃಷ್ಣನ ಬಿನ್ನಹ.

ನವಾಬರವರೇ, ಮೈಸೂರಿನಿಂದ ನಗರದ ಮೇಲೆ ದಂಡೆತ್ತಿಬರುವುದಾಗಿ ನಮ್ಮ ಆಸ್ಥಾನಕ್ಕೆ ಸುದ್ದಿಯು ಬಂದಿದೆ. ಮೈಸೂರಿನ ಅರಸರಿಗೂ, ನಗರದ ಅಧೀಶರಿಗೂ ಸ್ನೇಹಬಾಂಧವ್ಯಗಳು ಬಹುಕಾಲದಿಂದಲೂ ನಡೆದುಬಂದಿದೆ. ಗಡಿನಾಡಿನಲ್ಲಿ ಯಾವ ಘರ್ಷಣೆಗಳೂ ಇಲ್ಲ. ಹೀಗಿರುವಲ್ಲಿ, ನಗರದಲ್ಲಿ ನ್ಯಾಯ ಮತ್ತು ಧರ್ಮಗಳು ಚಾಚೂ ತಪ್ಪಿಲ್ಲದೆ ನಡೆದುಕೊಂಡು ಬರುತ್ತಿರುವಾಗ ನಮ್ಮ ಮೇಲೆ ಮೈಸೂರಿನ ದಂಡು ಬರುತ್ತದೆಂಬ ವಾರ್ತೆಯು ಆಶ್ಚರ್ಯವನ್ನುಂಟುಮಾಡಿದೆ. ಮಹಾರಾಪ್ರದವರು ನಮ್ಮ ಮೇಲೆ ದಂಡೆತ್ತಿಬರುತ್ತಾರೆಂಬ ಸಮಾಚಾರವು ಒಂದೆ

ರಡು ವರ್ಷಗಳಿಂದ ಕೇಳಿಬರುತ್ತಲೇ ಇದೆ. ತಾವು ಗೋದಾವರಿಯ ವರೆಗೆ ರಾಜ್ಯವನ್ನು ವಿಸ್ತರಿಸಿರುವುದು ಲೋಕವಿಖ್ಯಾತವಾಗಿದೆ. ಒಂದು ಪಕ್ಷ ಮಹಾರಾಷ್ಟ್ರರು ನಮ್ಮ ಮೇಲೆ ದಂಡೆತ್ತಿಬಂದರೆ ನಾವು ನಿಮ್ಮ ಸಹಾಯವನ್ನು ಕೋರಿ ಪಡೆಯುತ್ತೇವೆಂದು ಧೈರ್ಯದಿಂದಿರುವಾಗ ಮೈಸೂರಿನ ದಂಡೇ ನಮ್ಮಮೇಲೆ ಬರುತ್ತದೆಂದು ಕೇಳಿ ನನಗಂತೂ ಆಶ್ಚರ್ಯಖೇದಗಳು ಉಂಟಾಗಿವೆ. ಹೇಗೇ ಆಗಲಿ, ಇದನ್ನು ಪ್ರತ್ಯಕ್ಷ ತಮ್ಮೊಡನೆ ಪ್ರಸ್ತಾಪಿಸುವುದೇ ರಾಜನೀತಿಯೆಂದು ಬಗೆದಿದ್ದೇನೆ. ಇದೇ ಸಂದರ್ಭದಲ್ಲಿಯೇ ಮಹಾರಾಷ್ಟ್ರರು ನಮ್ಮ ಮೇಲೆ ದಂಡೆತ್ತಿಬಾರದಂತೆ ಸಹಾಯವನ್ನು ನೀಡಬೇಕೆಂದು ಕೋರುತ್ತೇನೆ. ಈ ಸಂಧಾನವು ಗುಪ್ತ ಸಂಧಾನವೆಂದು ಭಾವಿಸಿ ನಡೆಯಬೇಕೆಂದು ಪ್ರಾರ್ಥಿಸುತ್ತೇನೆ.

ತಮ್ಮ ಸ್ನೇಹಾಭಿಲಾಷಿ.

**ರಾಮಕೃಷ್ಣ**

ವಿರೂಪಾಕ್ಷಯ್ಯನು ಈ ಪತ್ರವನ್ನು ಓದಿಮುಗಿಸಿ ಪುನಃ ಹೈದರನ ಕೈಯಲ್ಲಿ ಅರ್ಪಿಸಿದನು. ಹೈದರನು ಸ್ವಲ್ಪಹೊತ್ತು ಆಲೋಚನೆಮಾಡಿ "ರಾಯಭಾರಿಗಳೇ, ಈ ಪತ್ರವು ಬಹಳ ಗೂಢವಾದ ರಾಜನೀತಿಯಿಂದ ಕೂಡಿದೆ. ಇದಕ್ಕೆ ಉತ್ತರಕೊಡುವ ಮುಂಚೆ ನಗರದ ವಿಚಾರವಾಗಿಯೂ, ಮಹಾಮಂತ್ರಿಗಳ ವಿಚಾರವಾಗಿಯೂ ಕೆಲವು ಮಾತುಗಳನ್ನು ಕೇಳಿ ತಿಳಿದುಕೊಳ್ಳಬೇಕಾಗಿದೆ. ಕುಳಿತುಕೊಳ್ಳಿರಿ." ಎಂದನು.

ವಿರೂಪಾಕ್ಷಯ್ಯನು ಆಸನದಲ್ಲಿ ಕುಳಿತನು.

"ವಿರೂಪಾಕ್ಷಯ್ಯ, ಇತ್ತೀಚೆಗೆ ನಗರದ ಮಹಾರಾಜರವರು ಪಾಳೆಯಗಾರರ ಸಭೆಯನ್ನು ಸೇರಿಸಿದ್ದರೆಂದೂ, ನಗರದಲ್ಲಿ ಅಪ್ರತಿಹತ ವಾದ ಯುದ್ಧಸನ್ನಾಹಗಳು ನಡೆಯುತ್ತಿವೆಯೆಂದೂ, ಗೂಢಚಾರರಿಂದ ತಿಳಿಯಬಂದಿದೆ. ಇದು ನಿಜವೆ?"

"ನವಾಬರೇ, ಈಗ ಇಡೀ ಹಿಂದೂಸ್ಥಾನದಲ್ಲಿಯೇ ಎಲ್ಲಾ ರಾಜ್ಯಗಳಲ್ಲೂ, ಏನೋ ಒಂದು ವಿಧವಾದ ಕ್ಷೋಭೆಯೆದ್ದಿದೆ. ಇಂತಹ

ಸಂದರ್ಭದಲ್ಲಿ ವೀರಭೂಮಿಯಾದ ನಗರದಲ್ಲಿ ಯುದ್ಧ ಸಿದ್ಧತೆಯಾಗು ವುದರಲ್ಲಿ ಆಶ್ಚರ್ಯವೇನಿದೆ?"

ಹೈದರನು ತಲೆದೂಗಿ, "ಮಹರಾಷ್ಟ್ರರು ನಿಮ್ಮಮೇಲೆ ದಂಡೆತ್ತಿ ಬರುವರೆಂಬ ಸುದ್ದಿಯು ನಿಜವೇನು?" ಎಂದನು.

"ನಿಜಕ್ಕಿಂತಲೂ ನಿಜವೆಂದು ಕಾಣುತ್ತದೆ. ಮಹರಾಷ್ಟ್ರರು ಈ ಬಾರಿ ಪಶ್ಚಿಮ ಕಾರಾವಳಿಯಿಂದ ಬಂದು ನಗರವನ್ನು ಹಿಡಿಯ ಬೇಕೆಂದು ಯತ್ನಮಾಡುತ್ತಿರುವಂತಿದೆ."

"ಹಾಗಾದರೆ ಅವರಿಂದ ಮೈಸೂರಿಗೂ ಅಪಾಯ ಸಂಭವಿಸ ಬಹುದು."

"ಹೌದು, ನವಾಬರೇ, ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿ ದ್ದೇನೆ."

"ರಾಯಭಾರಿಗಳೇ ನಗರವು ನಮ್ಮ ಕಡೆಗೆ ಇರುತ್ತದೆಂಬುದಕ್ಕೆ ಭರವಸೆಯೇನಿದೆ? ಮಹರಾಷ್ಟ್ರದ ಕಡೆಗೇ ಸೇರಿಕೊಂಡರೂ ಸೇರಿಕೊಳ್ಳ ಬಹುದಲ್ಲವೆ?"

"ನವಾಬರೇ, ತಮ್ಮಂತಹ ಪರಾಕ್ರಮಿಗಳಾದ ರಾಜನೀತಿ ನಿಪುಣರಿಗೆ ನಾನು ಹೇಳತಕ್ಕದ್ದೇನಿದೆ? ನಗರವು ಮಹರಾಷ್ಟ್ರರ ಕಡೆ ಸೇರಿಕೊಂಡರೆ ನಗರಕ್ಕೆ ಸ್ವಾತಂತ್ರ್ಯದ ಅಸ್ತಿತ್ವವೆಲ್ಲಿ ಬರಬೇಕು? ನಗರದ ಎಲ್ಲೆಯಲ್ಲಿ ಮಹರಾಷ್ಟ್ರರ ದಂಡು ಬಂದರೆ ಅದನ್ನು ನಗರವು ಎದುರಿಸಲೇಬೇಕು. ಹಾಗೆ ಮಾಡಿದರೆ ಮಾತ್ರ ನಗರದ ಸ್ವಾತಂತ್ರ್ಯವು ಉಳಿಯುತ್ತದೆ. ನಗರವು ಮಹರಾಷ್ಟ್ರರನ್ನೇ ಆಗಲೀ ಯಾರನ್ನೇ ಆಗಲೀ ಎದುರಿಸುತ್ತದೆ."

ಹೈದರನು ನಗುತ್ತಾ, "ಹಾಗಾದರೆ ನಮ್ಮ ಸಹಾಯವೇಕೆ? ಸ್ವಯಂ ನಗರವು ಮಹರಾಷ್ಟ್ರದ ಸೈನ್ಯದ ಮುಂದೆ ನಿಲ್ಲುವುದಾದರೆ ನಾವೇಕೆ ಆ ಗೋಜಿಗೆ ಬರಬೇಕು?"

"ನವಾಬರೇ, ನಗರವು ತನ್ನ ಸ್ವಾತಂತ್ರ್ಯಕ್ಕಾಗಿ ಮರಾಟರೊಡನೆ

ಯುದ್ಧಕ್ಕೆ ನಿಲ್ಲುತ್ತದೆಯೆಂಬುದು ಶತಸ್ಸಿದ್ಧವಾದ ಅಂಶ. ಆದರೆ ಜಯಾಪಜಯಗಳು ಸಂದೇಹ. ನಗರವು ಯುದ್ಧದಲ್ಲಿ ಗೆದ್ದು ಉಳಿಯಬಹುದು. ಇಲ್ಲ, ದೈವೇಚ್ಛೆಯು ಪ್ರತಿಕೂಲವಾಗಿದ್ದರೆ ಸೋಲಾಗಬಹುದು. ತಮ್ಮ ಸಹಾಯವಿದ್ದರೆ ನಮಗೆ ಜಯವು ಸಿದ್ಧ."

"ಮಂತ್ರಿ ರಾಮಕೃಷ್ಣರವರು ನಾವು ಸೈನ್ಯಸಮೇತರಾಗಿ ನಗರಕ್ಕೆ ಬಂದು ಮಹರಾಷ್ಟ್ರ ಸೈನ್ಯದೊಡನೆ ಯುದ್ಧಮಾಡಬೇಕೆಂದು ಅಪೇಕ್ಷಿಸುತ್ತಾರೇನು?"

"ಅಲ್ಲ ನವಾಬರೇ, ಉತ್ತರದಕಡೆ ಮೈಸೂರು ಸೈನ್ಯವು ಮಹಾರಾಷ್ಟ್ರರನ್ನು ತಡೆಯಲು ಮುಂದುವರೆಯಬೇಕು. ಪಶ್ಚಿಮದಕಡೆ ನಾವೇ ಯುದ್ಧಮಾಡುತ್ತೇವೆ."

"ವಿರೂಪಾಕ್ಷಯ್ಯ, ಮಂತ್ರಿ ರಾಮಕೃಷ್ಣರು ರಾಜನೀತಿ ನಿಪುಣರೆಂದು ಬಲ್ಲೆ. ಅವರಿಗೆ ಹೈದರನ ಸೈನ್ಯವು ನಗರದ ರಾಜ್ಯದೊಳಗೆ ಬರುವುದು ಅಭಿಮತವಲ್ಲ. ಮಹಾರಾಷ್ಟ್ರರಮೇಲೆ ನಮ್ಮನ್ನು ಎತ್ತಿಕಟ್ಟಿದರೆ ಸ್ವಲಾಭವಾಗುವುದೆಂದು ರಾಮಕೃಷ್ಣರು ನಂಬಿದ್ದಾರೆ. ಒಳ್ಳೆಯ ಉಪಾಯ. ರಾಮಕೃಷ್ಣರು ನಮಗೂ ಮಹರಾಷ್ಟ್ರರಿಗೂ ಯುದ್ಧವನ್ನು ತಂದೊಡ್ಡಲು ಹವಣಿಸುತ್ತಿರುವಂತಿದೆ."

ವಿರೂಪಾಕ್ಷನು ಉಚ್ಚಕಂಠದಿಂದ "ನವಾಬರೇ, ಅಲ್ಲ, ನಮ್ಮ ಮಂತ್ರಿಗಳಿಗೆ ತಮಗೂ ಮಹರಾಷ್ಟ್ರರಿಗೂ ಜಗಳವನ್ನು ಗಂಟಿಕ್ಕಿದರೆ ಬರುವ ಲಾಭವೇನು? ತಾವು ಸ್ವಯಂ ಮಹಾರಾಷ್ಟ್ರರ ಮೇಲೆ ಕತ್ತಿ ಕಟ್ಟಿದ್ದೀರಿ. ಮಹಾರಾಷ್ಟ್ರ ರಾಜ್ಯಗಳನ್ನು ಆಕ್ರಮಣ ಮಾಡಿದ್ದೀರಿ. ಇದರಲ್ಲಿ ಮಂತ್ರಿ ರಾಮಕೃಷ್ಣರ ತಂತ್ರವೇನೂ ಇಲ್ಲ. ಸ್ವತಃ ತಮಗೆ ಶತೃಗಳಾದ ಮಹಾರಾಷ್ಟ್ರರು ನಮ್ಮ ಮೇಲೆ ದಂಡೆತ್ತಿ ಬರುವಾಗ ಪ್ರಬಲರಾದ ತಮ್ಮ ಸಹಾಯವನ್ನು ಕೋರುವುದು ರಾಜನೀತಿಯೇ ಆಗಿದೆ. ರಾಮಕೃಷ್ಣರಾದರೂ ಅದೇ ನೀತಿಯನ್ನವಲಂಬಿಸಬೇಕು. ಮೈಸೂರಿನವರಾದರೂ ಅದೇ ನೀತಿಯನ್ನು ಅನುಸರಿಸಬೇಕು" ಎಂದನು.

ಹೈದರನು ನಗುತ್ತಾ "ರಾಯಭಾರಿಗಳೇ, ನೀವು ಒಳ್ಳೆಯ ಮಾತುಗಾರರೆಂದು ಕಾಣುತ್ತದೆ. ಇದುವರೆವಿಗೂ, ಹೈದರನು ಯಾವಾಗ ಯಾರಮೇಲೆ ಯುದ್ಧಕ್ಕೆ ಹೋಗಬೇಕು, ಎಲ್ಲಿ ಶತೃಗಳನ್ನು ಎದುರಿಸಬೇಕು, ಎಂಬುದಕ್ಕೆ ಬೇರೆ ಯಾರಿಂದಲೂ ಸಲಹೆ ಕೇಳಿಲ್ಲ. ಈಗ ನಗರದ ರಾಮಕೃಷ್ಣರು ನಮ್ಮನ್ನು ಎತ್ತಿಕಟ್ಟುತ್ತಿದ್ದಾರೆಂಬುದನ್ನು ನೀವು ಒಪ್ಪಲೇಬೇಕು. ನಗರವು ಎಷ್ಟೇ ವೀರ ಭೂಮಿಯಾದರೂ ಅದಕ್ಕೆ ಈಗ ಕಷ್ಟ ಬಂದಿದೆಯೆಂಬುದು ಪ್ರತ್ಯಕ್ಷಪ್ರಮಾಣ. ನಾವು ನಿಮಗಾಗಿ ಯುದ್ಧ ಮಾಡಬೇಕಾದರೆ ನಿಮ್ಮಿಂದ ನಮಗೆ ಲಾಭವಿರಬೇಕು. ನಗರದ ರಾಜರು ನಮಗೆ ಸಂಪೂರ್ಣ ಅಧೀನರೆಂದು ಒಪ್ಪಿಕೊಳ್ಳಬೇಕು. ಇಂದಲ್ಲ ನಾಳೆ ಅದು ಸಿದ್ಧವಾಗತಕ್ಕ ಮಾತೇ ಆಗಿದೆ. ಅದಕ್ಕೆ ಮಂತ್ರಿ ರಾಮಕೃಷ್ಣರು ಒಪ್ಪುತ್ತಾರೇನು?" ಎಂದನು.

ವಿರೂಪಾಕ್ಷನು ತಲೆದೂಗುತ್ತಾ "ನವಾಬರೇ, ಇಂತಹ ಸುಸಂಘಟಿತವಾದ ಶ್ರೀರಂಗಪಟ್ಟಣದ ಕೋಟೆಯಲ್ಲಿ ಮಹಾಪರಾಕ್ರಮಶಾಲಿಯೆಂದು ಹಿಂದೂಸ್ಥಾನದಲ್ಲೆಲ್ಲಾ ಪ್ರಖ್ಯಾತನಾದ ದಳಪತಿಯ ಮುಂದೆ ನಿಂತು ವೀರವಾದವನ್ನು ಹೂಡಲು ನಾನೆಷ್ಟರವನು? ನಾನು ತಮ್ಮೊಡನೆ ವೀರವಾದವನ್ನಾಡುವುದಕ್ಕೆ ಬರಲೂ ಇಲ್ಲ. ದೈನ್ಯದಿಂದ ಬೇಡುವುದಂತೂ ಇಲ್ಲವೇ ಇಲ್ಲ.

"ನೋಡಿ ನವಾಬರೇ, ನಗರದ ಸೀಮೆಯು ವೀರಭೂಮಿಯೆಂದು ಹೇಳಿದ್ದೇನೆ. ಅದನ್ನು ತಾವೂ ಒಪ್ಪುತ್ತೀರಿ. ನಗರದ ರಾಜ್ಯದಲ್ಲಿ ದನ ಕಾಯುವವನ ಗುಡಿಸಲು ಮೊದಲುಗೊಂಡು ನಗರದ ಅರಸರ ಅರಮನೆಯವರೆಗೆ ಎಲ್ಲವೂ ಸುಟ್ಟು ಭಸ್ಮರಾಶಿಗಳಾಗಿ ಬಿದ್ದರೂ, ನನ್ನಂಥಾ ಅಜ್ಞಾತ ಕುಲಗೋತ್ರನಾದ ತರುಣನು ಮೊದಲುಗೊಂಡು ರಾಜಾಧಿರಾಜರಾದ ಬಸಪ್ಪನಾಯಕರವರೆಗೆ ಎಲ್ಲರೂ ಮೃತ ಕಳೇಬರಗಳಾಗಿ ರಣಭೂಮಿಯಲ್ಲಿ ಬಿದ್ದರೂ, ನಗರದ ಮಹಿಳೆಯರೆಲ್ಲರೂ ಚಿತೆಗಳನ್ನೊಡ್ಡಿ ಸುಟ್ಟು ಸಶರೀರ ಸ್ವರ್ಗವನ್ನೇರಿದರೂ, ನಗರವು ಮತ್ತೊಬ್ಬರಿಗೆ ಅಧೀನತೆಯನ್ನು ಒಪ್ಪಿಕೊಳ್ಳುವುದಿಲ್ಲ. ಒಂದೇ ಮಾತು, ಮಂತ್ರಿ

ರಾಮಕೃಷ್ಣರವರು ತಮ್ಮ ಸಹಾಯವನ್ನು ಪ್ರಾರ್ಥಿಸುತ್ತಾರೆ. ತಾವೇ ಒಂದು ಕ್ಷಣಹೊತ್ತು ಮುಂಚೆ ಹೇಳಿದಂತೆ, ರಾಜರು ಲಾಭವಿಲ್ಲದೇ ಯುದ್ಧವಿಗ್ರಹಗಳನ್ನು ಒಪ್ಪುವುದಿಲ್ಲ. ಆದಕ್ಕಾಗಿ ನಗರದ ಅರಸರು ತಮಗೆ ಯಾವ ಉಡುಗೊರೆಯನ್ನು ಒಪ್ಪಿಸಬೇಕು? ಅಪ್ಪಣೆಯಾಗಲಿ" ಎಂದನು.

ಹೈದರನು ಆ ವೀರನ ಮಾತುಗಳನ್ನು ಕೇಳಿ ಅವಾಕ್ಕಾದನು. "ವಿರೂಪಾಕ್ಷ, ಮಂತ್ರಿ ರಾಮಕೃಷ್ಣರು ಬುದ್ಧಿಶಾಲಿಯೇ ಹೌದು. ನಾನು ಅವರ ಪ್ರತಿಭೆಯ ವಿಷಯವಾಗಿ ಅನೇಕ ಕಥೆಗಳನ್ನು ಕೇಳಿದ್ದೇನೆ. ಮೈಸೂರಿನ ದಂಡು ನಗರದಮೇಲೆ ಬರುವುದೆಂಬುದನ್ನು ಕೇಳಿ ನಗರದ ಪರಾಕ್ರಮವೆಷ್ಟಿದೆಯೆಂಬುದನ್ನು ತೋರಿಸಲು ನಿಮ್ಮನ್ನು ನಮ್ಮಲ್ಲಿಗೆ ಕಳಿಸಿಕೊಟ್ಟಿದ್ದಾರೆ. ನೀವು ರಾಯಭಾರಕ್ಕೆ ಬಂದವರಲ್ಲ. ನಮ್ಮ ಓಲೆಗೆ ಪ್ರತ್ಯುತ್ತರವಾಗಿ ಸಂದೇಶ ತಂದಿರುವ ದೂತರು ನೀವು. ನೀವು ಹೊರಟುಹೋಗಬಹುದು. ಮಂತ್ರಿ ರಾಮಕೃಷ್ಣರನ್ನು ನಾನು ಸರಿಯಾದ ಕಾಲದಲ್ಲಿ, ಸರಿಯಾದ ಸ್ಥಳದಲ್ಲಿ ಸಂಧಿಸುತ್ತೇನೆ" ಎಂದು ಹೇಳಿ ಹಟಾತ್ತನೆ ಎದ್ದು ಹೈದರನು ಹೊರಟುಹೋದನು.

ವಿರೂಪಾಕ್ಷಯ್ಯನು ರಾತ್ರಿಯೆಲ್ಲಾ ಚಿಂತಾಮಗ್ನನಾಗಿದ್ದನು. ಅವನಿಗೆ ನಿದ್ದೆ ಬರಲಿಲ್ಲ. ತಾನು ಬಂದ ರಾಯಭಾರವು ಕೆಟ್ಟುಹೋಯಿತೆಂದು ಖಚಿತವಾಗಿ ಗೊತ್ತಾಯಿತು. ನಿಜವಾಗಿ ಅವನ ನಾಲಿಗೆಯು ತಪ್ಪು ನುಡಿಯಿತೆಂದು ನೂರುಬಾರಿ ಹೇಳಿಕೊಂಡನು. "ಇಂಥಾ ವೀರವಾದವನ್ನು ಜಗದೇಕವೀರನಾದ ಹೈದರನ ಮುಂದೆ ನುಡಿದು ಫಲವೇನು?" ಎಂದು ಒಮ್ಮೆ ಚಿಂತಿಸಿದನು. ಮತ್ತೊಮ್ಮೆ "ನಾನು ಸರಿಯಾಗಿ ಮಾಡಿದ್ದೇನೆ. ಹೈದರನಲ್ಲಿ ವಿನಯವನ್ನು ತೋರಿದ್ದರೆ ನನ್ನ ಮಾತಿಗೆ ಮರುಳಾಗುತ್ತಿದ್ದನೇನು? ಹೈದರನು ಎಂತಹ ಪಾಷಾಣ ಹೃದಯನೆಂಬುದನ್ನು ನಮ್ಮ ಮಂತ್ರಿಗಳು ಅರಿಯರೇನು? ನಾನು ಹೈದರನಿಗೆ ಒಂದು ಕೈ ತೋರಿಸಿದ್ದೇನೆ. ಇರಲಿ, ಪ್ರಾತಃಕಾಲದೊಳಗಾಗಿ ನನ್ನ ರಾಯಭಾರವು ಜಯವಾಗುತ್ತದೆ; ಇಲ್ಲವೇ ಈ ಕ್ಷಣದಿಂದಲೇ

ನಾನು ಶ್ರೀರಂಗಪಟ್ಟಣದ ಕೋಟೆಯಲ್ಲಿ ಬಂದಿಯಾಗಿದ್ದೇನೆ. ನನಗೆ ಮುಕ್ತಿಯಿಲ್ಲ. ಈ ಸಮಾಚಾರವನ್ನು ಮಂತ್ರಿಗಳವರಿಗೆ ತಿಳಿಸುವುದಕ್ಕೆ ಕೂಡ ಒಬ್ಬ ಸಹಾಯಕನಿಲ್ಲ ಇರಲಿ, ನನ್ನ ಅದೃಷ್ಟವು ಹೇಗಿದೆಯೋ ಅದನ್ನು ಮತ್ತೊಮ್ಮೆ ಪರೀಕ್ಷಿಸುತ್ತೇನೆ" ಎಂದುಕೊಂಡನು. ಹಾಗೆಯೇ ಯೋಚನಾತರಂಗಗಳಲ್ಲಿ ಮುಳುಗಿ ತೇಲುತ್ತಾ ರಾತ್ರಿಯನ್ನು ಕಳೆದನು.

ಮಾರನೆಯ ದಿನ ಪ್ರಾತಃಕಾಲ ವಿರೂಪಾಕ್ಷಯ್ಯನು ಎದ್ದು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ದಿವಾನ್‌ಖಾನೆಗೆ ಬರುವಷ್ಟರಲ್ಲಿ ರಿಸಾಲ್‌ದಾರ್ ನಂಜರಾಜಯ್ಯನು ಕಾದಿದ್ದನು. ವಿರೂಪಾಕ್ಷಯ್ಯನು ನಂಜರಾಜಯ್ಯನನ್ನು ಸ್ನೇಹಭಾವದಿಂದ ಮಾತನಾಡಿಸಿದನು. ಹೊರಗಡೆ ನಗರದ ರಾಯಭಾರಿಯು ದಿಟ್ಟತನವನ್ನು ತೋರುತ್ತಿದ್ದರೂ, ಒಳಗೆ ಮನಸ್ಸು ಬಡಿದುಕೊಳ್ಳುತ್ತಿತ್ತು. ಎತ್ತಕಡೆ ನೋಡಿದರೂ ತಾನು ಶ್ರೀರಂಗಪಟ್ಟಣದಲ್ಲಿ ಬಂದಿಯಾಗಿದ್ದೇನೆಂದು ಭಾಸವಾಗುತ್ತಿತ್ತು. ಆದರೆ ಹೇಗಾದರೂ ಮಾಡಿ ಈ ಶರಪಂಜರದಿಂದ ತಪ್ಪಿಸಿಕೊಂಡು ಹೋಗುತ್ತೇನೆಂಬ ಧೀರವಾಣಿಯು ಹೃದಯದಲ್ಲಿ ಮಿಡಿಯುತ್ತಿತ್ತು. ಅನೇಕಬಾರಿ ಹೈದರನಿಗೂ ಮಂತ್ರಿ ರಾಮಕೃಷ್ಣನಿಗೂ ಹೋಲಿಸಿಕೊಂಡು ನೋಡಿಕೊಳ್ಳುತ್ತಿದ್ದನು. ಹೈದರನು ಎಂತಹ ಪರಾಕ್ರಮಿಯಾದರೇನು? ಮಂತ್ರಿ ರಾಮಕೃಷ್ಣನು ಅದಕ್ಕಿಂತಲೂ ಅಪರಿಮಿತ ರಾಜನೀತಿಕುಶಲನೆಂದು ವಿರೂಪಾಕ್ಷಯ್ಯನ ಮನಸ್ಸಿನ ಮೇಲೆ ಭಾವನಾತರಂಗಗಳು ಏಳುತ್ತಿದ್ದವು. ನಂಜರಾಜಯ್ಯನು ಆಲೋಚನಾಕ್ರಾಂತನಾಗಿದ್ದ ವಿರೂಪಾಕ್ಷಯ್ಯನನ್ನು ಪುನಃ ಮಾತನಾಡಿಸಿ ಅವನ ಕೈಗೆ ಒಂದು ಲಕ್ಕೋಟೆಯನ್ನು ಕೊಟ್ಟನು.

ಆ ಲಕ್ಕೋಟೆಯನ್ನು ನೋಡಿ ವಿರೂಪಾಕ್ಷಯ್ಯನಿಗೆ ಆಶ್ಚರ್ಯವಾಯಿತು. ವಿರೂಪಾಕ್ಷಯ್ಯನು, "ಈ ಲಕ್ಕೋಟೆಯಲ್ಲೇನಿದೆ?" ಎಂದು ಕೇಳಿದನು.

"ರಾಯಭಾರಿಗಳೇ, ತಮಗೆ ಮೈಸೂರು ರಾಜ್ಯವನ್ನು ಬಿಟ್ಟು ಹೋಗುವವರೆಗೆ ರಕ್ಷಣೆಯ ಬಗ್ಗೆ ನವಾಬರವರು ಕೊಟ್ಟ ಪರವಾನಗಿ ಅದು."

"ಇದು ನನಗೇಕೆ? ಇದರಿಂದ ನನಗೇನು ಲಾಭ?"

"ರಾಯಭಾರಿಗಳೇ, ರಾಜಕೀಯವನ್ನರಿತವರು ತಾವು. ನಗರದ ರಾಜ್ಯಕ್ಕೂ ಮೈಸೂರು ಅರಸರಿಗೂ ಯುದ್ಧವು ಸಂಭವಿಸಿರುವ ಕಾಲವಿದು. ಇಂತಹ ಸಮಯದಲ್ಲಿ ನಗರದ ರಾಯಭಾರಿಗಳಾದ ತಮಗೆ ಮೈಸೂರು ಸೈನಿಕ ಪಡೆಗಳಿಂದ ದಾರಿಯುದ್ದಕ್ಕೂ ತೊಂದರೆಗಳು ಸಂಭವಿಸಬಹುದು. ಎಲ್ಲಿಯಾದರೊಂದು ಸಣ್ಣ ಪಾಳೆಯದಲ್ಲಿ ತಮ್ಮನ್ನು ಖೈದಿನಲ್ಲಿಡಬಹುದು. ಅದಕ್ಕಾಗಿ ನವಾಬರವರು ತಮಗಿತ್ತಿರುವ ರಕ್ಷಾಪತ್ರವಿದು. ತಮ್ಮ ವಶದಲ್ಲಿ ಈ ಪತ್ರವಿದ್ದರೆ ಮೈಸೂರು ಸೈನಿಕರು ತಮ್ಮನ್ನು ಮುಟ್ಟುವುದಕ್ಕೆ ಕೂಡಾ ಧೈರ್ಯ ಮಾಡುವುದಿಲ್ಲ."

ರಾಯಭಾರಿಯು ಆ ಲಕ್ಕೋಟೆಯನ್ನು ಕೈಗೆ ತೆಗೆದುಕೊಂಡು, ವಿಸ್ಮಯದಿಂದ "ಸೇನಾಧಿಪತಿಗಳೇ, ತಮ್ಮ ನವಾಬರು ಉದಾರಿಗಳು. ನಿನ್ನೆ ರಾತ್ರಿಯಿಂದ ನಾನು ಶ್ರೀರಂಗಪಟ್ಟಣದಲ್ಲಿ ಬಂದಿಯಾಗಿದ್ದೇನೆಂದು ಭಾವಿಸಿದ್ದೆ. ಈಗ ತಮ್ಮ ದರ್ಶನದಿಂದ ನಾನು ಸ್ವತಂತ್ರನಾಗಿದ್ದೇನೆಂದು ನಂಬುತ್ತೇನೆ" ಎಂದನು.

"ಹೌದು ರಾಯಭಾರಿಗಳೇ, ತಾವು ಸ್ವತಂತ್ರರು. ತಮ್ಮನ್ನು ಶ್ರೀರಂಗಪಟ್ಟಣದ ಕೋಟೆಯಿಂದ ತಮ್ಮ ಇಷ್ಟಪ್ರಕಾರ ಹೊರಗೆ ಕಳಿಸಿಕೊಡಲು ನನಗೆ ಆಜ್ಞೆಯಾಗಿದೆ. ತಾವು ಯಾವಾಗ ಹೊರಡುತ್ತೀರೋ ಆಗ ನಾನು ಪ್ರಯಾಣಮಾಡಿಸುತ್ತೇನೆ."

"ನಂಜರಾಜಯ್ಯನವರೇ, ನಾನು ಹೊರಟೇ ಇದ್ದೇನೆ. ನನಗೆ ಇಲ್ಲಿ ಒಂದು ಕ್ಷಣವೂ ಕೆಲಸವಿಲ್ಲ. ಆದರೆ ತಮ್ಮಲ್ಲಿ ಒಂದು ಮಾತು ಕೇಳುವ ಆಸೆಯಿದೆ."

"ಕೇಳಿರಿ ರಾಯಭಾರಿಗಳೇ."

"ನಂಜರಾಜಯ್ಯನವರೇ, ನವಾಬರವರು ಈ ಬಿಡಾರಕ್ಕೆ ಸ್ವಯಂ ಚಿತ್ತೈಸಿ ನನಗೆ ದರ್ಶನವಿತ್ತರು. ಇದರ ರಹಸ್ಯವೇನು? ಇದು ಸಹಜವಾಗಿ ಕಾಣುವುದಿಲ್ಲ. ನಾನೇ ದಳವಾಯಿಯವರ ಸಮ್ಮುಖಕ್ಕೆ ಹೋಗಿ ಭೇಟಿಮಾಡುವುದು ಸಹಜವಾಗಿತ್ತು."

ನಂಜರಾಜಯ್ಯನು ಮುಗುಳುನಗೆಯನ್ನು ನಗುತ್ತಾ, "ರಾಯ ಭಾರಿಗಳೇ, ನನಗೂ ಹಾಗೆಯೇ ಕಾಣುತ್ತದೆ. ತಮ್ಮನ್ನು ನೋಡಿದಾಗಿ ನಿಂದ ನನಗೆ ತಮ್ಮ ವಿಷಯದಲ್ಲಿ ಒಂದು ವಿಧವಾದ ಸ್ನೇಹವು ಉತ್ಪನ್ನ ವಾಗಿದೆ. ನವಾಬರು ತಮ್ಮ ಬಿಡಾರಕ್ಕೆ ಬಂದು ಭೇಟಿ ಕೊಡುತ್ತಾ ರೆಂದು ನನಗೆ ತಿಳಿಯುತ್ತಲೇ ನನ್ನ ಹೃದಯವು ಝಲ್ಲೆಂದಿತು. ನವಾಬರು ತಮ್ಮನ್ನು ಖೈದಿನಲ್ಲಿಡುತ್ತಾರೆಂದು ಭಯವಾಯಿತು. ಆದರೆ ಇಂದು ತಮಗೆ ರಹದಾರಿಯನ್ನು ಖುದ್ದು ದಳವಾಯಿಯವರೇ ಕೊಟ್ಟಾಗ ನನಗೂ ಆಶ್ಚರ್ಯವೇ ಆಯಿತು" ಎಂದನು.

ವಿರೂಪಾಕ್ಷನು ಗಹಗಹಿಸಿನಗುತ್ತಾ "ಸೇನಾಧಿಪತಿಗಳೇ, ಇದು ನವಾಬರವರ ಚಾತುರ್ಯದ ನಿದರ್ಶನವಲ್ಲ. ನಗರದ ಮಂತ್ರಿಗಳ ರಾಜನೀತಿ ನೈಪುಣ್ಯದ ಫಲ. ನಗರದ ಮಂತ್ರಿಗಳು ರಾಜಪುರುಷನನ್ನು ರಾಯಭಾರಕ್ಕೆ ಕಳುಹಿಸಿಲ್ಲ. ಪ್ರಸಿದ್ಧನಾದ ಸೇನಾನಾಯಕನನ್ನು ರಾಯಭಾರಕ್ಕೆ ಕಳುಹಿಸಿಲ್ಲ. ಅಜ್ಞಾತ ಕುಲಗೋತ್ರನಾದ ನನ್ನಂಥಾ ತರುಣನನ್ನು ಈ ರಾಯಭಾರಕ್ಕೆ ಕಳುಹಿಸಿದ್ದಾರೆ. ಮಂತ್ರಿಗಳು ನವಾಬರ ಮರ್ಜಿಯನ್ನು ಕಂಡುಕೊಂಡೇ ಈ ಉಪಾಯವನ್ನು ಮಾಡಿ ದ್ದಾರೆ. ನನ್ನನ್ನು ಖೈದಿನಲ್ಲಿಟ್ಟರೂ ಒಂದೇ ಬಿಟ್ಟುಬಿಟ್ಟರೂ ಒಂದೇ. ಆದ್ದರಿಂದಲೇ ನವಾಬರು ನನ್ನನ್ನು ಬಿಟ್ಟುಬಿಟ್ಟದ್ದಾರೆ. ಹೇಗೇ ಆಗಲಿ! ನಂಜರಾಜಯ್ಯನವರೇ, ನಾನು ನಗರಕ್ಕೆ ಹಿಂತಿರುಗಿ ಹೋಗುವುದಿಲ್ಲ. ಮತ್ತೊಮ್ಮೆ ನವಾಬರ ಭೇಟಿಯನ್ನು ಮಾಡಿಯೇ ನಾನು ಹಿಂತಿರುಗು ತ್ತೇನೆ. ನನ್ನ ರಾಯಭಾರವು ಫಲಿಸದಿದ್ದರೆ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕು. ನಗರಕ್ಕೆ ಹಿಂತಿರುಗಿ ಹೋಗಿ ನಾನು ಮಾಡತಕ್ಕ ದ್ದೇನಿದೆ? ನೀವು ನನಗೆ ನವಾಬರ ಭೇಟಿಯನ್ನು ಮತ್ತೊಮ್ಮೆ ಮಾಡಿ ಸುವ ಉಪಕಾರ ಮಾಡಬೇಕು."

"ರಾಯಭಾರಿಗಳೇ, ಅದು ಅಸಾಧ್ಯವಾದ ಕೆಲಸ. ರಹದಾರಿ ಯನ್ನು ಕೊಟ್ಟಮೇಲೆ ನವಾಬರವರು ಯಾರ ಭೇಟಿಯನ್ನೂ ಮಾಡುವು ದಿಲ್ಲ. ತಾವು ವೃಥಾ ನನ್ನನ್ನು ನಿಷ್ಠುರಕ್ಕೆ ಗುರಿಮಾಡುತ್ತಿದ್ದೀರಿ."

"ಸೇನಾಧಿಪತಿಗಳೇ, ತಾವು ನವಾಬರಲ್ಲಿ ನಾನು ಭೇಟಿಯನ್ನು ಪ್ರಾರ್ಥಿಸುತ್ತಿದ್ದೇನೆಂದು ತಿಳಿಸಿರಿ. ನನಗೆ ನವಾಬರ ಭೇಟಿಯಾಗ ದಿದ್ದರೆ ನಾನು ಕಾವೇರಿಯ ಜಲಗರ್ಭದಲ್ಲಿ ಸಮಾಧಿಯಾಗುತ್ತೇನೆಂದು ಸ್ಪಷ್ಟವಾಗಿ ನವಾಬರಿಗೆ ತಿಳಿಸಿಬಿಡಿರಿ. ಆಮೇಲೆ ಜಗದೀಶನ ಇಚ್ಛೆ ಇದ್ದಂತೆ ಆಗುತ್ತದೆ" ಎಂದು ಹೇಳಿ ವಿರೂಪಾಕ್ಷನು ತನ್ನ ಕೋಣೆ ಯೊಳಗೆ ಹೊರಟುಹೋದನು.

ಸಂಧ್ಯಾಕಾಲದವರೆವಿಗೂ ಯಾವ ಸಮಾಚಾರವೂ ಬರಲಿಲ್ಲ. ವಿರೂಪಾಕ್ಷಯ್ಯನು ಆದಿನ ಭೋಜನವನ್ನೇ ಮಾಡಲಿಲ್ಲ. ಈ ಸಮಾ ಚಾರಗಳೆಲ್ಲಾ ನವಾಬರಿಗೆ ತಿಳಿಯಬಂತು. "ಇದೇನು? ಈ ರಾಯ ಭಾರಿಯು ವಿಚಿತ್ರ ಮನುಷ್ಯನಾಗಿದ್ದಾನೆ. ಅನ್ನಾಹಾರಗಳಿಲ್ಲದೇ ಉಪವಾಸಮಾಡುತ್ತಾನೆ. ಕಾವೇರಿಯಲ್ಲಿ ಪ್ರಾಣತೊರೆಯುವುದಾಗಿ ಹೇಳುತ್ತಾನೆ. ನಗರಕ್ಕೆ ಹಿಂತಿರುಗುವುದಿಲ್ಲವೆಂದು ಶಪಥಮಾಡಿ ಕುಳಿ ತಿದ್ದಾನೆ. ಇದರ ಅರ್ಥವೇನು? ಇವನಿಗೆ ನಮ್ಮಲ್ಲಿ ಮತ್ತಾವ ಕೆಲಸ ವಿದೆ?" ಎಂದು ನವಾಬರು ಆಲೋಚನೆಮಾಡಿದರು. ಅವರಿಗೆ ದಿಕ್ಕು ತೋಚದಂತಾಯಿತು.

ಸಂಧ್ಯಾಕಾಲ. ಸೂರ್ಯಾಸ್ತವಾದಮೇಲೆ ಆ ರಾಯಭಾರಿಯನ್ನು ತಮ್ಮ ಭವನಕ್ಕೆ ಕರೆತರುವಂತೆ ಹೈದರಲ್ಲೀಖಾನರು ಅಪ್ಪಣೆಮಾಡಿ ದರು. ನಂಜರಾಜಯ್ಯನು ವಿರೂಪಾಕ್ಷಯ್ಯನನ್ನು ಮ್ಯಾನಾದಲ್ಲಿ ಕುಳ್ಳಿ ರಿಸಿಕೊಂಡು ಹೈದರಲ್ಲೀಖಾನರವರ ಮಹಲಿಗೆ ಕರೆದುಕೊಂಡು ಹೋದನು. ರಾಯಭಾರಿಯು ಹೈದರಲ್ಲೀಖಾನರವರ ಅಂತರಂಗಭವನ ದೊಳಗೆ ಕರೆತರಲ್ಪಟ್ಟನು. ಅಲ್ಲಿ ಸುಖಾಸನಾಸೀನನಾಗಿದ್ದ ಹೈದರನು ಗಂಭೀರಭಾವದಿಂದ ವಿರೂಪಾಕ್ಷಯ್ಯನನ್ನು ಮಾತನಾಡಿಸಿ ಆಸನದಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದನು.

"ವಿರೂಪಾಕ್ಷಯ್ಯ, ಇಷ್ಟು ಬಲವಂತದಿಂದ ನೀವು ನಮ್ಮ ಭೇಟಿಗೆ ಬಂದಿರುವುದರ ಕಾರಣವೇನು? ನೀವು ಮಾತನಾಡಬೇಕಾದು

ದೇನಿದೆ? ನಾವು ನಿಮಗೆ ಸ್ಪಷ್ಟವಾದ ಉತ್ತರವನ್ನು ಕೊಟ್ಟಿದ್ದೇವೆ, ಮತ್ತೇನು ಬೇಕು ನಿಮಗೆ?"

ವಿರೂಪಾಕ್ಷಯ್ಯನು ಎದ್ದುನಿಂತು ಕೈಮುಗಿದು "ನವಾಬರೇ, ನನ್ನ ರಾಯಭಾರವು ಪೂರೈಸಲಿಲ್ಲ. ನಾನು ಒಂದು ಶಪಥಮಾಡಿ ಬಂದಿದ್ದೇನೆ. ಈ ರಾಯಭಾರವು ಸಫಲವಾಗಬೇಕು. ಇಲ್ಲವೇ ನನಗೆ ಇಲ್ಲಿಯೇ ಮರಣವಾಗಬೇಕು. ತಾವು ಕೊಟ್ಟ, ಉತ್ತರವು ನನ್ನ ಮನಸ್ಸಿಗೆ ಸಮಾಧಾನಕರವಾಗಿಲ್ಲ. ಅದಕ್ಕಾಗಿ ಪುನಃ ತಮ್ಮ ಭೇಟಿಗೆ ಬಂದಿದ್ದೇನೆ."

"ನಿಮಗೇನು ಬೇಕು ಕೇಳಿರಿ. ಉತ್ತರ ಕೊಡುತ್ತೇನೆ."

"ಮೈಸೂರು ರಾಜ್ಯವು ದಕ್ಷಿಣದಲ್ಲಿ ಕಾವೇರಿಯ ಕೊನೆಯಿಂದ ಗೋದಾವರಿಯವರೆಗೆ ವ್ಯಾಪಿಸಿದೆ. ತಮ್ಮ ರಾಜ್ಯದ ಮಧ್ಯದಲ್ಲಿ ನಗರದ ರಾಜ್ಯವಿದೆ. ನಮ್ಮ ರಾಜ್ಯವು ತಮಗೆ ಎಂದೂ ದ್ರೋಹವನ್ನೆಣಿಸಿಲ್ಲ. ಹೀಗಿರುವಲ್ಲಿ ತಾವು ನಮ್ಮ ರಾಜ್ಯದ ಮೇಲೆ ದಂಡೆತ್ತಿಬರುವ ಕಾರಣ ವೇನು? ನ್ಯಾಯವೆಲ್ಲಿದೆ?"

"ರಾಯಭಾರಿಗಳೇ, ನ್ಯಾಯವನ್ನು ಹೇಳುತ್ತೇನೆ ಕೇಳಿರಿ. ನಗರದವರು ಬಲಿಷ್ಠರಾದ ಪಾಳೆಯಗಾರರೇ ಹೊರತು ರಾಜರಲ್ಲ. ಅಂತಹವರು ಮಹಾರಾಜಾಧಿರಾಜರೆಂದೂ, ನಗರವು ಸ್ವತಂತ್ರ ಸಂಸ್ಥಾನ ವೆಂದೂ ಹೊಗಳಿಕೊಳ್ಳುವುದು ಮೈಸೂರಿನಂಥಾ ರಾಜ್ಯಕ್ಕೆ ಗೌರವಾ ಸ್ಪದವಾದುದಲ್ಲ. ಅದಕ್ಕಾಗಿ ನಾವು ಯುದ್ಧ ಮಾಡಲೇಬೇಕಾಗಿದೆ."

"ಖಾವಂದರವರೇ, ನನ್ನ ಅಧಿಕಪ್ರಸಂಗತನವನ್ನು ಕ್ಷಮಿಸಬೇಕು. ಮೈಸೂರು ಅರಸರು ನಗರದ ಸಂಸ್ಥಾನದವರಿಗಿಂತಲೂ ಚಿಕ್ಕ ಪಾಳೆಯಗಾರರು. ದೈವಯೋಗದಿಂದ ಬೆಳೆದು ಈಚೀಚೆಗೆ ರಾಜರೆನಿಸಿಕೊಂಡರು. ನಗರದರಸರು ಅಂದಿನಿಂದಲೂ; ಸ್ವತಂತ್ರ ಸಂಸ್ಥಾನಾಧೀಶರಾಗಿಯೇ ಇದ್ದಾರೆ. ಈಗ ಮಹಾಪರಾಕ್ರಮಶಾಲಿಗಳಾದ ತಮ್ಮ ಪ್ರಭಾವದಿಂದ ಮೈಸೂರಿನವರು ನಮ್ಮ ಮೇಲೆ ಯುದ್ಧಮಾಡುತ್ತೇವೆಂದು ಧೈರ್ಯದಿಂದ ಹೇಳಬಲ್ಲವರಾಗಿದ್ದಾರೆ. ಮಹಾಮಂತ್ರಿ

ರಾಮಕೃಷ್ಣರು ನಮ್ಮನಮ್ಮೊಳಗೆ ಅಕಾರಣವಾಗಿ ಈ ಯುದ್ಧವು ಬೇಡ ವೆಂದು ಸಂಧಿಯನ್ನು ಕೋರುತ್ತಿದ್ದಾರೆ. ಈ ಸಂಧಿಗೆ ತಾವು ಪಣ ವನ್ನು ನಿರ್ಣಯಮಾಡಬಹುದು".

ಹೈದರಲ್ಲೀಖಾನನು ನಗುತ್ತಾ, "ವಿರೂಪಾಕ್ಷಯ್ಯ, ನೀವು ತರುಣರು. ಮಂತ್ರಿ ರಾಮಕೃಷ್ಣರು ಬುದ್ಧಿವಂತರೂ ಹೌದು. ರಾಜನೀತಿ ವಿಶಾರದರೂ ಅಹುದು. ಅವರಿರುವವರೆಗೆ ಈ ನಗರವನ್ನು ಉಳಿಸ ಬಲ್ಲರು. ನನ್ನ ಕೈಯಿಂದಲೂ ತಪ್ಪಿಸಿಕೊಳ್ಳಬಲ್ಲರು. ಮರಾಟರನ್ನೂ ಮೋಸಮಾಡಬಲ್ಲರು. ಆದರೆ ನಗರವು ಸ್ಥಿರವಾಗಿ ಉಳಿಯಬಲ್ಲದೆಂದು ನಂಬಬೇಡಿರಿ. ಎಂದಾದರೂ ಅದನ್ನು ನಾನು ಮೈಸೂರಿಗೆ ಸೇರಿಸಿಯೇ ಸೇರಿಸುತ್ತೇನೆ. ಇಂದಲ್ಲದಿದ್ದರೆ ಮತ್ತೊಂದು ದಿನ ಮಹಾಯುದ್ಧವು ಆಗಲೇಬೇಕು. ಸಂಧಿಯನ್ನು ಯಾಚಿಸಿದರೆ ಒಂದು ಬಾರಿ, ಎರಡು ಬಾರಿ, ಮೂರು ಬಾರಿ ಸಂಧಿಯನ್ನು ಕೊಡುವುದು ಉದಾತ್ತ ರಾಜ ಧರ್ಮವಾಗಿದೆ. ಇಂದು ನಾನು ಅದಕ್ಕೆ ಒಪ್ಪಿಕೊಳ್ಳುತ್ತೇನೆ. ಮಂತ್ರಿ ರಾಮಕೃಷ್ಣರ ಮಾತಿಗೆ ಕಟ್ಟುಬಿದ್ದು ಈ ಸಂಧಿಗೆ ಒಪ್ಪಿದ್ದೇನೆಂದು ತಿಳಿ ಸಿರಿ. ನಗರದ ಸಂಸ್ಥಾನದವರು ನಮಗೆ ಒಂದು ಲಕ್ಷ ಚಿನ್ನದ ವರಹ ಗಳನ್ನು ಕೊಡಬೇಕೆಂದು ತಿಳಿಸಿರಿ. ಪುಷ್ಯಬಹುಳ ಅಮಾವಾಸ್ಯೆಯ ಒಳಗಾಗಿ ಒಂದು ಲಕ್ಷ ಚಿನ್ನದ ವರಹಗಳನ್ನು ನಗರದವರು ಶ್ರೀರಂಗ ಪಟ್ಟಣಕ್ಕೆ ಸಲ್ಲಿಸಬೇಕು. ಇಲ್ಲದಿದ್ದರೆ ಮೈಸೂರಿನ ದಂಡು ಮಾಘ ಮಾಸದಲ್ಲಿ ನಗರದ ಆರು ಸಹಸ್ರ ಗ್ರಾಮಗಳ ಮೇಲೆ ಒಂದೇ ಏಟಿಗೆ ಆಕ್ರಮಣಮಾಡುತ್ತದೆ. ಹೋಗಿರಿ. ನಿಮ್ಮ ಯುಕ್ತಿಯು ಮತ್ತೇನೂ ಸಾಗುವುದಿಲ್ಲ. ನೋಡಿರಿ ವಿರೂಪಾಕ್ಷಯ್ಯ, ಒಂದು ಮಾತು ಹೇಳ ತ್ತೇನೆ ಕೇಳಿರಿ. ನೀವು ಧೈರ್ಯಸ್ಥರಹುದು. ಪರಾಕ್ರಮಿಗಳಹುದು. ನಾನು ನಿಮ್ಮನ್ನು ನಮ್ಮಲ್ಲಿಯೇ ಇಟ್ಟುಕೊಳ್ಳಲು ಬಹಳ ಆಶಿಸುತ್ತೇನೆ. ನಿಮಗೆ ನಮ್ಮ ದರಬಾರಿನಲ್ಲಿ ಉನ್ನತ ಪದವಿಯನ್ನು ಕೊಡುತ್ತೇವೆ. ನೀವು ಬರುವುದಾದರೆ ಶ್ರೀರಂಗಪಟ್ಟಣಕ್ಕೆ ಬಂದುಬಿಡಿರಿ. ಮಂತ್ರಿ ರಾಮಕೃಷ್ಣರಿಗೆ ನಮ್ಮ ಸಲಾಮುಗಳನ್ನು ತಿಳಿಸಿರಿ. ಯಾವಾಗಲೂ

ನಮ್ಮ ಪ್ರೀತಿವಿಶ್ವಾಸಗಳು ಆ ಮಹಾಮಂತ್ರಿಯಲ್ಲಿ ಸ್ಥಿರವಾಗಿವೆ ಎಂದು ತಿಳಿಸಿರಿ. ನೀವು ನಾಳೆಯ ದಿನ ಆರೋಗಣೆಯನ್ನು ತೀರಿಸಿಕೊಂಡು ಶ್ರೀರಂಗಪಟ್ಟಣದಿಂದ ಹೊರಡಬಹುದು" ಎಂದು ವಿರೂಪಾಕ್ಷನನ್ನು ಕಳುಹಿಸಿಕೊಟ್ಟನು.

ವಿರೂಪಾಕ್ಷನು ತನ್ನ ಬಿಡಾರಕ್ಕೆ ಹಿಂತಿರುಗುತ್ತಾ ಕೃತಕಾರ್ಯನಾದೆನೆಂದು ಸಂತೋಷಪಟ್ಟುಕೊಂಡು ಬಂದನು. ಮಾರನೆಯದಿನವೇ ನಗರಕ್ಕೆ ಪ್ರಯಾಣಮಾಡಿದನು.

---

## ೫

## ರಾಣಿಯ ನೋಟ

ಕೆಳದಿಯ ಸಂಸ್ಥಾನಾಧೀಶರಾದ ಬಸಪ್ಪನಾಯಕರವರಿಗೆ ಅರವತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಾಗಿದ್ದಿತು. ವೃದ್ಧಾಪ್ಯದ ಚಿಹ್ನೆಗಳೆಲ್ಲವೂ ಪ್ರಾಪ್ತವಾಗಿದ್ದರೂ ಮುಖದಲ್ಲಿ ವೀರತೇಜಸ್ಸು ಬೆಳಗುತ್ತಿತ್ತು. ಈ ವಯಸ್ಸಿನಲ್ಲಿಯೂ ಬಸಪ್ಪನಾಯಕರು ಯುದ್ಧವೆಂದರೆ ಹಿಂದಕ್ಕೆ ಸರಿದು ಹೋಗುವ ಮನಸ್ಸನ್ನು ಮಾಡುತ್ತಿರಲಿಲ್ಲ. ರಾಜರೆಂದ ಮೇಲೆ ಯುದ್ಧವು ಅನಿವಾರ್ಯವೆಂದು ಅವರು ಹೇಳುತ್ತಿದ್ದರು. ಅವರ ಭಾವನೆಗಳೆಲ್ಲವೂ ಹಳೆಯ ಕಾಲದ ಭಾವನೆಗಳು. ಯುದ್ಧದ ಮಾತು ಬಂದಾಗ ಅವರು ಭೀಷ್ಮ ದ್ರೋಣರುಗಳನ್ನು ಹೋಲಿಸಿಕೊಳ್ಳುತ್ತಿದ್ದರು. ಧರ್ಮದ ಮಾತು ಬಂದಾಗ ಧರ್ಮಕ್ಕಾಗಿ ಇಡೀ ನಗರದ ರಾಜ್ಯವನ್ನು ಕವಡೆಗಿಂತ ಕಡೆಮಾಡಿ ತ್ಯಾಗಮಾಡಲು ಸರ್ವದಾ ಸಿದ್ಧರಾಗಿರುತ್ತಿದ್ದರು. ಅಂಥಾ ಧರ್ಮಪ್ರಭುಗಳು ಆ ಕಾಲದಲ್ಲಿ ಹಿಂದೂಸ್ಥಾನದಲ್ಲಿ ಯಾರೂ ಇರಲಿಲ್ಲ. ತಮ್ಮ ಕಾಲದಲ್ಲಿ ಎಂದಾದರೊಂದು ದಿನ ಹೈದರನೊಡನೆ ಯುದ್ಧವು ಸಂಭವಿಸದೇ ತಪ್ಪದೆಂದು ಅವರು ದೃಢವಾಗಿ ನಂಬಿದ್ದರು. ಇಂದೂ ಅವರು ಯುದ್ಧಕ್ಕೆ ಸಿದ್ಧರಾಗಿಯೇ ಇದ್ದರು.

ಆದರೆ ರಾಜ್ಯಸೂತ್ರಗಳು ಮಂತ್ರಿ ರಾಮಕೃಷ್ಣನ ಕೈಯಲ್ಲಿದ್ದವು. ಬಸಪ್ಪನಾಯಕರು ಮಂತ್ರಿ ರಾಮಕೃಷ್ಣನ ಮಾತಿಗೆ ಚಾಚೂ ತಪ್ಪುತ್ತಿರಲಿಲ್ಲ. ಈ ಯುದ್ಧವನ್ನು ಮಂತ್ರಿ ರಾಮಕೃಷ್ಣನು ತಪ್ಪಿಸುತ್ತಾನೆಂದರೆ ಅದು ಖಚಿತವಾದ ಮಾತು. ಹೇಗಾದರೂ ತಪ್ಪಿಸಿಯೇ ತಪ್ಪಿಸುತ್ತಾನೆ. ಆದುದರಿಂದ ಬಸಪ್ಪನಾಯಕರು ಯುದ್ಧ ಸನ್ನಾಹಗಳನ್ನು ಮಾಡುತ್ತಿರಲಿಲ್ಲ.

ಇಂದು ಕಾರ್ತಿಕ ಮಾಸವಾದುದರಿಂದ ಬಸಪ್ಪನಾಯಕರು ಮಲ್ಲಿಕಾರ್ಜುನ ದೇವಾಲಯಕ್ಕೆ ಮಹಾರಾಣಿಯವರೊಡನೆ ಹೋಗಿದ್ದರು. ಮಹಾರಾಜರವರು ಇಂದೆಲ್ಲಾ ದೇವಾಲಯದಲ್ಲಿಯೇ ಬಿಡಾರಮಾಡುತ್ತಾರೆಂದು ಮುಂಚೆಯೇ ಏರ್ಪಾಡುಗಳು ಮಾಡಲ್ಪಟ್ಟಿದ್ದವು. ಸಮೀಪದಲ್ಲಿದ್ದ ಒಂದು ವಿಶಾಲವಾದ ಕಲ್ಲು ಮಂಟಪಕ್ಕೆ ಸುತ್ತಲೂ ಕನಾತುಗಳನ್ನು ಕಟ್ಟಿ ರಾಜಯೋಗ್ಯವಾದ ಬಿಡಾರಕ್ಕೆ ಅಣಿಮಾಡಿದ್ದರು.

ಸಂಧ್ಯಾಕಾಲ ದೇವಮಂದಿರದಲ್ಲಿ ಮಹಾದೇವನ ದೀಪಾರಾಧನೆಗೆ ಬಸಪ್ಪನಾಯಕರವರೂ, ಮಹಾರಾಣಿಯವರೂ ಚಿತ್ತೈಸಿದ್ದರು. ಆ ದೀಪಾರಾಧನೆಯಾದ ಮೇಲೆ ದೀವಟಿಕೆಗಳನ್ನು ಹಿಡಿಸಿಕೊಂಡು ಕಾಲುನಡೆಯಲ್ಲಿಯೇ ತಮ್ಮ ಬಿಡಾರಕ್ಕೆ ಮಹಾರಾಜರವರು ತೆರಳಿದರು. ಅವರ ಜೊತೆಯಲ್ಲಿ ಮಹಾರಾಣಿ ಚೆಲುವಮ್ಮಣ್ಣಿಯವರೂ ದೇವಾಲಯದಿಂದ ಮಹಾರಾಜರನ್ನು ಅನುಸರಿಸಿ ನಡೆದು ಬಂದರು. ಮಹಾರಾಜರವರು ಪರಿವಾರದವರನ್ನೆಲ್ಲಾ ನಿಲ್ಲುವಂತೆ ಸನ್ನೆಮಾಡಿ ಭವ್ಯವಾದ ಮಂಟಪವನ್ನು ಪ್ರವೇಶ ಮಾಡುತ್ತಲೇ ಅಲ್ಲಿ ಮಂತ್ರಿ ರಾಮಕೃಷ್ಣನನ್ನು ಕಂಡರು. ಅವರ ಜೊತೆಯಲ್ಲಿ ಅಪರಿಚಿತನಾದ ವ್ಯಕ್ತಿಯೊಬ್ಬನು ನಿಂತಿದ್ದನು. ಮಹಾರಾಜರವರು ರಾಮಕೃಷ್ಣನನ್ನು ನೋಡಿ ದೂರದಿಂದಲೇ ಮಾತನಾಡಿಸಿದರು. ಮಂತ್ರಿಗಳು ಬಗ್ಗಿ ಮುಜರೆ ಮಾಡಿದರು. ಜೊತೆಯಲ್ಲಿ ಬಂದಿದ್ದವನೂ ಮುಜರೆಮಾಡಿ ದೂರ ಸರಿದು ನಿಂತನು.

"ಮಂತ್ರಿಗಳೇ, ಸಮಾಚಾರವೇನು? ಪ್ರದೋಷ ಕಾಲದಲ್ಲಿ

ಪ್ರಶಾಂತವಾದ ವನಪ್ರದೇಶದಲ್ಲಿ ನಮ್ಮ ಬಿಡಾರಕ್ಕೆ ನೀವು ಬಂದಿರುವುದರಲ್ಲಿ ಏನೋ ಒಂದು ಮಹತ್ವವಿರಬೇಕು. ನಿಮ್ಮ ಜೊತೆಯಲ್ಲಿ ಬಂದಿರುವ ಈ ರಾಜಪುರುಷನಾರು ?"

ಮಂತ್ರಿ ರಾಮಕೃಷ್ಣನು ಮುಗುಳು ನಗೆಯನ್ನು ನಗುತ್ತಾ, "ಮಹಾಪ್ರಭು, ಈತನೊಬ್ಬ ನನ್ನ ಶಿಷ್ಯ. ಸನ್ನಿಧಾನಕ್ಕೆ ಅರಿಕೆ ಮಾಡುವಂಥಾ ಮಹದಂತಸ್ತಿನವನೇನೂ ಅಲ್ಲ. ಮಹಾಪ್ರಭುಗಳವರ ಅನುಗ್ರಹವಾದರೆ ನಮ್ಮ ರಾಜ್ಯದಲ್ಲಿ ಬಹು ಉಚ್ಚಪದವಿಗೆ ಬರುವನೆಂಬ ನಂಬಿಕೆಯು ನನಗಿದೆ. ಇವನ ಹೆಸರು ವಿರೂಪಾಕ್ಷ. ಇವನೊಬ್ಬ ರೈತನ ಮಗ. ನಾನು ಇವನನ್ನು ಬೆಳೆಸಿ, ವಿದ್ಯಾವಂತನನ್ನಾಗಿ ಮಾಡಿದ್ದೇನೆ. ಇಂದು ಇವನು ನಮ್ಮ ಸಂಸ್ಥಾನದ ಕಾರ್ಯವೊಂದನ್ನು ಯಶಸ್ವಿಯಾಗಿ ಸಾಧಿಸಿಕೊಂಡು ಬಂದಿದ್ದಾನೆ. ಅದಕ್ಕಾಗಿ ಸಮ್ಮುಖಕ್ಕೆ ಕರೆತಂದಿದ್ದೇನೆ."

"ಮಹಾಮಂತ್ರಿಗಳೆ, ಇವನು ನಿಮ್ಮ ಶಿಷ್ಯನಾದಮೇಲೆ ಒಳ್ಳೇ ಕಾರ್ಯದಕ್ಷನೆಂದು ನಾವು ಭಾವಿಸುತ್ತೇವೆ. ನಮಗೆ ಪರಮಸಂತೋಷ. ಯಾವ ಮಹತ್ಕಾರ್ಯಕ್ಕಾಗಿ ಈತನನ್ನು ನೀವು ನಿಯೋಜಿಸಿದ್ದೀರಿ?"

"ಮಹಾಪ್ರಭು, ಹೈದರಲ್ಲೀಖಾನರೊಡನೆ ಸಂಧಾನ ನಡೆಸಲು ಈತನನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸಿದ್ದೆ. ಈತನ ರಾಯಭಾರವು ಯಶಸ್ವಿಯಾಗಿದೆ."

"ಹೈದರಲ್ಲೀಖಾನರು ಸಂಧಿಗೊಪ್ಪಿದರೆ ?"

"ಸದ್ಯಕ್ಕೆ ಒಂದುವಿಧವಾಗಿ ಸಂಧಿಯಾಗಿದೆ. ಪ್ರಕೃತದಲ್ಲಿ ಯುದ್ಧದ ಸಂಭವವಿಲ್ಲ. ಆದರೆ ಅದನ್ನು ಸ್ನೇಹವೆಂದು ನಂಬುವಂತಿಲ್ಲ. ತಾಟಸ್ಥ್ಯ."

"ನಿಮ್ಮಂಥಾ ಪ್ರಜ್ಞಾಶಾಲಿಗಳು ಸಂಧಿಯನ್ನು ಮಾಡಿರುವಾಗ ಅದರ ಔಚಿತ್ಯ ಅನೌಚಿತ್ಯಗಳನ್ನಾಗಲೀ, ಗೌರವ ಗಾಂಭೀರ್ಯಗಳನ್ನಾಗಲೀ ನಾವು ಶಂಕಿಸುವ ಕಾರಣವಿಲ್ಲ. ಆದಾಗ್ಯೂ ಈ ಸಂಧಿಯಿಂದ ನಗರಕ್ಕೆ ಯಾವ ಕುಂದೂ ಇಲ್ಲವಷ್ಟೆ?"

ಮಂತ್ರಿಯು ನಗುತ್ತಾ "ನಮಗೆ ಯಾವ ಕುಂದೂ ಇಲ್ಲ. ಮೈಸೂರಿಗೂ ನಮಗೂ ಯುದ್ಧವು ತಪ್ಪಿದ್ದಲ್ಲ. ಆದರೆ ಯುದ್ಧವನ್ನು ಹಠಾತ್ತನೆ ಮೇಲಕ್ಕೆ ಎಳೆದುಕೊಳ್ಳುವುದಕ್ಕಿಂತಲೂ, ಅದನ್ನು ದೂರ ತಳ್ಳುವುದು ರಾಜನೀತಿ. ಆ ಕಾಲವೈಪರೀತ್ಯದಿಂದ ಅನೇಕ ವ್ಯತ್ಯಾಸಗಳಾಗಿ ಹೋಗಬಹುದು" ಎಂದನು.

ಬಸಪ್ಪನಾಯಕರು ನಗುತ್ತಾ "ಮಂತ್ರಿಗಳೆ, ಅಂತಹ ಕಾಲ ವಿಳಂಬದಿಂದ ಏನಾಗುತ್ತದೆ?" ಎಂದರು.

"ಮಹಾರಾಷ್ಟ್ರರೂ, ಇಂಗ್ಲೀಷರೂ ಹೈದರನಮೇಲೆ ವಿದ್ವೇಷವನ್ನು ಕಾರುತ್ತಿದ್ದಾರೆ. ಒಂದಲ್ಲ ಒಂದುದಿನ ಅವರಿಬ್ಬರೂ ಸೇರಿ ಹೈದರನನ್ನು ಮುರಿದುಹಾಕಬಹುದು. ಹಾಗೆ ಹೈದರನ ಶಕ್ತಿಯು ಕುಂಠಿತವಾದರೆ ನಮ್ಮ ರಾಜ್ಯಕ್ಕೆ ಎಂದೆಂದಿಗೂ ಭಯವಿಲ್ಲ."

ಬಸಪ್ಪನಾಯಕರು ನಗುತ್ತಾ "ಮಂತ್ರಿಗಳೆ ಯಾರದು ತಾನೆ ಏನು ಶಾಶ್ವತ? ನಾವೇ ಕಾಲಾಧೀನರಾದರೆ? ಆಗ ನಗರಕ್ಕೆ ಏನಾದೀತು?" ಎಂದರು.

ಮಂತ್ರಿಯು ಬೆಚ್ಚಿಬಿದ್ದು "ಮಹಾಸ್ವಾಮಿ, ಅಮಂಗಳವನ್ನು ನುಡಿಯಬಾರದು. ನಗರವು ಧರ್ಮರಾಜ್ಯ. ಮಹಾಪುರುಷರಾದ ಸದಾಶಿವರಾಯರ ರಾಜ್ಯವಿದು. ಶಿವಪ್ಪನಾಯಕರವರ ಧರ್ಮವು ಸರ್ವತ್ರ ಬೆಳಗುತ್ತಿದೆ. ಅಂತಹ ರಾಜ್ಯಕ್ಕೆ ಎಂದೆಂದಿಗೂ ನಾಶವಿಲ್ಲ," ಎಂದನು.

"ಮಂತ್ರಿಗಳೇ, ಒಳ್ಳೆಯದು. ಅಮಂಗಳವನ್ನು ಆಡಬಾರದು. ಆದರೆ ರಾಜರು ಯಾವಾಗಲೂ ತಮ್ಮ ಅಸ್ಥಿರತೆಯನ್ನು ಮರೆಯಬಾರದು. ಮನು, ಮಾಂಧಾತರು ಕೂಡ ಶಾಶ್ವತವಾಗಿ ಈ ಭೂಮಿಯಲ್ಲಿರಲಾಗಲಿಲ್ಲ. ಈ ರಾಜ್ಯ, ಈ ಬಂಧುಮಿತ್ರರು, ಈ ರಾಜಕೀಯ ವ್ಯಕ್ತಿಗಳು, ಈ ವಂದಿಮಾಗಧರು, ಈ ಭೋಗಭಾಗ್ಯಗಳು ಇವೆಲ್ಲವೂ ಕ್ಷಣಭಂಗುರ. ಆ ಮಹಾದೇವನ ಇಚ್ಛೆಯಿದ್ದಂತೆ ಎಲ್ಲವೂ ಆಗುವುದು."

ದೇವಾಲಯದಲ್ಲಿ ಘಂಟಾನಾದವಾಯಿತು. ಎಲ್ಲರೂ ಬೆಚ್ಚಿಬಿದ್ದರು. ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದುವಿಧವಾದ ಭಾವನೆ

ಗಳು ಮೂಡಿದವು. ರಾಜರ ಮಾತು ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಭಾವನೆಯನ್ನು ಚಿತ್ರಿಸಿತು. ಆ ಸಮಯದಲ್ಲಿ ರಾಜರ ಹಿಂದೆ ನಿಂತಿದ್ದ ರಾಣಿ ಚೆಲುವಮ್ಮಣ್ಣಿಯು ಮಂತ್ರಿಗಳ ಪಕ್ಕದಲ್ಲಿ ನಿಂತಿದ್ದ ರಾಜಪುರುಷನನ್ನು ದೃಷ್ಟಿಸಿ ನೋಡುತ್ತಿದ್ದಳು. ಅವನ ಕಣ್ಣುಗಳ ಕಾಂತಿಯು ರಾಣಿಯ ಮನಃಪಟಲದಮೇಲೆ ಅರುಣವರ್ಣವನ್ನು ಚೆಲ್ಲುತ್ತಿದ್ದಿತು. ರಾಣಿಯ ಹೃದಯವು ಉತ್ಕಂಪಿತವಾಗಿ "ಅಂದು ನಾನು ನೋಡಿದ ಅಶ್ವಾರೋಹಿಯಾದ ರಾಜಪುರುಷನು ಇವನೇ! ಅದೇ ಮುಖ, ಅದೇ ನೇತ್ರಯುಗ್ಮ, ಅವನೇ ಇವನು!" ಎಂದುಕೊಂಡಳು.

---

೬

## ಭೈರವಿ

ಕೆಳದಿಗೆ ಒಂದು ಹರಿದಾರಿ ದೂರದಲ್ಲಿ ಗಗನಚುಂಬಿಯಾದ ಪಶ್ಚಿಮಘಟ್ಟಗಳ ಪರ್ವತಶ್ರೇಣಿಗಳ ಮಧ್ಯದಲ್ಲಿ ಒಂದು ಸಣ್ಣ ಗುಡ್ಡದ ಮೇಲೆ ದೊಡ್ಡ ಬೆಟ್ಟದ ತಪ್ಪಲಿನಲ್ಲಿ ಒಂದು ಹಳ್ಳಿಯ ಮನೆ. ನೂರಾರು ಗಜಗಳ ದೂರದಲ್ಲಿ ನಾಲ್ಕಾರು ಬಂಟರ ಗುಡಿಸಲು. ಸಮೀಪದಲ್ಲಿ ಸಣ್ಣಸಣ್ಣ ಬೈಲುಪ್ರದೇಶದಲ್ಲಿ ಗದ್ದೆ. ಅಲ್ಲಲ್ಲಿ ಕೆಲವು ಅಡಕೆಮರಗಳ ಗುಂಪು. ಬೆಟ್ಟಗಳಮೇಲೆ ದಟ್ಟವಾಗಿ ಬೆಳೆದ ಬೋಗಿಯಮರಗಳ ಶ್ರೇಣಿ. ಈ ಮರಗಳ ಸಮೂಹವನ್ನು ನೋಡಿದರೆ ವನರಾಜನ ನೂರಾರು ರಥಗಳಂತೆ ಕಂಗೊಳಿಸುತ್ತಿದ್ದವು.

ಮಲೆನಾಡಿನಲ್ಲಿ ಇಂತಹ ಒಂದೊಂದು ಮನೆಗೂ ಒಂದೊಂದು ಹೆಸರಿಡುವ ವಾಡಿಕೆ ಈ ಮನೆಗೆ ಗಂಗವಳ್ಳಿಯೆಂದು ಹೆಸರು. ಮನೆಯ ಯಜಮಾನನು ಮಲ್ಲಪ್ಪ. ಅವನಿಗೆ ಒಬ್ಬ ತಂಗಿ, ಒಬ್ಬಳೇ ಮಗಳು. ಮಗಳ ಹೆಸರು ಮಲ್ಲಿಗಮ್ಮ. ಅವನೊಬ್ಬ ರೈತ. ಬೇಸಾಯವನ್ನು ಮಾಡಿಕೊಂಡು ದನಕರುಗಳನ್ನು ಸಾಕಿಕೊಂಡು ಹೊಟ್ಟೆ ಹೊರೆಯುತ್ತಾನೆ.

ಮಾರ್ಗಶೀರ್ಷಮಾಸದ ಪ್ರಥಮದಿವಸಗಳಲ್ಲಿ ಗದ್ದೆಗಳೆಲ್ಲವೂ ಫಲವಾಗಿ ಹಸುರುಬೆಟ್ಟಗಳ ಮಧ್ಯದಲ್ಲಿ ಕೆಂಪುತೆನೆಗಳಿಂದ ಶೋಭಿಸುವ ಗದ್ದೆಯಬೈಲು. ಬೇಸಾಯವೆಲ್ಲ ಪೂರೈಸಿ ಕುಯಿಲನ್ನು ನಿರೀಕ್ಷಣೆ ಮಾಡುತ್ತಿರುವ ಕಾಲ. ದೇಶದಲ್ಲಿ ಕ್ಷಾಮವು ಮೃತ್ಯುನರ್ತನವನ್ನು ಮಾಡುತ್ತಿದ್ದರೂ ಮಲ್ಲಪ್ಪನು ಸ್ವಲ್ಪವಾದರೂ ಅಳುಕಿರಲಿಲ್ಲ. ಬಂದವರಿಗೆ ಗಂಜಿ ನೀಡುತ್ತಾನೆ. ಅನ್ನ ಹಾಕುತ್ತಾನೆ. ಅವನಷ್ಟಕ್ಕೆ ಅವನೇ ತೃಪ್ತನಾಗಿದ್ದಾನೆ. ಅವನಿಗೆ ರಾಜ್ಯದ ಯುದ್ಧ ವಿಗ್ರಹಗಳ ಪರಿವೆಯೂ ಇಲ್ಲ. ದೇಶದ ಕ್ಷಾಮದ ಭೀತಿಯೂ ಇಲ್ಲ. ಅವನು ಉದಯದಲ್ಲೆದ್ದು, ದೇವರ ಧ್ಯಾನಮಾಡಿ, ನೊಸಲಲ್ಲಿ ಭಸ್ಮವನ್ನು ಧರಿಸಿ ಪ್ರಶಸ್ತವಾದ ತನ್ನ ಮನೆಯ ಜಗುಲಿಯಮೇಲೆ ಸ್ತಂಭವನ್ನೊರಗಿಕೊಂಡು ಕುಳಿತಿದ್ದಾನೆ. ಸುತ್ತುಮುತ್ತಲ ಹಳ್ಳಿಯ ನಾಲ್ಕಾರು ರೈತರು ಬಂದು ಮಾತನಾಡುತ್ತಾ ಕುಳಿತಿದ್ದಾರೆ. ಅವರೆಲ್ಲರೂ ಮಲ್ಲಪ್ಪನಿಂದ ಸ್ವಲ್ಪ ಭತ್ತವನ್ನು ಸಾಲವಾಗಿ ತೆಗೆದುಕೊಂಡು ಹೋಗಲು ಬಂದಿದ್ದಾರೆ.

ಪ್ರಾತಃಕಾಲ ಒಂಭತ್ತು ಘಂಟೆಯ ಸಮಯ. ಮಲೆನಾಡಿನಲ್ಲಿ ಮಳೆಗಾಲವು ಪೂರೈಸಿಹೋಗಿದೆ. ಆಕಾಶದ ಕಡೆಗೆ ನೋಡಿದರೆ ಸಮುದ್ರದಲ್ಲಿ ಬಿಳಿಯಬೆಟ್ಟಗಳು ಉರುಳುತ್ತಾ ಒಂದಕ್ಕೊಂದು ಘರ್ಷಣೆ ಮಾಡುವಂತೆ ದೊಡ್ಡ ದೊಡ್ಡ ಬಿಳಿಯ ಮೇಘಗಳು ನಿಸ್ಸಾರವಾಗಿ ಸಂಚರಿಸುತ್ತಿರುವಂತೆ ಕಂಗೊಳಿಸುತ್ತಿದೆ. ಆ ಮೇಘಗಳ ಬಲೆಯನ್ನು ಬಿಡಿಸಿಕೊಂಡು ಸೂರ್ಯದೇವನು ಇಣುಕಿ ನೋಡಿದರೆ ಆ ಪ್ರಬಲ ಕಿರಣಗಳಿಂದ ಬಿಸಿಲಿನ ಚುರುಕು ತಟ್ಟುತ್ತದೆ. ತಕ್ಷಣ ಪೂರ್ವದ ಕಡೆಯಿಂದ ತಂಗಾಳಿಯು ಬೀಸಿ ತಣ್ಣಗೆಮಾಡುತ್ತದೆ. ಇಂತಹ ಸಮಯದಲ್ಲಿ ಭೈರವಿಯೊಬ್ಬಳು ಶಿವನಾಮಗಳನ್ನು ಹಾಡುತ್ತಾ ಮಲ್ಲಪ್ಪನ ಮನೆಗೆ ಭಿಕ್ಷಕ್ಕೆ ಬಂದಳು. ಅವಳ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ಸಣ್ಣ ರುದ್ರಾಕ್ಷಿಗಳ ಮಾಲೆ, ಮಲಿನವಾದ ಗೈರಿಕ ವಸನ. ಮೈಮೇಲೆ ಛಿದ್ರಪಟದಂತಿರುವ ಒಂದು ಹೊದಿಕೆ, ಕೈಯಲ್ಲಿ ತ್ರಿಶೂಲ, ಕೊಂಕುಳಲ್ಲಿ ಭಿಕ್ಷದ ಜೋಳಿಗೆ, ಮತ್ತೊಂದು ಕೈಯಲ್ಲಿ ಒಂದು ಬುಡುಬುಡಿಕೆ, ಅದನ್ನು ಬಾರಿಸಿದರೆ ಆ

ಗಿರಿಗಳ ಮಧ್ಯದಲ್ಲಿ ಸಿಂಹವು ಘರ್ಜಿಸುವಂತೆ ಪ್ರತಿಧ್ವನಿಯಾಗುತ್ತದೆ. ಮೈಮೇಲೆ ಅನೇಕ ಕವಡೆಯ ಸರಗಳು, ವೇಷ ಭೂಷಣಗಳಿಂದ ವಿಕಾರವಮಾಡಿಕೊಂಡಿದ್ದರೂ, ರಸಿಕರು ಕಣ್ಣುಬಿಟ್ಟು ನೋಡಿದರೆ ದಷ್ಟ ಪುಷ್ಟವಾದ ಶರೀರವು ಕಾಣುತ್ತಿದ್ದಿತು. ಆ ಅವಯವಸೌಷ್ಟವವನ್ನು ನೋಡಿದರೆ ಆವಳೊಬ್ಬಳು ಸುಕುಮಾರಾಂಗಿಯೆಂದು ಕಂಡುಕೊಳ್ಳುವುದು ಕಷ್ಟವಾಗಿರಲಿಲ್ಲ. ಬಣ್ಣವೇನೋ ಕೊಂಚ ಶಾಮಲವರ್ಣ. ಮುಖವೆಲ್ಲಾ ವಿಭೂತಿಯಿಂದ ಉದ್ಧೂಳಿತವಾಗಿದ್ದರೂ, ತಾರುಣ್ಯದ ಪ್ರಭೆಯು ತಾನೇ ತಾನಾಗಿ ಚಿಮ್ಮುತ್ತಿತ್ತು. ಎಲ್ಲದಕ್ಕಿಂತ ಪ್ರಗಲ್ಭವಾದ ಆ ನೇತ್ರಯುಗ್ಮವು ಆ ಭೈರವಿಯನ್ನು ಕೈಲಾಸದಿಂದ ಇಳಿದು ಬಂದ ಗಂಧರ್ವ ಕನ್ನಿಕೆಯೆಂದು ನುಡಿಯುತ್ತಿದ್ದಿತು. ಆ ರಮಣಿಯು ನಕ್ಕರೆ ಆ ಸುಹಾಸ ಮಂದಹಾಸದಲ್ಲಿ ತರುಣರು ತೇಲಿಹೋಗುತ್ತಿದ್ದರು. ಈ ರಮಣಿಯ ದರ್ಶನಮಾತ್ರದಿಂದಲೇ ಯೋಗಿಗಳೆಂದು ಹೆಮ್ಮೆಕೊಚ್ಚಿಕೊಳ್ಳುವ ಡಾಂಭಿಕರು ಅಧಃಪಾತಾಳದಲ್ಲಿ ತಲ್ಲಣಿಸುತ್ತಿದ್ದರು. ಅವಳು ಭಿಕ್ಷಬೇಡುವುದೆಂದರೆ ಅದೊಂದು ಈಶ್ವರನ ಹುಚ್ಚುಲೀಲೆಯೆನ್ನಬೇಕು. ಮಲ್ಲಪ್ಪನಿಗೆ, ಆವನ ಸಹಪಾಠಿಗಳಾದ ರೈತರಿಗೆ ಇದೆಲ್ಲಾ ಏನುಗೊತ್ತು? ಭೈರವಿಯೆಂದರೆ ಭೈರವಿ. ಭಿಕ್ಷಬೇಡಿದರೆ ಒಂದು ಬೊಗಸೆ ಅಕ್ಕಿ. ಗಂಜಿಯನ್ನು ಕೇಳಿದರೆ ಒಂದು ಚೊಟ್ಟೆ ಗಂಜಿ. ಅನ್ನವನ್ನು ಬಯಸಿದರೆ ಒಂದು ತುತ್ತು ನೈವೇದ್ಯ. ಅಷ್ಟೇ ಅವರ ಜಗತ್ತು. ಆದರೂ ಭೈರವಿಯ ದರ್ಶನದಿಂದ ಏನೋ ಒಂದು ವಿಧವಾದ ಮಾಯೆಯು ಆ ರೈತರನ್ನು ಆವರಿಸಿತು. ಮಲ್ಲಪ್ಪನು ಗಂಭೀರಭಾವದಿಂದ ಕೈಮುಗಿದು ಕುಳಿತುಕೊಳ್ಳುವಂತೆ ಹೇಳಿದನು. ಭೈರವಿಯು ಒಂದು ಬಾರಿ ಮೆಲ್ಲನೆ ಬುಡುಬುಡುಕೆಯನ್ನು ಬಾರಿಸಿ

"ಹರ ಮಹದೇವ
ನೀನೇ ಸರ್ವಗೂ ದೇವ
ದೇವರದೇವ"

ಎಂದು ಉಚ್ಚಕಂಠದಿಂದ ಹಾಡಿದಳು. ಆ ಧ್ವನಿಯು ಗಿರಿಗುಹೆಗಳಲ್ಲಿ

ಪ್ರತಿಧ್ವನಿಸಿತು. ಭೈರವಿಯ ಬುಡುಬುಡಿಕೆಯ ಸದ್ದು ಕೇಳಿ ಒಳಗಿನಿಂದ ಮಲ್ಲಿಗಮ್ಮನು ಓಡಿಬಂದಳು.

ಎಂತಹ ರೂಪು, ಎಂತಹ ಲಾವಣ್ಯ! ಆ ಅಮಾಯಕ ಬಾಲಕಿಯಲ್ಲಿ ಎಂತಹ ಪ್ರಗಲ್ಭ ಸೌಂದರ್ಯ! ಹದಿನಾರು ವರ್ಷ! ತುಂಬಿದ ಪ್ರಾಯದ ಹುಡುಗಿ! ಶರೀರದ ಮೇಲೆ ಒಂದಾದರೂ ಆಭರಣವಿಲ್ಲ. ಹಳ್ಳಿಗಾಡಿನವರು ಉಡುವಂತೆ ಒಂದು ಸಣ್ಣ ಸೀರೆಯನ್ನು ಉಟ್ಟಿದ್ದಳು. ಎದೆಗೊಂದು ಕರಿಯ ಬಟ್ಟೆಯನ್ನು ಕಟ್ಟಿದ್ದಳು. ಭುಜದ ಮೇಲೆ ಸೆರಗು ತೇಲುತ್ತಿತ್ತು. ಆ ಶರೀರದ ಅಂಗಾಂಗಗಳೆಲ್ಲವನ್ನೂ ಆ ವಸ್ತ್ರವು ಸಂಪೂರ್ಣವಾಗಿ ಮುಚ್ಚಿದ್ದಿತೆಂದು ಹೇಳಲಾಗುವುದಿಲ್ಲ. ಆದರೆ ತರಂಗ ತರಂಗವಾಗಿ ಹಾರಾಡುತ್ತಿದ್ದ ಆ ಕೇಶದಾಮವು ಶರೀರವನ್ನೆಲ್ಲಾ ಮುಚ್ಚುತ್ತ ಬಿಚ್ಚುತ್ತ, ಮುಚ್ಚುತ್ತ ಬಿಚ್ಚುತ್ತ, ಆ ಸೌಂದರ್ಯಮಯಿಯ ಶರೀರದಮೇಲೆ ಆಟವಾಡುತ್ತಿದ್ದಿತು. ವಿಶಾಲವಾದ ಕಣ್ಣುಗಳಲ್ಲಿ ಕೃತ್ರಿಮತೆಯೆಂಬ ಭಾವವೇ ಇಲ್ಲ. ಆ ಕಣ್ಣುಗಳು ಹರಣಿಯ ಕಣ್ಣುಗಳಂತೆ ಕ್ಷಣ ಕ್ಷಣಕ್ಕೂ ಬೆದರುತ್ತಿತ್ತು. ಎಳಸಾದ ಮೂಗು ಆ ಮುಖಕ್ಕೆ ಒಂದು ಆಭರಣದಂತಿತ್ತು. ಆ ತುಟಿಗಳಲ್ಲಿ ಆ ಎಳೆಗೆಂಪು ಏನೋ ಒಂದು ವೈಖರಿಯನ್ನು ಸೂಸುತ್ತಿತ್ತು. ಮಲ್ಲಿಗಮ್ಮನು ಬಂದು ಭೈರವಿಯ ಮುಂದೆ ನಿಂತು ಭೈರವಿಯನ್ನುದ್ದೇಶಿಸಿ "ಬಸವಿ, ಮತ್ತೊಂದು ಹಾಡು ಹೇಳು" ಎಂದಳು. ಭೈರವಿಯು ಮಲ್ಲಿಗಮ್ಮನನ್ನು ದೃಷ್ಟಿಸಿ ನೋಡಿದಳು. ಕಿರುನಗೆ ಬೀರಿದಳು. ಆ ನಗು ಆ ಮುಗ್ಧೆ ಮಲ್ಲಿಗಮ್ಮನನ್ನು ಆಕರ್ಷಿಸಿತು. ಭೈರವಿಯು ಕಣ್ಣು ಸನ್ನೆಮಾಡುತ್ತಾ, "ಕುಳಿತಿಕೋ ತಂಗಿ" ಎಂದಳು. ಮಲ್ಲಿಗಮ್ಮನು ಭೈರವಿಯ ಮುಂದೆ ಪದ್ಮಾಸನವನ್ನು ಹಾಕಿಕೊಂಡು ಕುಳಿತಳು. ಭೈರವಿಯು "ಕೈ ಕೊಡಮ್ಮಾ, ನೋಡಿ ಹೇಳುತ್ತೇನೆ" ಎಂದಳು. ಮಲ್ಲಿಗಮ್ಮನು ನಾಚುತ್ತಾ, ನಗುತ್ತಾ, ಕೈಗಳೆರಡನ್ನೂ ಗಟ್ಟಿಯಾಗಿ ಮುಚ್ಚಿಕೊಂಡು "ಹಾಗೇ ಕಣಿ ಹೇಳು" ಎಂದು ಹೇಳಿದಳು. ಭೈರವಿಯು ಮಲ್ಲಪ್ಪನ ಕಡೆ ತಿರುಗಿ:—

"ಗೌಡರೆ, ನಾನು ಕಣಿ ಹೇಳುವವಳು. ನಿಮ್ಮ ಮನೆಯಲ್ಲಿ ಇಂದು

ನಾನು ಕಣಿ ಹೇಳಿ ಹೋದರೆ ಇಂದಿಗೆ ಸರಿಯಾಗಿ ಒಂದು ವರ್ಷಕ್ಕೆ ಬಂದು ಭಿಕ್ಷೆ ಮಾಡುತ್ತೇನೆ. ನನ್ನ ಕಣಿಯು ನಿಜವೇ ಸುಳ್ಳೇ ಎಂಬುದನ್ನು ನೀವು ಪರೀಕ್ಷಿಸಬಹುದು. ಎಂದು ಯಾವ ಮನೆಯಲ್ಲಿ ಕಣಿ ಹೇಳಬೇಕೆಂದು ಶಕುನಪಕ್ಷಿಯು ನುಡಿಯುತ್ತದೋ ಆ ಮನೆಗೆ ಅಂದು ನಾನು ಬರತಕ್ಕವಳು. ತಮ್ಮ ಅಪ್ಪಣೆಯಾದರೆ ಇಂದು ನಿಮ್ಮ ಮನೆಯಲ್ಲಿ ಕಣಿ ಹೇಳುತ್ತೇನೆ. ಇಲ್ಲದಿದ್ದರೆ ಹೊರಟುಹೋಗುತ್ತೇನೆ. ಕಣಿ ಹೇಳದೆ ಹೊರಟುಹೋದರೆ ಅಂದು ಶುದ್ಧ ಉಪೋಷ್ಯ" ಎಂದು ಹೇಳಿದಳು.

ಈ ಮಾತುಗಳಿಂದ ಮಲ್ಲಪ್ಪನು ಪರವಶನಾಗಿಹೋದನು. ಈ ಭೈರವಿಯ ಈ ಮಾತುಗಳು ವಶೀಕರಣ ಮಂತ್ರದಂತೆ ಅಲ್ಲಿದ್ದವರನ್ನೆಲ್ಲಾ ಮುಗ್ಧಗೊಳಿಸಿತು. ಮಲ್ಲಪ್ಪನು ಭಕ್ತಿಭಾವದಿಂದ ಕೈಮುಗಿದು "ತಾಯೆ, ಮಲ್ಲಿಗಮ್ಮನ ಕೈನೋಡಿ ಕಣಿ ಹೇಳವ್ವಾ. ಅವಳಿಂದ ನಮ್ಮ ಮನೆಯು ಉದ್ಧಾರವಾಗಬೇಕು" ಎಂದು ಹೇಳಿದನು.

ಮಲ್ಲಿಗಮ್ಮನ ಮುಖದ ಚಹರೆಯು ಬದಲಾಯಿಸಿತು. ಲಜ್ಜೆಯಿಂದ ತಲೆತಗ್ಗಿಸಿ ಕೈನೀಡಿದಳು.

ಭೈರವಿಯು ಆ ಮೃದುವಾದ ಕೈಯನ್ನು ತನ್ನ ಎರಡು ಕೈಗಳ ಮೇಲೆಯೂ ಇಟ್ಟುಕೊಂಡು ಬಹಳಹೊತ್ತು ನೋಡಿದಳು. ಕಟ್ಟಕಡೆಯಲ್ಲಿ ಏನೋ ಆಶ್ಚರ್ಯವನ್ನು ಕಂಡವಳಂತೆ ಮುಖಭಂಗಿಯನ್ನು ಮಾಡಿ ಆ ಮಲ್ಲಿಗಮ್ಮನ ಕೈಯ್ಯನ್ನು ಚುಂಬಿಸಿದಳು. ಅನಂತರ "ಕೇಳು ತಂಗಿ, ನೀನೊಬ್ಬ ರಾಜನನ್ನು ಮದುವೆಯಾಗುವೆ. ಅರಮನೆಯಲ್ಲಿ ವಾಸಮಾಡುವೆ" ಎಂದು ಹೇಳಿದಳು.

ಈ ಮಾತು ಕೇಳಿ ಮಲ್ಲಿಗಮ್ಮನು ಕಿಲಕಿಲನೆ ನಕ್ಕಳು.

ಮಲ್ಲಪ್ಪನು ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತಾ "ಬಸವಮ್ಮಾ, ನಮಗೇಕೆ ಆ ದೊಡ್ಡ ಮಾತು? ನನ್ನ ಮಗಳು ಯಾರೋ ಒಬ್ಬ ಗೌಡನ ಮಗನನ್ನು ಮದುವೆಯಾಗಿ ಸುಖದಿಂದಿದ್ದರೆ ಸಾಕು. ರಾಜ್ಯ, ರಾಣಿಗಿರಿ, ಇದೆಲ್ಲಾ ನನಗೇತಕ್ಕವ್ವಾ? ಶಾಸ್ತ್ರ ಹೇಳುವವರು

ಶುಭನುಡಿಯುವ ವಾಡಿಕೆ. ನಾನೆಷ್ಟೋ ಕಂಡಿದ್ದೇನೆ. ನನ್ನ ಮಗಳು ಅರಗಿಣಿಯಂತಿರುವುದನ್ನು ನೋಡಿ ನೀನೊಬ್ಬ ರಾಜರ ಹೆಸರಿಗೆ ಈ ನನ್ನ ಮಗಳನ್ನು ಗಂಟು ಹಾಕಿದೆ. ಒಳ್ಳೆಯುದವ್ವಾ! ನಿನ್ನ ಹರಕೆಯಿಂದ ನನ್ನ ಮಗಳಿಗೆ ಮಂಗಳವಾಗಲಿ. ಭೈರವಿತಾಯಿ, ನೀನು ಶಿವಭಕ್ತೆ ಳೆಂದು ಕಾಣುತ್ತದೆ. ನಮ್ಮ ಮನೆಯಲ್ಲಿಯೇ ಆರೋಗಣೆಯನ್ನು ತೀರಿಸಿಕೊಂಡು ವಿಶ್ರಾಂತಿಯನ್ನು ತೆಗೆದುಕೊಂಡು ಮುಂದಕ್ಕೆ ಹೋಗವ್ವಾ" ಎಂದು ಹೇಳಿದನು.

ಮಲ್ಲಿಗಮ್ಮನು ಭೈರವಿಯನ್ನು ಮನೆಯ ಒಳ ಅಂಗಳದೊಳಗೆ ಕರೆದುಕೊಂಡು ಹೋದಳು. ಹಿಂದುಗಡೆ ಪಡೆಸಾಲೆಯ ಮೇಲೆ ಅವರಿಬ್ಬರೂ ಕುಳಿತುಕೊಂಡು ಮಾತನಾಡತೊಡಗಿದರು. ದೇಶವಿದೇಶಗಳ ಕಥೆಗಳನ್ನೂ, ದೊಡ್ಡ ದೊಡ್ಡ ಪಟ್ಟಣಗಳ ಅಂದಚಂದಗಳನ್ನೂ, ಅರಮನೆಗಳ ವೈಭವವನ್ನೂ ಭೈರವಿಯು ಮಲ್ಲಿಗಮ್ಮನಿಗೆ ಬಣ್ಣಬಣ್ಣವಾಗಿ ಹೇಳಿದಳು. ಬಸಪ್ಪನಾಯಕರ ಪ್ರತಾಪವನ್ನೂ ಹೇಳಿದಳು. ರಾಣಿ ಚೆಲುವಮ್ಮಣ್ಣಿಯ ರೂಪಲಾವಣ್ಯಗಳನ್ನೂ ವೈಭವವನ್ನೂ ಬಣ್ಣಿಸಿದಳು. ಮಲ್ಲಿಕಾರ್ಜುನ ದೇವಾಲಯದ ಪೂಜಾವೈಭವಗಳನ್ನು ಬಣ್ಣಿಸಿ ಹೇಳಿದಳು. ಅಭಿರಾಮಸ್ವಾಮಿಯ ಶಾಪಾನುಗ್ರಹ ಶಕ್ತಿಯನ್ನು ಶ್ಲಾಘಿಸಿದಳು. ಭವಾನೀರಾಣಿಯ ದಾನಧರ್ಮಗಳನ್ನು ಹೊಗಳಿದಳು. ಕಡೆಯಲ್ಲಿ ರಾಣಿ ಚೆಲುವಮ್ಮಣ್ಣಿಯ ಸುಖಸಾಮ್ರಾಜ್ಯಗಳನ್ನು ಪುನಃಪುನಃ ಬಣ್ಣಿಸಿದಳು.

ಮಲ್ಲಿಗಮ್ಮನು ಕುತೂಹಲಾವಿಷ್ಟಳಾಗಿ "ಭೈರವಿ, ನೀನು ರಾಣಿಯವರನ್ನು ಚೆನ್ನಾಗಿ ಬಲ್ಲೆಯಾ? ನನ್ನನ್ನು ಕರೆದುಕೊಂಡುಹೋಗಿ ರಾಣಿಯ ಭೇಟಿಮಾಡಿಸುವೆಯಾ?" ಎಂದು ಕೇಳಿದಳು.

ಭೈರವಿಯು ನಗುತ್ತಾ, "ಮಗಳೇ, ಒಂದಾನೊಂದು ದಿನ ನಿನಗೆ ರಾಣಿಯವರ ಭೇಟಿಮಾಡಿಸುತ್ತೇನೆ. ನನಗೆ ನಿನ್ನನ್ನು ನೋಡಿದರೆ ಎಷ್ಟೋ ಸಂತೋಷವಾಗುತ್ತದೆ. ನೀನು ಈ ಅರಣ್ಯಮಧ್ಯದಲ್ಲಿ ಬೆಳೆದ

ಒಂದು ಸ್ವರ್ಣಲತೆಯಂತೆ ನನ್ನ ಕಣ್ಣಿಗೆ ಕಂಗೊಳಿಸುತ್ತೀಯೆ.” ಎಂದು ಹೇಳುತ್ತಾ ಮಲ್ಲಿಗಮ್ಮನನ್ನು ಬಾಚಿ ತಬ್ಬಿಕೊಂಡು ಮುತ್ತಿಟ್ಟಳು.

ಮಧ್ಯಾನ್ಹದ ಒಳಗಾಗಿ ಮಲ್ಲಿಗಮ್ಮನು ಭೈರವಿಯನ್ನು ಬಿಟ್ಟಿರಲಾರದವಳಾಗಿಹೋದಳು. ಇದ್ದಕ್ಕಿದ್ದಂತೆಯೇ ಅವಳ ಹೃದಯದಲ್ಲಿ ಭೈರವಿಯ ವಿಷಯದಲ್ಲಿ ಪ್ರಗಾಢ ಸ್ನೇಹವು ಆವಿರ್ಭವಿಸಿತು. ಮಧ್ಯಾನ್ಹೋತ್ತರ ಮಲ್ಲಿಗಮ್ಮನು ಭೈರವಿಯನ್ನು ಕುರಿತು, “ನೋಡು, ಭೈರವಿ, ಈ ತೋಟದಲ್ಲಿ ಒಬ್ಬ ಯೋಗೀಶ್ವರನಿದ್ದಾನೆ. ಅವನ ಕೈ ನ್ನೋಡಿ ಕಣಿಹೇಳುವೆಯಾ?” ಎಂದು ಕೇಳಿದಳು. ಭೈರವಿಯು ಸಂತೋಷದಿಂದ ಆ ಯೋಗೀಶ್ವರನನ್ನು ನೋಡುವ ಕುತೂಹಲವನ್ನು ತೋರಿದಳು. ಮಲ್ಲಿಗಮ್ಮನು ಭೈರವಿಯನ್ನು ಜೊತೆಯಲ್ಲಿ ಕರೆದು ಕೊಂಡು ತೋಟದೊಳಗೆ ಹೋದಳು. ಹೋಗುತ್ತಾ ಅವರಿಬ್ಬರೂ ಮಾತ ನಾಡುತ್ತಲೇ ಹೋದರು. ಯೋಗೀಶ್ವರನ ಗುಡಿಸಿಲನ್ನು ತಲುಪುವಷ್ಟರಲ್ಲಿ ಭೈರವಿಯು ಮಲ್ಲಿಗಮ್ಮನನ್ನು ಮಾತನಾಡಿಸುತ್ತಾ ಆಡಿಸುತ್ತಾ ಯೋಗೀಶ್ವರನ ಪರಿಚಯದ ವಿಷಯವಾಗಿ ಅನೇಕ ಅಂಶಗಳನ್ನು ಅರಿತುಕೊಂಡಳು. ಆ ಯೋಗೀಶ್ವರನು ಅನೇಕ ವರ್ಷಗಳಿಂದ ಅಲ್ಲಿಯೇ ಇದ್ದಾನೆಂದೂ, ಮಲ್ಲಪ್ಪನ ಮನೆಯಲ್ಲಿಯೇ ಊಟಮಾಡು ತ್ತಾನೆಂದೂ, ಆಗಾಗ ಎಲ್ಲಿಗೋ ಹೋಗಿಬರುತ್ತಾನೆಂದೂ, ಬರುವಾಗಲೆಲ್ಲಾ ಬೇಕಾದಷ್ಟು ದುಡ್ಡು ತರುತ್ತಾನೆಂದೂ, ಯಾರೊಡನೆಯೂ ಮಾತನಾಡುವುದಿಲ್ಲವೆಂದೂ, ಅವನಿಗೆ ಕುದುರೆ ಸವಾರಿಯ ಹುಚ್ಚು ಬಹಳವಾಗಿದೆಯೆಂದೂ, ಅವನಿಗಾಗಿ ಮಲ್ಲಪ್ಪನು ಎರಡು ಕುದುರೆ ಗಳನ್ನು ಸಾಕುತ್ತಾನೆಂದೂ, ಅವೆರಡೂ ರಾಜಾಶ್ವಗಳೆಂದೂ, ಆ ಯೋಗೀ ಶ್ವರನಿಗೆ ಮತ್ತಾವ ಬಂಧುಬಳಗವಾಗಲೀ, ಆಸ್ತಿಪಾಸ್ತಿಗಳಾಗಲೀ ಇಲ್ಲ ವೆಂದೂ ಆ ಮಾತುಕಥೆಗಳಲ್ಲಿ ಭೈರವಿಗೆ ತಿಳಿಯಿತು. ಸುಮಾರು ನೂರು ಇನ್ನೂರು ಗಜ ದೂರದಲ್ಲಿ ಆ ಗುಡಿಸಲು ಸಿಕ್ಕಿತು. ಮಲ್ಲಿಗ ಮ್ಮನು ಗುಡಿಸಿಲಿನ ಬಾಗಿಲಿನಲ್ಲಿ ನಿಂತು ಮೂರುಬಾರಿ ಚಪ್ಪಾಳೆ ತಟ್ಟಿ ದಳು. ಸ್ವಲ್ಪಹೊತ್ತಿನೊಳಗಾಗಿ ಬಾಗಿಲು ತೆರೆಯಿತು. ಯೋಗೀಶ್ವರನು

ಮೊದಲು ಮಲ್ಲಿಗಮ್ಮನನ್ನು ಕಂಡನು. ಆಗ ಅವನ ಮುಖದಲ್ಲಿ ಸೂಸಿದ ಸಂತಸವು ಭೈರವಿಯನ್ನು ಕಾಣುತ್ತಲೇ ಭಯಂಕರ ರೂಪವನ್ನು ತಾಳಿತು. ಅವನು ಮೌನವಾಗಿ ಗುಡಿಸಿಲಿನೊಳಕ್ಕೆ ಸರಿದನು. ಮಲ್ಲಿಗಮ್ಮನು ನಿಶ್ಶಂಕಳಾಗಿ ಭೈರವಿಯನ್ನು ಜೊತೆಯಲ್ಲಿ ಕರೆದು ಕೊಂಡು ಗುಡಿಸಿಲಿನೊಳಕ್ಕೆ ಪ್ರವೇಶಿಸಿದಳು. ಮಲ್ಲಿಗಮ್ಮನು ಯೋಗೀಶ್ವರನನ್ನು ಕಂಡು, "ಗುರುಗಳೇ, ಇವಳೊಬ್ಬ ವೇದಾಂತಿ, ಸರ್ವಸಂಗ ಪರಿತ್ಯಾಗಮಾಡಿದ ಯೋಗಿನಿ. ಹರನಾಮಗಳನ್ನು ಇಂಪಾಗಿ ಹಾಡುತ್ತಾಳೆ, ಕಣಿ ಹೇಳುತ್ತಾಳೆ. ಇಂದು ಬೆಳಗ್ಗೆ ನಮ್ಮ ಮನೆಗೆ ಬಂದಳು. ಸಂಧ್ಯಾಕಾಲ ಹೊರಟುಹೋಗುತ್ತಾಳೆ. ತಮ್ಮ ಭೇಟಿಮಾಡಿಸೋಣವೆಂದು ಇಲ್ಲಿಗೆ ಕರೆತಂದೆ" ಎಂದು ನಗುತ್ತಾ ಹೇಳಿದಳು. ಯೋಗೀಶ್ವರನು ಭೈರವಿಯನ್ನು ದುರದುರನೆ ನೋಡುತ್ತಾ ಇಬ್ಬರನ್ನೂ ಕುಳಿತುಕೊಳ್ಳುವಂತೆ ಸಂಕೇತಮಾಡಿದನು. ಭೈರವಿಯ ವೇಷಭೂಷಣಗಳು ಯೋಗೀಶ್ವರನ ಕಣ್ಣುಗಳನ್ನು ಮೋಸಮಾಡಲಾರದೇ ಹೋದವು. ಕ್ಷಣಾರ್ಧದಲ್ಲಿ ಇವಳೊಬ್ಬ ಅಂತಃಪುರ ವಿಲಾಸಿನಿಯೆಂದು ಕಂಡುಕೊಂಡನು. ಆದರೆ ಈ ಮಾಯಾವೇಷವು ಅವನಿಗೆ ಆಶ್ಚರ್ಯವನ್ನುಂಟುಮಾಡಿತು. ಇವಳು ಮಲ್ಲಪ್ಪನ ಮನೆಗೆ ಬಂದವಳಲ್ಲವೆಂದೂ, ತನ್ನ ಅಂತರಂಗ ಭೇದನೆಗಾಗಿಯೇ ಇಲ್ಲಿಗೆ ಬಂದಿರುವ ಗುಪ್ತಚಾರಿಣಿಯೆಂದೂ ನಿಶ್ಚಯಿಸಿಕೊಂಡನು. 'ಇದರಿಂದ ನನಗೇನು ಹಾನಿ? ಇವಳು ಶತೃಪಕ್ಷದವಳಾದರೆ ಕತ್ತರಿಸಿ ತುಂಡು ತುಂಡುಮಾಡಿ, ಈ ತೋಟದಲ್ಲಿ ಮಣ್ಣಿನೊಳಗೆ ಮಣ್ಣುಮಾಡುತ್ತೇನೆ. ಹಾಗಿಲ್ಲದಿದ್ದರೆ ಇವಳೇಕೆ ನನ್ನನ್ನು ಹುಡುಕಿಕೊಂಡು ಬರಬೇಕು? ಮಂತ್ರಿ ರಾಮಕೃಷ್ಣರ ಹೊರತಾಗಿ ಮತ್ತಾರಿಗೂ ನಾನಿಲ್ಲಿರುವುದು ಗೊತ್ತಿಲ್ಲ. ಇರಲಿ, ಅಭಿರಾಮಸ್ವಾಮಿಯು ಏನಾದರೂ ನನ್ನನ್ನು ಪತ್ತೆಹಚ್ಚುವ ತಂತ್ರವನ್ನು ಹೂಡಿರಬಹುದೇ? ಆ ಮಾಯಾವಿಯಿಂದ ನಿಯುಕ್ತಳಾಗಿರುವ ಮೋಹಿನಿ ಇವಳಾಗಿರಬಹುದೇ? ಹೆಣ್ಣಿಗೆ ಮರುಳಾಗಿ ಮೋಸಹೋಗುವ ಹೇಡಿಯೇ ನಾನು?' ಎಂದು ಚಿಂತಿಸತೊಡಗಿದನು. ಸ್ವಲ್ಪ ಹೊತ್ತಿ

ನೊಳಗಾಗಿ ಮೌನವನ್ನು ಭೇದಿಸಿ ಯೋಗೀಶ್ವರನು ಭೈರವಿಯ ಕಡೆಗೆ ತಿರುಗಿನೋಡಿ, "ಭೈರವಿ, ನಿನ್ನ ಹೆಸರೇನು? ಇಲ್ಲಿಗೇಕೆ ಬಂದೆ?" ಎಂದು ಪ್ರಶ್ನೆಮಾಡಿದನು.

ಭೈರವಿಯು ಈ ಯೋಗೀಶ್ವರನನ್ನು ಕಂಡು ಭಯಪಡಲಿಲ್ಲ. ಯೋಗಿಯು ಮೌನವಾಗಿದ್ದಾಗ ಅವಳು ಆಪಾದಮಸ್ತಕವಾಗಿ ಯೋಗಿಯನ್ನು ನೋಡುತ್ತಿದ್ದಳು. ಈ ತರುಣನು ಆ ಮಹಾಪುರುಷನೆಂದು ಲೆಕ್ಕಹಾಕಿಕೊಂಡಳು. ತನ್ನ ಸುಂದರ ರೂಪವನ್ನು ಮರೆಸಿಕೊಳ್ಳಲು ಏನೇನೋ ವಿಕಾರಗಳನ್ನು ಮಾಡಿಕೊಂಡಿದ್ದಾನೆಂದು ನಿಶ್ಚಯಿಸಿದಳು. ಅವನ ಹರಕು ಬಟ್ಟೆಗಳನ್ನು ನೋಡಿ ಮನಸ್ಸಿನಲ್ಲಿಯೇ ನಕ್ಕಳು.

"ಯೋಗೀಶ್ವರರೇ, ನನ್ನ ಹೆಸರು ಆನಂದಭೈರವಿ. ಸಂಪ್ರದಾಯವು ಕಾಪಾಲಿಕ ಸಂಪ್ರದಾಯ. ಉಪಾಸನೆಯು ಮಹಾಕಾಲನ ಉಪಾಸನೆ."

ಯೋಗಿಯು ನಗುತ್ತಾ "ಸಾಕು ಭೈರವಿ, ಚೆನ್ನಾಗಿ ಶಾಸ್ತ್ರವನ್ನು ಓದಿರುವಂತಿದೆ. ನಾನು ಹೆಸರು ಕೇಳಿದೆ ಅಷ್ಟೇ. ನೀನು ಆನಂದಭೈರವಿಯಾದರೂ ಸುಕುಮಾರಭೈರವಿಯಾದರೂ, ನನಗೆ ಒಂದೇ. ನೀನು ಇತ್ತಕಡೆ ಬಂದಿರುವ ಕಾರ್ಯವೇನು?" ಎಂದು ಕೇಳಿದನು.

"ಯೋಗೀಶ್ವರರೇ, ನನಗೆ ಕಾರ್ಯವೆಲ್ಲಿ ಬಂತು? ಭಿಕ್ಷಾಟನೆಯನ್ನು ಮಾಡುತ್ತಾ ಈ ವನಪ್ರದೇಶದಲ್ಲಿ ತಿರುಗಾಡುತ್ತಾ ಬಂದಿದ್ದೇನೆ. ಭಿಕ್ಷಾಟನೆಯನ್ನು ಮಾಡಲು ಈ ಮನೆಗೆ ಬಂದೆ. ಕಣಿ ಹೇಳುವುದೊಂದು ನನ್ನ ಹುಚ್ಚು. ಈ ಹುಡುಗಿಗೆ ಕಣಿ ಹೇಳಿದೆ. ಅವಳಿಗೆ ನನ್ನಮೇಲೆ ಪ್ರೀತಿಯುಂಟಾಗಿದೆ.' ನಿಮ್ಮಲ್ಲಿ ಕರೆತಂದು ಭೇಟಿಮಾಡಿಸಿದಳು. ಇಲ್ಲಿಗೆ ಬರುವಾಗ ಉತ್ಸಾಹದಿಂದ ಬಂದೆ. ನೀವು ನನ್ನನ್ನು ನ್ಯಾಯಾಸ್ಥಾನದಲ್ಲಿ ವಿಚಾರಿಸುವಂತೆ ವಿಚಾರಣೆಗೆ ಆರಂಭಮಾಡಿದ್ದೀರಿ. ಯೋಗಿಗಳೇ, ನಾನು ಅಪರಾಧಿಯಂತೆ ಕಾಣುತ್ತಿರುವೆನೇನು?"

ಯೋಗಿಯು "ಭೈರವಿ, ನೀನೇಕೆ ಅಪರಾಧಿ? ಇಂತಹ ಸೌಂದರ್ಯನಿಧಿಯು ಅಪರಾಧಿಯಾಗುವುದೆಂತು?" ಎಂದು ನಕ್ಕನು.

"ಯೋಗಿಗಳೇ, ನೀವೇನೆಂದುಕೊಂಡರೆ ನನಗೇನು? ನಿಮ್ಮ ದರ್ಶನದಿಂದ ನನಗೆಷ್ಟೋ ಸಂತೋಷವಾಯಿತು."

ಪುನಃ ಯೋಗಿಯು ನಗುತ್ತಾ "ಭೈರವಿ ನಿನ್ನ ಕಾರ್ಯವಾಯಿತಷ್ಟೆ" ಎಂದನು.

ಭೈರವಿಯು ಅವಾಕ್ಕಾದಳು. ಅವಳು ಈ ಯೋಗಿಯುಮುಂದೆ ಸೋತಿದ್ದಾಳೆ. ಕಣ್ಣು ತಿರುಗಿಸಿ ಕೈಮುಗಿದು ತಲೆಬಾಗಿದಳು.

ಯೋಗಿಯು ನಗುತ್ತಾ "ಭೈರವಿ, ನನ್ನ ಕೈನೋಡುವೆಯಾ?" ಎಂದು ಕೈಚಾಚಿದನು.

ಭೈರವಿಯು ಯೋಗೀಶ್ವರನ ಕೈತೆಗೆದು ನೋಡುತ್ತಾ, ಮುಗುಳು ನಗೆಯಿಂದ, "ಯೋಗೀಶ್ವರರೇ, ಈ ಕೈಯಿನ ರೇಖೆಗಳೆಲ್ಲಾ ಮಲ್ಲಿಗಮ್ಮನ ಕೈರೇಖೆಗಳಲ್ಲಿ ಪ್ರತಿಬಿಂಬಿಸುತ್ತವೆ. ಈ ಎರಡುರೇಖೆಗಳ ಫಲಾಫಲಗಳೂ ಒಂದೇ ಆಗಿವೆ" ಎಂದಳು.

ಯೋಗೀಶ್ವರನು ನಕ್ಕು ಕೈ ಹಿಂದಕ್ಕೆ ಸೆಳೆದುಕೊಂಡನು. ಮಲ್ಲಿಗಮ್ಮನು ನಾಚಿಕೆಯಿಂದ ಗುಡಿಸಿಲಿನಿಂದ ಓಡಿಹೋದಳು. ಭೈರವಿಯು ಪಿಸುಮಾತಿನಿಂದ "ನೋಡಿ ಯೋಗೀಶ್ವರರೇ, ನಾನು ತಮ್ಮನ್ನು ಕಂಡುಹಿಡಿಯುವುದರಲ್ಲಿ ತಪ್ಪುಮಾಡಿಲ್ಲವೆಂದು ನಂಬಿದ್ದೇನೆ. ತಾವು ರಾಯಭಾರಿ ವಿರೂಪಾಕ್ಷ. ಬಹು ಕಷ್ಟಪಟ್ಟು ಹುಡುಕಿದೆ. ಒಂದಾವರ್ತಿ ರಾಜಸಮ್ಮುಖದಲ್ಲಿ ತಮ್ಮ ಮುಖಚಹರೆಯನ್ನು ನೋಡಿದ್ದೇನೆ. ರಾಣಿ ಚೆಲುವಮ್ಮಣ್ಣಿಯವರು ತಮ್ಮ ಭೇಟಿಗೆ ಕಾತುರರಾಗಿದ್ದಾರೆ. ತಾವು ಬಂದು ಮಹಾರಾಣಿಯವರ ದರ್ಶನಮಾಡಿ" ಎಂದು ಹೇಳಿದಳು.

"ನಾನೆಲ್ಲಿಗೆ ಬರಬೇಕು?"

"ನಾಳೆ ಸಂಧ್ಯಾಕಾಲ ಮಲ್ಲಿಕಾರ್ಜುನ ಮಂದಿರಕ್ಕೆ ಬನ್ನಿರಿ."

ಭೈರವಿಯು ಬಂದ ಕಾರ್ಯವು ಪೂರೈಸಿತು. ಜಗ್ಗನೆ ಹೊರಗೆದ್ದು ಬಂದು ಹುಡುಗಿಯನ್ನು ಹುಡುಕಿದಳು. ಮಲ್ಲಿಗಮ್ಮನು ಮರದ ಮರೆಯಲ್ಲಿ ಔತುಕೊಂಡಿದ್ದಳು. ಓಡಿಬಂದು ಭೈರವಿಯನ್ನು

ಆಲಂಗಿಸಿದಳು. ಭೈರವಿಯು ಮಲ್ಲಿಗಮ್ಮನ ಕೈಹಿಡಿದುಕೊಂಡು "ಮಗಳೇ ಬಾ, ಯೋಗೀಶ್ವರರಿಂದ ಅಪ್ಪಣೆಪಡೆದು ಹೋಗೋಣ" ಎಂದಳು. ಮಲ್ಲಿಗಮ್ಮನು ನಾಚಿಕೆಯಿಂದ ಕೆಂಪೇರಿದ ಮುಖವುಳ್ಳವಳಾಗಿ ತರಳಿತ ನಯನಗಳನ್ನು ಅರಳಿಸುತ್ತಾ "ಭೈರವಿ, ನಾನೊಲ್ಲೆ. ಆ ಗುಡಿಸಿಲಿಗೆ ಪುನಃ ನಾನು ಕಾಲಿಡುವುದಿಲ್ಲ. ನೀನು ನಾಚಿಕೆಯಿಲ್ಲದೆ ಏನೇನೋ ಮಾತನಾಡುತ್ತಿ" ಎಂದು ಹೇಳುತ್ತಾ ಮುಂದುಮುಂದಕ್ಕೆ ಹೆಜ್ಜೆಯಿಟ್ಟಳು. ಭೈರವಿಯು ಹುಡುಗಿಯನ್ನು ಗುಡಿಸಿಲಿನೊಳಗೆ ಕರೆತಂದು ಭಕ್ತಿಭಾವದಿಂದ ಯೋಗೀಶ್ವರನನ್ನು ವಂದಿಸಿ ಹೊರಡಲು ಅಪ್ಪಣೆ ಬೇಡಿದಳು.

ಯೋಗೀಶ್ವರನು ಮಂದಹಾಸಮುಖದಿಂದ, "ಭೈರವಿ, ನೀನು ಕೈ ನೋಡಿ ಸಾಮುದ್ರಿಕ ಶಾಸ್ತ್ರವನ್ನು ಹೇಳಿದೆ. ನಿನಗೆ ಕೊಡಲು ನನ್ನಲ್ಲೇನೂ ಇಲ್ಲ" ಎಂದು ಹೇಳಿ ಕೈಯೆತ್ತಿ ಹರಸಿದನು.

ಭೈರವಿಯು "ಯೋಗೀಶ್ವರರೇ, ನನ್ನ ಶಾಸ್ತ್ರಕ್ಕೆ ವರಹಾ ಕೊಡುತ್ತಾರೇನು? ತಾವ್ಯಾದ ಕಾಸುಗಳನ್ನು ಕೊಡುತ್ತಾರೆ. ಈ ಮಲ್ಲಿಗಮ್ಮನೇ ಶಾಸ್ತ್ರದ ಕಾಸು ಕೊಡುತ್ತಾಳೆ ಬಿಡಿರಿ." ಎಂದು ಹೇಳಿದಳು. ಮಲ್ಲಿಗಮ್ಮನು ನಾಚಿಕೆಯಿಂದ ಬಾಗಿದ ತಲೆಯನ್ನು ಎತ್ತಲಿಲ್ಲ. ಭೈರವಿಯು ಯೋಗೀಶ್ವರನಿಗೆ ಕಣ್ಣುಸನ್ನೆಮಾಡಿ ಹುಡುಗಿಯನ್ನು ಕೈ ಹಿಡಿದು ಕರೆದುಕೊಂಡು ಹೊರಟುಹೋದಳು.

ಸಂಧ್ಯಾಕಾಲವು ಸಮಿಾಪಿಸುತ್ತಿತ್ತು. ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗುವ ಅರುಣ ಪ್ರಭೆಯು ಗಗನಾಂತರಾಳದಿಂದ ಭೂಮಿಯ ಮೇಲೆ ಚೆಲ್ಲುತ್ತಿದ್ದಿತು. ಅಂತಹ ಸಂಧ್ಯಾಸಮಯದಲ್ಲಿ ಭೈರವಿಯು ಮಲ್ಲಿಗಮ್ಮನ ಅಪ್ಪಣೆಯನ್ನು ಪಡೆದು ಮಲ್ಲಪ್ಪನನ್ನು ಹರಸಿ ಆ ಮನೆಯಿಂದ ಹೊರಟಳು. ಹೊರಡುವಾಗ ಮಲ್ಲಿಗಮ್ಮನು ಸಜಲನಯನೆಯಾಗಿ "ಭೈರವಿ, ಮತ್ತೊಂದು ದಿನ ನಮ್ಮ ಮನೆಗೆ ಬಾ" ಎಂದು ಗದ್ಗದ ಕಂಠದಿಂದ ನುಡಿದಳು. ಭೈರವಿಯು ತನ್ನ ಬುಡುಬುಡಿಕೆಯನ್ನು ಬಾರಿಸುತ್ತಾ ಸಂಧ್ಯಾರುಣಪ್ಲಾವಿತವಾದ ಹರಿದ್ವರ್ಣವಿಶೋಭಿತ

ಮಲಯಾನಿಲ ಸುವಾಸಿತವಾದ ವನಾಂತರಾಳದಲ್ಲಿ ಅಂತರ್ಧಾನಳಾಗಿ ಹೋದಳು.

---

೭

## ರಾಣಿಯ ವಿಲಾಸ

ಮಲ್ಲಿಕಾರ್ಜುನ ಮಂದಿರದಲ್ಲಿ ಯಥಾಪ್ರಕಾರ ಪೂಜೆ, ನೈವೇದ್ಯ, ದೀಪಾರಾಧನೆ, ಅನ್ನದಾನ ಇವೆಲ್ಲವೂ ನಡೆಯುತ್ತಿವೆ. ಇಂತಹ ದೇವ ಮಂದಿರಗಳಲ್ಲಿ ಯಾವುದೋ ಒಂದು ವಿಧವಾದ ನಿತ್ಯವೈಭವಗಳ ಸಡಗರ. ಇಂತಹ ವೈಭವಗಳಿಂದಲೇ ದೇವರ ಮಹಿಮೆಯು ಹೆಚ್ಚುತ್ತದೆಂದು ಜನರು ಅಂದುಕೊಳ್ಳುವರು. ಈ ದೇವಮಂದಿರದಲ್ಲಿ ಬಂದು ಸೇವೆ ಸಲ್ಲಿಸುವವರೆಲ್ಲರೂ ಭಕ್ತಿಭಾವದಿಂದಲೇ ಬರುವರೆಂದು ಹೇಳಲಾಗುವುದಿಲ್ಲ. ಭಕ್ತರೇ ಇಲ್ಲವೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಮಹಾದೇವನಪೂಜೆ, ದೀಪಾರಾಧನೆ, ವೈದಿಕರ ವೇದಘೋಷ, ಇವೆಲ್ಲವೂ ಭಕ್ತಿಯ ವಾತಾವರಣವನ್ನೇನೋ ಉಂಟುಮಾಡುತ್ತವೆ.

ಇಂದು ದೀಪಾರಾಧನೆಯ ಸಮಯಕ್ಕೆ ಭೈರವಿಯು ಬಂದು ಭಕ್ತವೃಂದದಲ್ಲಿ ಸೇರಿದ್ದಳು. ಅವಳ ಮನಸ್ಸು ಶಾಂತವಾಗಿದ್ದಿತೋ ಚಂಚಲವಾಗಿದ್ದಿತೋ ಹೇಳುವುದು ಕಷ್ಟ. ಕಣ್ಣುಗಳಲ್ಲಿ ಮಾತ್ರ ಚಾಂಚಲ್ಯ. ಎಲ್ಲಕಡೆಯೂ ತಿರುಗಿ ನೋಡುತ್ತಿದ್ದಳು. ಯಾವುದೋ ಒಂದು ವಾಂಛಿತವಸ್ತುವನ್ನು ಆ ಕಣ್ಣುಗಳು ಹುಡುಕುತ್ತಿರುವಂತೆ ಬೋಧೆಯಾಗುತ್ತಿದ್ದಿತು. ಆದರೆ ಎಲ್ಲಿಯೂ ಆ ವಸ್ತುವನ್ನು ಕಾಣದೇ ಶೂನ್ಯ, ನಿರಾಶೆಗಳಿಂದ ಆ ದೃಷ್ಟಿಯು ಹಿಂತಿರುಗುತ್ತಿದ್ದಿತು. ಭೈರವಿಯು ನಿರಾಶಳಾಗಿ ದೇವಮಂದಿರದಿಂದ ಹೊರಟಳು. ಹೊರಗಡೆ ಪ್ರಾಕಾರದಲ್ಲಿ ನಾನಾ ಕಡೆಗಳಲ್ಲಿ ಅನ್ನದಾನವು ನಡೆಯುತ್ತಿದ್ದಿತು.

ಅಲ್ಲೆಲ್ಲಾ ತಿರುಗಿ ನೋಡಿದಳು. ಎಲ್ಲಿಯೂ ಕಾಣಲಿಲ್ಲ. ಆ ಭಕ್ತವೃಂದದಲ್ಲಿ ಅಂತಹವರು ಎಷ್ಟೋ ಮಂದಿ ಬಂದು ಹೋಗುವ ವಾಡಿಕೆ. ಭೈರವಿಯನ್ನು ಯಾರೂ ಗಮನಿಸಲಿಲ್ಲ.

ಭೈರವಿಯು ಆ ಸ್ಥಳದಲ್ಲೆಲ್ಲಾ ಸುತ್ತಿ ನೋಡಿ ಪ್ರಾಕಾರದ ಗೋಪುರದ್ವಾರಕ್ಕೆ ಬಂದಳು. ಅಲ್ಲಿ ಬಹುಮಂದಿ ಅಂಗಹೀನರು ಕುಳಿತುಕೊಂಡು ದೇವರನಾಮವನ್ನು ಅರಚುತ್ತಾ ಭಕ್ತಾದಿಗಳನ್ನು ಆಕರ್ಷಿಸುತ್ತಿದ್ದರು. ಅಲ್ಲಿ ಆ ದೀನದರಿದ್ರರಿಗೆ ಯಾರೋ ಕಾಸುಗಳನ್ನು ಕೊಡುತ್ತಿದ್ದರು. ಭೈರವಿಯ ದೃಷ್ಟಿಯು ಅತ್ತಕಡೆಗೆ ಹೋಯಿತು. ಭೈರವಿಯು ಆ ಮನುಷ್ಯನನ್ನು ಗುರುತಿಸಿದಳು. ತಾನೂ ಒಂದು ಮಾರು ದೂರದಲ್ಲಿ ಹೋಗಿ ನೆಲದಮೇಲೆ ಕುಳಿತುಕೊಂಡು ದೇವರ ನಾಮವನ್ನು ಕೂಗತೊಡಗಿದಳು.

ಭಿಕ್ಷುಕರಿಗೆ ದಾನ ನೀಡುತ್ತಿದ್ದ ಮಹಾಪುರುಷನು ಅತ್ತಕಡೆ ಕಿವಿಗೊಟ್ಟು ಆಲೈಸಿದನು. ಭೈರವಿಯ ಕಂಠವೆಂದು ಅರಿತುಕೊಳ್ಳಲು ತಡವಾಗಲಿಲ್ಲ. ಮೆಲ್ಲಮೆಲ್ಲನೆ ಭೈರವಿಯು ಇದ್ದ ಕಡೆಗೆ ಸರಿದು ಹೋದನು. ಚೀಲದಿಂದ ಒಂದು ಸ್ವರ್ಣ ಮುದ್ರೆಯನ್ನು ತೆಗೆದು ಭೈರವಿಯು ಎತ್ತಿಹಿಡಿದ ಕಪಾಲದಲ್ಲಿ ಹಾಕಿದನು. ಭೈರವಿಯು ಕಣ್ಣೆತ್ತಿ ಓರೆಗಣ್ಣಿನಿಂದ ಅವನನ್ನು ನೋಡಿದಳು. ಅವನು ಸಣ್ಣ ನಗುವನ್ನು ನಕ್ಕು ಮುಂದಕ್ಕೆ ಹೊರಟುಹೋದನು.

ಆ ಪ್ರದೇಶದಿಂದ ಆ ಪುರುಷನು ಬೇಗಬೇಗ ನಡೆದು ಮುಂದೆ ಮುಂದೆ ಹೋಗುತ್ತಾ ಹಿಂತಿರುಗಿ ನೋಡುತ್ತಾ ಮುಂದುವರಿದು ದೂರ ಹೋಗಿ ನಿಂತನು. ಭೈರವಿಯು ಹಿಂದೆ ಬಂದಂತೆ ಅವನಿಗೆ ಬೋಧೆಯಾಗಲಿಲ್ಲ. ಆಗ ಆ ತರುಣನು ಆಶ್ಚರ್ಯಚಕಿತನಾಗಿ ಹಾಗೆಯೇ ಅಬೋಧನಾಗಿ ನೋಡುತ್ತಾ ನಿಂತನು. ಸ್ವಲ್ಪ ಹೊತ್ತಿನೊಳಗಾಗಿ ಬೆನ್ನಿನ ಮೇಲೆ ಯಾರೋ ಚಪ್ಪರಿಸಿದರು. ನೇತ್ರಾಹತನಾದಂತೆ ಬೆಚ್ಚಿಬಿದ್ದು ಹಿಂತಿರುಗಿ ನೋಡಿದನು. ಭೈರವಿಯು ಗಹಗಹಿಸಿ ನಕ್ಕಳು.

ತರುಣನು " ಭೈರವಿ, ನೀನು ನನ್ನ ದಾರಿ ಹಿಡಿದು ನನ್ನ

ಹಿಂದೆಯೇ ಬರುವೆಯೆಂದು ಭಾವಿಸಿದೆ. ಹಿಂತಿರುಗಿ ನೋಡಿದರೆ ನೀನು ಇರಲಿಲ್ಲ. ಎತ್ತಕಡೆಯಿಂದ ನೀನು ಬಂದೆ?" ಎಂದು ಕೇಳಿದನು.

"ವಿರೂಪಾಕ್ಷ, ಈ ಜನಸಮುದಾಯದಲ್ಲಿ ನಾವಿಬ್ಬರೇ ಅಲೆಯುತ್ತಿದ್ದೇವೆಂದು ಭಾವಿಸುವೆಯೇನು? ನಮ್ಮ ಮೇಲೆ ಎಷ್ಟೋ ಜನಗಳ ದೃಷ್ಟಿಯು ಬೀಳಬಹುದೆಂಬ ಸಂದೇಹವು ನಿನಗಾಗಿಲ್ಲವೇನು? ಪುರುಷರು ದೂರದೃಷ್ಟಿಯುಳ್ಳವರಲ್ಲ. ನಾನು ನಿನ್ನ ದಾರಿಯನ್ನು ಗುರುತಿಟ್ಟುಕೊಂಡು ಬೇರೊಂದು ಮಾರ್ಗದಿಂದ ಆ ದೇವಾಲಯ ಪ್ರಾಂಗಣವನ್ನು ದಾಟಿ ಆ ಸರೋವರವನ್ನು ಸುತ್ತಿಕೊಂಡು ಇಲ್ಲಿಗೆ ಬಂದೆ. ನೀನು ಇದೇ ಮಾರ್ಗದಲ್ಲಿ ನನ್ನನ್ನು ನಿರೀಕ್ಷಣೆಮಾಡುವೆಯೆಂಬುದನ್ನು ಬಲ್ಲೆ. ನಡೆ, ನಾವು ಹೋಗೋಣ" ಎಂದು ಮುಂದೆ ಮುಂದೆ ನಡೆದಳು.



ಭೈರವಿಯು ವಿರೂಪಾಕ್ಷನನ್ನು ಜೊತೆಯಲ್ಲಿ ಕರೆದುಕೊಂಡು ವೇಗವಾಗಿ ಕಾಲುದಾರಿಯಲ್ಲಿ ನಡೆದು ಬಿದನೂರಿನ ಕೋಟೆಯ ಬಾಗಿಲನ್ನು ಪ್ರವೇಶಮಾಡಿದಳು. ದೇವಾಲಯದಿಂದ ಬರುವ ಭಕ್ತಾದಿಗಳು ಮಾತ್ರ ಆ ಬಾಗಿಲಿನಲ್ಲಿ ಬರುತ್ತಿದ್ದರು. ಪಹರೆಯವರು ಯಾರು ಬರಲಿ, ಯಾರು ಹೋಗಲಿ, ಗಮನಿಸುತ್ತಿರಲಿಲ್ಲ. ಹೆಬ್ಬಾಗಿಲನ್ನು ದಾಟಿ ಕೋಟೆಯೊಳಗೆ ಹೋದಮೇಲೆ ಭೈರವಿಯು ಕೋಟೆಯೊಳಗಿದ್ದ ಒಂದು ಪಾಳುದೇವಾಲಯಕ್ಕೆ ವಿರೂಪಾಕ್ಷನನ್ನು ಕರೆದುಕೊಂಡು ಹೋದಳು. "ನೋಡು ವಿರೂಪಾಕ್ಷ, ನೀನು ಈ ರಾಜವೇಷದಿಂದ ಅರಮನೆಯೊಳಕ್ಕೆ ಬರಲು ಸಾಧ್ಯವಾಗುವುದಿಲ್ಲ. ನಿನ್ನ ಬಟ್ಟೆಗಳನ್ನೆಲ್ಲಾ ಇಲ್ಲಿ ತೆಗೆದಿಡು. ನಾನು ಕೊಡುವ ಬಟ್ಟೆಗಳನ್ನು ಧರಿಸಿಕೋ, ನಿನಗೆ ಹೇಗೆ ಒಪ್ಪುವುದೋ ನೋಡೋಣ" ಎಂದು ಹೇಳಿ ತನ್ನ ಕಂಕುಳಲ್ಲಿದ್ದ ಒಂದು ಬಟ್ಟೆಯ ಗಂಟನ್ನು ತೆಗೆದುಕೊಟ್ಟಳು.

ವಿರೂಪಾಕ್ಷನು ಆ ಗಂಟನ್ನು ಬಿಚ್ಚಿ ನೋಡಿದನು. ಅವೆಲ್ಲವೂ ಕಾಷಾಯವಸನಗಳು. ಉಡುವುದಕ್ಕೆ ಒಂದು ಪಂಚೆಯಿತ್ತು. ಅದನ್ನು ತೆಗೆದು ಉಟ್ಟುಕೊಂಡನು. ಕಂಠದಿಂದ ಪಾದಾವಲಂಬಿಯಾದ ಒಂದು

ಕಪಿನಿಯನ್ನು ತೊಟ್ಟನು. ತಲೆಗೆ ಒಂದು ಕುಲಾವಿಯನ್ನು ಧರಿಸಿದನು. ಮೇಲೆ ಒಂದು ಬಟ್ಟೆಯ ಮುಸುಕನ್ನು ಹಾಕಿಕೊಂಡನು. ತನ್ನ ಬಟ್ಟೆಗಳನ್ನೆಲ್ಲಾ ಒಂದು ಕಡೆ ಕಟ್ಟಿಟ್ಟನು.

ಭೈರವಿಯು ತನ್ನ ಚೀಲದಿಂದ ವಿಭೂತಿಯನ್ನು ತೆಗೆದುಕೊಟ್ಟು "ಮುಖದ ತುಂಬಾ ಈ ವಿಭೂತಿಯನ್ನು ಧರಿಸಿಕೋ, ಕೈಕಾಲುಗಳಿಗೆ ಈ ವಿಭೂತಿಯನ್ನು ಹಚ್ಚಿಕೋ" ಎಂದು ಹೇಳಿದಳು. ತನ್ನ ಕೊರಳಿನಿಂದ ತೆಗೆದು ಒಂದು ರುದ್ರಾಕ್ಷಮಾಲೆಯನ್ನು ಅವನ ಕೊರಳಿಗೆ ಹಾಕಿದಳು. ಕೈಯಲ್ಲಿ ಸಣ್ಣದೊಂದು ರುದ್ರಾಕ್ಷಮಾಲೆಯನ್ನು ಕೊಟ್ಟಳು. "ನೋಡು ಗುರುದೇವ, ನಾನು ಭೈರವಿ, ನೀನು ಜಂಗಮ. ನಾನು ನಿನ್ನನ್ನು ಗುರುದೇವನೆಂದೇ ಸಂಬೋಧನೆ ಮಾಡುತ್ತೇನೆ. ನೀನು ನನ್ನನ್ನು ಮಗಳೇ, ಮಗಳೇ ಎಂದು ಸಂಬೊಧನೆ ಮಾಡಬೇಕು" ಎಂದು ಹೇಳಿ ನಕ್ಕಳು.

ವಿರೂಪಾಕ್ಷನು ಭೈರವಿಯನ್ನು ನೋಡಿ "ಭೈರವಿ, ಈ ವೇಷವು ನನಗೆ ಒಪ್ಪುತ್ತದೆಯೇ? ಈ ಕಾಷಾಯ ವಸನಗಳೇಕೆ? ಈ ರುದ್ರಾಕ್ಷಮಾಲೆಗಳೇಕೆ?" ಎಂದು ಕೇಳಿದನು.

"ನೋಡು ಗುರುದೇವ, ನೀನು ಈಗ ಸಾಕ್ಷಾತ್ ಪರಶಿವನಂತೆ ಕಾಣುವೆ. ನಿನ್ನಂತಹ ಜಂಗಮರು ಎಷ್ಟೋಮಂದಿ ಬಿದನೂರಿನ ಅಂತಃಪುರದಲ್ಲಿ ಭಿಕ್ಷಕ್ಕಾಗಿ ಬರುವರು. ಪಹರೆಯವರಾಗಲೀ, ಉಳಿದ ಚಾಕರರಾಗಲೀ ಜಂಗಮರನ್ನು ಕಂಡರೆ ಭಕ್ತಿಭಾವದಿಂದ ಸರಿದು ದಾರಿ ಬಿಡುವರು. ನೀನು ಧೈರ್ಯವಾಗಿ ನನ್ನೊಡನೆ ಬಾ. ಧೈರ್ಯವಿರುವುದೇ?" ಎಂದಳು.

"ಧೈರ್ಯವಿಲ್ಲದೇ ಏನು? ಎಲ್ಲಿಗೆ ಬೇಕಾದರೂ ನಿನ್ನೊಡನೆ ಬರುವೆನು."

ಭೈರವಿಯು ಮೂಲೆಯಲ್ಲಿ ಮಿನುಗುತ್ತಿರುವ ದೀಪದ ಹತ್ತಿರ ಕರೆದೊಯ್ದು, "ನೋಡು, ಆ ದೀಪದ ತೈಲದಲ್ಲಿ ನಿನ್ನ ಮುಖವನ್ನು

ನೋಡಿಕೋ. ನಿನಗೆ ಈ ರೂಪವು ಎಷ್ಟು ಚೆನ್ನಾಗಿ ಒಪ್ಪುವುದೋ ನೋಡು" ಎಂದಳು.

ವಿರೂಪಾಕ್ಷನು ನಗುತ್ತಾ ಭೈರವಿಯ ಕೈಹಿಡಿದುಕೊಂಡು, "ಭೈರವಿ, ಎಣ್ಣೆಯಲ್ಲಿ ಮುಖವನ್ನು ನೋಡುವುದು ಅಮಂಗಳ. ನಾನು ನನ್ನ ಮುಖವನ್ನು ನೋಡಿಕೊಳ್ಳಬೇಕಾಗಿಲ್ಲ. ಈ ವೇಷವು ನಿನಗೊಪ್ಪಿದರೆ ನನಗೂ ಒಪ್ಪಿಗೆ" ಎಂದು ಹೇಳಿದನು.

ಭೈರವಿಯು ಆ ವಿರೂಪಾಕ್ಷನನ್ನು ಬಿಗಿಯಾಗಿ ತಬ್ಬಿಕೊಂಡು, "ನೋಡು ಗುರುದೇವ, ನಾನು ನಿನ್ನನ್ನು ಒಪ್ಪಿದ್ದೇನೆ. ಆದರೆ ಭಗವಂತನು ನಮ್ಮಿಬ್ಬರನ್ನೂ ಒಪ್ಪುತ್ತಿರುವನೋ ಇಲ್ಲವೋ ಹೇಳಲಾರೆ" ಎಂದು ಹೇಳುತ್ತಾ ಅವನ ಮುಖವನ್ನು ಚುಂಬಿಸಿದಳು.

ತರುಣನು ಅವಾಕ್ಕಾದನು. ಸ್ತಂಭಿತನಾದನು. ನಡುಗಿದನು. ಮೈಬೆವರಿತು. ಮುಖವು ಬೆಳ್ಳಗಾಯಿತು. ನಡುಗುವ ಧ್ವನಿಯಿಂದ "ಭೈರವಿ, ನೀನು ನನ್ನನ್ನು ಮೋಸಮಾಡಿ ಕರೆತಂದೆಯಾ? ನೀನು ನನ್ನನ್ನು ಕರೆತಂದುದು ಈ ಭಗ್ನಮಂದಿರಕ್ಕೇನು?" ಎಂದು ಕೇಳಿದನು.

ಭೈರವಿಯು ನಗುತ್ತಾ ಮತ್ತೊಮ್ಮೆ ಅವನ ಮುಖವನ್ನು ಚುಂಬಿಸಿ, "ಅಲ್ಲ ಗುರುದೇವ, ಈ ಭಗ್ನಮಂದಿರಕ್ಕಲ್ಲ ನಾನು ನಿನ್ನನ್ನು ಕರೆತಂದದ್ದು. ನಾನು ರಾಜಮಂದಿರಕ್ಕೆ ನಿನ್ನನ್ನು ಕರೆತಂದಿದ್ದೇನೆ. ನಡೆ. ನನ್ನೊಡನೆ ಬಾ. ನಾನು ರಾಣಿಯ ಸೌಧಕ್ಕೆ ಕರೆದೊಯ್ಯುತ್ತೇನೆ" ಎಂದು ಹೇಳುತ್ತಾ ಅವನ ಕೈಹಿಡಿದು ದರದರನೆ ಆ ಭಗ್ನ ಮಂದಿರದಿಂದ ಹೊರಗೆಳೆದುಕೊಂಡುಹೋಗಿ ಅಲ್ಲಿ ಕೈಬಿಟ್ಟಳು.

ಮೇಲೆ ಸ್ವಚ್ಛವಾದ ಆಕಾಶದಲ್ಲಿ ನಕ್ಷತ್ರಗಳು ಮಿನುಮಿನು ಮಿನುಗುತ್ತಿದ್ದವು. ಚಂದ್ರನು ತನ್ನ ಅರ್ಧಕಳೇಬರದಿಂದ ಸುಧೆಯನ್ನು ಭೂಮಿಯಮೇಲೆ ಚೆಲ್ಲಿ ನಗುತ್ತಿದ್ದನು. ಆ ನಸುಬೆಳಕಿನಲ್ಲಿ ಭೈರವಿಯೂ ವಿರೂಪಾಕ್ಷನೂ ಒಬ್ಬರಮುಖವನ್ನೊಬ್ಬರು ನೋಡಿದರು. ಇಬ್ಬರೂ ನಕ್ಕರು.

ಕಪಿನಿಯನ್ನು ತೊಟ್ಟನು. ತಲೆಗೆ ಒಂದು ಕುಲಾವಿಯನ್ನು ಧರಿಸಿದನು. ಮೇಲೆ ಒಂದು ಬಟ್ಟೆಯ ಮುಸುಕನ್ನು ಹಾಕಿಕೊಂಡನು. ತನ್ನ ಬಟ್ಟೆಗಳನ್ನೆಲ್ಲಾ ಒಂದು ಕಡೆ ಕಟ್ಟಿಟ್ಟನು.

ಭೈರವಿಯು ತನ್ನ ಚೀಲದಿಂದ ವಿಭೂತಿಯನ್ನು ತೆಗೆದುಕೊಟ್ಟು "ಮುಖದ ತುಂಬಾ ಈ ವಿಭೂತಿಯನ್ನು ಧರಿಸಿಕೋ, ಕೈಕಾಲುಗಳಿಗೆ ಈ ವಿಭೂತಿಯನ್ನು ಹಚ್ಚಿಕೋ" ಎಂದು ಹೇಳಿದಳು. ತನ್ನ ಕೊರಳಿನಿಂದ ತೆಗೆದು ಒಂದು ರುದ್ರಾಕ್ಷಮಾಲೆಯನ್ನು ಅವನ ಕೊರಳಿಗೆ ಹಾಕಿದಳು. ಕೈಯಲ್ಲಿ ಸಣ್ಣದೊಂದು ರುದ್ರಾಕ್ಷಮಾಲೆಯನ್ನು ಕೊಟ್ಟಳು. "ನೋಡು ಗುರುದೇವ, ನಾನು ಭೈರವಿ, ನೀನು ಜಂಗಮ. ನಾನು ನಿನ್ನನ್ನು ಗುರುದೇವನೆಂದೇ ಸಂಬೋಧನೆ ಮಾಡುತ್ತೇನೆ. ನೀನು ನನ್ನನ್ನು ಮಗಳೇ, ಮಗಳೇ ಎಂದು ಸಂಬೊಧನೆ ಮಾಡಬೇಕು" ಎಂದು ಹೇಳಿ ನಕ್ಕಳು.

ವಿರೂಪಾಕ್ಷನು ಭೈರವಿಯನ್ನು ನೋಡಿ "ಭೈರವಿ, ಈ ವೇಷವು ನನಗೆ ಒಪ್ಪುತ್ತದೆಯೇ? ಈ ಕಾಷಾಯ ವಸನಗಳೇಕೆ? ಈ ರುದ್ರಾಕ್ಷಮಾಲೆಗಳೇಕೆ?" ಎಂದು ಕೇಳಿದನು.

"ನೋಡು ಗುರುದೇವ, ನೀನು ಈಗ ಸಾಕ್ಷಾತ್ ಪರಶಿವನಂತೆ ಕಾಣುವೆ. ನಿನ್ನಂತಹ ಜಂಗಮರು ಎಷ್ಟೋಮಂದಿ ಬಿದನೂರಿನ ಅಂತಃಪುರದಲ್ಲಿ ಭಿಕ್ಷಕ್ಕಾಗಿ ಬರುವರು. ಪಹರೆಯವರಾಗಲೀ, ಉಳಿದ ಚಾಕರರಾಗಲೀ ಜಂಗಮರನ್ನು ಕಂಡರೆ ಭಕ್ತಿಭಾವದಿಂದ ಸರಿದು ದಾರಿ ಬಿಡುವರು. ನೀನು ಧೈರ್ಯವಾಗಿ ನನ್ನೊಡನೆ ಬಾ. ಧೈರ್ಯವಿರುವುದೇ?" ಎಂದಳು.

"ಧೈರ್ಯವಿಲ್ಲದೇ ಏನು? ಎಲ್ಲಿಗೆ ಬೇಕಾದರೂ ನಿನ್ನೊಡನೆ ಬರುವೆನು."

ಭೈರವಿಯು ಮೂಲೆಯಲ್ಲಿ ಮಿನುಗುತ್ತಿರುವ ದೀಪದ ಹತ್ತಿರ ಕರೆದೊಯ್ದು, "ನೋಡು, ಆ ದೀಪದ ತೈಲದಲ್ಲಿ ನಿನ್ನ ಮುಖವನ್ನು

ನೋಡಿಕೋ. ನಿನಗೆ ಈ ರೂಪವು ಎಷ್ಟು ಚೆನ್ನಾಗಿ ಒಪ್ಪುವುದೋ ನೋಡು" ಎಂದಳು.

ವಿರೂಪಾಕ್ಷನು ನಗುತ್ತಾ ಭೈರವಿಯ ಕೈಹಿಡಿದುಕೊಂಡು, "ಭೈರವಿ, ಎಣ್ಣೆಯಲ್ಲಿ ಮುಖವನ್ನು ನೋಡುವುದು ಅಮಂಗಳ. ನಾನು ನನ್ನ ಮುಖವನ್ನು ನೋಡಿಕೊಳ್ಳಬೇಕಾಗಿಲ್ಲ. ಈ ವೇಷವು ನಿನಗೊಪ್ಪಿದರೆ ನನಗೂ ಒಪ್ಪಿಗೆ" ಎಂದು ಹೇಳಿದನು.

ಭೈರವಿಯು ಆ ವಿರೂಪಾಕ್ಷನನ್ನು ಬಿಗಿಯಾಗಿ ತಬ್ಬಿಕೊಂಡು, "ನೋಡು ಗುರುದೇವ, ನಾನು ನಿನ್ನನ್ನು ಒಪ್ಪಿದ್ದೇನೆ. ಆದರೆ ಭಗವಂತನು ನಮ್ಮಿಬ್ಬರನ್ನೂ ಒಪ್ಪುತ್ತಿರುವನೋ ಇಲ್ಲವೋ ಹೇಳಲಾರೆ" ಎಂದು ಹೇಳುತ್ತಾ ಅವನ ಮುಖವನ್ನು ಚುಂಬಿಸಿದಳು.

ತರುಣನು ಅವಾಕ್ಕಾದನು. ಸ್ತಂಭಿತನಾದನು. ನಡುಗಿದನು. ಮೈಬೆವರಿತು. ಮುಖವು ಬೆಳ್ಳಗಾಯಿತು. ನಡುಗುವ ಧ್ವನಿಯಿಂದ "ಭೈರವಿ, ನೀನು ನನ್ನನ್ನು ಮೋಸಮಾಡಿ ಕರೆತಂದೆಯಾ? ನೀನು ನನ್ನನ್ನು ಕರೆತಂದುದು ಈ ಭಗ್ನಮಂದಿರಕ್ಕೇನು?" ಎಂದು ಕೇಳಿದನು.

ಭೈರವಿಯು ನಗುತ್ತಾ ಮತ್ತೊಮ್ಮೆ ಅವನ ಮುಖವನ್ನು ಚುಂಬಿಸಿ, "ಅಲ್ಲ ಗುರುದೇವ, ಈ ಭಗ್ನಮಂದಿರಕ್ಕಲ್ಲ ನಾನು ನಿನ್ನನ್ನು ಕರೆತಂದದ್ದು. ನಾನು ರಾಜಮಂದಿರಕ್ಕೆ ನಿನ್ನನ್ನು ಕರೆತಂದಿದ್ದೇನೆ. ನಡೆ. ನನ್ನೊಡನೆ ಬಾ. ನಾನು ರಾಣಿಯ ಸೌಧಕ್ಕೆ ಕರೆದೊಯ್ಯುತ್ತೇನೆ" ಎಂದು ಹೇಳುತ್ತಾ ಅವನ ಕೈಹಿಡಿದು ದರದರನೆ ಆ ಭಗ್ನಮಂದಿರದಿಂದ ಹೊರಗೆಳೆದುಕೊಂಡುಹೋಗಿ ಅಲ್ಲಿ ಕೈಬಿಟ್ಟಳು.

ಮೇಲೆ ಸ್ವಚ್ಛವಾದ ಆಕಾಶದಲ್ಲಿ ನಕ್ಷತ್ರಗಳು ಮಿನುಮಿನು ಮಿನುಗುತ್ತಿದ್ದವು. ಚಂದ್ರನು ತನ್ನ ಅರ್ಧಕಳೇಬರದಿಂದ ಸುಧೆಯನ್ನು ಭೂಮಿಯಮೇಲೆ ಚೆಲ್ಲಿ ನಗುತ್ತಿದ್ದನು. ಆ ನಸುಬೆಳಕಿನಲ್ಲಿ ಭೈರವಿಯೂ ವಿರೂಪಾಕ್ಷನೂ ಒಬ್ಬರಮುಖವನ್ನೊಬ್ಬರು ನೋಡಿದರು. ಇಬ್ಬರೂ ನಕ್ಕರು.

"ಗುರುದೇವ, ನಡೆ, ನನ್ನ ಜೊತೆಯಲ್ಲಿ ಬಾ. ಅರ್ಜುನನು ಹಿಂದೊಂದುಬಾರಿ ಇಂತಹ ವೇಷವನ್ನು ಧರಿಸಿದ್ದನೆಂಬುದನ್ನು ಕೇಳ ಬಲ್ಲೆಯಷ್ಟೆ?" ಎಂದು ಹೇಳಿ ಭೈರವಿಯು ಮುಂದೆಮುಂದೆ ನಡೆದಳು.

ಭೈರವಿಯೂ ಜಂಗಮನೂ ಅಂತಃಪುರದ ಹಿಂದಿನ ಬಾಗಿಲಿನಿಂದ ಪ್ರವೇಶಮಾಡಿದರು. ಪಹರೆಯವರು ಅವರನ್ನು ತಡೆಯಲಿಲ್ಲ. ಧಾರಾಳವಾಗಿ ಅಂತಃಪುರದ ಮೇಲಂತಸ್ತಿಗೆ ಹೋದರು. ಅಲ್ಲಿ ಭೈರವಿಯು ಗುಪ್ತದ್ವಾರದಿಂದ ಮಹಾರಾಣಿಯ ಅಂತರಂಗಮಹಲಿಗೆ ಆ ಜಂಗಮನನ್ನು ಕರೆದೊಯ್ದಳು

ಅಲ್ಲಿ ಒಂದು ಪ್ರಶಸ್ತವಾದ ಕೋಣೆ. ಆ ಕೋಣೆಯಲ್ಲಿ ನೆಲಕ್ಕೆ ರತ್ನಗಂಬಳಿಯು ಹಾಸಲ್ಪಟ್ಟಿದ್ದಿತು. ಮಖಮಲ್ಲಿನ ಲೋಡುದಿಂಬುಗಳು ಇಡಲ್ಪಟ್ಟಿದ್ದವು. ಗೋಡೆಯಲ್ಲಿ ಲಕ್ಷ್ಮಿ, ಸರಸ್ವತಿಯರ ಚಿತ್ರಗಳು ಅಲಂಕರಿಸಲ್ಪಟ್ಟಿದ್ದವು. ಒಂದು ಮೂಲೆಯಲ್ಲಿ ಕಾಲುಮಣೆಯಮೇಲೆ ದೀಪಸ್ತಂಭದಲ್ಲಿ ಸಣ್ಣದೀಪವು ಮಿನಗುತ್ತಿತ್ತು ಆ ಅಂತರ್ಗೃಹದಲ್ಲಿ ಗುರುದೇವನನ್ನು ಕುಳ್ಳಿರಿಸಿ ಭೈರವಿಯು ಅದೃಶ್ಯಳಾದಳು. ಇಷ್ಟು ಹೊತ್ತಿಗೆ ಅರಮನೆಯ ಗದ್ದಲಗಳೆಲ್ಲಾ ಶಾಂತವಾಗುತ್ತಿತ್ತು. ಆ ರಾತ್ರಿಯ ಸಮಯದಲ್ಲಿ ರಾಣಿಯು ಮೆಲ್ಲಡಿಯಿಡುತ್ತಾ ಆ ಕೋಣೆಯೊ ಳಗೆ ಬಂದುನಿಂತಳು. ಸನ್ಯಾಸಿಯು ತಲೆ ಎತ್ತಿ ನೋಡಿದನು. ಗಾಬರಿ ಯಿಂದೆದ್ದುನಿಂತು ಪ್ರಣಾಮಮಾಡಿದನು.

ಅನಂತರ ಜಂಗಮನು "ದೇವಿ, ತಮ್ಮ ಆಜ್ಞಾನುವರ್ತಿಯಾಗಿ ಇಲ್ಲಿಗೆ ಬಂದಿದ್ದೇನೆ. ಭೈರವಿಯು ಈ ವೇಷಾಂತರದಿಂದ ಇಲ್ಲಿಗೆ ಕರೆ ತಂದಳು. ಅಪ್ಪಣೆಯಂತೆ ನಡೆಯಲು ಈ ದಾಸನು ಸಿದ್ಧನಾಗಿದ್ದಾನೆ" ಎಂದು ಹೇಳಿದನು. ಮಧ್ಯೆ ಮಧ್ಯೆ ಅವನ ಕಂಠವು ಖುದ್ಧವಾಗುತ್ತಿತ್ತು. ದನಿಯಲ್ಲಿ ಕಂಪನವಿತ್ತು.

ರಾಣಿಯು ನಗುತ್ತಾ, "ರಾಯಭಾರಿಯೇ ಭಯಪಡಬೇಡ. ಆ ಸಖಿಯು ನನ್ನ ಆಜ್ಞೆಯಂತೆಯೇ ನಿನ್ನನ್ನು ಇಲ್ಲಿಗೆ ಕರೆತಂದಳು. ರಾಜಕಾರಣದಿಂದ ನಿನ್ನನ್ನು ಇಲ್ಲಿಗೆ ಕರೆಸಿದ್ದೇನೆ" ಎಂದಳು.

"ದೇವಿ, ಅಂತಹ ರಾಜಕಾರಣವಾವುದು? ಅಪ್ಪಣೆ ಕೊಡಿಸ ಬೇಕು."

"ನೋಡು ವಿರೂಪಾಕ್ಷ, ಅಂದು ಮಹಾಪ್ರಭುಗಳವರ ಸಮ್ಮುಖ ದಲ್ಲಿ ಯುದ್ಧಪ್ರಮೇಯವಿಲ್ಲವೆಂದು ನೀನು ಅರುಹಲಿಲ್ಲವೆ? ಮಹಾ ಸ್ವಾಮಿಗಳವರು ಮೈಸೂರುಯುದ್ಧವು ಬಂದೇಬಿಟ್ಟಿದೆಯೆಂದು ಹೇಳು ತ್ತಾರೆ. ಅದಕ್ಕಾಗಿ ಹಗಲಿರುಳೂ ಗ್ರಾಮಗ್ರಾಮಕ್ಕೆ ಸಂಚಾರ ಹೋಗಿ ಯೋಧರನ್ನು ಸಿದ್ಧಪಡಿಸುತ್ತಿದ್ದಾರೆ. ನೀನು ಮಹಾರಾಜರ ಸಮ್ಮುಖ ದಲ್ಲಿ ಸುಳ್ಳುಹೇಳಿದೆಯಾ?"

"ದೇವಿ, ತಾವು ಹೇಳುವ ಮಾತುಗಳು ಆಶ್ಚರ್ಯಕರವಾಗಿವೆ. ಮಂತ್ರಿ ರಾಮಕೃಷ್ಣರವರು 'ಹೈದರಲ್ಲೀಖಾನರವರು ನಗರದ ಮೇಲೆ ದಂಡೆತ್ತಿ ಬರುತ್ತಾರೆ'ಂದು ಹೇಳುತ್ತಾರೇನು? ಅವರು ನನ್ನ ರಾಯ ಭಾರವನ್ನು ಸುಳ್ಳೆಂದು ತೆಗಳುತ್ತಾರೇನು?"

"ವಿರೂಪಾಕ್ಷ, ಮಂತ್ರಿ ರಾಮಕೃಷ್ಣರ ಅಂತರಂಗವು ದುರ್ಭೇದ್ಯ ವಾದುದು. ಮಹಾರಾಜರವರಲ್ಲಿ ಅವರ ಭಕ್ತಿಯು ಅಪಾರವಾದುದು. ಆದರೆ ಮಹಾರಾಜರವರಿಂದಲಾಗಲೀ, ಮಹಾಮಂತ್ರಿಗಳಿಂದಾಗಲೀ ಈ ಅರ್ಥವನ್ನು ಹೊರಡಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಮಹಾ ಪ್ರಭುಗಳವರಿಗೆ ನಗರದ ರಕ್ಷಣೆಯಲ್ಲಿ ಎಷ್ಟು ಆದರವಿದೆಯೋ ನನಗೂ ಅಷ್ಟೇ ಅಭಿಮಾನವಿದೆ. ಆದುದರಿಂದ ನಾನು ನಿನ್ನನ್ನು ಕರೆಸಿದ್ದೇನೆ. ಅಂದು ಮಹಾರಾಜರ ಸಮ್ಮುಖದಲ್ಲಿ ನಿನ್ನನ್ನು ಕಂಡಾಗಿನಿಂದ ನನಗೆ ನಿನ್ನಮೇಲೆ ಏನೋ ಒಂದು ವಿಧವಾದ ಅಭಿಮಾನವು ಹುಟ್ಟಿದೆ. ನೀನು ಈ ರಾಯಭಾರದಲ್ಲಿ ಏನಾದರೂ ಎಳ್ಳಷ್ಟು ವಂಚನೆಯಿಟ್ಟಿದ್ದರೂ ಮಂತ್ರಿ ರಾಮಕೃಷ್ಣನು ನಿನ್ನ ಕುತ್ತಿಗೆಯನ್ನು ಕತ್ತರಿಸಿ ತಲೆಯನ್ನು ಹಾರಿಸುತ್ತಾನೆ. ರಾಮಕೃಷ್ಣನು ಎಂತಹ ಉದಾರ ಹೃದಯನೋ ಅಷ್ಟೇ ನಿಷ್ಕರುಣಿ. ಆದುದರಿಂದ ನನ್ನ ಹೃದಯದಲ್ಲಿ ಭಯವು ಹುಟ್ಟಿ ನಿನ್ನನ್ನು ಕರೆಸಿದ್ದೇನೆ."

"ದೇವಿಯವರೇ, ಈ ರಾಯಭಾರದಲ್ಲಿ ಎಳ್ಳಷ್ಟೂ ತಪ್ಪಿಲ್ಲ.

ಹೈದರನು ಮಹಾವಂಚಕ. ನನ್ನಲ್ಲಿ ಒಂದು ವಿಧವಾಗಿ ಮಾತನಾಡಿ ಕಾರ್ಯದಲ್ಲಿ ಮತ್ತೊಂದು ವಿಧವಾಗಿ ಎಣಿಸಿರಬಹುದು. ತಾಯೆ, ಅದರಿಂದ ಹಾನಿಯೇನು? ನಾನು ಹೋಗಿ ಮಹಾಮಂತ್ರಿಗಳವರಲ್ಲಿ ಕ್ಷಮಾಪ್ರಾರ್ಥನೆಯನ್ನು ಮಾಡಿ ರಣಕ್ಷೇತ್ರದಲ್ಲಿ ಹೈದರನೊಡನೆ ಯುದ್ಧಮಾಡಲು ಅಪ್ಪಣೆಯನ್ನು ಬೇಡುತ್ತೇನೆ. ನನ್ನ ರಾಯಭಾರದ ಸತ್ಯತೆಯನ್ನು ರಣಕ್ಷೇತ್ರದಲ್ಲಿ ತೋರಿಸುತ್ತೇನೆ."

ರಾಣಿಯು ನಗುತ್ತಾ, "ವಿರೂಪಾಕ್ಷ, ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲವೇ? ನೀನು ಈಗ ರಾಜಾಗ್ರಹಕ್ಕೆ ಪಾತ್ರನಾಗಿದ್ದೀಯೆ. ಕೆಲವುಕಾಲ ಗುಪ್ತಸ್ಥಾನದಲ್ಲಿ ಗುಪ್ತವಾಗಿರು. ಅಂಥಾ ಯುದ್ಧಪ್ರಮೇಯವು ಪ್ರಾಪ್ತವಾದರೆ ನಾನು ನಿನ್ನನ್ನು ಕರಸಿ ಮಹಾಪ್ರಭುಗಳವರಿಗೆ ಅನುಗ್ರಹಪಾತ್ರನನ್ನಾಗಿ ಮಾಡುತ್ತೇನೆ. ಅಂದು ಹೈದರನೊಡನೆ ಯುದ್ಧಮಾಡಿ ನಿನ್ನ ಪರಾಕ್ರಮವನ್ನು ತೋರುವಿಯಂತೆ" ಎಂದಳು.

ವಿರೂಪಾಕ್ಷನು ಅವಾಕ್ಕಾಗಿ ತಲೆತಗ್ಗಿಸಿ ನಿಂತುಕೊಂಡನು. ಚೆಲುವಮ್ಮಣ್ಣಿಯು ಅವನ ಕಡೆಗೆ ದುರುದುರನೆ ನೋಡಿದಳು. ಸಮಿಾಪಕ್ಕೆ ಹೋಗಿ ಅವನ ಕೈಹಿಡಿದು, "ವಿರೂಪಾಕ್ಷ, ನನ್ನ ಮಾತಿನಂತೆ ನಡೆಯುತ್ತೇನೆಂದು ವಾಗ್ದಾನಮಾಡು. ಅನ್ಯಾಯವಾಗಿ ನಿನ್ನ ಈ ದಿವ್ಯವಾದ ಸುಂದರಮೂರ್ತಿಯು ಗಲ್ಲಿಗೇರುವುದು ನನಗಿಷ್ಟವಿಲ್ಲ. ನೀನು ಈಗ ಗುಪ್ತವಾಗಿರು" ಎಂದಳು.

ಚೆಲುವಮ್ಮಣ್ಣಿಯ ಕರಸ್ಪರ್ಶದಿಂದ ವಿರೂಪಾಕ್ಷನ ಮೈ ರೋಮಾಂಚವಾಯಿತು. ತಲೆ ತಿರುಗಿತು. ಮಾತು ಹೊರಡದಾಯಿತು. ಅವಾಕ್ಕಾಗಿ ರಾಣಿಯಪಾದಗಳಮೇಲೆ ಬಿದ್ದನು. ರಾಣಿಯು ಅವನನ್ನು ಎರಡು ಕೈಗಳಿಂದಲೂ ಮೇಲಕ್ಕೆತ್ತಿದಳು. ಒಬ್ಬರ ಬಾಹುಬಂಧನದಲ್ಲಿ ಮತ್ತೊಬ್ಬರ ಶರೀರವು ವಿಲೀನವಾಯಿತು. ಪರಸ್ಪರ ಚುಂಬನಗಳಿಂದ ಇಬ್ಬರೂ ಉತ್ತೇಜಿತರಾದರು

ಮನಸಿಜನ ಶಕ್ತಿಯನ್ನು ಬಣ್ಣಿಸಬಲ್ಲವರಾರು? ಚೆಲುವಮ್ಮಣ್ಣಿಯು ಎಂದು ವಿರೂಪಾಕ್ಷನನ್ನು ಕಂಡಳೋ ಅಂದೇ ಅವಳ ಮನಸ್ಸಿನಲ್ಲಿ

ಪ್ರೇಮವು ಅಂಕುರಿಸಿತು. ರಾಜಸನ್ನಿಧಿಯಲ್ಲಿ ವಿರೂಪಾಕ್ಷನ ಪುನ ರ್ದರ್ಶನವಾದಾಗ ಚೆಲುವಮ್ಮಣ್ಣಿಯು ಪೂರ್ಣವಾಗಿ ಆ ತರುಣನಲ್ಲಿ ನೆಟ್ಟ ಮನವುಳ್ಳವಳಾದಳು. ಪ್ರಗಲ್ಭವತಿಯಾದ ಆ ತರುಣಿಗೆ ತನ್ನ ಪ್ರೇಮಾಸ್ಪದನಾದವನನ್ನು ಕರೆತರಿಸಲು ಬಹಳ ಪ್ರಯಾಸವೇನೂ ಆಗಲಿಲ್ಲ. ಆ ವಿರೂಪಾಕ್ಷನ ಸಾನ್ನಿಧ್ಯ, ದರ್ಶನಗಳಿಂದ ಚೆಲುವಮ್ಮಣ್ಣಿಯು ಪ್ರೇಮೋನ್ಮತ್ತಳಾಗಿ ಆತನನ್ನು ಆಲಿಂಗಿಸಿ ತನ್ನ ಮನೋಭೀಷ್ಟವನ್ನು ಸಫಲಪಡಿಸಿಕೊಂಡಳು.

ವಿರೂಪಾಕ್ಷನು ಇದೊಂದನ್ನೂ ಅರಿತವನಾಗಿರಲಿಲ್ಲ. ರಾಣಿಯ ರೂಪವು ಮನೋಹರವಾದುದೆಂದು ಭಾವಿಸಿದ್ದನು. ಅವನ ಮನಸ್ಸಿನಲ್ಲಿ ಕಾಮಸಂಚಾಲನವಾಗದೇ ಇರಲಿಲ್ಲ. ಅಜ್ಞಾತಕುಲಗೋತ್ರನಾದ ಭಿಕಾರಿಯು ರಾಜೇಶ್ವರಿಯಾದ ರಾಣಿಯನ್ನು ಹೊಂದುವೆನೆಂಬ ಕಲ್ಪನೆಯು ಕೂಡ ಅವನಿಗೆ ಇರಲಿಲ್ಲ. ಆದರೆ ಆ ಜಗನ್ಮೋಹಿನಿಯ ಸಾನ್ನಿಧ್ಯದಲ್ಲಿ ದೃಷ್ಟಿಯಿಂದಲೇ ಮೋಹವು ಉದಯವಾಗಿ ಸ್ಪರ್ಶದಿಂದ ಉತ್ತೇಜಿತವಾಗಿ ಆಲಿಂಗನದಿಂದ ಉನ್ಮತ್ತವಾಗಿ ರಾಣಿಯ ಹೃದಯ ದಲ್ಲಿ ಆತ್ಮಾರ್ಪಣಮಾಡಿದನು. ಅದೇ ಮನಸಿಜನ ಮಹಿಮೆ. ಅವನು ರಾಣಿಯ ಬಾಹುಬಂಧನದಿಂದ ಬಿಡುಗಡೆಯನ್ನು ಹೊಂದಿ ಅವಳ ಪದ ತಳದಲ್ಲಿ ಮಂಡಿಯೂರಿ ಕುಳಿತು "ದೇವಿ, ಮನಮೋಹಿನಿ, ನಾನು ಇಂದು ನಿನ್ನಿಂದ ಅನುಗೃಹೀತನಾದೆನು. ನನ್ನಂತಹವನಿಗೆ ನಿನ್ನ ಸಾನ್ನಿಧ್ಯಪ್ರಸಾದವು ದೊರೆಯುವುದೆಂದು ಕನಸುಮನಸಿನಲ್ಲಿಯೂ ನಾನು ಎಣಿಸಿರಲಿಲ್ಲ. ಇಂದು ನೀನು ನನ್ನನ್ನು ಅನುಗ್ರಹಿಸಿದೆ. ಈ ಜನ್ಮದಲ್ಲಿ ನಾನು ನಿನ್ನ ಪಾದತಲದಲ್ಲಿ ಆತ್ಮಾರ್ಪಣಮಾಡಲು ಸಿದ್ಧ ನಾಗಿರುವೆನು" ಎಂದು ಕೈಮುಗಿದು ನಿಂತುಕೊಂಡನು.

ರಾಣಿಯು ನಗುತ್ತಾ ಮತ್ತೊಮ್ಮೆ ಅವನನ್ನು ಪ್ರೇಮಾಲಿಂಗನ ಮಾಡಿ ಚುಂಬಿಸಿದಳು.

ಅಷ್ಟರಲ್ಲಿ ಬಾಗಿಲು ತೆರೆಯಿತು. ಭೈರವಿಯು ಈ ದೃಶ್ಯವನ್ನು ನೋಡಿದಳು. ಅವಳಿಗೆ ಆಶ್ಚರ್ಯವಾಯಿತು. ರಾಣಿಯ ರಾಜಕಾರ್ಯವು

ಅಂತರಂಗ ವಿಲಾಸವೆಂದು ಅವಳಿಗೆ ಹೊಳೆದಿರಲಿಲ್ಲ. ವಿರೂಪಾಕ್ಷನು ರೂಪಯೌವನ ಸಂಪನ್ನನೆಂದೂ ರಾಣಿಯ ಅನುಗ್ರಹದಿಂದ ಅವನು ಉಚ್ಚಪದವಿಗೆ ಏರುವನೆಂದೂ ಹೇಗಾದರೂ ಮಾಡಿ ಅವನ ಮನ ವೊಲಿಸಿ ತಾನಃ ಅವನನ್ನು ವಿವಾಹಮಾಡಿಕೊಳ್ಳುವೆನೆಂದೂ ಅವಳು ಬಗೆದಿದ್ದಳು. ಆದರೆ ಅವಳು ತನ್ನ ಕಣ್ಣಾರ ಕಾಣುತ್ತಿರುವ ದೃಶ್ಯವನ್ನು ನಂಬಲಾರದೆ ಹೋದಳು. "ಆಹಾ! ಸುಂದರಾಂಗರಾದ ಪುರುಷರ ಭಾಗ್ಯವು ಎಷ್ಟು ಪ್ರಗಲ್ಭವಾದುದು! ನವಮಾಲಿಕಾಕುಸುಮದಂತೆ ವಿರಾಜಿಸುವ ಆ ಮಲ್ಲಿಗೆಯು ಅಗೋಚರವಾಗಿ ವಿರೂಪಾಕ್ಷನಲ್ಲಿ ಆತ್ಮ ಸಮರ್ಪಣೆಯನ್ನು ಮಾಡಿರುವಳು. ನಾನು ವಿರೂಪಾಕ್ಷನನ್ನು ನನ್ನವ ನನ್ನಾಗಿಯೇ ಮಾಡಿಕೊಳ್ಳುವೆನೆಂದು ಆಶಾಸಾಗರದಲ್ಲಿ ಮುಳುಗಿರು ವೆನು. ರಾಣಿಯು ವಿರೂಪಾಕ್ಷನನ್ನು ತನ್ನ ಸ್ವರ್ಣಪಂಜರದ ಶುಕ ನಂತೆ ಕಟ್ಟಿ ಹಾಕಿರುವಳು. ಯಾರು ಗಟ್ಟಿಗರು? ಎಲ್ಲರಿಗಿಂತಲೂ ವಿರೂಪಾಕ್ಷನು ಅದೃಷ್ಟಶಾಲಿ" ಎಂದುಕೊಂಡಳು.

ಇಬ್ಬರೂ ಗಾಬರಿಯಿಂದ ಆಗಲೆ ದೂರ ಸರಿದು ನಿಂತರು. ಎದುರಿಗೆ ನಿಂತಿದ್ದವಳು ಭೈರವಿ. ಅವಳು ನಗುತ್ತಾ "ರಾಣಿಯವರೇ, ಈ ಅಪರಾಧಿಗೆ ಏನು ಶಿಕ್ಷೆ?" ಎಂದು ಕೇಳಿದಳು.

ಆಗ ಚಲುವಮ್ಮಣ್ಣಿಯು ರಾಣಿಯೂ ಅಲ್ಲ. ವಿರೂಪಾಕ್ಷನು ಅಪರಾಧಿಯೂ ಅಲ್ಲ. ಅವರಿಬ್ಬರೂ ಪ್ರಗಾಢ ಪ್ರಣಯಿಗಳು. ವಿರೂಪಾಕ್ಷನ ಹೃದಯದಲ್ಲಿ ಆ ದಿವ್ಯಸುಂದರಿಯಾದ ಚೆಲುವಮ್ಮಣ್ಣಿಯ ಸುಹಾಸವದನಾರವಿಂದವಲ್ಲದೇ ಮತ್ತಾವ ಭಾವನೆಗೂ ಎಡೆಯಿರಲಿಲ್ಲ. ಅವನ ಶರೀರವು ಚೆಲುವಮ್ಮಣ್ಣಿಯ ಸುಕೋಮಲ ಶರೀರಸ್ಪರ್ಶದಿಂದ ಮದಿರಾಮತ್ತವಾಗಿ ಮದಗಜದಂತೆ ಆಗಿದ್ದಿತು. ಅವನು ಆ ಕಾಮ ಪೂರಿತವಾದ ದೃಷ್ಟಿಯಿಂದ ಚೆಲುವಮ್ಮಣ್ಣಿಯ ಮನೋಹರಮೂರ್ತಿ ಯನ್ನು ನೋಡುತ್ತಿದ್ದನು. ಚೆಲುವಮ್ಮಣ್ಣಿಯು ಸುಹಾಸವದನಳಾಗಿ ಭೈರವಿಯ ಕಡೆ ತಿರುಗಿ "ಭೈರವಿ, ಈ ಜಂಗಮನನ್ನು ಗುಪ್ತವಾಗಿಡುವ ಏರ್ಪಾಡು ಮಾಡಿದ್ದೀಯಾ?" ಎಂದಳು.

ಭೈರವಿಯು ನಗುತ್ತಾ, "ದೇವಿ, ಆ ಎಲ್ಲ ಸಿದ್ಧತೆಯನ್ನೂ ಮೊದಲೇ ಮಾಡಿದ್ದೇನೆ" ಎಂದುತ್ತರವಿತ್ತಳು.

ರಾಣಿಯು ಜಂಗಮನನ್ನು ಕರೆದುಕೊಂಡು ಹೋಗುವಂತೆ ಸಂಜ್ಞೆ ಮಾಡಿದಳು

ಭೈರವಿಯು ಜಂಗಮನನ್ನು ಕರೆದುಕೊಂಡು ಅಂತಃಪುರದ ಹಿಂದಿನ ಬಾಗಿಲಿನಿಂದ ಹೊರಬಿದ್ದಳು. ಜಂಗಮನು ಭಯಪಡುತ್ತಾ ಭೈರವಿಯ ಹಿಂದೆಹಿಂದೆ ಹೋದನು. ಆ ನಿಶಿರಾತ್ರಿಯಲ್ಲಿ ಭೈರವಿಯೂ ಜಂಗಮನೂ ಮೊದಲೇ ಹೋಗಿದ್ದ ಭಗ್ನಮಂದಿರವನ್ನು ಹೊಕ್ಕರು. ಭೈರವಿಯು ಭದ್ರವಾಗಿ ಬಾಗಿಲುಗಳನ್ನು ಮುಚ್ಚಿದಳು. ಹಿಂದುಗಡೆ ಗೋಡೆಯಲ್ಲಿದ್ದ ಒಂದು ಬಾಗಿಲನ್ನು ತಳ್ಳಿದಳು. ಗವಾಕ್ಷವು ತೆರೆಯಲ್ಪಟ್ಟಿತು. ತಾನು ಮೊದಲು ಆ ಗವಾಕ್ಷವನ್ನು ದಾಟಿ ಜಂಗಮನನ್ನು ಕೈಹಿಡಿದು ಕರೆದುಕೊಂಡಳು. ಬಾಗಿಲುಗಳನ್ನು ಮುಚ್ಚಿ ಹಂತಗಳನ್ನು ಇಳಿಯಲಾರಂಭಿಸಿದಳು. ಹತ್ತು ಹನ್ನೆರಡು ಮೆಟ್ಟಲುಗಳನ್ನು ಇಳಿಯುತ್ತಲೇ ಅಲ್ಲಿ ಒಂದು ಪ್ರಶಸ್ತವಾದ ಮಂದಿರವಿದ್ದಿತು. ಆ ಮಂದಿರದ ಒಳಬಾಗಿಲನ್ನು ದಾಟಿದಮೇಲೆ ಭೈರವಿಯು ಚಕಮುಕಿಯ ಕಲ್ಲು ಹೊಡೆದು ಬೆಂಕಿಯನ್ನು ಮಾಡಿ ದೀಪವನ್ನು ಹಚ್ಚಿದಳು. ಆ ಪ್ರಶಸ್ತವಾದ ಮಂದಿರವು ಚಿಕ್ಕದಾದರೂ ಅಚ್ಚುಗಟ್ಟಾಗಿ ಅಣಿಮಾಡಲ್ಪಟ್ಟಿದ್ದಿತು. ಭೈರವಿಯು ನಗುತ್ತಾ "ಗುರುದೇವ, ಇನ್ನುಮೇಲೆ ಇಲ್ಲಿ ನಿಮ್ಮ ವಾಸ. ನೀವು ನನ್ನ ಅಪ್ಪಣೆಯಿಲ್ಲದೇ ಇಲ್ಲಿಂದ ತಪ್ಪಿಸಿಕೊಂಡು ಹೋಗಲಾರಿರಿ" ಎಂದು ಹೇಳಿದಳು.

ಜಂಗಮನು ವಿಶ್ರಾಂತಿಗಾಗಿ ಅಲ್ಲಿದ್ದ ಪರ್ಯಂಕದಮೇಲೆ ಮಲಗಿದನು.

ಭೈರವಿಯು ಅಲ್ಲಿಂದ ಹೊರಟು ಭಗ್ನಮಂದಿರಕ್ಕೆ ಬಂದಳು. ಅವಳು ಎಲ್ಲಿ ಹೋದಳೋ ಗೊತ್ತಿಲ್ಲ.

ಪ್ರಾತಃಕಾಲ ಸನ್ಯಾಸಿಯು ಏಳುವಹೊತ್ತಿಗೆ ಅವನಿಗೆ ಮುಖಮಾರ್ಜನಾದಿಗಳಿಗೆ ಎಲ್ಲವೂ ಸಿದ್ಧವಾಗಿದ್ದಿತು. ಸ್ನಾನಾಹ್ನಿಕಗಳಿಗೆ

ಅಣಿಮಾಡಲ್ಪಟ್ಟದ್ದಿತು. ಮಧ್ಯಾಹ್ನ ರಾಜಯೋಗ್ಯವಾದ ಭೋಜನವು ಸಿದ್ಧವಾಗಿದ್ದಿತು. ವಿರೂಪಾಕ್ಷನು ಊಟಮಾಡುತ್ತಾ, 'ಇದೇನು ವೈಚಿತ್ರ್ಯ? ನಾನೆಲ್ಲಿದ್ದೇನೆ? ನಿಜವಾಗಿಯೂ ಭೈರವಿಯು ಹೇಳಿದಂತೆ ನಾನು ಬಂದಿಯಾಗಿರುವೆನೇನು? ಇಂದು ಭೈರವಿಯು ಬರುವಳೇನು? ರಾಣಿಯದರ್ಶನವು ಪುನಃ ನನಗೆ ಲಭಿಸುವುದೇನು? ನಿನ್ನೆಯ ಘಟನೆ ಯೇನು?' ಎಂದು ಹುಚ್ಚನಂತಾಗಿ ಯೋಚನೆಮಾಡುತ್ತಿದ್ದನು. ಅಲ್ಲಿ ಒಬ್ಬಳೇ ಒಬ್ಬ ಪರಿಚಾರಿಕೆಯು ಬಂದು ಹೋಗುತ್ತಿದ್ದಳು. ಅವಳನ್ನು ಎಷ್ಟುವಿಧವಾಗಿ ಮಾತನಾಡಿಸಿದರೂ ಅವಳಿಂದ ಯಾವ ಸಮಾಚಾರವೂ ತಿಳಿಯಬರಲಿಲ್ಲ.

ಸಂಧ್ಯಾಕಾಲವಾಯಿತು. ಜಂಗಮನು ಭೈರವಿಯ ಮಾರ್ಗ ವನ್ನೇ ನಿರೀಕ್ಷಣೆಮಾಡುತ್ತಿದ್ದನು. ಇಂದು ಭೈರವಿಯು ಬರಲಿಲ್ಲ. ಸರ್ವಾಂಗಸುಂದರಿಯಾದ ತರುಣಿಯೊಬ್ಬಳು ಜಂಗಮನ ಮುಂದೆ ಬಂದು ನಿಂತಳು. ಜಂಗಮನು ಅವಳ ಮುಖವನ್ನು ನೋಡಿ ಅವಳಾ ರೆಂದು ಗುರುತಿಸಲಾರದೇಹೋದನು. ಆಗ ಆ ಸುಂದರಿಯು ನಗುತ್ತಾ, "ನೋಡು ಗುರುದೇವ, ನೀನು ಭೈರವಿಯನ್ನು ನಿರೀಕ್ಷಿಸುತ್ತಿರುವೆ ಯಲ್ಲವೇ? ನಿನ್ನನ್ನು ಕರೆತಂದು ಇಲ್ಲಿ ಇಟ್ಟಿರುವವಳು ಭೈರವಿಯಲ್ಲ. ನನ್ನ ಹೆಸರು ಗಿರಿಜೆ. ನಾನು ನಿನ್ನನ್ನು ಬಂಧಮುಕ್ತನನ್ನಾಗಿ ಮಾಡು ತ್ತೇನೆ. ನೀನು ಸ್ವಚ್ಛಂದವಾಗಿ ಎಲ್ಲಿಗೆ ಬೇಕಾದರೂ ಹೋಗಬಹುದು." ಎಂದು ಗಿರಿಜೆಯು ಜಂಗಮನ ಕೈಹಿಡಿದು ಕರೆದುಕೊಂಡು ಬಂದಳು.

ಭಗ್ನಮಂದಿರದ ಹೊರವಳಯಕ್ಕೆ ಕರೆತಂದು "ನಿನ್ನ ಅಂಗರೇಕು ಗಳನ್ನು ತೊಟ್ಟುಕೋ" ಎಂದು ಹೇಳಿದಳು.

"ಬೇಡ ಗಿರಿಜೆ, ನಾನಿನ್ನು ಆ ಬಟ್ಟೆಗಳನ್ನು ತೊಡುವುದಿಲ್ಲ. ಒಂದುಬಾರಿ ನಿನ್ನ ಆಜ್ಞೆಯಂತೆ ಈ ಕಾವಿಯನ್ನು ಧರಿಸಿದ್ದೇನೆ. ಆಮರಣಾಂತ ಹೀಗೆಯೇ ಇದ್ದುಬಿಡುತ್ತೇನೆ."

"ವಿರೂಪಾಕ್ಷ, ಹಾಗಾದರೆ ನಾನು ನಿನಗೆ ಗುರು."

"ಹೌದು ಗಿರಿಜೆ, ನಾನು ನಿನ್ನ ಶಿಷ್ಯ. ನಾನು ನಿನ್ನ ದಾಸ.

ನಾನು ನಿನ್ನ ಕೈಗೊಂಬೆ. ಗಿರಿಜೆ, ಈ ಸ್ಥಳದಲ್ಲಿ ಹೀಗೆ ನಾನೇಕಿರಬೇಕೋ ನನಗೆ ಗೊತ್ತಿಲ್ಲ, ನಾನಿರಲಾರೆ. ಈ ಸಂಧ್ಯಾಕಾಲ ನೀನು ಬಂದು ದರ್ಶನ ಕೊಡದಿದ್ದರೆ ನಾನು ಇಲ್ಲಿ ಆತ್ಮಹತ್ಯ ಮಾಡಿ ಕೊಳ್ಳುತ್ತಿದ್ದೆ. ಗಿರಿಜೆ, ನಾನು ಸ್ವತಂತ್ರನಾಗಿರಬೇಕು."

ಗಿರಿಜೆಯು ನಗುತ್ತಾ, "ಹೌದು ಗುರುದೇವ, ನೀನು ಸ್ವತಂತ್ರ. ಎಲ್ಲಿಗೆ ಬೇಕಾದರೂ ಹೋಗು. ಏನು ಬೇಕಾದರೂ ಮಾಡು. ನಿನ್ನನ್ನು ಬಂಧಿಸಲು ನಾನಾರು? ನಾನು ಹೊರಡುತ್ತೇನೆ" ಎಂದು ಹೇಳಿ ಹಿಂತಿರುಗಿ ಹೊರಟಳು.

ಜಂಗಮನು ಓಡಿಹೋಗಿ ಗಿರಿಜೆಗೆ ಅಡ್ಡಲಾಗಿ ನಿಂತನು. "ಗಿರಿಜೆ, ನಾನು ಈ ರಾಜ್ಯವನ್ನು ಬಿಟ್ಟು ಹೋಗುತ್ತೇನೆ. ನನಗೆ ಮತ್ತೊಂದುಬಾರಿ, ಒಂದೇ ಒಂದುಬಾರಿ ಮಹಾರಾಣಿಯವರ ದರ್ಶನ ಮಾಡಿಸುವೆಯಾ?" ಎಂದನು.

"ಹಾ, ಮಹಾರಾಣಿಯವರ ದರ್ಶನ. ಮಹಾರಾಣಿಯೆಂದರೆ ಮಲ್ಲಿಕಾರ್ಜುನ ಮಂದಿರದ ಸರೋವರದಲ್ಲಿ ಕುಣಿದಾಡುವ ಬೆಳ್ಳಕ್ಕಿ ಯೆಂದು ತಿಳಿದೆಯಾ? ಅವಳು ಅಂತಃಪುರದಲ್ಲಿರುವ ರಾಜಹಂಸಿ. ಅವಳ ಇಷ್ಟವಿಲ್ಲದೇ ನಾನು ನಿನಗೆ ರಾಣಿಯ ದರ್ಶನ ಮಾಡಿಸುವು ದೆಂದರೇನು? ನಿನ್ನೆಯದಿನ ಆ ರಾತ್ರಿಯಲ್ಲಿ ಆ ಏಕಾಂತದಲ್ಲಿ ಆ ಮಧುರಸಂದರ್ಭದಲ್ಲಿ ನೀನೇಕೆ ಆ ರಾಣಿಯನ್ನು ಕೇಳಿಕೊಳ್ಳಲಿಲ್ಲ?"

"ಗಿರಿಜೆ, ನಾನು ಆ ಸಮಯದಲ್ಲಿ ರಾಣಿಯ ಸಾನ್ನಿಧ್ಯದಲ್ಲಿರು ವಾಗ ಪ್ರಜ್ಞಾಶೂನ್ಯನಾಗಿದ್ದೆ. ನನ್ನ ಕಣ್ಣುಗಳಲ್ಲಿ ಆ ಚೆಲುವೆಯ ರೂಪು, ನನ್ನ ಅಂಗಾಂಗಗಳಲ್ಲಿ ಆ ಮಧುರಸ್ಪರ್ಶ, ನನ್ನ ಹೃದಯದಲ್ಲಿ ಆ ಪ್ರೇಮದ ಆವೇಶ, ನನ್ನ ನಖಶಿಖಪರ್ಯಂತರವೂ ಆ ಪ್ರೇಮದಿಂದ ಉತ್ತೇಜಿತವಾದ ಉನ್ಮಾದಾವಸ್ಥೆ. ಗಿರಿಜೆ, ಆಗ ನಾನು ರಾಣಿಯನ್ನು ಬೇಡುವುದಕ್ಕೆ ಎಡೆಯೆಲ್ಲಿತ್ತು? ನನ್ನ ಹೃದಯವೂ, ಮನಸ್ಸೂ, ನಾನೂ ನನ್ನ ಸರ್ವಸ್ವವೂ ಪ್ರೇಮಸಾಗರದಲ್ಲಿ ವಿಲೀನವಾಗಿತ್ತು. ಗಿರಿಜೆ, ನೀನು ಮತ್ತೊಮ್ಮೆ ಮಹಾರಾಣಿಯ ದರ್ಶನವನ್ನು ಮಾಡಿಸದಿದ್ದರೆ

ನಿನ್ನನ್ನು ಬಲಾತ್ಕರಿಸುವ ಶಕ್ತಿಯು ನನಗಿಲ್ಲ. ಆದರೆ ನಾನು ಸೂರ್ಯ ದೇವನು ಉದಯಿಸುವವರೆಗೆ ಪ್ರಾಣದಿಂದ ಇರುವುದಿಲ್ಲ. ನೀನು ನನ್ನ ಗುಡಿಸಿಲಿಗೆ ಬಂದು ಕರೆತಂದುದು ಜ್ಞಾಪಕವಿದೆಯೇ? ವ್ಯಾಧನು ಪಕ್ಷಿಯನ್ನು ಬಲೆಯಲ್ಲಿ ಬಂಧಿಸಿದಂತೆ ಮಲ್ಲಿಕಾರ್ಜುನದೇವರ ಸನ್ನಿಧಿಯಲ್ಲಿ ನನ್ನನ್ನು ಬಂಧಿಸಿದುದು ನೆನಪಿದೆಯೇ? ಅಲ್ಲಿಂದ ಮಹಾರಾಣಿಯು ಅಂತಃಪುರಕ್ಕೆ ಕೊಂಡುಹೋಗಿ ಆ ಸ್ವರ್ಣಪಂಜರದಲ್ಲಿಟ್ಟುದುದು ಜ್ಞಾಪಕವಿದೆಯೇ? ಅಲ್ಲಿಂದ ಭಗ್ನಮಂದಿರದಲ್ಲಿ ತಂದು ಮುಚ್ಚಿಟ್ಟುದುದು ಸ್ಮರಣೆಯಲ್ಲಿದೆಯೇ? ಈಗ ನಾನು ಅನಾಥನಂತೆ ನಿನ್ನ ಮುಂದೆ ನಿಂತು ಬೇಡುತ್ತಿರುವುದು ನಿನ್ನ ಚಿತ್ತಕ್ಕೆ ಗೋಚರವಾಗುತ್ತಿದೆಯೇ? ಯಾವ ವೃಕ್ಷದಡಿಯಲ್ಲಿ ನಿನ್ನೆಯ ರಾತ್ರಿ ನೀನು ಬಂದು ನನ್ನ ಬೆನ್ನು ತಟ್ಟಿದೆಯೋ ಅದೇ ವೃಕ್ಷಕ್ಕೆ ನೇಣುಹಾಕಿಕೊಂಡು ನಾನು ಸಾಯುತ್ತೇನೆ. ನೀನು ಅಲ್ಲಿಗೆ ಬಂದು ಆ ದೃಶ್ಯವನ್ನು ನೋಡು. ಅಲ್ಲಿಗೆ ಬಂದು ನಿರ್ಜೀವವಾದ ಈ ಶರೀರವನ್ನು ಕಂಡು ನೀನು ನಿನ್ನ ಹಿಂದಿನ ಸ್ಮರಣೆಗಳಿಗೆಲ್ಲಾ ಯಾವ ಉತ್ತರವನ್ನು ಹೇಳುವೆ? ಅಲ್ಲಿ ನಿನ್ನ ಅಂತರಾತ್ಮನು ನಿನ್ನ ವಿಚಾರಣೆಯನ್ನು ತೆಗೆದುಕೊಳ್ಳುವಾಗ ನೀನು ನಿನ್ನ ಹೊಣೆಯೇ ಇಲ್ಲವೆಂದು ಹೇಳಬಲ್ಲೆಯಾ? ಯೋಚಿಸಿನೋಡು. ನಾನು ಮತ್ತೊಮ್ಮೆ ಪ್ರಾರ್ಥಿಸುತ್ತೇನೆ. ಆ ಮಹಾರಾಣಿಯು ದರ್ಶನ ಮಾಡಿಸು."

"ಗುರುದೇವ, ಇಂದು ಮಹಾರಾಣಿಯವರ ದರ್ಶನವನ್ನು ಮಾಡುವುದು ದುರ್ಲಭ. ಮಹಾರಾಜರವರು ಇಂದು ಅರಮನೆಯಲ್ಲಿಯೇ ಇದ್ದಾರೆ. ರಾಣಿಯು ಅಂತಃಪುರದಲ್ಲಿಯೇ ಇದ್ದಾರೆ. ಮಹಾರಾಣಿಯವರ ಅಪ್ಪಣೆ ಪಡೆದು ಮತ್ತೊಮ್ಮೆ ನಿನಗೆ ಅವರ ದರ್ಶನ ಮಾಡಿಸುತ್ತೇನೆ. ನೋಡು ವಿರೂಪಾಕ್ಷ, ನೀನು ಪ್ರಾಣತ್ಯಾಗ ಮಾಡುವುದಾಗಿ ನನ್ನನ್ನು ಹೆದರಿಸುತ್ತೀಯೆ. ಆದರೆ ನಿನ್ನ ಮನಸ್ಸಿನ ಗುಟ್ಟನ್ನು ನಾನು ಬಲ್ಲೆ. ನೀನು ಚೆಲುವಮ್ಮಣ್ಣಿಯವರಿಂದ ಅನುಗೃಹೀತನಾಗಿದ್ದೀಯೆ. ಆ ಅಮೃತದ ನೆನಪಿನಲ್ಲಿಯೇ ನೀನು ಬದುಕಿರುವೆ. ನೀನು

ಸಾಯುವುದಿಲ್ಲ. ಆದರೂ ಮಲ್ಲಿಕಾರ್ಜುನ ದೇವಾಲಯದ ಪರಿಸರದಲ್ಲಿ ಆಗಾಗ ನೀನು ನನ್ನನ್ನು ನೋಡಬಹುದು. ಎಂದಾದರೊಂದು ದಿನ ಪುನಃ ನಿನ್ನ ಇಷ್ಟಸಿದ್ಧಿಯಾಗುವುದು." ಎಂದು ಹೇಳಿ ಹೊರಟು ಹೋದಳು.

ಹುಚ್ಚನಂತೆ ಆಕಾಶವನ್ನು ನೋಡುತ್ತಾ ವಿರೂಪಾಕ್ಷನು ಮಲ್ಲಿಕಾರ್ಜುನನ ಮಂದಿರದ ಕಡೆಗೆ ಹೊರಟುಹೋದನು.

---

೮

## ಚೆಲುವಮ್ಮಣ್ಣಿ-ವಿರೂಪಾಕ್ಷ

ಒಂದು ವಾರ ಕಳೆಯಿತು. ವಿರೂಪಾಕ್ಷನು ಎಲ್ಲೆಲ್ಲಿಯೂ ಅಲೆಯುತ್ತಾನೆ. ಎಲ್ಲಿಯೋ ಊಟಮಾಡುತ್ತಾನೆ. ಹಾಳು ಮಂಟಪಗಳಲ್ಲಿ ಮಲಗಿ ನಿದ್ರಿಸುತ್ತಾನೆ. ರಾತ್ರಿ ಕಳೆಯುವುದು ಹಗಲು ಕಳೆಯುವುದು ಒಂದೊಂದುಬಾರಿ ಅವನಿಗೆ ಗೊತ್ತಾಗುವುದೇ ಇಲ್ಲ. ಹಗಲು ರಾತ್ರಿಗಳಲ್ಲಿ ಅವನಿಗೆ ವ್ಯತ್ಯಾಸವೇನಿದೆ? ಸದಾ ಮಹಾರಾಣಿಯ ಚಿಂತೆ. ಮಹಾರಾಣಿ ಚೆಲುವಮ್ಮಣ್ಣಿಯು ಎಂತಹ ಸೌಜನ್ಯದಮೂರ್ತಿ! ತನ್ನನ್ನು ಅವಳು ವಂಚಿಸಿದಳೇ? ಒಂದು ದಿನ, ಒಂದೇ ದಿನ, ಆ ಅಪ್ಸರೆಯು ತನಗೆ ಆ ಸ್ವರ್ಗಧಾಮದಲ್ಲಿ ದರ್ಶನವಿತ್ತಳು. ಪುನಃ ಆ ಮಹಾರಾಣಿಯ ದರ್ಶನವು ದೊರೆಯಲಾರದೇನು? ಕೆಲವು ದಿನಗಳ ಮುಂಚೆ ಇದೇ ದೇವಮಂದಿರದಲ್ಲಿ ಚೆಲುವಮ್ಮಣ್ಣಿಯ ದರ್ಶನವನ್ನು ಮಾಡಿದೆ. ಅಂದು ನನಗೆ ಸಾಕ್ಷಾತ್ ಲಕ್ಷ್ಮೀದೇವಿಯನ್ನು ದರ್ಶನ ಮಾಡಿದಂತೆ ಭಾಸವಾಯಿತು. ಪುನಃ ಬಸಪ್ಪನಾಯಕರ ಸಮ್ಮುಖದಲ್ಲಿ ಅವಳ ದರ್ಶನ ಮಾಡಿದೆ. ಅಂದು ಆ ವೃದ್ಧರಾಜನಿಗೆ ಆ ನವ ಯೌವನ ಸಂಪನ್ನಳಾದ ಪತ್ನಿಯೇ ಎನ್ನಿಸಿತು. ಏಕಿರಬಾರದು? ರಾಜರಿಗೆ ಎಲ್ಲ ಸೌಭಾಗ್ಯಗಳೂ ಇರುವಾಗ ಸೌಂದರ್ಯ ಖನಿಯಂತಿರುವ ಮಹಾರಾಣಿಯೊಬ್ಬಳ

ದ್ದರೆ ಆ ರಾಜನ ಭಾಗ್ಯವು ಪೂರ್ಣವಾದಂತಲ್ಲವೇ? ಅವನು ವೃದ್ಧನಾದರೇನು? ತರುಣನಾದರೇನು? ರಾಜನು ಎಂದಿಗೂ ರಾಜನೇ. ಮೂರನೆಯ ಬಾರಿ ನಾನು ಆ ಜಗನ್ಮೋಹಿನಿಯನ್ನು ದರ್ಶನ ಮಾಡಿದುದು ಆ ದಿವ್ಯವಾದ ಅಂತಃಪುರದಲ್ಲಿ. ಅದು ನನ್ನ ಭಾಗ್ಯ. ಇಂದು ನಾನು ಈ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಅಲೆಯುತ್ತಿರುವುದು ನನ್ನ ವಿಧಿ. ಇಲ್ಲಿ ಭಿಕ್ಷುಕನಂತೆ ದೇವಾಲಯದ ಪ್ರಸಾದವನ್ನು ಸ್ವೀಕರಿಸಿ ಅಲೆಯುತ್ತಿದ್ದೇನೆ. ಭೈರವಿಯು ಪುನಃ ರಾಣಿಯ ದರ್ಶನ ಮಾಡಿಸುತ್ತೇನೆಂದು ಹೇಳಿದಳು. ಅವಳು ಎಂತಹ ಠಕ್ಕುಗಾತಿ! ಪುರುಷರ ಮನಸ್ಸು ವಿರಹದಿಂದ ಎಷ್ಟು ಸಂತಪ್ತವಾಗಿರುವುರೆಂಬುದನ್ನು ಅವಳೇನು ಬಲ್ಲಳು? ಭೈರವಿಯು ಮಾಯಾವಿನಿ. ಅವಳಲ್ಲಿ ಏನೋ ಒಂದು ಪ್ರಲೋಭವಿದೆ. ಹೇಗಾದರೇನು? ಅವಳ ಅನುಗ್ರಹವಿಲ್ಲದೇ ನಾನು ಚೆಲುವಮ್ಮಣ್ಣಿಯನ್ನು ದರ್ಶನ ಮಾಡಲಾಗುವುದಿಲ್ಲ. ಮತ್ತೊಮ್ಮೆ ದೇವರ ಅನುಗ್ರಹದಿಂದ....ಆ ಭೈರವಿಯ ಅನುಗ್ರಹದಿಂದ....ರಾಣಿಯ ಸಾನ್ನಿಧ್ಯವು ದೊರೆತರೆ ನಾನು ನನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಅವಳಲ್ಲಿ ಹೇಳುವೆನು. ಆ ಪ್ರಸನ್ನ ಸುಕುಮಾರ ಹೃದಯದಲ್ಲಿ ಕರುಣೆಯಿಲ್ಲವೆ? ಆ ಮಹಾರಾಣಿಗೆ ಸಕಲೈಶ್ವರ್ಯಗಳೂ ಇದ್ದು ನನ್ನ ಕೋರಿಕೆಯನ್ನು ಈಡೇರಿಸುವ ಶಕ್ತಿಯಿಲ್ಲವೇ? ಎಂದು ಚಿಂತಿಸುತ್ತಿದ್ದನು. ದೇವಾಲಯದ ಹೊರಪ್ರಾಕಾರದಲ್ಲಿ ಒಂದು ಕಲ್ಲಿನ ಮೇಲೆ ಕುಳಿತು ಆಕಾಶವನ್ನು ನೋಡುತ್ತಿದ್ದನು. ಆಕಾಶದಲ್ಲಿ ಪೂರ್ಣಚಂದ್ರನು ವಿರಾಜಿಸುತ್ತಿದ್ದನು. ನಕ್ಷತ್ರಗಳು ಜಗಜಗಿಸುತ್ತಿದ್ದವು. ಆದರೆ ವಿರೂಪಾಕ್ಷನ ಹೃದಯದಲ್ಲಿ ಆ ಚಂದ್ರನು ದೊಡ್ಡ ಕಾದ ಕಬ್ಬಿಣದ ಗೋಳದಂತೆಯೂ ಆ ನಕ್ಷತ್ರಗಳು ಆ ಗೋಳದಿಂದ ಸಿಡಿಯುತ್ತಿರುವ ಅಗ್ನಿಕಣಗಳಂತೆಯೂ ಬೋಧೆಯಾಗುತ್ತಿದ್ದಿತು. ಹಾಗೆಯೇ ಆಕಾಶವನ್ನು ನೋಡುತ್ತಾ ಸನ್ಯಾಸಿಯು ಯೋಚನಾತರಂಗಗಳಲ್ಲಿ ಮಗ್ನನಾಗಿದ್ದನು. ಆತನ ಮನಸ್ಸಿನಲ್ಲಿ ಉದಯವಾಗಿ ಕ್ಷಣಕ್ಷಣಕ್ಕೂ ಚಿಮ್ಮಿ ಗಗನಕ್ಕೆ ಹಾರಿ ಕೆಳಗೆ ಬಿದ್ದು ಲೀನವಾಗುತ್ತಿದ್ದ ಕಲ್ಪನೆಗಳು ರಾಣಿ ಚೆಲುವಮ್ಮಣ್ಣಿಯ ಸಂಬಂಧವಾದವುಗಳು.

ಅಷ್ಟರಲ್ಲಿ ಎದುರಿಗೆ ಯಾರೋ ಬಂದು ನಿಂತಂತೆ, ತನ್ನನ್ನು ನೋಡಿ ನಗುತ್ತಿರುವಂತೆ ಭಾಸವಾಯಿತು. ಸನ್ಯಾಸಿಯು ದೃಷ್ಟಿಯನ್ನು ಕೆಳಗಿಳಿಸಿ ನೋಡಿದನು. ಅವಳು ಸಾಕ್ಷಾತ್ ಭೈರವಿ. ಅದೇ ವೇಷ. ಅದೇ ಜಟಾ ಜೂಟ. ಅದೇ ಗೈರಿಕವಸನ. ಅದೇ ಭಸ್ಮೋದ್ಧೂಳಿತ ಶರೀರ. ಅದೇ ರುದ್ರಾಕ್ಷಮಾಲೆಗಳು. ಬಲಗೈಯಲ್ಲಿ ಕಪಾಲಪಾತ್ರ, ತ್ರಿಶೂಲ, ಎಡಗೈಯ್ಯಲ್ಲಿ ಡಮರುಗ. ಒಂದು ಬಾರಿ ಡಮರುಗವನ್ನು ಹೊಡೆದು, ಕಪಾಲವನ್ನು ಚಾಚಿ—"ಭೋಂ ಮಹಾದೇವ," ಎಂದು ಹೇಳುತ್ತಾ ಎಡಗಾಲನ್ನು ಎತ್ತಿ ನೆಲಕ್ಕೆ ಹೊಡೆದಳು. ಕಾಲಲ್ಲಿ ಕಟ್ಟಿದ್ದ ಕಿರುಗಂಟೆಗಳು ಝಲ್ಲೆಂದು ಧ್ವನಿಮಾಡಿದವು. ಸನ್ಯಾಸಿಯು ಗಾಬರಿಗೊಂಡು ಬೆಚ್ಚಿಬಿದ್ದು ಎದ್ದು ನಿಂತು ಕೈಮುಗಿದನು ಮತ್ತೆ ಮತ್ತೆ ದೃಷ್ಟಿಸಿ ನೋಡಿದನು. ಅದೇ ಭೈರವಿಯೇನು? ಎಂದುಕೊಂಡನು. ಹೌದು! ಅದೇ ಪ್ರಜ್ವಲಿಸುವ ಕಣ್ಣುಗಳು. ಅದೇ ಕೆಂದುಟಿ. ಅದೇ ದೀರ್ಘವಾದ ಹುಬ್ಬು. ಅದೇ ಎಳಸಾದ ಮೂಗು. ಅದೇ ಮುದ್ದಾದ ಚುಬುಕ. ಆ ಮುಖವು ವಿಭೂತಿಯಿಂದಲಂಕೃತವಾಗಿದ್ದರೇನು? ಕಸ್ತೂರಿಕಾತಿಲಕದಿಂದ ಶೋಭಿಸುತ್ತಿದ್ದರೇನು? ಸುಂದರ ಮುಖಾರವಿಂದವು ಎಲ್ಲ ವೇಷಗಳಲ್ಲಿಯೂ ಒಂದೇ. ಆ ಪ್ರೇಮೋನ್ಮತ್ತ ನೇತ್ರಯುಗ್ಮವು ಸರ್ವತ್ರ ವಿಜಯಿ.

ಭೈರವಿಯು ನಗುತ್ತಾ—"ಗುರುದೇವ, ಏಕೆ ಭಯಪಡುವೆ? ಈ ಸನ್ಯಾಸಾಶ್ರಮವು ಬೇಸರವಾಯಿತೇನು? ನಿನ್ನಂಥಾ ವೀರನಿಗೆ ಭಿಕ್ಷವೆತ್ತಿ ಹೊಟ್ಟೆಹೊರೆಯುವುದು ಕಷ್ಟವಾಗಿರುವುದೇನು? ನೋಡು! ಅಂದು ನಾನು ನಿನ್ನ ಗುರುವೆಂದು ಹೇಳಿದೆ. ನೀನು ನನ್ನ ಗುರುತ್ವವನ್ನು ಅಂಗೀಕರಿಸಿದ್ದರೆ ಇಂದು ಈ ಪಾಡುಪಡುತ್ತಿರಲಿಲ್ಲ. ಕಾಡುಗಳಲ್ಲಿ ಅಲೆಯುತ್ತಿರಲಿಲ್ಲ. ದೇವಾಲಯದಲ್ಲಿ ಕಳ್ಳನಂತೆ ಔತುಕೊಂಡಿರಬೇಕಾಗಿರಲಿಲ್ಲ. ನಡೆ; ನನ್ನ ಜೊತೆಯಲ್ಲಿ ಬಾ. ನನ್ನ ಗುರುವಿನಿಂದ ಇಂದು ನಿನಗೆ ದೀಕ್ಷೆಯನ್ನು ಕೊಡಿಸುವೆನು", ಎಂದು ಹೇಳಿದಳು.

ಸನ್ಯಾಸಿಯು ಮಂತ್ರಮುಗ್ಧನಾದವನಂತೆ ಅವಳ ಹಿಂದೆ ಹಿಂದೆ

ಹೋದನು. ದಾರಿಯಲ್ಲಿ ಹೋಗುತ್ತಾ ಸನ್ಯಾಸಿಯು, "ಭೈರವಿ, ರಾಜ್ಯದ ಸಮಾಚಾರವೇನು? ರಾಜರು ಎಲ್ಲಿದ್ದಾರೆ? ಮಂತ್ರಿಗಳು ಏನು ಮಾಡುತ್ತಾರೆ" ಎಂದನು.

ಭೈರವಿಯು ನಗುತ್ತಾ, "ಗುರುದೇವ, ನೀನು ಈ ವೇಷವನ್ನು ಸ್ವೀಕರಿಸಿದಂದಿನಿಂದ ಸಮಾಧಿಯಲ್ಲಿರುವೆಯೇನು? ನಿನಗೆ ನಗರದ ಸಮಾಚಾರವೇ ಗೊತ್ತಿಲ್ಲವೇನು? ಮೈಸೂರಿನ ಹೈದರಲ್ಲೀಖಾನನು ದಂಡೆತ್ತಿ ಬಂದು ಶೀ‍್ಯದಲ್ಲಿ ಬಿಡಾರವನ್ನು ಹೂಡಿದ್ದಾನೆ. ಮಹಾರಾಜರವರು ರಾತ್ರಿ ಹಗಲು ಯುದ್ಧ ಸನ್ನಾಹವನ್ನು ಮಾಡುತ್ತಿದ್ದಾರೆ. ಅವರು ಬಿದನೂರಿನ ಅರಮನೆಗೆ ಬರುವುದೇ ಇಲ್ಲ. ಕೆಳದಿಯಲ್ಲಿ ಬಿಡಾರಮಾಡಿದ್ದಾರೆಂದು ಓಲೆಕಾರರು ಪ್ರತಿದಿನವೂ ಮಹಾರಾಣಿಯವರಿಗೆ ವರದಿಮಾಡುತ್ತಿದ್ದಾರೆ."

"ಭೈರವಿ, ಮಹಾರಾಣಿಯವರು ಹೇಗಿದ್ದಾರೆ?"

"ಅವರೂ ವ್ಯಗ್ರಚಿತ್ತರಾಗಿಯೇ ಇದ್ದಾರೆ. ಅಂದು ಯುದ ಪ್ರಮೇಯವಿಲ್ಲವೆಂದೂ ನಿನ್ನ ರಾಯಭಾರವು ಜಯಪ್ರದವಾಯಿತೆಂದೂ ನೀನು ಮಹಾರಾಜರ ಸಮ್ಮುಖದಲ್ಲಿ ಹೇಳಿದಾಗ ರಾಣಿಯವರು ಆನಂದ ಮಗ್ನರಾಗಿದ್ದರು. ಇಂದು ಉದ್ವಿಗ್ನ ಮನಸ್ಕರಾಗಿದ್ದಾರೆ."

"ಭೈರವಿ, ಮಹಾಮಂತ್ರಿಗಳ ಸಮಾಚಾರವೇನು?"

"ಅಯ್ಯೋ! ಮೂಢ; ನೀನು ನಗರದ ಶೀಮೆಯಲ್ಲಿ ಇಲ್ಲವೇನು? ಮಹಾಮಂತ್ರಿಗಳು ಇದ್ದಕ್ಕಿದ್ದಂತೆಯೇ ಮಾಯವಾಗಿದ್ದಾರೆ. ಅವರು ಅದೃಶ್ಯರಾದುದರಿಂದ ನಗರದ ರಾಜ್ಯವೆಲ್ಲವೂ ಅಲ್ಲಕಲ್ಲೋಲವಾಗಿದೆ."

"ಮಹಾಮಂತ್ರಿಗಳು ಅದೃಶ್ಯರಾಗಿದ್ದರೇನು? ಪ್ರತ್ಯಕ್ಷರಾಗಿದ್ದರೇನು? ಅವರ ತಂತ್ರವು ಜಯಿಸುತ್ತದೆ."

"ನೋಡು ಗುರುದೇವ, ಅದರಿಂದ ನನಗಾಗುವ ಲಾಭವೇನು? ನಾನು ನಿನ್ನನ್ನು ಹುಡುಕಿಕೊಂಡು ಬಂದೆ."

"ನನ್ನಿಂದ ಅಂತಹ ಕೆಲಸವೇನಿದೆ? ಭೈರವಿ.?"

ಭೈರವಿಯು ನಕ್ಕು, "ನನಗೆ ನಿನ್ನಿಂದೇನು ಕೆಲಸ? ಆ ರಾಣಿ

ಚೆಲುವಮ್ಮಣ್ಣಿಯು ನಿನ್ನ ಕೊರಳಿಗೆ ಗಂಟುಬಿದ್ದ ಮೃತ್ಯು. ಬಾಲ್ಯದಿಂದಲೂ ನಾನು ಅವಳ ಗೆಳತಿ. ನಿನಗೆ ಮತ್ತೊಮ್ಮೆ ಆ ರಾಣಿಯ ದರ್ಶನ ಮಾಡಿಸುತ್ತೇನೆಂದು ವಚನ ಕೊಟ್ಟಿದ್ದೆ. ನಾನು ನಿನ್ನಂತಹವರಿಗೆ ಕೊಡುವ ವಚನವು ಎಂದಿಗೂ ವ್ಯರ್ಥವಾಗಬಾರದು. ನಡೆ, ನಾನು ನಿನ್ನನ್ನು ಕರೆದುಕೊಂಡು ಹೋಗಿ ಆ ಮಹಾರಾಣಿಯ ಭೇಟಿ ಮಾಡಿಸುತ್ತೇನೆ. ಅಲ್ಲಿ ನಿನ್ನ ವಿಚಾರಣೆಯಾಗುತ್ತದೆ" ಎಂದು ಹೇಳಿ ಮುಂದೆ ಮುಂದೆ ನಡೆದಳು. ಸನ್ಯಾಸಿಯೂ ಭೈರವಿಯ ಹಿಂದೆ ಅನುಸರಿಸಿ ಹೋದನು.

ಬಿದನೂರು ಜನಭರಿತವಾದ ಪಟ್ಟಣ. ಬ್ರಾಹ್ಮಣರ ಅಗ್ರಹಾರಗಳಿಂದಿಲೂ, ಐಶ್ವರ್ಯವಂತರ ಮಹಲುಗಳಿಂದಲೂ, ಸುಶೋಭಿತವಾದ ಚಚ್ಚೌಕವಾದ ನಗರ. ವಿಪಣಿಪಥವೂ, ಕೊತ್ವಾಲ ಕಛೇರಿಗಳೂ ಐಶ್ವರ್ಯಭರಿತವಾಗಿ ಕಳಕಳಿಸುತ್ತಿದ್ದವು. ಅಚ್ಚುಗಟ್ಟಾದ ಕೋಟೆ. ನಾಲ್ಕುಕಡೆಯೂ ಮಹಾದ್ವಾರಗಳು. ಆ ದ್ವಾರಗಳಲ್ಲಿ ಸೈನಿಕರ ಕಾವಲು. ಊರಲ್ಲೆಲ್ಲಾ ಪ್ರಶಸ್ತವಾದ ರಾಜಮಾರ್ಗಗಳು ಈ ನಗರದ ಪೂರ್ವಭಾಗದಲ್ಲಿ ದೊಡ್ಡ ಅರಮನೆ. ಆ ಅರಮನೆಯ ಮುಂದೆ ಐವತ್ತಡಿ ಎತ್ತರವಾದ ಶಿಲಾಸ್ತಂಭ ಆ ಸ್ತಂಭದ ಮೇಲೆ ಸ್ವರ್ಣರಂಜಿತವಾದ ನಂದಿಧ್ವಜ. ಅರಮನೆಯ ಮುಂಭಾಗದ ಮಹಾದ್ವಾರದ ಎಡ ಬಲ ಪಾರ್ಶ್ವಗಳಲ್ಲಿ ದೊಡ್ಡ ಪಡಸಾಲೆಗಳು. ಮುಂಭಾಗದಲ್ಲಿ ನೂರು ತುರಾಯಿ ಕಂಭಗಳು ಆ ಕಂಭಗಳೆಲ್ಲಾ ಕಡದ ಕಂಭಗಳು. ಒಂದೊಂದು ಕಂಭವೂ ಐವಡಿ ಸುತ್ತಳತೆಯುಳ್ಳ ತುರಾಯಿ ಕಂಭಗಳು. ಅವುಗಳಿಗೆಲ್ಲಾ ಬೆಳ್ಳಿಯ ನಕಾಶೆಯ ಕೆಲಸವು ಮಾಡಲ್ಪಟ್ಟಿದೆ. ಮೇಲಿನ ತುರಾಯಿಗಳೆಲ್ಲಾ ಚಿನ್ನದವರಕಿನಿಂದ ಕೆತ್ತಲ್ಪಟ್ಟಿದ್ದು. ಎರಡು ಪಡಸಾಲೆಗಳ ಮೇಲೆಯೂ ಜಮಖಾನಗಳೂ, ರತ್ನಗಂಬಳಿಗಳೂ ಹಾಸಲ್ಪಟ್ಟಿವೆ. ಬಲ ಭಾಗದಲ್ಲಿ ಸ್ವರ್ಣ ಸಿಂಹಾಸನವೂ ಇಡಲ್ಪಟ್ಟಿದೆ. ಸಿಂಹಾಸನದ ಎಡಬಲ ಪಾರ್ಶ್ವಗಳಲ್ಲಿ ಚಚ್ಚೌಕವಾದ ಬೆಳ್ಳಿಯ ಭದ್ರಾಸನಗಳೂ ಅಣಿಮಾಡಲ್ಪಟ್ಟಿದೆ, ಮಹಾರಾಜರು ಪಾಳೆಯಗಾರರೊಡನೆ,

ಮಂತ್ರಾಲೋಚನೆ ಮಾಡಬೇಕಾದರೆ ಇದೇ ಸಭಾಮಂದಿರದಲ್ಲಿ ಬಿಜ ಯಮಾಡುತ್ತಾರೆ. ಎಡಗಡೆ ಮಂತ್ರಿಗಳ ಕಛೇರಿ. ಕಾರಕೂನರೂ, ರಾಯಭಾರಿಗಳೂ, ಅವರವರ ಅಂತಸ್ತಿಗೆ ತಕ್ಕಂತೆ ಕುಳಿತುಕೊಳ್ಳಲು ಲೋಡು ದಿಂಬುಗಳಿಂದ ಅಲಂಕರಿಸಲ್ಪಟ್ಟಿದೆ. ಕೆಳಪಡಸಾಲೆಯಲ್ಲಿ ಪಹರೆಯವರೂ ರಾಜಕರ್ಮಚಾರಿಗಳೂ ಪಹರೆ ಕೊಡುತ್ತಿದ್ದಾರೆ. ಅರ ಮನೆಯ ಎರಡು ಪಾರ್ಶ್ವಗಳಲ್ಲಿಯೂ ನಗಾರೆ ನೌಪತ್ಖಾನೆಗಳು ಅಲಂ ಕೃತವಾಗಿವೆ. ಈ ಪಡಸಾಲೆಗಳನ್ನು ದಾಟಿ ಮಹಾದ್ವಾರದಿಂದ ಅರಮ ಮನೆಯ ಒಳಗೆ ಪ್ರವೇಶಮಾಡಿದರೆ ವಿಸ್ತಾರವಾದ ಚೌಕಿ. ಮಧ್ಯದಲ್ಲಿ ವಿಶಾಲವಾದ ಕಲ್ಲಿನ ಅಂಗಳ. ಆ ಅಂಗಳದ ಮಧ್ಯದಲ್ಲಿ ಒಂದು ಚಿಕ್ಕ ದೇವಾಲಯವಿದೆ. ಆ ದೇವಾಲಯವು ಸ್ವರ್ಣಶಿಖರದಿಂದ ಪರಿಶೋಭಿ ಸುತ್ತಿದೆ. ಒಳಗೆ ಶ್ವೇತಶಿಲೆಯ ವಿನಾಯಕಮೂರ್ತಿ. ಆ ಮೂರ್ತಿಯು ವಜ್ರಕವಚದಿಂದ ಅಲಂಕೃತವಾಗಿದೆ. ಯಾವಾಗಲೂ ಗಣಪತಿಯ ಉಭಯ ಪಾರ್ಶ್ವಗಳಲ್ಲಿಯೂ ಬೆಳ್ಳಿಯ ದೀವಿಗೆಗಳಲ್ಲಿ ನಂದಾ ದೀಪವು ಉರಿಯುತ್ತದೆ. ಆ ಚೌಕಿಯಲ್ಲೆಲ್ಲಾ ಬ್ರಾಹ್ಮಣರು ಪ್ರಾತಃಕಾಲದಲ್ಲಿ ಬಂದು ಹೋಮ ಹವನಗಳನ್ನು ಜಪತಪಗಳನ್ನೂ ಮಾಡುತ್ತಾರೆ. ಮಹಾರಾಜರು ಪ್ರತಿದಿನವೂ ಅಲ್ಲಿಗೆ ಬಂದು ಆ ವಿನಾಯಕನ ಸಮ್ಮುಖ ದಲ್ಲಿ ಬ್ರಾಹ್ಮಣರಿಂದ ಫಲಮಂತ್ರಾಕ್ಷತೆಯನ್ನು ಸ್ವೀಕರಿಸಿ ಬ್ರಾಹ್ಮಣ ರಿಗೆ ಉಪಾಯನದಾನಗಳನ್ನು ಕೊಟ್ಟು ಮುಂದುಗಡೆ ಕಛೇರಿಯ ಮಹಲಿಗೆ ಬಂದು ರಾಜಕಾರ್ಯಗಳನ್ನು ತೀರಿಸಿ ಅಂತಃಪುರಕ್ಕೆ ತೆರಳು ತ್ತಾರೆ. ಆ ಚೌಕಿಯಿಂದ ಒಳಗೆ ಹೋದರೆ ದಾಸದಾಸಿಯರು ವಾಸ ಮಾಡುವ ಚೌಕಿ. ಅಲ್ಲಿ ಮಹಾರಾಣಿಯವರ ದಾಸದಾಸಿಯರೂ, ಮಹಾರಾಜರ ದೂರಬಂಧುಗಳಾದ ವೃದ್ಧನಾರಿಯರೂ ವಾಸಮಾಡುವ ಸ್ಥಳ. ಅಲ್ಲಿಂದ ಒಳಗೆ ಹೋದರೆ ವಿಶಾಲವಾದ ಪಾಠಶಾಲೆ. ಎರಡನೆಯ ತೊಟ್ಟಿಯ ಎಡಬಲ ಭಾಗಗಳಿಂದ ಮೆಟ್ಟಲುಗಳನ್ನು ಹತ್ತಿ ಮೇಲೆ ಹೋದರೆ ಅಂತಃಪುರದ ಚೌಕಿ. ವಿಶಾಲವಾದ ಮಹಲುಗಳು, ಚಂದ್ರ ಶಾಲೆಗಳು. ಮೇಲಿನಿಂದಲೇ ದಾಸದಾಸಿಯರು ಓಡಾಡುವ ಪಡಸಾಲೆ

ಗಳು! ಸ್ನಾನಗೃಹಗಳು. ಆ ಚಂದ್ರಶಾಲೆಯಿಂದ ಎಡಗಡೆ ಮೆಟ್ಟಲು ಗಳನ್ನಿಳಿದರೆ ವಿಶಾಲವಾದ ಉಪವನ. ಆ ಉಪವನದ ಮಧ್ಯದಲ್ಲಿ ಸೊಗಸಾದ ಕೊಳ. ಆ ಕೊಳಕ್ಕೆ ನಾಲ್ಕು ಕಡೆಯೂ ಅಚ್ಚುಗಟ್ಟಾಗಿ ಕಟ್ಟಲ್ಪಟ್ಟ ಮೆಟ್ಟಲುಗಳು. ಕೊಳಮಧ್ಯದಲ್ಲೊಂದು ಕಲ್ಲಿನಮಂಟಪ. ಆ ಮಂಟಪದ ಮೇಲೆ ಚಿನ್ನದ ಕಳಸಗಳು. ವಿಶಾಲವಾದ ಕೊಳದ ಮೇಲುಗಡೆ ಪುಷ್ಪವಾಟಿಕೆಗಳು, ವಿಶ್ರಾಂತಿಗೃಹ, ಮೇಲುಗಡೆ ಚಂದ್ರಶಾಲೆ. ಮಹಾರಾಜರು ಮಹಾರಾಣಿಯವರು, ಬಿಸಲುಕಾದಲ್ಲಿ ಈ ಕೊಳದ ಮೇಲುಗಡೆಯೇ ಕಾಲಕಳೆಯುವರು. ಅಂತಃಪುರದಲ್ಲಿ ಯಾವಾಗಲೂ ಮಹಾರಾಜರು ಮುಂದಿನ ತೊಟ್ಟಿಯಲ್ಲಿ ವಾಸಮಾಡುವರು. ಹಿಂದಿನ ತೊಟ್ಟಿಯು ಮಹಾರಾಣಿಯವರ ಖಾಸ್ ಅಂತಃಪುರ. ಮುಂಭಾಗದ ಎರಡು ಅಂತಸ್ತಿನಮೇಲೆ ಮೂರನೇಯ ಅಂತಸ್ತು ಇರುವುದು. ಹೊರಗಿಂದ ನೋಡಿದರೆ ಅದು ವಿಮಾನ ಕೃತಿಯಲ್ಲಿ ಕಟ್ಟಲ್ಪಟ್ಟಂತೆ ಗೋಚರವಾಗುವುದು. ಒಳಗಿನಿಂದ ಮಹಾರಾಣಿಯವರ ಅಂತಃಪುರದಿಂದ ಆ ಮೇಲ್ಮಹಡಿಗೆ ಮೆಟ್ಟಲುಗಳಿರುವುದು. ಅದು ಮಹಾರಾಣಿಯವರ ಅಂತರ್ಗೃಹ. ಅದೇ ಅವರ ವಿಲಾಸಭವನ. ನಗರದ ವೈಭವಕ್ಕೆ ತಕ್ಕಂತೆ ಆ ಅಂತಃಪುರವು ಅಲಂಕೃತವಾಗಿದೆ. ಆ ಕಾಲದಲ್ಲಿ ಅಂತಃಪುರವನ್ನು ಅಲಂಕಾರವಾಗಿಡುವುದು. ಮಹಾರಾಜರುಗಳಿಗೆ ಒಂದು ಹೆಮ್ಮೆ. ನಗರದ ಮಹಾರಾಜರು ಅದರಲ್ಲಿ ಯಾರಿಗೂ ಕಡಿಮೆಯಾಗಿರಲಿಲ್ಲ ಬಸಪ್ಪನಾಯಕನಂತೂ ಹುಟ್ಟಿದಂದಿನಿಂದಲೂ ಸುಖಪುರುಷ. ನಾನಾ ದೇಶಗಳಿಂದ ಸುಖಸಾಮಗ್ರಿಗಳು ತಾವಾಗಿ ನಗರಕ್ಕೆ ಬಂದು ಸೇರುತ್ತಿದ್ದವು. ಪಾರಸೀಸ್ಥಾನ್, ಟರ್ಕೀಸ್ಥಾನ್, ಈಜಿಪ್ಟ್‌ಗಳಿಂದ ವರ್ತಕರು ಸಮುದ್ರ ಮಾರ್ಗದಲ್ಲಿ ಕರ್ಣಾಟಕಕ್ಕೆ ವ್ಯಾಪಾರಕ್ಕಾಗಿ ಬರುತ್ತಿದ್ದರು. ಪೋರ್ಚುಗೀಸರು ನಗರದ ರಾಜರ ಆಶ್ರಯದಿಂದ ವ್ಯಾಪಾರವನ್ನು ಅಭಿವೃದ್ಧಿಗೊಳಿಸುಕೊಳ್ಳುತ್ತಿದ್ದರು. ಹೀಗೆ ನಾನಾದೇಶದ ವರ್ತಕರು ಅಮೂಲ್ಯ ವಸ್ತುಗಳನ್ನು ತಂದು ನಗರದ ರಾಜರಿಗೆ ಕಾಣಿಕೆಯನ್ನು ಒಪ್ಪಿಸುತ್ತಿದ್ದರು. ಆ ಬಿದನೂರಿನ ಅಂತಃಪುರ, ಆ ಅಂತಃಪುರದಲ್ಲಿನ

ವಿಲಾಸಭವನ, ಇವುಗಳನ್ನು ಈ ಅಮೂಲ್ಯವಸ್ತುಗಳಿಂದ ಕಾರೇಗಾರರು ಅಲಂಕರಿಸಿದ್ದರು ಆ ಭವನದ ಕಂಬಗಳಿಗೆಲ್ಲಾ ದಂತದ ಕೆತ್ತನೆಯ ಕೆಲಸವು ಮಾಡಲ್ಪಟ್ಟಿದ್ದಿತು. ಚಿನ್ನದ ಗೊಂಬೆಗಳು ಕೆತ್ತಲ್ಪಟ್ಟಿದ್ದವು. ನೆಲಕ್ಕೆ ಅನರ್ಘವಾದ ಹಸರುಬಣ್ಣದ ರತ್ನಕಂಬಳಿಯು ಹಾಸಲ್ಪಟ್ಟಿತ್ತು. ಅದರ ಮೇಲೆ ಕಮಲದ ಹೂಗಳನ್ನು ಬಿಡಿಸಿದ್ದರು. ಗೋಡೆಗಳಿಗೆ ಬೆಳ್ಳಿಯ ಕಟ್ಟಿನ ನಿಲುಗನ್ನಡಿಗಳನ್ನು ಎತ್ತಿಕಟ್ಟಿದ್ದರು. ಮೇಲುಗಡೆ ರೇಶಿಮೆಯ ಮೇಲುಕಟ್ಟನ್ನು ಕಟ್ಟಿ ಮುತ್ತಿನ ಜಾಲರಿಗಳನ್ನು ಬಿಟ್ಟಿದ್ದರು. ವಾತಾಯನಗಳಿಗೆ ರೇಶಿಮೆಯ ಫರದೆಗಳನ್ನು ಕಟ್ಟಿ ಮುತ್ತಿನ ಜಾಲರಿಗಳಿಂದ ಅಲಂಕರಿಸಿದ್ದರು. ಗೋಡೆಗಳಿಗೆ ಅನೇಕ ಚಿತ್ರಪಟಗಳು ಚಿನ್ನದ ಚೌಕಟ್ಟುಗಳಿಂದ ಅಲಂಕರಿಸಲ್ಪಟ್ಟು ರಂಜಿತವಾಗಿದ್ದುವು ಕೃಷ್ಣನು ಗೋಪಿಕಾಸ್ತ್ರೀಯರೊಡನೆ ರಾಸಕ್ರೀಡೆಯಾಡುವಂತೆ ಚಿನ್ನದ ಬೊಂಬೆಗಳಿಂದ ಪ್ರತಿಮೆಗಳನ್ನು ಮಾಡಿ ಆ ಶಯ್ಯಾಗೃಹದ ಮಧ್ಯದಲ್ಲಿ ಅಲಂಕರಿಸಿ ಇಡಲ್ಪಟ್ಟಿದ್ದಿತು. ಎರಡು ಪಾರ್ಶ್ವದಲ್ಲಿಯೂ ಪರ್ಯಂಕಗಳು ಅಳವಡಿಸಲ್ಪಟ್ಟಿದ್ದವು. ಅವೆರಡೂ ರಜತ ಪರ್ಯಂಕಗಳು ಪರ್ಯಂಕಗಳ ಮೇಲೆ ಹಂಸತೂಲಿಕಾತಲ್ಪಗಳು. ಕುತ್ತನೆಯ ದಿಂಬುಗಳು ಅಲಂಕರಿಸಲ್ಪಟ್ಟಿದ್ದವು. ಆ ವಿಲಾಸಭವನವೆಲ್ಲವೂ ಅತ್ತರುಗಳ ವಾಸನೆಯಿಂದಲೂ ಊದುಬತ್ತಿಯ ಸುಗಂಧದಿಂದಲೂ ಘಮಘಮಿಸುತ್ತಿತ್ತು. ಅಂತಹ ಸೌಧದಲ್ಲಿ, ಆ ದಿವ್ಯ ಪರ್ಯಂಕದಮೇಲೆ ರಾಣಿ ಚಲುವಮ್ಮಣ್ಣಿಯು ವಿರೂಪಾಕ್ಷನೊಡನೆ ಮಾತನಾಡುತ್ತಾ ಕುಳಿತಿದ್ದಳು. ವಾತಾಯನದಿಂದ ಬೆಳದಿಂಗಳು ಬಂದು ಪರ್ಯಂಕವನ್ನು ಬೆಳಗುತ್ತಿತ್ತು. ಆ ವಿಲಾಸಿಗಳಿಬ್ಬರೂ ಮಾತನಾಡುತ್ತಾ ಆ ಪರ್ಯಂಕದಮೇಲೆ ಕುಳಿತಿದ್ದರು.

"ದೇವಿ, ಈ ಯುದ್ಧವಾರ್ತೆಯು ತಮ್ಮ ಮನವನ್ನು ಕಲಕಿದೆಯೇನು?"

"ವಿರೂಪಾಕ್ಷ, ಹೌದು. ಈ ಯುದ್ಧವು ನನ್ನ ಮನಸ್ಸಿಗೆ ವ್ಯಾಕುಲವನ್ನುಂಟುಮಾಡಿದೆ. ನಗರಕ್ಕೆ ಅಪಾಯ ತಟ್ಟಬಹುದೆಂದು ನನ್ನ ಹೃದಯವು ಕಂಪಿಸುತ್ತದೆ."

"ರಾಣಿಯವರೇ, ಯುದ್ಧವು ಸಂಭವಿಸುವುದೇ ಇಲ್ಲ ನಾನು ದೇವರಮೇಲೆ ಆಣೆಯಿಟ್ಟು ಹೇಳುತ್ತೇನೆ."

"ಹೇಗೆ ಹೇಳುವೆ? ಯಾವ ಆಧಾರದ ಮೇಲೆ ನೀನು ನಗರಕ್ಕೆ ಅಪಾಯವಿಲ್ಲವೆಂದು ತಿಳಿದಿರುವೆ? ಹೈದರನು ನಗರದಮೇಲೆ ದಂಡೆತ್ತಿ ಬಂದು ಶ್ರೀಯರ್ಗದಲ್ಲಿ ಬೀಡುಬಿಟ್ಟಿದ್ದಾನೆಂದು ಸಮಾಚಾರವು ಬಂದಿದೆ. ಮತ್ತೇನಾಗಬೇಕು?"

"ದೇವಿ, ಮಹಾಮಂತ್ರಿಗಳು ಯಾವುದೋ ತಂತ್ರವನ್ನು ಹೂಡಿದ್ದಾರೆ. ಆ ತಂತ್ರದಲ್ಲಿ ಹೈದರನು ಕುರುಡಾಗಿ ಹೋಗುತ್ತಾನೆ" ಎಂದು ಸಣ್ಣ ನಗುವನ್ನು ನಕ್ಕನು.

ರಾಣಿಯು ನಿಟ್ಟುಸಿರುಬಿಟ್ಟು, "ಅಯ್ಯೋ ಹುಚ್ಚಾ, ಮಂತ್ರಿಯು ಮಾಯವಾಗಿದ್ದಾನೆ. ಮಂತ್ರಿಯೆಲ್ಲಿ! ನಗರವೆಲ್ಲಿ! ನಾವೆಲ್ಲಿ!"

"ದೇವಿ, ಭಗವಂತನು ತಮಗೆ ಎಷ್ಟು ಸೌಂದರ್ಯವನ್ನು ಕೊಟ್ಟಿದ್ದಾನೋ, ಎಷ್ಟು ಕಲೆಗಳನ್ನು ನಿಮ್ಮಲ್ಲಿ ಅಳವಡಿಸಿದ್ದಾನೋ, ಅಷ್ಟೇ ಚಾತುರ್ಯವನ್ನೂ ನಿಮಗೆ ಕೊಟ್ಟಿದ್ದಾನೆಂದು ಭಾವಿಸಿದ್ದೆ. ನೀವು ಹೀಗೆ ಭ್ರಾಂತರಾಗಿರುವುದು ನನಗೆ ಆಶ್ಚರ್ಯ! ಮಹಾಮಂತ್ರಿಯು ತಂತ್ರವು ಅಂತಹ ನಿಗೂಢವಾದುದೇ ಹೌದು. ಅದು ನಿಮಗೂ ಗೋಚರವಾಗಲಾರದು. ಮಂತ್ರಿಗಳು ಮಾಯವಾಗಿ ಔತುಕೊಂಡಿಲ್ಲ. ಮಂತ್ರಿಗಳು ಹೈದರನ ಶಿಬಿರಕ್ಕೆ ಹೋಗಿದ್ದಾರೆ. ಹೈದರನ ಆ ಮಹಾ ಸೈನ್ಯವನ್ನು ಏಕಾಕಿಗಳಾಗಿ ಮಂತ್ರಿಗಳು ಬುದ್ಧಿಯಿಂದ ಜಯಿಸಬಲ್ಲರು."

"ವಿರೂಪಾಕ್ಷ, ರಾಮಕೃಷ್ಣರು ಹೈದರನ ಶಿಬಿರಕ್ಕೆ ಏಕಾಕಿಯಾಗಿ ಹೋಗಿದ್ದಾರೆಂದು ಹೇಳುವೆಯಾ?"

"ಹೌದು, ರಾಣಿಯವರೇ, ರಾಮಕೃಷ್ಣರು ಹೈದರನ ಶಿಬಿರಕ್ಕೇ ಹೋಗಿದ್ದಾರೆ ತಮ್ಮ ಅಪ್ಪಣೆಯಾದರೆ ನಾನೂ ರಾಮಕೃಷ್ಣರನ್ನು ಹುಡುಕಿಕೊಂಡು ಹೋಗುತ್ತೇನೆ. ಸಮಯಬಿದ್ದರೆ ನಾನು ಮಂತ್ರಿಗಳಿಗೆ ಯತ್ಕಿಂಚಿತ್ ಸಹಾಯಮಾಡುತ್ತೇನೆ."

ರಾಣಿಯು ವಿರೂಪಾಕ್ಷನ ಕೈಹಿಡಿದುಕೊಂಡು ಮುಂಗೈ ಸವರುತ್ತಾ "ನೋಡು ವಿರೂಪಾಕ್ಷ, ನಾನು ಆ ಶತ್ರುಶಿಬಿರಕ್ಕೆ ನಿನ್ನನ್ನು ಕಳುಹಿಸಲು ಒಪ್ಪುವುದಿಲ್ಲ. ನೀನು ನನ್ನ ಸಮೀಪವನ್ನು ಬಿಟ್ಟು ಎಲ್ಲಿಗೂ ಹೋಗಬೇಡ. ಮಹಾರಾಜರು ನಿನ್ನಮೇಲೆ ಆಗ್ರಹಗೊಂಡಿರುವರು. ರಾಮಕೃಷ್ಣನೂ ನಿನಗೆ ವಿರೋಧಿಯೆಂದೇ ಭಾವಿಸುತ್ತೇನೆ. ನಮ್ಮ ಅಂತರಂಗವು ಬಹುದಿವಸ ಗೋಪ್ಯವಾಗಿರುತ್ತದೆಂಬ ನಂಬಿಕೆಯು ನನಗಿಲ್ಲ."

ವಿರೂಪಾಕ್ಷನು ಎದ್ದುನಿಂತು ಕೈಜೋಡಿಸಿ "ಮಹಾರಾಣಿಯವರೇ ಈ ಜಗತ್ತಿನಲ್ಲಿ ನನಗೆ ಎಲ್ಲಿಯೂ ಸ್ಥಳವಿಲ್ಲವೇ? ನನಗೆ ಯಾರೂ ಆಶ್ರಯದಾತರಿಲ್ಲವೇ? ನಾನು ಅನಾಥನೇ?"

ರಾಣಿಯು ಪರ್ಯಂಕದಿಂದೆದ್ದು, ಅವನ ಭುಜವನ್ನು ತಟ್ಟುತ್ತಾ, "ವಿರೂಪಾಕ್ಷ, ನೀನೇಕೆ ಆರ್ತನಾಗಿರುವೆ? ನಾನು ನಿನಗೆ ಆಶ್ರಯದಾನ ಮಾಡಿದ್ದೇನೆ. ಅದಕ್ಕಿಂತಲೂ ನಿನಗೇನು ಬೇಕು? ಈ ರಾಜ್ಯವು ನನ್ನದು. ಈ ಸಂಪತ್ತು ನನ್ನದು. ಈ ರಾಜನೂ ನನ್ನ ರೂಪದಲ್ಲಿ ಮುಗ್ಧನಾಗಿ ನನ್ನ ದಾಸಾನುದಾಸನಾಗಿದ್ದಾನೆ ನಾನು ನಿನ್ನನ್ನು ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತೇನೆ" ಎಂದು ಹೇಳುತ್ತಾ ವಿರೂಪಾಕ್ಷನನ್ನು ಆಲಿಂಗಿಸಿದಳು.

ವಿರೂಪಾಕ್ಷನು ರಾಣಿಯ ಆ ಅಮೃತವಚನಗಳಿಂದ ಮುಗ್ಧನಾಗಿ ಅವಳ ಕೋಮಲ ಬಂಧನದಿಂದ ಬಿಡಿಸಿಕೊಂಡು ಪರ್ಯಂಕದ ಮೇಲೆ ಅರ್ಧಶಾಯಿತಾವಸ್ಥೆಯಲ್ಲಿ ಬಿದ್ದನು. ಚೆಲುವಮ್ಮಣ್ಣಿಯು ವಿರೂಪಾಕ್ಷನೊಡನೆ ವಿಲಾಸಮಗ್ನಳಾಗಿ ಮೈಮರೆತಳು.

ವಿಲಾಸಿಗಳ ಭೋಗವಿಲಾಸಗಳೂ, ಚಿರದುಃಖಿಗಳ ದುಃಖ, ಕಳ್ಳರ ಆಸೆ, ರಾಜರ ಐಶ್ವರ್ಯತೃಷ್ಣೆ, ಬಡವರ ಬಡತನ, ಶತೃಗಳ ದ್ವೇಷ ಇವುಗಳೆಲ್ಲಾ ತೀರುವುದೇ ಇಲ್ಲ. ಇವುಗಳೊಂದಕ್ಕೂ ಕೊನೆಮೊದಲೇ ಇಲ್ಲ. ಆದರೆ ಕಾಲಚಕ್ರವು ಮಾತ್ರ ನಿರಂತರ ತಿರುಗುವುದು. ರಾತ್ರಿಯು ಕಳೆದುಹೋಗಿ ಹಗಲು ಬರುತ್ತದೆ. ಹಗಲು ಕಳೆದು ರಾತ್ರಿ

ಆಗುತ್ತದೆ. ಹಾಗೆಯೇ ಆ ರಾತ್ರಿಯೂ ಕಳೆದು ಬೆಳಗಾಗಿಹೋಯಿತು. ರಾಣಿಯು ವಿರೂಪಾಕ್ಷನನ್ನು ಅಂತಃಪುರದಲ್ಲಿಯೇ ಬಚ್ಚಿಟ್ಟಳು. ಭೈರವಿಯ ಸಹಾಯದಿಂದ ರಾಣಿಗೆ ಈ ಪುರುಷನನ್ನು ಅಂತಃಪುರದಲ್ಲಿ ಯಾರ ಕಣ್ಣಿಗೂ ಬೀಳದಂತೆ ಬಚ್ಚಿಡುವುದು ಪ್ರಯಾಸವಾಗಲಿಲ್ಲ.

---

## ೯

## ಷರಬತ್ತೋ ವಿಷವೋ!

ಚರಿತ್ರೆಯ ಕಥೆಗಳನ್ನು ಕಾದಂಬರಿಯಲ್ಲಿ ವಿಸ್ತರಿಸುತ್ತಾ ಹೋಗುವುದರಿಂದ ವಾಚಕರಿಗೆ ಬೇಸರವಾಗುತ್ತದೆ. ರಾಮಕೃಷ್ಣನು ಪುನಃ ನಗರದಲ್ಲಿ ಪ್ರತ್ಯಕ್ಷವಾದನು. ಮಹಾರಾಜರ ಭೇಟಿಮಾಡಿ, ಹೈದರನ ಸೈನ್ಯವು ನಗರದ ಮೇಲೆ ಬರುವುದಿಲ್ಲವೆಂದೂ ಮಹಾರಾಷ್ಟ್ರರ ಮೇಲೆ ಯುದ್ಧಕ್ಕೆಹೊರಟು ಉತ್ತರದ ಕಡೆಗೆ ಹಾದುಹೋಯಿತೆಂದೂ, ರಾಮಕೃಷ್ಣನು ಅರಿಕೆಮಾಡಿದನು. ಮಹಾರಾಜರು ರಾಮಕೃಷ್ಣನನ್ನು ತಬ್ಬಿಕೊಂಡು ಕೊಂಡಾಡಿದರು. ಮಹಾರಾಜರು ಈ ಯುದ್ಧವಿಗ್ರಹಗಳಿಂದ ನಿರ್ಲಿಪ್ತರಾಗಿ ಮಹಾದೇವನ ಸೇವೆಯನ್ನು ಸಲ್ಲಿಸಲು ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಿ ಅಲ್ಲಿಯೇ ಬಿಡಾರಮಾಡಿದರು. ನಲವತ್ತೆಂಟು ದಿವಸಗಳು ಮಹಾರಾಜರವರ ಪ್ರಾರ್ಥನೆಯಂತೆ ಮಹಾದೇವ ಮಲ್ಲಿಕಾರ್ಜುನನಿಗೆ ಮಹಾಪೂಜಾ ಮಂಗಳಾರತಿಗಳು ಪ್ರತಿದಿನವೂ ನಡೆಯುತ್ತಿದ್ದವು. ಮಹಾರಾಜರವರು ಈ ಕ್ಷೇತ್ರದಲ್ಲಿರುವಾಗ ಮಹಾರಾಣಿಯವರು ಸಂಧ್ಯಾಕಾಲದವರೆಗೂ ಅಲ್ಲಿಯೇ ಇದ್ದು ದೀಪಾರಾಧನೆಯಾದಮೇಲೆ ಅರಮನೆಗೆ ತೆರಳುತ್ತಿದ್ದರು.

ಒಂದು ದಿನ ರಾತ್ರಿ ಇದ್ದಕ್ಕಿದ್ದಂತೆ ಬಸಪ್ಪನಾಯಕರು ಅರಮನೆಗೆ ಬಿಜಯಮಾಡಿದರು. ಅವರು ರಾಣಿಯವರ ಅಂತಃಪುರಕ್ಕೆ ಹಟಾತ್ತನೆ ಪ್ರವೇಶಮಾಡಿದರು. ಬಾಗಿಲುಗಳು ಬಂಧಿಸಲ್ಪಟ್ಟಿದ್ದವು. ಶಬ್ದವನ್ನು

ಕೇಳಿ ಗಿರಿಜೆಯು ಹಸ್ತಲಾಘವವನ್ನಿತ್ತು ಮಹಾರಾಜರವರನ್ನು ರಾಣಿ ಚೆಲುವಮ್ಮಣ್ಣಿಯ ವಿಲಾಸಗೃಹಕ್ಕೆ ಕರೆದೊಯ್ದಳು. ಮಹಾರಾಣಿಯು ಬಂದು ಹಜಾರದಲ್ಲಿಯೇ ಮಹಾರಾಜರನ್ನು ಎದುರುಗೊಂಡು ಕೈಹಿಡಿದು ವಿಲಾಸಭವನದೊಳಗೆ ಕರೆದೊಯ್ದಳು. ಅಲ್ಲಿ ಸ್ವರ್ಣಖಚಿತವಾದ ಆಸನದ ಮೇಲೆ ಮಹಾರಾಜರನ್ನು ಕುಳ್ಳಿರಿಸಿ ಪಕ್ಕದಲ್ಲಿ ಮಹಾರಾಣಿಯು ನಿಂತುಕೊಂಡಳು. ರಾಜನು ಸತೃಷ್ಣನಯನನಾಗಿ ರಾಣಿಯನ್ನು ನೋಡಿದನು. ಚೆಲುವಮ್ಮಣ್ಣಿಯು ಚಂದ್ರಗಾವಿಯ ಸೀರೆಯನ್ನು ಉಟ್ಟಿದ್ದಳು. ಕರಿಯಬಣ್ಣದ ರೇಶಿಮೆಯ ಕಂಚುಕವನ್ನು ತೊಟ್ಟಿದ್ದಳು. ಕಂಠದಲ್ಲಿ ಮೂರೆಳೆಯ ಮುತ್ತಿನಹಾರವು ರಂಜಿಸುತ್ತಿತ್ತು. ಕೈಯಲ್ಲಿ ರತ್ನಖಚಿತವಾದ ಬಾಹುವಲಯಗಳು ಅಲಂಕೃತವಾಗಿದ್ದುವು. ಕೇಶದಾಮವು ಕಟ್ಟಲ್ಪಟ್ಟು ಮುತ್ತಿನ ಸರದಿಂದ ಬಂಧಿತವಾಗಿ ಎಡಗಡೆ ಕುಚ್ಚು ಹಾರುತ್ತಿತ್ತು. ಹಣೆಯಲ್ಲಿ ತಿಲಕವು ಕಂಗೊಳಿಸುತ್ತಿತ್ತು. ಆ ಎತ್ತರವಾದ ಬಳಕುವ ಶರೀರ, ದೀರ್ಘವಾದ ಕೋಮಲವಾದ ಬಾಹುಲತೆಗಳು, ಸ್ನಿಗ್ಧವಾದ ರಕ್ತವರ್ಣ ರಂಜಿತವಾದ ಹಸ್ತಗಳು, ಬೆಳ್ಳಗೆ ದುಂಡಾಗಿ ಕಂಚುಕದಿಂದ ಎದ್ದು ಬಂದು ಶೋಭಿಸುತ್ತಿರುವ ಕಂಠ, ಗುಂಡಾದ ಮನೋಹರವಾದ ವದನ. ವಿಶಾಲವಾದ ನಯನಯುಗ್ಮ, ದೀರ್ಘವಾದ ಹುಬ್ಬುಗಳು. ಎಳಸಾದ ಅಂದವಾದ ನಾಸಿಕ. ತೆಳುವಾದ ಮಧುರವಾದ ಅಧರೋಷ್ಟಗಳು. ಪೋಣಿಸಿದ ಮುತ್ತುಗಳಂತೆ ಶೋಭಿಸುತ್ತಿರುವ ದಂತಗಳು. ವಜ್ರಖಚಿತವಾದ ಕುಂಡಲಾಲಂಕೃತವಾದ ಕರ್ಣಯುಗ್ಮ. ವಿಶಾಲವಾದ ಲಲಾಟ. ಥಳಥಳಿಸುವ ರಕ್ತಿಮಾಯುತವಾದ ಕಪೋಲಗಳು. ಇಪ್ಪತ್ತೆರಡು ವರ್ಷ ವಯಸ್ಸಿನ ತರುಣಿ. ಆ ಮನೋಹರ ರೂಪವನ್ನು ವೃದ್ಧರಾಜನು ನೋಡಿ ನೋಡಿ ಪ್ರೇಮವಿಹ್ವಲನಾಗಿ ಚೆಲುವಮ್ಮಣ್ಣಿಯ ಕೈಹಿಡಿದು ಎಳೆದು ಆಲಿಂಗಿಸಿ ಕಪೋಲಗಳನ್ನು ಚುಂಬಿಸಿದನು. ಬಸಪ್ಪನಾಯಕನು ಅಂದು ಕಾಮಾತುರನಾಗಿ ಅಂತಃಪುರಕ್ಕೆ ಬಂದಿದ್ದನು. ರಾಜನು ರಾತ್ರಿಯೆಲ್ಲವನ್ನೂ ಆ ವಿಲಾಸ ಗೃಹದಲ್ಲಿಯೇ ಕಳೆದನು.

ಎರಡು ಮೂರು ದಿವಸಗಳೊಳಗಾಗಿ ರಾಜನು ಜ್ವರತಪ್ತನಾಗಿ ದ್ದಾನೆಂದು ಮಂತ್ರಿಗೆ ವರ್ತಮಾನವು ತಿಳಿಯಿತು. ರಾಜವೈದ್ಯರು ಬಂದು ಔಷಧಿಗಳನ್ನು ಕೊಡಲಾರಂಭಿಸಿದರು. ಚೆಲುವಮ್ಮಣ್ಣಿಯು ಸ್ವಯಂ ರಾಜನನ್ನು ಉಪಚರಿಸುತ್ತಿದ್ದಳು. ರಾಜನು ಅಂತಃಪುರ ದಲ್ಲಿಯೇ ರುಗ್ಣಶಯ್ಯೆಯಲ್ಲಿ ಮಲಗಿದ್ದನು. ಮಂತ್ರಿಯು ಬಂದು ಭೇಟಿ ಮಾಡಿದನು. ರಾಜವೈದ್ಯರು ರಾಜನಿಗೆ ಪ್ರಾಣಭಯವಿಲ್ಲವೆಂದು ಮಂತ್ರಿಗೆ ಭರವಸೆ ಕೊಡುತ್ತಿದ್ದರು. ಮಂತ್ರಿಯು ಪ್ರತಿದಿನವೂ ಬಂದು ವಿಚಾರಿಸಿಕೊಳ್ಳುತ್ತಿದ್ದನು. ಆದರೂ ಭಯ ಆತಂಕಗಳು ಇಡೀ ನಗರ ದೊಳಗೆ ತಾಂಡವವಾಡುತ್ತಿದ್ದವು.

ವಾಚಕರು ಈ ಸಮಯದಲ್ಲಿ ವಿರೂಪಾಕ್ಷನನ್ನು ಹುಡುಕುತ್ತಿರ ಬಹುದು. ಗಿರಿಜೆಯು ವಿರೂಪಾಕ್ಷನನ್ನು ಉದ್ಯಾನವನದ ಸರೋವರದ ಮೇಲಿನ ಚಂದ್ರಶಾಲೆಯ ಮಾಳಿಗೆಯಲ್ಲಿ ಬಚ್ಚಿಟ್ಟಿದ್ದಳು. ಗಿರಿಜೆಗೂ ವಿರೂಪಾಕ್ಷನಿಗೂ, ಪ್ರಾಣಪ್ರಾಣ ಸ್ನೇಹವು ಬೆಳೆದುಹೋಗಿತ್ತು. ವಿರೂ ಪಾಕ್ಷನಿಗೆ ಗಿರಿಜೆಯ ಮೋಹವು ಪ್ರಬಲವಾಗಿತ್ತೋ, ಚೆಲುವಮ್ಮಣ್ಣಿಯ ಮೋಹವು ಪ್ರಬಲವಾಗಿತ್ತೋ, ಹೇಳುವುದು ಸಾಧ್ಯವಿಲ್ಲ. ಚೆಲು ವಮ್ಮಣ್ಣಿ, ಗಿರಿಜೆಯರಿಬ್ಬರೂ ವಿರೂಪಾಕ್ಷನನ್ನು ಒಂದೇ ವಿಧವಾಗಿ ಪ್ರೀತಿಸುತ್ತಿದ್ದರು. ಚೆಲುವಮ್ಮಣ್ಣಿಗೆ ವಿರೂಪಾಕ್ಷನಿಗೂ ಗಿರಿಜೆಗೂ ಪ್ರೇಮಬಂಧವಿರುವುದೆಂದು ಗೊತ್ತಿರಲಿಲ್ಲ. ಬಸಪ್ಪನಾಯಕನು ರುಗ್ಣಾ ವಸ್ಥೆಯಲ್ಲಿ ರಾಣಿಯ ಅಂತಃಪುರದಲ್ಲಿರುವಾಗ ವಿರೂಪಾಕ್ಷನಿಗೆ ರಾಣಿಯ ಭೇಟಿಯು ದುರ್ಲಭವಾಗಿತ್ತು. ಆದರೆ ಸರ್ವದಾ ಗಿರಿಜೆಯ ಸಾನ್ನಿಧ್ಯವು ಅವನಿಗೆ ಸಿದ್ಧವಾಗಿಯೇ ಇತ್ತು.

ಗಿರಿಜೆಯು ಒಳ್ಳೆಯ ದಿಟ್ಟವಾದ ಹುಡುಗಿ. ಮಟ್ಟಸವಾದ ಆಕಾರ. ಶ್ಯಾಮಲವರ್ಣ. ಪುಷ್ಟವಾದ ಅಂಗಾಂಗಗಳು. ಶರೀರ ಸೌಷ್ಠವವು ಅತಿಶಯವಾದುದೆಂದು ಹೇಳಲಾಗುವುದಿಲ್ಲ. ಉಜ್ವಲವಾದ ಕಣ್ಣುಗಳು. ಅತ್ಯಂತ ಚತುರೆ. ಮಾತುಗಳಲ್ಲಿ ಜೇನು ಕರೆಯುವ ಮಾಧುರ್ಯ. ಆಕಾಶವನ್ನು ಸೀಳಿ ಗಂಧರ್ವಲೋಕಕ್ಕೆ ಹಾರಿ ಮಂದರ

ಪುಷ್ಪವನ್ನು ತರಬಲ್ಲ ಸಾಹಸ. ಒಟ್ಟನಲ್ಲಿ ಹೇಳುವುದೆಂದರೆ ವಿರೂಪಾಕ್ಷನು ಚೆಲುವಮ್ಮಣ್ಣಿಯ ಮನಸ್ಸನ್ನು ಆಕರ್ಷಿಸಿ ತನ್ನ ಪ್ರೇಮ ಪುತ್ಥಳಿಯಾಗಿ ಮಾಡಿಕೊಂಡಿದ್ದನು. ಗಿರಿಜೆಯು ಆ ವಿರೂಪಾಕ್ಷನನ್ನು ಪಾರಿವಾಳವಾಗಿಮಾಡಿ ತನ್ನ ಜೋಳಿಗೆಯಲ್ಲಿ ಬಚ್ಚಿಟ್ಟುಕೊಂಡಿದ್ದಳು.

ಆ ಅಂತಃಪುರಕ್ಕೆಲ್ಲಾ ಗಿರಿಜೆಯೇ ಅಧಿಷ್ಠಾತ್ರಿ. ಒಂದು ಪಕ್ಷ ಯಾರಾದರೂ ಅವಳನ್ನು ಒಬ್ಬ ಸಂಗಡಿಗನೊಡನೆ ನೋಡಿದ್ದರೂ ಅವಳಿಗೆ ಶಂಕೆಯಿರಲಿಲ್ಲ. ಏಕೆಂದರೆ ಅವಳು ಯಾರಿಗೂ ಭಯಪಡ ಬೇಕಾಗಿರಲಿಲ್ಲ. ರಾಣಿ ಚೆಲುವಮ್ಮಣ್ಣಿಗೆ ಪ್ರೇಮಾಸ್ಪದವಾದ ಗೆಳತಿಯವಳು. ಮಹಾರಾಜರ ಆದರಕ್ಕೆ ಪಾತ್ರಳಾದ ತರುಣಿ. ಮಹಾರಾಜರು ತಕ್ಕ ವರನನ್ನು ಒಲಿದು ಮದುವೆಯಾಗುವಂತೆ ಅವಳನ್ನು ಎಷ್ಟೋ ಸಾರಿ ಪ್ರೇರೇಪಿಸುತ್ತಿದ್ದರು. ರಸಿಕನಾದ ರಾಜನು ಆ ವಿಲಾಸವತಿಯಾದ ತರುಣಿಯ ಯೌವನವು ಕಾನನಚಂದ್ರಿಕೆಯಂತೆ ವ್ಯರ್ಥವಾಗಬಾರದೆಂದು ಹಾರೈಸುತ್ತಿದ್ದನು. ಇಂತಹ ಸನ್ನಿವೇಶದಲ್ಲಿ ಗಿರಿಜೆಯು ಸಮಾನ ವಯೋರೂಪ ಸಂಪನ್ನನಾದ ತರುಣನೊಬ್ಬನೊಡನೆ, ಉದ್ಯಾನ ವನದಲ್ಲಿರುವುದು ಕೊಂಚವಾದರೂ ಶಂಕಾಸ್ಪದವಾಗಿರಲಿಲ್ಲ. ಅಂದು ಅವರಿಬ್ಬರೂ ಉದ್ಯಾನವನದಲ್ಲಿ ಒಂದು ಕಲ್ಲಿನ ಮೇಲೆ ಕುಳಿತು ಸಮಾಲೋಚನೆ ನಡೆಸುತ್ತಿದ್ದರು. ವಿರೂಪಾಕ್ಷನು ಗಿರಿಜೆಯ ಕಂಠವನ್ನು ತನ್ನ ಬಾಹುಪಾಶದಿಂದ ಬಂಧಿಸಿ ಅವಳನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು "ಗಿರಿಜೆ, ಮಹಾರಾಜರ ದೇಹಾಲಸ್ಯವು ಹೇಗಿದೆ?" ಎಂದು ಕೇಳಿದನು.

"ಜ್ವರವೇಗವು ಅತಿಯಾಗಿಯೇ ಇದೆ. ವೈದ್ಯರು ಧೈರ್ಯ ಹೇಳುತ್ತಾರೆ. ನನಗೇಕೋ ಭಯವಾಗುತ್ತಿದೆ."

"ಗಿರಿಜೆ, ನನಗೂ ಭಯವಾಗಿಯೇ ಇದೆ. ಒಂದು ಪಕ್ಷ ಮಹಾರಾಜರು ಕಾಲವಾದರೆ ರಾಣಿಗೆ ಈ ಅಂತಸ್ತು, ಈ ಭೋಗ ಭಾಗ್ಯಗಳೆಲ್ಲಿ ಬರಬೇಕು?"

ಗಿರಿಜೆಯು ವಿರೂಪಾಕ್ಷನ ಕಂಠವನ್ನು ತೋಳುಗಳಿಂದ ಬಂಧಿಸಿ,

ಆಲಿಂಗಿಸಿ ಅವನ ಕಪೋಲವನ್ನು ಚುಂಬಿಸುತ್ತಾ, "ಪ್ರಾಣನಾಥ, ರಾಜ ನಿದ್ದರೇನು? ಹೋದರೇನು ? ನಮಗೇಕೆ ಈ ಹಂಬಲ? ಈ ಅಂತರಂಗ ಜೀವನವು ನನಗೆ ಅಸಹ್ಯವಾಗಿದೆ. ನೀನೂ ನಾನೂ ಈ ರಾತ್ರಿಯೇ ಇಲ್ಲಿಂದಹೊರಟು ಬೇರಾವ ರಾಜ್ಯಕ್ಕಾದರೂ ಹೋಗಿ ಸುಖವಾಗಿ ಜೀವಿಸೋಣ."

"ಯಾವ ರಾಜ್ಯಕ್ಕೆ ಹೋಗುವುದು ? ಎಲ್ಲಿ ನಾವು ಇರುವುದು ?"

" ಅಯ್ಯೋ ಪರಾಕ್ರಮಶಾಲಿಯೇ, ಪುರುಷನಾಗಿ ಹುಟ್ಟಿ ಈ ಭೂಮಿಯ ಮೇಲೆ ಬದುಕುವುದನ್ನರಿಯೆಯಾ? ನಡೆ. ನನ್ನೊಡನೆ ಬಾ. ನಾನು ಪುನಃ ಭೈರವಿಯಾಗುವೆನು. ನೀನು ಸನ್ಯಾಸಿಯಾಗು. ನಾನು ಭಿಕ್ಷವೆತ್ತಿ ನಿನ್ನನ್ನು ಪೋಷಣೆಮಾಡುವೆನು."

ವಿರೂಪಾಕ್ಷನು ಗಿರಿಜೆಯ ಚುಬುಕವನ್ನು ಹಿಡಿದು ಅಲ್ಲಾಡಿಸಿ ಅಧರದ ಮೇಲೆ ಮುತ್ತಿಟ್ಟು "ಪ್ರೇಯಸಿ, ಆ ಸನ್ಯಾಸಿ ಜೀವನವು ನನಗೆ ಹೇಯವಾಗಿದೆ. ನಾನು ಮತ್ತೊಮ್ಮೆ ಆ ಕಾಷಾಯ ವಸನಗಳನ್ನು ಧರಿಸುವುದಿಲ್ಲ."

"ನಡೆ, ಹಾಗಾದರೆ ಪುಣೆಗೆಹೋಗುವ. ಪೇಷ್ವೆಗಳ ದರಬಾರಿನಲ್ಲಿ ನಿನಗೊಂದು ಚಾಕರಿಯನ್ನು ಕೊಡಿಸುತ್ತೇನೆ. ಇಲ್ಲದಿದ್ದರೆ ಹೈದರನ ಸಮೀಪಕ್ಕೆ ಹೊರಡು. ಅಲ್ಲಿ ನಿನಗೊಂದು ಸೈನ್ಯಾಧಿಕಾರವನ್ನು ಕೊಡಿಸುತ್ತೇನೆ."

"ಇಲ್ಲ ಗಿರಿಜೆ, ನಾವಿಬ್ಬರೂ ಈ ನಗರವನ್ನು ಬಿಟ್ಟು ಏಕೆ ಹೋಗ ಹೋಗಬೇಕು? ನಾನು ರಾಣಿಯ ಅಪ್ಪಣೆಯನ್ನು ಪಡೆದು ಪ್ರತ್ಯಕ್ಷ ವಾಗಿ ನಿನ್ನನ್ನು ಮದುವೆಯಾಗುತ್ತೇನೆ. ನಾವಿಬ್ಬರೂ ಈ ನಗರ ದಲ್ಲಿಯೇ ಇರೋಣ. ನಾನು ನಮಗಾಗಿ ಚಿಂತಿಸುವುದಿಲ್ಲ. ರಾಣಿ ಚೆಲವಮ್ಮಣ್ಣಿಯು ಸೌಭಾಗ್ಯದ ಖನಿ. ಅವಳು ಈ ಐಶ್ವರ್ಯ, ಈ ಭೋಗ ಭಾಗ್ಯಗಳು, ಎಲ್ಲಕ್ಕಿಂತ ಮಿಗಿಲಾಗಿ ಈ ರಾಣಿಗಿರಿಯ ಹೆಮ್ಮೆ. ಇವು ಗಳಿಲ್ಲದಿದ್ದರೆ ಸರೋವರದಿಂದ ಕಿತ್ತುಹಾಕಿದ ಕಮಲದಂತಾಗುವಳು. ಅದಕ್ಕಾಗಿ ನಾನು ಚಿಂತಿಸುತ್ತೇನೆ."

"ವಿರೂಪಾಕ್ಷ, ರಾಜರ ಅಂತರಂಗವು ನಿನಗೆ ಗೊತ್ತಿಲ್ಲ. ಅವರ ಕಾಲವು ಸನ್ನಿಹಿತವಾದರೆ ಮಹಾರಾಣಿಯವರಿಗೆ ಈ ರಾಜ್ಯದ ಪಟ್ಟವನ್ನು ಕಟ್ಟಿ ಇಹಲೋಕವನ್ನು ತ್ಯಜಿಸುವರು."

"ಗಿರಿಜೆ, ಪ್ರತ್ಯಕ್ಷವಾಗಿ ಯುವರಾಜ ಚೆನ್ನಬಸವರಾಜರು ಷೋಡಶ ವಯಸ್ಕರಾಗಿರುವಾಗ ಅವರಿಗೆ ಪಟ್ಟವನ್ನು ಕಟ್ಟದೇ ವಿಧವೆಯಾದ ರಾಣಿಗೆ ನಗರದ ಪಟ್ಟವನ್ನು ಕಟ್ಟಲು ಜನರು, ಪಾಳೆಯಗಾರರು ಒಪ್ಪುತ್ತಾರೆಯೇ ?"

ಗಿರಿಜೆಯು ನಗುತ್ತಾ, "ಆ ರಹಸ್ಯವನ್ನು ನೀನರಿಯೆ. ಮಹಾರಾಜರು ಚೆಲುವಮ್ಮಣ್ಣಿಯನ್ನು ಮದುವೆಯಾಗುವಾಗ ಅವಳಿಗೇ ಪಟ್ಟ ಕಟ್ಟುವುದಾಗಿ ಪ್ರಮಾಣಮಾಡಿದ್ದಾರೆ. ಮಂತ್ರಿ ರಾಮಕೃಷ್ಣರು ಮತ್ತು ಮಹಂತ ಅಭಿರಾಮಸ್ವಾಮಿಗಳೂ ಅದಕ್ಕೆ ಸಾಕ್ಷಿ. ಮಲ್ಲಿಕಾರ್ಜುನ ದೇವರ ಮುಂದೆ ಚೆಲುವಮ್ಮಣ್ಣಿಯ ತಂದೆಗೆ ಮಹಾರಾಜರು ಪ್ರಮಾಣ ವಚನವನ್ನಿತ್ತಿದ್ದಾರೆ."

"ಗಿರಿಜೆ, ಒಳ್ಳೆಯ ಪ್ರಮಾಣ. ಭೀಷ್ಮನು ಅಂಬಿಗರ ಕನ್ಯೆಗೆ ಪ್ರಮಾಣಮಾಡಿಕೊಟ್ಟಂತಾಯಿತು."

"ಹೌದು ವಿರೂಪಾಕ್ಷ, ಭೀಷ್ಮನು ಅಂಬಿಗರ ಕನ್ಯೆಗೆ ವಚನವಿತ್ತು ಆಮರಣಾಂತ ಬ್ರಹ್ಮಚರ್ಯವನ್ನು ಪಾಲಿಸಿದನು. ನಮ್ಮ ಮಹಾರಾಜನು ಕಾಮುಕನಾಗಿ ಚೆಲುವಮ್ಮಣ್ಣಿಯ ತಂದೆಗೆ ಪ್ರಮಾಣ ವಚನವಿತ್ತು ಅಂತಃಪುರದಲ್ಲಿ ರಾಣಿಯ ಪಾದತಲದಲ್ಲಿ ರುಗ್ಣಾವಸ್ಥೆಯಲ್ಲಿ ಬಿದ್ದು ನರಳುತ್ತಿದ್ದಾನೆ. ಇಂದೋ ನಾಳೆಯೋ ಲೋಕಾಂತರವನ್ನು ಸೇರುತ್ತಾನೆ. ಭೀಷ್ಮನೆಲ್ಲಿ? ನಮ್ಮ ರಾಜನೆಲ್ಲಿ? "

"ಗಿರಿಜೆ, ನಾನು ಪುರಾಣದ ಕಥೆಗಳನ್ನು ಹೇಳುವುದಕ್ಕೆ ಬಂದಿಲ್ಲ. ರಾಣಿಗೆ ಪಟ್ಟವಾಗುವುದೆಂದರೆ ನನಗೆಷ್ಟೋ ಸಂತೋಷ."

ಗಿರಿಜೆಯು "ನನಗೂ ಎಷ್ಟೋ ಸಂತೋಷ" ಎಂದು ಹೇಳಿ ವಿರೂಪಾಕ್ಷನೊಡನೆ ಚಂದ್ರಶಾಲೆಯ ಪಾವಟಿಗೆಗಳನ್ನು ಹತ್ತಿ ಮಾಳಿಗೆಯ ಮೇಲೆ ಹೋದಳು. ವಿರೂಪಾಕ್ಷನು ಗಿರಿಜೆಯನ್ನು ಕುರಿತು "ಗಿರಿಜೆ,

ಅರ್ಧರಾತ್ರಿಯು ಹೊತ್ತಾಗಿದೆ. ಒಂದುಬಾರಿ ನನ್ನನ್ನು ರಾಣಿಯು ಅಂತಃ ಪುರಕ್ಕೆ ಕರೆದೊಯ್ಯುವೆಯಾ? ನನಗೆ ಮಹಾರಾಜರನ್ನು ಒಂದುಬಾರಿ ನೋಡಬೇಕೆಂದು ಕುತೂಹಲವುಂಟಾಗಿದೆ” ಎಂದು ಹೇಳಿದನು. ಗಿರಿಜೆಯು ವಿರೂಪಾಕ್ಷನನ್ನು ಕರೆದುಕೊಂಡು ಹೋಗಲು ಒಪ್ಪಿದಳು.

ವಿರೂಪಾಕ್ಷನು ಲಗುಬಗೆಯಿಂದ ಗಿರಿಜೆಯ ಜೊತೆಯಲ್ಲಿ ಅಂತಃ ಪುರಕ್ಕೆ ಹೋದನು.

ಬಸಪ್ಪನಾಯಕನಿಗೆ ತೂಗುಹತ್ತಿತ್ತು. ರಾಣಿಯು ಮಹಾ ರಾಜರವರ ರುಗ್ಣಶಯ್ಯೆಯ ಒಂದು ಕೊನೆಯಲ್ಲಿ ಕುಳಿತಿದ್ದಳು. ಗಿರಿಜೆಯು ಮುಂದೆಮುಂದೆ ಹೋಗಿ ರಾಣಿಯ ಕಿವಿಯಲ್ಲಿ “ವಿರೂಪಾಕ್ಷನು ಮಹಾರಾಜರವರ ಶಯ್ಯೆಯ ಪಕ್ಕಕ್ಕೆ ಬಂದು ಅವರನ್ನು ನೋಡಬಹುದೇ? ಮಹಾರಾಜರು ಅವನನ್ನು ಗುರುತಿಸ ಲಾರರೇ?” ಎಂದು ಪಿಸುಗುಟ್ಟಿದಳು. ರಾಣಿಯು “ವಿರೂಪಾಕ್ಷನು ರಾಜರನ್ನು ನೋಡುವುದಾದರೆ ಬಂದು ನೋಡಲಿ, ಅವರು ಅರ್ಧ ಜ್ಞಾನಾವಸ್ಥೆಯಲ್ಲಿದ್ದಾರೆ” ಎಂದು ಹೇಳಿದಳು. ವಿರೂಪಾಕ್ಷನು ಮಹಾ ರಾಜರ ತಲೆಯ ಸಮೀಪದಲ್ಲಿ ಬಂದು ಬಗ್ಗಿನೋಡಿದನು. ನೆತ್ತಿಯ ಮೇಲೆ ಕೈಯಿಟ್ಟು ನೋಡಿದನು. ನಾಡಿಯನ್ನು ಹಿಡಿದು ನೋಡಿದನು. ಪಾದಗಳ ಉಂಗುಷ್ಠವನ್ನು ಎಳೆದು ನೋಡಿದನು. ಅಲ್ಲಿಂದ ರಾಣಿಯ ವಿಲಾಸಗೃಹದಕಡೆಗೆ ಮೆಲ್ಲಡಿಯಿಡುತ್ತಾ ಹೊರಟುಹೋದನು. ರಾಣಿಯು ಗಿರಿಜೆಯನ್ನು ಮಹಾರಾಜರ ಸಮೀಪದಲ್ಲಿರುವಂತೆ ಹೇಳಿ ಅಂತರ್ಗೃಹವನ್ನು ಪ್ರವೇಶಿಸಿದಳು. ಅಲ್ಲಿ ರಾಣಿಯೂ, ವಿರೂಪಾಕ್ಷನೂ ಬಹಳಹೊತ್ತು ಸಂಭಾಷಣೆ ಮಾಡುತ್ತಿದ್ದರು. ಕೊನೆಗೆ ಅವರಿಬ್ಬರೂ ಹೊರಗೆ ಬಂದರು. ಅಷ್ಟುಹೊತ್ತಿಗೆ ರಾಜನಿಗೆ ನಿದ್ದೆ ಯಿಂದ ಎಚ್ಚರವಾಯಿತು. ಕಣ್ಣುಬಿಟ್ಟು “ಚೆಲುವೆ, ಬಾಯಾರಿಕೆ ಯಾಗುತ್ತಿದೆ. ಷರಬತ್ತನ್ನು ತಂದುಕೊಡು” ಎಂದು ಕೇಳಿದನು. ಆಗ ರಾಜನಿಗೆ ಪೂರ್ಣವಾಗಿ ಜ್ಞಾನವು ಬಂದಿದೆಯೆಂದೇ ರಾಣಿಗೆ ಬೋಧೆ ಯಾಯಿತು. ರಾಣಿಯು ತಕ್ಷಣ ಷರಬತ್ತುಕೊಡುವುದಾಗಿ ಹೇಳಿ

ಪಾತ್ರೆಯಲ್ಲಿ ಸಿದ್ಧಮಾಡಿಟ್ಟಿದ್ದ ಪರಬತ್ತನ್ನು ತಂದು ರಾಜನ ಕೈಗೆ ಕೊಡುವುದಕ್ಕೆ ಹೋದಳು. ಬಸಪ್ಪನಾಯಕನು "ಚೆಲುವೆ, ನನ್ನ ಕೈ ನಡುಗುತ್ತದೆ. ನೀನೇ ಕುಡಿಸು" ಎಂದನು. ಚೆಲುವೆಯು ರಾಜನ ಬಾಯಿಯ ಹತ್ತಿರ ಪಾತ್ರೆಯನ್ನು ಹಿಡಿದು ಬಗ್ಗಿಸುವಷ್ಟರಲ್ಲಿ ಕೈ ನಡುಗಿತು. ತಕ್ಷಣ ಯಾರೋ ಹಿಂದಿನಿಂದ ಆ ಪಾತ್ರೆಯನ್ನು ತೆಗೆದು ಕೊಂಡು ರಾಜನ ತಲೆಯಮೇಲೆ ಕೈಯಿಟ್ಟು ಆ ಪರಬತ್ತನ್ನು ಪೂರ್ತಿ ಯಾಗಿ ರಾಜನ ಬಾಯಿಯಲ್ಲಿ ಸುರಿದುಬಿಟ್ಟರು. ರಾಣಿಯು ತಲೆ ತಿರುಗಿ ಭೂಮಿಯಮೇಲೆ ಬಿದ್ದಳು. ರಾಜನು ವಿಷವೇಗದಿಂದ ಒದ್ದಾಡುತ್ತಾ, "ಚೆಲುವೆ, ಚೆಲುವೆ," ಎಂದು ಆರ್ತನಾದ ಮಾಡುತ್ತಾ ಜ್ಞಾನಶೂನ್ಯನಾದನು. ಬೆಳಗಿನಝಾವ ಕೋಳಿಕೂಗುವ ಹೊತ್ತಾ ಗಿತ್ತು. ಅರುಣೋದಯಕ್ಕೆ ಮುಂಚೆ ಬಸಪ್ಪನಾಯಕನು ಪರಂಧಾಮ ವನ್ನೈದಿದನು. ಗಿರಿಜೆಯೊಬ್ಬಳು ಎವೆಯಿಕ್ಕದೇ ಈ ಭಯಂಕರದೃಶ್ಯ ವನ್ನು ನೋಡುತ್ತಿದ್ದಳು. ಆ ಅಂತಃಪುರದಲ್ಲಿ ಎಲ್ಲವೂ ನಿಶ್ಶಬ್ದ.

---

## ೧೦

## ರಾಮಕೃಷ್ಣನ ರಾಜ್ಯಪರಿತ್ಯಾಗವೇ!

ಚೆಲುವಮ್ಮಣ್ಣಿಯು ನಗರದ ಸಿಂಹಾಸನವನ್ನೇರಿ ಒಂದುವರ್ಷ ಕಳೆಯಿತು. ಇಂದು ಅವಳು ರಾಣಿವಾಸದ ಹೆಣ್ಣಲ್ಲ. ಸ್ವಯಂ ರಾಜ್ಯಾ ಧಿಕಾರವನ್ನು ನಡೆಸುವ ಮಹಾರಾಣಿ. ಈಗ ಯಾರೂ ಅವಳನ್ನು ಚೆಲುವಮ್ಮಣ್ಣಿ, ರಾಣಿ ಚಲುವಮ್ಮಣ್ಣಿ ಹೀಗೆ ಹೆಸರೆತ್ತಿ ಮಾತನಾಡು ವುದಿಲ್ಲ. ಎಲ್ಲೆಲ್ಲಿಯೂ "ನಗರದ ರಾಣಿ" ಎಂದು ಕರೆಯುತ್ತಾರೆ. ಪ್ರಜೆಗಳಿಗೆ ಮಹತ್ತರವಾದ ಗೌರವವಿದೆ. ಬ್ರಾಹ್ಮಣರು, ವೀರಶೈವರು ನಾಡವರು, ಮುಸಲ್ಮಾನರು ಎಲ್ಲರಿಗೂ ರಾಣಿಯನ್ನು ಕಂಡರೆ ಬಲು ವಿಶ್ವಾಸ. ನಗರದ ದಾನಧರ್ಮಗಳೆಲ್ಲಾ ಹಿಂದಿನಕಾಲಕ್ಕಿಂತಲೂ

ಅತಿಶಯವಾಗಿ ಈಗ ನಡೆಯುತ್ತವೆ. ರಾಣಿಯು ಯಥಾಪ್ರಕಾರ ಮಲ್ಲಿಕಾರ್ಜುನದೇವಾಲಯಕ್ಕೆ ಹೋಗಿಬಿಡುತ್ತಾಳೆ. ಮೊದಲಿಗಿಂತಲೂ ಹೆಚ್ಚು ಭಕ್ತಿಯಿಂದ ದೇವತಾರಾಧನೆಗಳನ್ನು ನಡೆಸುತ್ತಾಳೆ. ಯುವ ರಾಜನಾದ ಚಿನ್ನಬಸಪ್ಪನಾಯಕನನ್ನು ಅತ್ಯಂತ ಪ್ರೀತಿವಿಶ್ವಾಸಗಳಿಂದ ನೋಡುತ್ತಾಳೆ. ಚಿನ್ನಬಸಪ್ಪನಾಯಕನೂ ದೈವಭಕ್ತಿ, ದೊಡ್ಡವರಲ್ಲಿ ವಿನಯ, ಮಾತೃಭಕ್ತಿ ಎಲ್ಲದರಲ್ಲಿಯೂ ನಿಸ್ಸೀಮನಾಗಿದ್ದಾನೆ.

ಆದರೆ ರಾಣಿಗೆ ಕೊರತೆಗಳಿಲ್ಲದೇ ಇರಲಿಲ್ಲ. ಅವಳು ರಾಜಕೀಯದಲ್ಲಿ ಅನೇಕ ಅವಗಡಗಳನ್ನು ಎದುರಿಸಬೇಕಾಗಿದ್ದಿತು. ಮಹಾರಾಜರು ದೈವಾಧೀನರಾದಂದಿನಿಂದ ಮಹಾಮಂತ್ರಿ ರಾಮಕೃಷ್ಣನು ರಾಜಕಾರ್ಯಗಳಲ್ಲಿ ಆಸಕ್ತನಾಗಿರಲಿಲ್ಲ. ಅವನನ್ನು ಬಿಟ್ಟು ಯಾವ ರಾಜಕಾರ್ಯವನ್ನು ಚಲಾಯಿಸುವುದಕ್ಕೂ ರಾಣಿಗೆ ಧೈರ್ಯವಿರಲಿಲ್ಲ. ಅಧಿಕಾರಿಗಳು ಮಂತ್ರಿ ರಾಮಕೃಷ್ಣನಲ್ಲಿ ರಾಜಕಾರ್ಯಗಳನ್ನು ಹೇಳಿಕೊಂಡರೆ ಅವನು ಖಚಿತವಾಗಿ ಅಪ್ಪಣೆಗಳನ್ನು ಕೊಡುತ್ತಿರಲಿಲ್ಲ.

ಇಂದು ವಿರೂಪಾಕ್ಷನು ನಗರದ ಸಂಸ್ಥಾನದಲ್ಲಿ ಸಾಮಾನ್ಯನಾಗಿರಲಿಲ್ಲ. ಹತ್ತುಸಾವಿರ ದಂಡಿನ ಅಧಿನಾಯಕನಾಗಿದ್ದನು. ವಾಸ್ತವವಾಗಿ ಆ ದಂಡಿನಮೇಲೆ ಮಹಾಮಂತ್ರಿ ರಾಮಕೃಷ್ಣನಿಗಾಗಲೀ, ಸ್ವಯಂ ಮಹಾರಾಣಿಗೇ ಆಗಲೀ ಯಾವ ಅಧಿಕಾರವೂ ಇರಲಿಲ್ಲ. ಆದರೆ ಆ ದಂಡಿನ ಖರ್ಚನ್ನು ನಗರದ ಭಂಡಾರದಿಂದ ಕೊಡಬೇಕಾಗಿದ್ದಿತು. ವಿರೂಪಾಕ್ಷನ ಪ್ರಾಬಲ್ಯವು ಅನೇಕರಿಗೆ ಸಹನೆಯನ್ನುಂಟುಮಾಡುತ್ತಿರಲಿಲ್ಲ.

ಒಂದುದಿನ ರಾಮಕೃಷ್ಣನು ಪ್ರಾತಃಕಾಲದಲ್ಲಿ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಕಾಲುನಡೆಯಲ್ಲಿಯೇ ಅರಮನೆಗೆ ಬಂದನು. ಇಡೀ ರಾಜಧಾನಿಯ ಜನರೆಲ್ಲರೂ ಇದರಿಂದ ಅಚ್ಚರಿಗೊಂಡರು. ಮಹಾಮಂತ್ರಿಯು ಪಲ್ಲಕ್ಕಿಯಲ್ಲಿ ಬಂದರೇನು! ಕುದುರೆಯನ್ನೇರಿ ಬಂದರೇನು! ಪಾದಚಾರಿಯಾಗಿ ಅರಮನೆಗೆ ಹೋದರೇನು! ಜನರಿಗೆ ಒಂದೇವಿಧವಾದ ಭಕ್ತಿಗೌರವಗಳು. ದಾರಿಯುದ್ದಕ್ಕೂ ಎಲ್ಲರೂ ಅಭಿವಾದನ ಮಾಡುತ್ತಿದ್ದರು.

ರಾಮಕೃಷ್ಣನು ರಾಣಿಯವರ ಭೇಟಿಗೆ ಬರುತ್ತಿರುವನೆಂದು ಕೇಳಿ ಅಚ್ಚರಿಗೊಂಡ ರಾಣಿಯು ಮಹಾದ್ವಾರದಲ್ಲಿಯೇ ಬಂದು ಮಂತ್ರಿಯನ್ನು ಸ್ವಾಗತಿಸಿ, ಅಂತಃಪುರಕ್ಕೆ ಕರೆದುಕೊಂಡು ಹೋದಳು. ಮಹಾರಾಣಿಯು ಮಂತ್ರಿಯನ್ನು ಉತ್ತಮಾಸನದಲ್ಲಿ ಕುಳ್ಳಿರಿಸಿ ಅವನೆದುರಿಗೆ ಸಾಮಾನ್ಯವಾದ ಆಸನದಲ್ಲಿ ತಾನು ಕುಳಿತು, ಕುಶಲಪ್ರಶ್ನೆಯನ್ನು ಮಾಡಿದಳು. ಮಂತ್ರಿಯು ಯಥೋಚಿತವಾಗಿ ಉತ್ತರಗಳನ್ನಿತ್ತು "ಮಹಾರಾಣಿಯವರೇ, ನಾನು ಇನ್ನುಮೇಲೆ ಈ ಮಂತ್ರಿಗಿರಿಯನ್ನು ಚಲಾಯಿಸಲು ಅಸಮರ್ಥನಾಗಿದ್ದೇನೆ. ಮಹಾರಾಜರು ಪರಲೋಕವನ್ನೈದಿದ ದಿವಸದಿಂದ ನನ್ನ ಮನಸ್ಸಿನಲ್ಲಿ ಈ ಆಲೋಚನೆಯು ಮಥಿತವಾಗುತ್ತಿದೆ. ಇಂದು ಈಶಪ್ರೇರಣೆಯಿಂದ ತಮ್ಮ ಸನ್ನಿಧಾನಕ್ಕೆ ಬಂದು ಅರಿಕೆಮಾಡಿದ್ದೇನೆ. ತಾವು ಅಪ್ಪಣೆಕೊಡಬೇಕು" ಎಂದನು.

ರಾಣಿಯು ಈ ಮಾತುಗಳನ್ನು ಕೇಳಿ ವಜ್ರಾಘಾತವಾದಂತೆ ಬೆಚ್ಚಿಬಿದ್ದಳು. ನಿಜವಾಗಿ ಮಹಾಮಂತ್ರಿಗಳು ಈ ಶಬ್ದಗಳನ್ನು ಉಚ್ಚರಿಸಿದರೇ? ಎಂದು ಮತ್ತೊಮ್ಮೆ ಚಿಂತಿಸಿ ನೋಡಿದಳು. ಆಸನದಿಂದ ಎದ್ದುನಿಂತು,

"ಮಹಾಮಂತ್ರಿಗಳೇ, ತಮ್ಮ ಬಾಯಿಂದ ಈ ಮಾತುಗಳು ಹೊರಡುತ್ತದೆಂದು ನಾನೆಂದೂ ಭಾವಿಸಿರಲಿಲ್ಲ. ತಾವು ಇಪ್ಪತ್ತೆರಡುವರ್ಷದ ತರುಣಿಯಾದ ನನ್ನಮೇಲೆ ಈ ಭಾರವನ್ನು ಹೊರಿಸಿ, ಮಂತ್ರಿಗಿರಿಯಿಂದ ತಾವು ನಿವೃತ್ತರಾದರೆ ಈ ನಗರದ ರಾಜ್ಯದ ಗತಿಯೇನು? ನನಗೆ ದಿಕ್ಕುತೋಚದಂತಾಗಿದೆ. ತಮಗೆ ನನ್ನ ರಾಜ್ಯಭಾರದಲ್ಲಿ ಏನಾದರೂ ಅಸಮಾಧಾನವಾಗಿದೆಯೇನು? ಹಾಗಿದ್ದರೆ, ಸ್ಪಷ್ಟವಾಗಿ ಅಪ್ಪಣೆಕೊಡಿಸೋಣವಾಗಲಿ, ನಾನು ಈ ಸಿಂಹಾಸನವನ್ನು ಪರಿತ್ಯಾಗಮಾಡುತ್ತೇನೆ. ರಾಜಪುತ್ರರಾದ ಚೆನ್ನಬಸವರಾಜರಿಗೆ ಪಟ್ಟಗಟ್ಟಿ ತಾವೇ ರಾಜ್ಯಭಾರವನ್ನು ನಿರ್ವಹಿಸೋಣವಾಗಲಿ?" ಎಂದಳು.

ಮಂತ್ರಿಯು ನಿರಾಶೆಯ ನಗುವನ್ನು ನಕ್ಕು "ಮಹಾರಾಣಿಯವರೇ,

ತಮ್ಮ ರಾಜ್ಯಭಾರದಲ್ಲಿ ನನಗೇನೂ ಅಸಂತುಷ್ಟಿಯಿಲ್ಲ. ಈಗ ನಗರದ ರಾಜ್ಯವು ಧನಧಾನ್ಯ ಸಮೃದ್ಧವಾಗಿದೆ. ಪ್ರಜೆಗಳೆಲ್ಲರೂ ತಮ್ಮಲ್ಲಿ ಭಕ್ತಿಯುತರಾಗಿದ್ದಾರೆ. ಯುವರಾಜರು ತಮ್ಮ ವಿಷಯದಲ್ಲಿ ಅಚಂಚಲ ವಾದ ಮಾತೃಭಕ್ತಿಯನ್ನಿಟ್ಟದ್ದಾರೆ. ಈ ರಾಜ್ಯ, ಈ ಕೀರ್ತಿ, ಇವು ಗಳೆಲ್ಲಾ ಶಾಶ್ವತವಾದವುಗಳಲ್ಲ. ಎಂದಾದರೊಂದುದಿನ ಇದಕ್ಕೆ ಧಕ್ಕೆ ಬರಬಹುದು. ಅಂದು ಅದನ್ನು ನೋಡಿ ವ್ಯಥೆಪಡುವುದಕ್ಕಿಂತಲೂ ಚೆನ್ನಾಗಿರುವಾಗ ಈ ಅಧಿಕಾರವನ್ನು ತೊರೆದು ನಾನು ಕಾಶೀಯಾತ್ರೆಗೆ ಹೋಗಬೇಕೆಂದಿದ್ದೇನೆ." ಎಂದನು

"ಮಹಾರಾಜರು ಕಾಲವಾದಂದಿನಿಂದ ತಾವು ವಿರಕ್ತರಾಗಿಯೇ ಇರೋಣವಾಗಿದೆ. ತಮಗೆ ಕಾಶೀಯಾತ್ರೆಮಾಡುವ ಇಚ್ಛೆಯಿದ್ದರೆ ಎಲ್ಲಾ ಏರ್ಪಾಡುಗಳನ್ನೂ ನಾನು ಮಾಡಿಸುತ್ತೇನೆ. ತಾವು ಹೋಗಿ ಗಂಗಾ ಯಾತ್ರೆಮಾಡಿ ಬರೋಣವಾಗಲಿ"

"ಇಲ್ಲ ರಾಣಿಯವರೇ, ನಾನು ಹಿಂತಿರುಗಿ ಬರುವುದೇ ಇಲ್ಲ. ಕಾಶಿಗೆ ಹೋಗುವುದೆಂದರೆ ಒಂದೇ ಬಾರಿ ಕೈಲಾಸಕ್ಕೆ ಹೋದಂತೆ. ಪುನಃ ಈ ರಾಜ್ಯದ ಸ್ಮರಣೆಯನ್ನು ಕೂಡ ನಾನು ಮಾಡುವುದಿಲ್ಲ. ನೋಡಿ ರಾಣಿಯವರೇ ನಾವುಗಳು ಈ ಮಹೋನ್ನತ ಅಧಿಕಾರಗಳನ್ನು ಚಲಾಯಿಸುವಾಗ ಧರ್ಮದಿಂದ ರಾಜ್ಯಭಾರಮಾಡುತ್ತೇವೆಂದು ಹೇಳಿ ಕೊಳ್ಳುತ್ತೇವೆ. ಅದು ಬರೀ ಬಡಾಯಿಮಾತು. ಎಷ್ಟೋ ಅಧರ್ಮ ಕಾರ್ಯಗಳನ್ನು, ಪಾಪಕಾರ್ಯಗಳನ್ನು ಮನಸಾರಮಾಡುತ್ತೇವೆ. ದೇಶ ಕ್ಷೇಮಕ್ಕೋಸ್ಕರ ಹಾಗೆ ಮಾಡಿದರೂ ಪಾತಕವಲ್ಲವೆಂದು ಧರ್ಮಶಾಸ್ತ್ರ ಗಳು ಹೇಳುತ್ತವೆ. ಆದರೇನು ? ಅದರಿಂದ ಆತ್ಮಶುದ್ಧಿಯಾಗುವುದಿಲ್ಲ. ಆದುದರಿಂದ ಈ ಅಧಿಕಾರವನ್ನು ಪರಿತ್ಯಜಿಸಬೇಕೆಂದು ನಾನು ಶತಃ ಸಿದ್ಧ ಮಾಡಿಕೊಂಡಿದ್ದೇನೆ"

"ಮಂತ್ರಿಗಳೇ, ಈ ಮಂತ್ರಿಪದವಿಯನ್ನು ಯಾರಿಗೆ ಕೊಡ ಬೇಕು?"

"ಮಹಾರಾಣಿಯವರೇ, ತಾವೇ ಒಪ್ಪಿಸಿಕೊಳ್ಳಬೇಕು. ಸ್ವಾಯತ್ತ ರಾಜ್ಯಭಾರವನ್ನು ನಡೆಸಬೇಕು. ಇದೇ ನನ್ನ ಕಡೆಯ ಕೋರಿಕೆ."

"ಮಂತ್ರಿಗಳೇ, ಇದಕ್ಕೆ ನಾನು ಒಪ್ಪುವುದಿಲ್ಲ. ನನಗೆ ಈ ನಗರದ ರಾಜ್ಯವನ್ನು ಪಟ್ಟಗಟ್ಟುವುದಕ್ಕೆ ನೀವೂ ಅಭಿರಾಮಸ್ವಾಮಿಗಳೂ ಕಾರಣರು. ನಾನು ಈ ವಿಷಯವನ್ನು ಮಹಂತರಿಗೆ ವಿಜ್ಞಾಪಿಸುತ್ತೇನೆ. ಮಲ್ಲಿಕಾರ್ಜುನನ ಆಜ್ಞೆಯಾದಂತೆ ನಾವು ನಡೆಯಬೇಕು. ಈ ರಾಜ್ಯವೆಲ್ಲವೂ ಹಾಗೆಯೇ ನಡೆಯಬೇಕು."

"ರಾಣಿಯವರೇ, ನಾನು ತಮ್ಮೊಡನೆ ವಾದಮಾಡುವುದಿಲ್ಲ. ನಾನು ನನ್ನ ಇಷ್ಟವನ್ನು ಸ್ಪಷ್ಟವಾಗಿ ತಿಳಿಸಿದ್ದೇನೆ. ಇದರಮೇಲೆ ತಮ್ಮ ಇಷ್ಟ." ಎಂದು ಹೇಳಿ ಅರಮನೆಯಿಂದ ಹೊರಡಲು ರಾಣಿಯ ಅಪ್ಪಣೆಯನ್ನು ಕೇಳಿದನು. ರಾಣಿಯು ಗದ್ಗದಕಂಠದಿಂದ ಅಪ್ಪಣೆಯನ್ನಿತ್ತಳು. ಅವಳ ಕಣ್ಣುಗಳಲ್ಲಿ ನೀರು ತೊಟ್ಟಿಕ್ಕುತ್ತಿತ್ತು. ಮಂತ್ರಿಯು ಗಂಭೀರವಾಗಿ ಅಡಿಯಿಡುತ್ತಾ ಅಂತಃಪುರವನ್ನು ಬಿಟ್ಟು ಮಹಾದ್ವಾರವನ್ನು ದಾಟಿ ರಾಜಮಾರ್ಗದಲ್ಲಿ ನಡೆದುಕೊಂಡು ಹೊರಟುಹೋದನು.

ರಾಣಿಯು ಬಿಕ್ಕಿಬಿಕ್ಕಿ ಅಳುತ್ತಾ ನೆಲದಮೇಲೆಯೇ ಬಿದ್ದಿದ್ದಳು. ಅಂದು ಅವಳು ಭೋಜನಮಾಡಲಿಲ್ಲ. ಅವಳನ್ನು ಭೋಜನಕ್ಕೆಬ್ಬಿಸಲು ಯಾರಿಗೂ ಧೈರ್ಯವಿಲ್ಲ. ಯುವರಾಜ ಚೆನ್ನಬಸಪ್ಪನಾಯಕನು ರಾಣಿಯವರಲ್ಲಿ ಹೋಗಿ ದೈನ್ಯದಿಂದ ಊಟಕ್ಕೇಳಬೇಕೆಂದು ಬೇಡಿದನು. ರಾಣಿಯು ಚೆನ್ನಬಸಪ್ಪನಾಯಕನ ಕೈಹಿಡಿದುಕೊಂಡು ಅಳಲಾರಂಭಿಸಿದಳು. ಚೆನ್ನಬಸಪ್ಪನಾಯಕನು ಕಾರಣವೇನೆಂದು ಕೇಳಿದನು. "ಮಹಾಮಂತ್ರಿಗಳಿಗೂ ಮಹಾರಾಣಿಯವರಿಗೂ ಏನಾದರೂ ಭಿನ್ನಾಭಿಪ್ರಾಯ, ಘರ್ಷಣೆಗಳುಂಟಾದುವೇ ?" ಎಂದುಕೇಳಿದನು.

"ಯುವರಾಜ! ಭಿನ್ನಾಭಿಪ್ರಾಯಗಳಿಗೆ ಕಾರಣವೇ ಇಲ್ಲ. ಮಹಾಮಂತ್ರಿಯು ಅಧಿಕಾರ ಪರಿತ್ಯಾಗ ಮಾಡಿದ್ದಾನೆ. ನನ್ನ ಮನವು ಇಂದು ಪ್ರಕ್ಷುಬ್ಧವಾಗಿದೆ."

"ತಾಯಿಯವರೇ ? ಅದಕ್ಕೆ ತಾವೇನು ಹೇಳಿದೀರಿ ?"

"ನಾನು ಹೇಳಿದುದೆಲ್ಲಾ ವಿಫಲವಾಯಿತು"
"ನೀವೇನು ಮಾಡಬೇಕೆಂದಿದ್ದೀರಿ?"
"ನಾನು ರಾಜ್ಯಪರಿತ್ಯಾಗ ಮಾಡಬೇಕೇದಿದ್ದೇನೆ"
"ಈ ರಾಜ್ಯವನ್ನಾಳುವವರಾರು?"
"ನೀವು. ಯುವರಾಜರು."

ಯುವರಾಜನು ಮಾತನಾಡದೆ ಅಂತಃಪುರವನ್ನು ಬಿಟ್ಟು ಹೊರಟು ಹೋದನು. ಮಹಾರಾಣಿಯು ಅಂದೆಲ್ಲಾ ಅಳುತ್ತಿದ್ದಳು. ಸಂಧ್ಯಾಕಾಲದಲ್ಲಿ ಸ್ನಾನಮಾಡಿ ವಸ್ತ್ರಾಭರಣಗಳಿಂದಲಂಕೃತಳಾಗಿ ಮ್ಯಾನಾದಲ್ಲಿ ಕುಳಿತು ಮಲ್ಲಿಕಾರ್ಜುನ ಮಂದಿರಕ್ಕೆ ತೆರಳಿದಳು.

ಮಲ್ಲಿಕಾರ್ಜುನ ಮಂದಿರದಲ್ಲಿ ದೀಪಾರಾಧನೆಯ ಸಮಯುವಾಗಿತ್ತು. ರಾಣಿಯು ದೇವಮಂದಿರವನ್ನು ಪ್ರವೇಶಮಾಡುತ್ತಲೇ ಭಕ್ತರೆಲ್ಲರೂ ಸರಿದು ನಿಂತು ದಾರಿಬಿಟ್ಟರು. ಮಹಾರಾಣಿಯು ಹೋಗಿ ದೇವಮಂದಿರದ ದ್ವಾರದಲ್ಲಿ ಮಹಾದೇವನಿಗೆ ನಮಸ್ಕರಿಸಿ ಗರ್ಭಗುಡಿಯೊಳಗೆ ನಿಂತಿದ್ದ ಅಭಿರಾಮಸ್ವಾಮಿಗೆ ವಂದಿಸಿ ಭಕ್ತಿಭಾವದಿಂದ ಕೈಮುಗಿದುಕೊಂಡು ನಿಂತಳು. ದೀಪಾರಾಧನೆಯಾದನಂತರ ಭಕ್ತಾದಿಗಳೆಲ್ಲಾ ಹೊರಟು ಹೋದರು. ರಾಣಿಯು ಮಾತ್ರ ಹೊರಡಲಿಲ್ಲ. ಅಚಂಚಲಳಾಗಿ ನಿಂತಿದ್ದಳು. ಅಭಿರಾಮಸ್ವಾಮಿಯು ಹೊರಗೆ ಬಂದು ಮಹಾರಾಣಿಯುವರಿಗೆ ಪ್ರಸಾದವನ್ನಿತ್ತು, "ರಾಣಿಯುವರೇ, ಹೊರಡಬಹುದು" ಎಂದು ಹೇಳಿದನು. ರಾಣಿಯು ಗಂಭೀರಧ್ವನಿಯಿಂದ "ಗುರುಗಳೇ, ಇಂದು ತಮ್ಮೊಡನೆ ಮಾತನಾಡುವ ರಾಜಕಾರ್ಯವಿದೆ" ಎಂದು ಹೇಳಿದಳು. ಮಹಂತನಿಗೆ ಆಶ್ಚರ್ಯವಾಯಿತು. ರಾಣಿಯು ಪಟ್ಟಕ್ಕೆ ಬಂದಂದಿನಿಂದ ಅಭಿರಾಮಸ್ವಾಮಿಯೊಡನೆ ಎಂದೂ ರಾಜಕಾರ್ಯಗಳನ್ನು ಮಾತನಾಡಿರಲಿಲ್ಲ. ಅಂಥಾ ಸರ್ವಸಂಗಪರಿತ್ಯಾಗಿಯಾದ ಮಹಾಪುರುಷನೊಡನೆ ರಾಜಕಾರ್ಯಗಳನ್ನು ಮಾತನಾಡಲು ಮಹಾರಾಣಿಗೆ ಭಯ. ಇಂದು ಮಹಾರಾಣಿಯು ಹಟಾತ್ತನೆ ಅಭಿರಾಮಸ್ವಾಮಿಯೊಡನೆ ರಾಜಕಾರ್ಯವನ್ನು ಮಾತನಾಡಬೇಕೆಂದು

ಹೇಳಿದುದನ್ನು ಕೇಳಿ ಸ್ವಾಮಿಗೆ ಆಶ್ಚರ್ಯವಾಯಿತು. ಆದರೂ ಅವನು ಯಾವ ಭಾವವನ್ನೂ ತೋರಲಿಲ್ಲ.

"ಮಹಾರಾಣಿ, ನನ್ನ ವಾಸಭವನಕ್ಕೆ ಹೋಗೋಣ, ದಯ ಮಾಡಿಸಿರಿ. ಅಲ್ಲಿ ಅಂತರಂಗವಾಗಿ ಕುಳಿತು ಮಾತನಾಡೋಣ."

"ಇಲ್ಲ ಗುರುಗಳೇ! ಇಲ್ಲಿಯೇ ಈ ದೇವತಾಸಾನ್ನಿಧ್ಯದಲ್ಲಿಯೇ ತಮ್ಮೊಡನೆ ಮಾತನಾಡಬೇಕೆಂದು ನಿಶ್ಚಯಿಸಿದ್ದೇನೆ. ಹೊರಗೆ ದ್ವಾರಪಾಲಕರು ಕಾಯುತ್ತಿದ್ದಾರೆ. ಇಲ್ಲಿ ನಾವು ಮಾತನಾಡುವುದನ್ನು ಯಾರೂ ಕೇಳಲಾರರು."

"ಆಗಬಹುದು, ನಿಮ್ಮ ಅಭೀಷ್ಟವೇನು ಹೇಳಿರಿ?"

ರಾಣಿಯು ಗದ್ಗದ ಕಂಠದಿಂದ, "ಗುರುಗಳವರೇ, ಮಹಾಮಂತ್ರಿಗಳು ಅಧಿಕಾರ ಪರಿತ್ಯಾಗಮಾಡಿದ್ದಾರೆ. ಇಂದು ಪ್ರಾತಃಕಾಲ ಅರಮನೆಗೆ ಕಾಲುನಡಗೆಯಲ್ಲಿ ನಡೆದುಬಂದು ನನ್ನೊಡನೆ ಹೇಳಿದರು." ಎಂದಳು.

ಅಭಿರಾಮಸ್ವಾಮಿಯು ಸ್ವಲ್ಪಹೊತ್ತು ಆಲೋಚನಾ ಮಗ್ನನಾಗಿದ್ದು, "ಮಂತ್ರಿಗಳಿಗೆ ಏನಾದರೂ ಅಪಚಾರ ನಡೆದಿರಬೇಕು." ಎಂದನು.

"ಇಲ್ಲ ಗುರುಗಳೇ! ಎಳ್ಳಷ್ಟೂ ಅಪಚಾರವು ನಡೆದಿಲ್ಲ. ನನಗೆ ಭಯವಾಗುತ್ತದೆ. ಈ ರಾಜ್ಯಕ್ಕೆ ಏನೋ ಪ್ರಬಲವಾದ ಭಯೋತ್ಪಾತ ಇದೆಯೆಂದು ನನಗೆ ಬೋಧೆಯಾಗುತ್ತದೆ. ನಾನು ತಮ್ಮ ಅಪ್ಪಣೆಯಾದರೆ ರಾಜ್ಯಪರಿತ್ಯಾಗಮಾಡುತ್ತೇನೆ. ನನ್ನ ಉಳಿದ ಆಯುಷ್ಯವನ್ನು ಈ ಮಲ್ಲಿಕಾರ್ಜುನ ಸೇವೆಯಲ್ಲಿ ಕಳೆಯುತ್ತೇನೆ. ಯುವರಾಜ ಚಿನ್ನಬಸಪ್ಪನಾಯಕರಿಗೆ ಪಟ್ಟವನ್ನು ಕಟ್ಟಿಸಬಹುದು."

ಮಹಂತನು ನಕ್ಕು, "ರಾಣಿಯವರೇ! ಯಾರ ಅಧಿಕಾರವು ಏನು ಶಾಶ್ವತ? ಮಹಾ ಮಹಾ ಚಕ್ರಾಧಿಪತಿಗಳು ಉರುಳಿಹೋಗಿದ್ದಾರೆ. ಮಹಾದೇವನ ಕೃಪೆಯಿದ್ದರೆ ಸಿಂಹಾಸನ. ಇಲ್ಲದಿದ್ದರೆ ಭಿಕ್ಷಾಶನ. ಆದರೂ ಎಲ್ಲರೂ ಒಂದು ನಿಯತಿಯಂತೆ ನಡೆಯಬೇಕಾಗಿದೆ. ನೀವು

ಉದ್ವಿಗ್ನರಾಗಬೇಡಿರಿ. ಮಂತ್ರಿಗಳನ್ನು ನಾನು ಕರೆಸಿ ಮಾತನಾಡು ತ್ತೇನೆ. ಒಂದು ಪಕ್ಷ ಅವರು ಅಧಿಕಾರ ತ್ಯಾಗಮಾಡುವುದರಿಂದಲೇ ಈ ರಾಜ್ಯಕ್ಕೆ ಕ್ಷೇಮವಾಗುವುದೆಂದು ಭಾವಿಸಿದ್ದರೆ, ಅವರ ರಾಜನೀತಿಯೇ ಸರಿಯಾಗಬಹುದು. ಆಗ ನೀವು ರಾಜ್ಯದ ಧುರವನ್ನು ವಹಿಸಲೇ ಬೇಕಾಗುತ್ತದೆ. ಈಶ್ವರೇಚ್ಛೆಯು ಹೇಗಿದೆಯೋ ನೋಡೋಣ. ನಾನು ರಾಜಕಾರಣಪಟುವಲ್ಲ. ಈಶ್ವರೇಚ್ಛೆಯಿದ್ದಂತೆ ಆಗುತ್ತದೆ. ಭಗವಂತನ ಪ್ರೇರಣೆಯಂತೆ ನಡೆಯತಕ್ಕವನು ನಾನು" ಎಂದು ಹೇಳಿದನು.

ರಾಣಿಯು ಸ್ವಾಮಿಗೆ ವಂದಿಸಿದಳು. ಸ್ವಾಮಿಯು ಆಶೀರ್ವಾದಮಾಡಿ ದನು. ರಾಣಿಯು ದೇವಾಲಯದಿಂದ ಹೊರಟಳು. ಪಲ್ಲಕ್ಕಿಯಲ್ಲಿ ಕುಳಿತು ಅರಮನೆಯನ್ನು ಸೇರಿದಳು. ಅಂತಃಪುರಕ್ಕೆ ಹೋಗಿ ತನ್ನ ಭವನವನ್ನು ಪ್ರವೇಶಿಸುತ್ತಲೇ ಅಲ್ಲಿ ಭೈರವಿಯು ರಾಣಿಯ ಭೇಟಿಗಾಗಿ ಕಾದಿದ್ದಳು. ರಾಣಿಯು ಅವಳನ್ನು ನೋಡಿ ಆಚ್ಚರಿಗೊಂಡು, ನಗುತ್ತಾ "ಇದೇನು ಗಿರಿಜೆ! ಈ ವೇಷವನ್ನೇಕೆ ಧರಿಸಿದೆ? ಈ ಅಲಂಕಾರವು ನಿನಗೆ ಚೆನ್ನಾಗಿ ಒಪ್ಪುತ್ತದೆ." ಎಂದಳು.

ಭೈರವಿಯು ಗಂಭೀರಸ್ವರದಿಂದ, "ರಾಣಿಯವರೇ, ಇನ್ನು ಮೇಲೆ ಇದೇ ವೇಷ. ನಾನು ಸರ್ವಸಂಗ ಪರಿತ್ಯಾಗಮಾಡಿದ್ದೇನೆ. ಮಂತ್ರಿಗಳು ಅಧಿಕಾರವನ್ನು ತೊರೆದು ಕಾಶೀಧಾಮಕ್ಕೆ ತೆರಳುತ್ತಾರೆ. ನಾನು ಅವರ ಜೊತೆಯಲ್ಲಿ ಕೈಲಾಸಕ್ಕೆ ಹೋಗುತ್ತೇನೆ" ಎಂದಳು.

ರಾಣಿಯು ಆಶ್ಚರ್ಯಗೊಂಡು, "ಗಿರಿಜೆ, ನಿನಗೆ ಯಾರು ಹೇಳಿ ದರು! ಈ ರಹಸ್ಯವನ್ನು ಎಲ್ಲಿ ತಿಳಿದೆ?" ಎಂದಳು.

"ರಾಣಿಯವರೇ! ಈ ರಹಸ್ಯವು ಅಭೇದ್ಯವಾದುದೇನೂ ಅಲ್ಲ. ನನಗೆ ಗೊತ್ತೇ ಇತ್ತು. ಮಂತ್ರಿಗಳು ಸಕಾರಣವಾಗಿವೇ ಅಧಿಕಾರ ಪರಿತ್ಯಾಗಮಾಡಿದ್ದಾರೆ. ಈಗ ನಿಮ್ಮ ಪರೀಕ್ಷೆಗೆ ಆರಂಭವಾಗಿದೆ. ನೀವೇನುಮಾಡುವಿರಿ?"

"ಗಿರಿಜೆ! ಏನು ಮಾತನಾಡುವೆ? ಮಂತ್ರಿಗಳು ಅಧಿಕಾರ ಪರಿ ತ್ಯಾಗಮಾಡಲು ಕಾರಣವೇನು? ನನ್ನ ಪರೀಕ್ಷೆಯೆಂದರೇನು?"

ಭೈರವಿಯು ರಾಣಿಯ ಕಿವಿಯಲ್ಲಿ "ನಗರದ ರಾಣಿಯವರೇ, ನಿಮ್ಮ ಮತ್ತು ವಿರೂಪಾಕ್ಷನ ಸಂಬಂಧದಲ್ಲಿ ಮಂತ್ರಿಗಳಿಗೆ ಸಂದೇಹ ಬಂದಿರುವಂತಿದೆ. ಅವರು ಅಧಿಕಾರಪರಿತ್ಯಾಗಮಾಡಿ ನೀವು ವಿರೂಪಾಕ್ಷನನ್ನು ಮಂತ್ರಿಯಾಗಿ ಮಾಡುತ್ತೀರೇನೋ ಎಂದು ಪರೀಕ್ಷೆ ಹೂಡಿದ್ದಾರೆ" ಎಂದಳು.

"ಗಿರಿಜೆ! ನನ್ನದೇನು ತಪ್ಪಿದೆ ?"

"ರಾಣಿಯವರೇ! ನಿಮ್ಮದೇನೂ ತಪ್ಪಿಲ್ಲದಿದ್ದರೆ ವಿರೂಪಾಕ್ಷನದು ಏನೇನೂ ತಪ್ಪಿಲ್ಲ. ಭಯವೇ ಇಲ್ಲ. ನಿರ್ಭಯ," ಎಂದು ನಕ್ಕಳು.

"ಭೈರವಿ, ರಾಜಕಾರಣಗಳಲ್ಲಿ ಹೀಗೆ ಹುಡುಗಾಟವಾಡುವುದು ತರವಲ್ಲ. ಮಂತ್ರಿಗಳು ಅಧಿಕಾರ ಪರಿತ್ಯಾಗ ಮಾಡುವುದೆಂದರೆ ಸಾಮಾನ್ಯವಾದ ವಿಷಯವೆಂದುಕೊಂಡೆಯಾ ?"

"ಇಲ್ಲ ರಾಣಿಯವರೇ! ಅದು ಸಾಮಾನ್ಯವಾದ ವಿಷಯವಲ್ಲ. ಅವರು ಅಧಿಕಾರಪರಿತ್ಯಾಗ ಮಾಡಿದರೆ ನೀವೇನು ಮಾಡುವಿರಿ ?"

"ನಾನು ರಾಜ್ಯಪರಿತ್ಯಾಗ ಮಾಡುತ್ತೇನೆಂದು ಹೇಳಿದ್ದೇನೆ."

"ಹೇಳಿದ್ದೀರಾ ? ಹೇಳಿದ್ದೀರಾ ? ರಾಜ್ಯ ಪರಿತ್ಯಾಗ ಮಾಡಿ ವಿರೂಪಾಕ್ಷನೊಡನೆ ವೈಕುಂಠಕ್ಕೆ ಹೋಗುತ್ತಿರಾ ?"

ರಾಣಿಯು ಕೋಪದಿಂದ, "ನಾನು ಎಲ್ಲಿಗೆ ಬೇಕಾದರೂ ಹೋಗುತ್ತೇನೆ. ರಾಜ್ಯಪರಿತ್ಯಾಗ ಮಾಡಿದಮೇಲೆ ನನ್ನನ್ನು ಕೇಳುವರಾರೇ ? ಬಾಂದಿ !" ಎಂದು ಅಳುವ ಧ್ವನಿಯಿಂದ ಗದರಿಸಿದಳು.

"ಹಾ! ಹಾ! ಕೇಳುವದಿಲ್ಲವೇ ? ಮಹಾಮಂತ್ರಿ ರಾಮಕೃಷ್ಣರೆಂದರೆ ಸಾಮಾನ್ಯರೆಂದುಕೊಂಡಿರಾ ? ಅಂದು, ಆದಿನ, ಮಂತ್ರಿಯು ಕುಪಿತನಾದರೆ ತಲೆಯನ್ನು ಹಾರಿಸುತ್ತಾನೆಂದು ನೀವು ವಿರೂಪಾಕ್ಷನಿಗೆ ಹೇಳಿ ಬೆದರಿಸಿದಿರಲ್ಲವೇ ? ಇಂದು ನಾನು ಹೇಳುತ್ತೇನೆ ಕೇಳಿರಿ. ಮಂತ್ರಿಯು ನಿಮ್ಮಿಬ್ಬರನ್ನೂ ಹಿಡಿತರಿಸಿ ಅರಮನೆಯ ಮುಂಭಾಗದ ಬೈಲಿನಲ್ಲಿ ಮಹಾ ಚಿತೆಯನ್ನು ನಿರ್ಮಿಸಿ ನಿಮ್ಮಿಬ್ಬರನ್ನೂ ಸಜೀವವಾಗಿ ಸುಡಿಸುತ್ತಾನೆ."

"ಆಗಲಿ! ಬೇಕಾದುದಾಗಲಿ! ನೀನೇನು ಮಾಡುವೆ?" ಎಂದು ಅಳತೊಡಗಿದಳು.

"ನಾನು ಈಗಲೇ ಈ ರಾಜ್ಯವನ್ನು ಬಿಟ್ಟು ಹೊರಟು ಹೋಗುತ್ತೇನೆ. ಅದಕ್ಕಾಗಿಯೇ ಈ ಭೈರವಿಯ ವೇಷ."

"ಹೋಗು! ಹಾಳಾಗಿ ಹೋಗು! ನಿನ್ನಿಂದ ನನಗೇನು?"

"ಅಲ್ಲ ರಾಣಿಯವರೇ! ನನ್ನಿಂದ ನಿಮ್ಮ ಸರ್ವಸ್ವ. ನಾನು ಆ ವಿರೂಪಾಕ್ಷನನ್ನೂ ನನ್ನ ಜೊತೆಯಲ್ಲಿ ಕಟ್ಟಿಕೊಂಡು ಹೋಗುತ್ತೇನೆ."

ರಾಣಿಯು ಎದ್ದು ಬಂದು "ಹೋಗು ತೊಲಗಿ ಹೋಗು" ಎಂದು ಘಟಾರನೆ ಅವಳ ಕೆನ್ನೆಗೆ ಏಟು ಕೊಟ್ಟಳು. ಭೈರವಿಯು ನಗುತ್ತಾ "ರಾಣಿ ನಿನಗೆ ಹುಚ್ಚು ಹಿಡಿದಿದೆ. ನಾನು ಈ ಅಂತಃಪುರಕ್ಕೆ ಮತ್ತೆ ಬರುವುದಿಲ್ಲ" ಎಂದು ಹೇಳಿ ಹೊರಟು ಹೋದಳು.

ಯಾವ ಸಂಧ್ಯಾಕಾಲದಲ್ಲಿ ಮಹಾರಾಣಿಯು ಮಲ್ಲಿಕಾರ್ಜುನ ದೇವಾಲಯಕ್ಕೆ ಹೋಗಿ ಮಹಂತನೊಡನೆ ಮಂತ್ರಿಯ ಅಧಿಕಾರತ್ಯಾಗದ ಪ್ರಕರಣವನ್ನು ವಿವರಿಸಿದಳೋ ಅದೇ ಸಂಧ್ಯಾಕಾಲ ಯುವರಾಜ ಚೆನ್ನಬಸಪ್ಪನಾಯಕನು ಉದ್ವಿಗ್ನಮನಸ್ಕನಾಗಿ ಮಂತ್ರಿ ರಾಮಕೃಷ್ಣನ ಮನೆಗೆ ಭೇಟಿಯಿತ್ತನು. ರಾಮಕೃಷ್ಣನು ತನ್ನ ಮನೆಗೆ ಬಂದ ಯುವರಾಜನನ್ನು ಆದರದಿಂದ ಬರಮಾಡಿಕೊಂಡು ತನ್ನ ಅಂತರಂಗ ಗೃಹದಲ್ಲಿ ಮಾತನಾಡತೊಡಗಿದನು. ಮಂತ್ರಿಯ ಮುಖದಲ್ಲಿ ಯಾವ ಉದ್ವಿಗ್ನಚಿಹ್ನೆಗಳಾಗಲೀ ಇರಲಿಲ್ಲ. ಅದೇ ಶಾಂತಭಾವ. ಎಂದಿನಂತೆ ಪ್ರಶಾಂತ ನಯನಗಳು. ತೇಜೋವಿರಾಜಮಾನವಾದ ಮುಖ. ಮಧುರ ವಾಣಿ. ಯುವರಾಜನು ಎಷ್ಟು ನೋಡಿದರೂ ಮಂತ್ರಿಯು ಯಾವಾಗಲೂ ಇರುವ ರೀತಿಯಲ್ಲೇ ಇದ್ದಾನೆ. ಮುಖವು ಸ್ವಲ್ಪವಾದರೂ ಕಳೆ ಗುಂದಿಲ್ಲ. ಯುವರಾಜನು ಮನಸ್ಸಿನಲ್ಲಿಯೇ ಆಲೋಚಿಸತೊಡಗಿದನು. "ಮಂತ್ರಿಯು ಅಧಿಕಾರಪರಿತ್ಯಾಗ ಮಾಡಿದ್ದರೆ ಇಷ್ಟು ಪ್ರಶಾಂತ ಭಾವದಿಂದ ಇರುತ್ತಿದ್ದನೆ? ಮಂತ್ರಿಯ ಅಧಿಕಾರಪರಿತ್ಯಾಗದ ಮಾತು ನಿಜವಲ್ಲದಿದ್ದರೆ ಮಹಾರಾಣಿಯವರೇಕೆ ಅಷ್ಟು ಉದ್ವಿಗ್ನರಾಗಿರು

ತ್ತಿದ್ದರು. ಹೇಗಾದರೂ ಆಗಲಿ, ನಾನು ಮಂತ್ರಿಗಳೊಡನೆ ಇಂದು ಈ ಪ್ರಸ್ತಾಪವನ್ನೆತ್ತಲೇಬೇಕು" ಎಂಬುದಾಗಿ ಚಿಂತಿಸುತ್ತಿದ್ದನು. ರಾಮಕೃಷ್ಣನು, "ತಾವು ಇಲ್ಲಿಗೆ ದಯಮಾಡಿಸಿದ ಕಾರ್ಯವೇನು ?" ಎಂದು ಕೇಳಿದನು.

"ಮಹಾಮಂತ್ರಿಗಳೇ! ಮಹಾರಾಣಿಯವರು ಇಂದು ದುಃಖಾಕ್ರಾಂತರಾಗಿದ್ದಾರೆ. ತಾವು ಅರಮನೆಯಿಂದ ಹಿಂತಿರುಗಿದಮೇಲೆ ಮಹಾರಾಣಿಯವರು ಯಾರೊಡನೆಯೂ ಮಾತನಾಡಲಿಲ್ಲ. ಅಹಾರವನ್ನೂ ತೆಗೆದುಕೊಳ್ಳಲಿಲ್ಲ."

"ಮಹಾರಾಣಿಯವರು ದುಃಖಮಗ್ನರಾಗಿರುವರೇನು ? ಅನೇಕ ಸಂದರ್ಭಗಳಲ್ಲಿ ಸ್ತ್ರೀಯರಿಗೆ ಅದು ಸಹಜವಾಗಿಯೇ ಇದೆ. ಅದಕ್ಕೆ ತಾವು ಭಯಪಡಬೇಕೆ ?"

"ಮಹಾಮಂತ್ರಿಗಳೇ! ಮಹಾರಾಣಿಯವರು ರಾಜ್ಯಪರಿತ್ಯಾಗ ಮಾಡುವುದಾಗಿ ನನ್ನೊಡನೆ ಹೇಳಿದರು"

"ರಾಜ್ಯಪರಿತ್ಯಾಗ ಮಾಡಿದರೆ ಕ್ರಮಪ್ರಾಪ್ತವಾಗಿ ನೀವು ರಾಜರಾಗುವಿರಿ. ಅದು ಲೋಕದಲ್ಲಿ ಸಹಜವಾಗಿಯೇ ಇದೆ."

"ಮಂತ್ರಿಗಳೇ! ಬಾಲಕನಾದ ನನ್ನನ್ನು ತಾವು ಪರಿಹಾಸ್ಯ ಮಾಡೋಣವಾಗುತ್ತದೇನು ? ಹದಿನಾರು ವರ್ಷದ ಬಾಲಕನು ರಾಜ್ಯವಾಳುವುದೆಂದರೆ ಈ ಲೋಕವು ನಗುವುದಿಲ್ಲವೇ ? ದುಷ್ಟರು ತಲೆಯತ್ತಿ ರಾಜ್ಯವು ಹಾಳಾಗುವುದಿಲ್ಲವೇನು ?"

"ಇಪ್ಪತ್ತೆರಡು ವಯಸ್ಸಿನ ತರುಣಿಗಿಂತಲೂ ಹದಿನಾರು ವರ್ಷದ ಬಾಲಕನು ರಾಜನಾಗಿದ್ದರೆ ಚೆನ್ನಾಗಿದ್ದಿತೆಂದು ಈಗ ನನಗೆ ತೋರುತ್ತದೆ"

ಯುವರಾಜನು ನಡುಗುವ ಧ್ವನಿಯಿಂದ, "ಮಂತ್ರಿಗಳೇ! ಮಹಾರಾಜರವರ ಆಜ್ಞಾಪರಿಪಾಲನೆಗೋಸ್ಕರ ತಾವೇ ಅಲ್ಲವೇ ಮಹಾರಾಣಿಯವರಿಗೆ ಪಟ್ಟಗಟ್ಟಿದವರು ? ಅಂದು ಪಾಳೆಯಗಾರರೆಲ್ಲರೂ ಒಪ್ಪದಿದ್ದಾಗ ತಾವೇ ಅಲ್ಲವೇ ಅವರನ್ನು ಒಪ್ಪಿಸಿದವರು ? ಈ ರಾಜ್ಯಕ್ಕೆ

ನನಗಿಂತಲೂ ಮಹಾರಾಣಿಯವರಿಗಿಂತಲೂ ತಾವೇ ಹೊಣೆಗಾರರೆಂದು ಈ ಪ್ರಜೆಗಳು ಭಾವಿಸಿಲ್ಲವೇ? ಇಂದು ತಾವು ಅಸಮಾಧಾನ ಮನಸ್ಕರಾಗಿ ಅಧಿಕಾರ ತ್ಯಾಗಮಾಡಿದರೆ ನಗರದ ರಾಜ್ಯದಲ್ಲಿ ಪ್ರಜಾ ಕ್ಷೋಭೆಯಾಗುವುದಿಲ್ಲವೇ? ಪರರಾಜರು ನಗರವನ್ನು ಮುತ್ತುವುದಿಲ್ಲವೇ? ಆ ಪ್ರಜಾಕ್ಷೋಭೆಯನ್ನು, ಶತೃಗಳ ಕೋಟಲೆಗಳನ್ನು ಎದುರಿಸಲು ನನ್ನಿಂದ ಸಾಧ್ಯವೇ? ಮಹಾರಾಣಿಯವರು ಎದುರಿಸಬಲ್ಲರೇ?" ಎಂದನು.

"ನೀವು ಆ ಭಾರವನ್ನು ನಿರ್ವಹಿಸಲಾಗದಿದ್ದರೆ ಮತ್ತಾರು ನಿರ್ವಹಿಸುವವರು?"

"ಆ ಭಾರವನ್ನು ತಾವು ನಿರ್ವಹಿಸುವವರು. ಮಹಾಮಹಿಮರಾದ ಮಹಾಮಂತ್ರಿ ರಾಮಕೃಷ್ಣರ ಮೇಲೆ ಈ ರಾಜ್ಯದ ಹೊಣೆಯಿದೆ. ಮಹಾಮಂತ್ರಿಗಳೇ! ಈ ಹೊರೆಯು ಇಂದು ಬಂದುದಲ್ಲ ಯಾರೋ ತಂದು ತಮ್ಮ ಮೇಲೆ ಹೊರೆಸಿದುದಲ್ಲ. ವಂಶಪಾರಂಪರ್ಯವಾಗಿ ಶಿವಪ್ಪ ನಾಯಕರವರ ಕಾಲದಿಂದ ಈ ಭಾರವು ತಮ್ಮ ಮೇಲೆ ಬಿದ್ದಿದೆ. ಇಂದು ತಾವು ಅದನ್ನು ಪರಿತ್ಯಜಿಸಿದರೆ ಈ ಲೋಕವು ಸಮ್ಮತಿಸದು. ತಾವು ಅಧಿಕಾರ ಪರಿತ್ಯಾಗಮಾಡಕೂಡದು" ಎಂದು ಹೇಳುತ್ತಾ ಯುವರಾಜನು ಕಣ್ಣುಗಳಲ್ಲಿ ನೀರು ಸುರಿಸತೊಡಗಿದನು. ಮಂತ್ರಿಯ ಹೃದಯವು ಕರುಣಾರಸಪ್ಲಾವಿತವಾಗಿ ಯುವರಾಜನನ್ನು ಬಾಚಿ ತಬ್ಬಿಕೊಂಡು, "ಯುವರಾಜರೇ! ನಾನು ತಪ್ಪುಮಾಡಿದೆ. ಮಹಾರಾಜರವರು ದೈವಾಧೀನರಾದಂದಿನಿಂದ ನನಗೆ ಈ ಮಂತ್ರಿಪದದಿಂದ ಬಿಡಿಸಿಕೊಳ್ಳಬೇಕೆಂಬ ಆತುರತೆ ಇದ್ದಿತು. ಆ ಆತುರದಲ್ಲಿ ನಾನು ಸರಿಯಾಗಿ ಯೋಚನೆಮಾಡಲಿಲ್ಲ. ನಾನು ನಿಮಗೆ ಯಥಾಶಾಸ್ತ್ರವಾಗಿ ಪಟ್ಟವನ್ನು ಕಟ್ಟಿಸುವವರೆಗೆ ಈ ಅಧಿಕಾರವನ್ನು ಪರಿತ್ಯಾಗಮಾಡುವುದಿಲ್ಲ" ಹೀಗೆಂದು ಅಭಯವಿತ್ತನು. ಯುವರಾಜನು ಸಂತುಷ್ಟಚಿತ್ತನಾಗಿ ಮಂತ್ರಿಗಳನ್ನು ವಂದಿಸಿ ಅವರ ಅಪ್ಪಣೆಯನ್ನು ಪಡೆದು ಬಿಡಾರಕ್ಕೆ ತೆರಳಿದನು.

ಮಾರನೆಯ ದಿನ ಪ್ರಾತಃಕಾಲ ಯುವರಾಜನು ಸಂತುಷ್ಟಾಂತರಂಗವುಳ್ಳವನಾಗಿ ಮಹಾರಾಣಿಯವರ ಅಂತಃಪುರಕ್ಕೆ ಹೋಗಿ ಮಹಾರಾಣಿಯವರ ಭೇಟಿಮಾಡಿದನು. ವ್ಯಾಕುಲಚಿತ್ತರಾಗಿ ಚಿಂತಾಕ್ರಾಂತರಾಗಿದ್ದ ಮಹಾರಾಣಿಯವರಿಗೆ, ತನಗೂ ಮಂತ್ರಿಗಳಿಗೂ ನಡೆದ ಮಾತುಕಥೆಗಳ ಸಾರಾಂಶವನ್ನು ತಿಳಿಸಿದನು. ತಾನು ಅವರನ್ನು ಪ್ರಾರ್ಥನೆ ಮಾಡಿ ಅವರಿಂದ ಮಂತ್ರಿಪದವಿಯನ್ನು ಪರಿತ್ಯಾಗಮಾಡುವುದಿಲ್ಲವೆಂಬ ಅಭಯವನ್ನು ಪಡೆದಿರುವುದಾಗಿ ಹೇಳಿದನು. ಇದರಿಂದ ರಾಣಿಯವರಿಗೆ ಸಮಾಧಾನವಾಯಿತು.

"ಚಿನ್ನ ಬಸಪ್ಪಾಜಿಗಳೇ! ಮಂತ್ರಿಗಳಿಗೆ ಏಕೆ ಬೇಸರವಾಗಿದೆ? ಅವರೇಕೆ ಅಧಿಕಾರತ್ಯಾಗ ಮಾಡುತ್ತೇನೆಂದು ತಿಳಿಸಿದರು? ಅದರ ಕಾರಣವನ್ನೇನಾದರೂ ನಿಮ್ಮಲ್ಲಿ ಮಂತ್ರಿಗಳು ಸೂಚಿಸಿದರೇನು?"

"ಮಾತೆಯವರೇ! ಇಲ್ಲ. ನಾನು ಮಂತ್ರಿಗಳ ದರ್ಶನಕ್ಕೆ ಹೋದಾಗ ಮಂತ್ರಿಗಳು ಶಾಂತಚಿತ್ತದಿಂದಿದ್ದರು. ಅವರ ಆಕಾರೇಂಗಿತಗಳಲ್ಲಿ ಏನೂ ವ್ಯತ್ಯಾಸವಿರಲಿಲ್ಲ."

"ಯುವರಾಜರೇ! ಆದರೂ ಅದು ಸಾಮಾನ್ಯ ವಿಚಾರವಲ್ಲ. ಮಂತ್ರಿಗಳ ಮರ್ಮವನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಅವರಿಗೆ ಈ ರಾಜ್ಯದಲ್ಲಿ ಏನೋ ಅಸಮಾಧಾನವಾಗಿದೆ."

"ತಾಯೇ! ತಮ್ಮಲ್ಲಾಗಲೀ, ನನ್ನಲ್ಲಾಗಲೀ, ಎಳ್ಳಷ್ಟೂ ತಪ್ಪಿಲ್ಲ. ರಾಜ್ಯದಲ್ಲಿ ತಪ್ಪಿದ್ದರೆ ಅದನ್ನು ಮಂತ್ರಿಗಳು ಸರಿಪಡಿಸಬೇಕು. ತಾವೇಕೆ ಚಿಂತಿಸುವಿರಿ? ತಾವು ಶಾಂತವಾಗಿರಿ. ಮಂತ್ರಿಗಳು ರಾಜ್ಯಭಾರವನ್ನು ನೋಡಿಕೊಳ್ಳುತ್ತಾರೆ. ಭಗವಂತನ ಅಪಾರ ಕೃಪೆಯು ಈ ನಗರದ ರಾಜ್ಯದ ಮೇಲಿದೆ."

"ಯುವರಾಜರೇ! ಹೇಗಾದರೂ ಆಗಲಿ. ನೀವು ಮಹಾರಾಜರಿಗೆ ತಕ್ಕ ಮಗ. ನಿಮ್ಮಿಂದ ಇಂದು ಬಂದಿದ್ದ ಅವಗಡವನ್ನು ನಾವು ದಾಟಿದಂತಾಯಿತು. ಮುಂದೆ ನೋಡಿಕೊಳ್ಳೋಣ!"

---

## ೧೧

## ಭಗ್ನಹೃದಯದ ಮಾರ್ದನಿ

ಬಿದನೂರಿನ ರಾಜಮಹಲುಗಳ ಪಂಕ್ತಿಯಲ್ಲಿ ಒಂದು ಭವ್ಯವಾದ ಭವನ. ಆ ಭವನವು ವಿಶಾಲವಾದ ಚೌಕಿಗಳಿಂದಲೂ ಉಪ್ಪರಿಗೆಗಳಿಂದಲೂ ಶೋಭಿಸುತ್ತಿದ್ದರೂ ಅಲ್ಲಿ ವಾಸಮಾಡುವವರು ಯಾರೂ ಇಲ್ಲ. ಆ ಮಂದಿರವು ಬಲು ಅಚ್ಚುಕಟ್ಟಾಗಿ ಅಲಂಕೃತವಾಗಿದ್ದಿತು. ಹಾಗೆಯೇ ಆ ಮಂದಿರದ ಒಳಗೆ ಏನು ನಡೆಯುತ್ತಿದೆಯೋ ಆ ವಿದ್ಯಮಾನಗಳೆಲ್ಲವೂ ದುರ್ಭೇದ್ಯವಾಗಿದ್ದವು. ಆ ಮನೆಯೊಳಗೆ ಯಾರಿಗೂ ಪ್ರವೇಶಿಸಲು ಧೈರ್ಯವಿಲ್ಲ. ಪ್ರವೇಶಮಾಡುವ ಅಧಿಕಾರವೂ ಇಲ್ಲ. ಭೈರವಿಯ ಮಾತು ಹಾಗಲ್ಲ. ಅವಳಿಗೆ ಪ್ರವೇಶವಿಲ್ಲದ ಮನೆಯಿಲ್ಲ. ತಿಳಿಯದ ಮನುಷ್ಯರಿಲ್ಲ. ಆ ಮನೆಯು ವಿರೂಪಾಕ್ಷನ ವಾಸಸ್ಥಾನ. ಭೈರವಿಯು ವಿರೂಪಾಕ್ಷನ ಮನೆಯೊಳಗೆ ನಿರ್ಭಯವಾಗಿ ಪ್ರವೇಶಮಾಡಿದಳು. ಮೇಲೆ ಅಂತರಂಗ ಗೃಹದಲ್ಲಿ ವಿರೂಪಾಕ್ಷನು ಏಕಾಕಿಯಾಗಿ ಕುಳಿತಿದ್ದನು. ಭೈರವಿಯು, ದ್ವಾರಪಾಲಕನನ್ನು ಸೇನಾಧಿಪತಿಗಳು ಏನು ಮಾಡುತ್ತಿದ್ದಾರೆಂದು ವಿಚಾರಿಸಿದಳು. ಏಕಾಕಿಯಾಗಿ ಕುಳಿತಿದ್ದಾನೆಂದು ತಿಳಿದು ಒಳ್ಳೇ ಸಮಯಕ್ಕೇ ಬಂದಿದ್ದೇನೆ ಎಂದು ಕೇಕೆಹಾಕಿ ನಕ್ಕಳು. ಆ ನಗುವಿನ ಧ್ವನಿಯನ್ನು ಕೇಳಿ ವಿರೂಪಾಕ್ಷನು ಸ್ವಯಂ ಬಂದು ಬಾಗಿಲು ತೆಗೆದನು. ಭೈರವಿಯು ನಗುತ್ತಾ ವಿರೂಪಾಕ್ಷನ ಅಂತರ್ಗೃಹವನ್ನು ಹೊಕ್ಕಳು. ವಿರೂಪಾಕ್ಷನು ಬಾಗಿಲುಗಳನ್ನು ಭದ್ರವಾಗಿ ಸೇರಿಸಿ ಭೈರವಿಯ ಭುಜವನ್ನು ತಟ್ಟಿ, "ಇದೇನು ಭೈರವಿ! ಇಂದು ನನ್ನ ಮೇಲೆ ಇಷ್ಟು ಅನುಗ್ರಹ ಮಾಡಿರುವೆ?" ಎಂದು ಕೇಳಿದನು. ಭೈರವಿಯ ಮುಖವು ಕೆಂಪೇರಿತು. ಕಣ್ಣುಗಳು ಜ್ವಲಿಸುತ್ತಿದ್ದವು. ಭೈರವಿಯು ತಿರಸ್ಕಾರ ಪೂರ್ಣವಾದ ನಗುವನ್ನು ನಕ್ಕು—"ವಿರೂಪಾಕ್ಷ! ಇಂದು ನಿನ್ನೊಡನೆ ಮನಬಿಚ್ಚಿ ಮಾತನಾಡಲೋಸುಗ ಬಂದಿದ್ದೇನೆ. ಇಂದು ನಿನ್ನೊಡನೆ ಮಾತನಾಡಿ ಹೊರಟು ಹೋಗುತ್ತೇನೆ. ಮತ್ತೆ ನೀನು ನನ್ನನ್ನು ನೋಡಲಾರೆ."

ವಿರೂಪಾಕ್ಷನು ನಗುತ್ತಾ ಭೈರವಿಯ ಕೈಗಳನ್ನು ಹಿಡಿದು, ಪರ್ಯಂಕದಮೇಲೆ ಕುಳ್ಳಿರಿಸಿ—"ನೋಡು ಭೈರವಿ! ಸ್ತ್ರೀಯರೆಲ್ಲಾ ಹೀಗೆಯೇ ಶೀಘ್ರ ಕೋಪಿಗಳು. ಸಣ್ಣ ಕಾರಣಕ್ಕಾಗಿ ಅಗಾಧ ಕೃತ್ಯ ಗಳನ್ನು ಮಾಡಿಬಿಡುತ್ತಾರೆ. ನೀನೇಕೆ ನನ್ನಮೇಲೆ ಇಷ್ಟು ಅಪ್ರಸನ್ನ ಳಾಗಿದ್ದಿ? ನಿನ್ನ ಈ ಕ್ರೋಧಾವೇಶವೇಕೆ? ಉದ್ರೇಕವೇಕೆ? ಈ ಮನಃಕಾಷಾಯಕ್ಕೆ ಕಾರಣವೇನು?" ಎಂದನು.

"ಕೇಳು ವಿರೂಪಾಕ್ಷ! ಈ ನಯವಿನಯಗಳಿಂದ ಇಂದು ನೀನು ನನ್ನನ್ನು ಮೋಸಮಾಡಲಾರೆ. ನೀನು ನನ್ನನ್ನು ವಿವಾಹಮಾಡಿ ಕೊಳ್ಳುವುದಾಗಿ ವಾಗ್ದಾನವಿತ್ತಿರುವೆ. ಇಂದು ಹೇಳು. ನನ್ನನ್ನು ಮದುವೆ ಮಾಡಿಕೊಳ್ಳುವೆಯಾ? ಇಲ್ಲವೇ?"

"ಅಯ್ಯೋ ಹುಚ್ಚಿ! ಮದುವೆ, ಮದುವೆ. ಈ ಮದುವೆಯ ಹುಚ್ಚು ನಿನಗೆಲ್ಲಿ ಹಿಡಿಯಿತು? ನಾನು ನಿನ್ನನ್ನು ನನ್ನ ಪ್ರಾಣ ಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿರುವೆನು. ಇದಕ್ಕಿಂತಲೂ ಮದುವೆ ಯಲ್ಲಿ ಅತಿಶಯವೇನಿದೆ?"

"ವಿರೂಪಾಕ್ಷ! ನಿನ್ನ ವಂಚನೆಯನ್ನು ನಾನು ಬಲ್ಲೆ. ನೀನು ರಾಣಿಯೊಡನೆ ಇದಕ್ಕಿಂತಲೂ ಅತಿಶಯ ಪ್ರೇಮದಿಂದ ಮಾತನಾಡುವೆ. ಅದು ಚೆಲುವಮ್ಮಣ್ಣಿಗೆ ಸರಿಹೋಗಬಹುದು. ನನಗೆ ಅದು ಸರಿ ಬೀಳುವುದಿಲ್ಲ. ನನಗೆ ನೀನು ಪತಿಯೆಂದರೆ ಪತಿ. ನಾನು ಬೇರೊಬ್ಬ ಪುರುಷನನ್ನು ಕಾಣೆನು. ನೀನಿಲ್ಲದಿದ್ದರೆ ನಾನು ಸರ್ವಸ್ವವನ್ನೂ ಪರಿ ತ್ಯಾಗಮಾಡುವೆನು. ರಾಣಿಯನ್ನೂ ನನ್ನನ್ನೂ ಹೋಲಿಸಬೇಡ."

"ಭೈರವಿ, ನಾನು ನಿನ್ನನ್ನು ಮದುವೆಯಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರೆ ನಮ್ಮಿಬ್ಬರಿಗೂ ನಿಸ್ತಾರವಿಲ್ಲ. ರಾಣಿಯು ನಮ್ಮನ್ನು ತೈಲಭಾಂಡದಲ್ಲಿ ಕುದಿಸಿ ಕೊಲ್ಲುವಳು. ಭೈರವಿ, ಅಂದು ಆ ರಾಣಿಯ ಸಮ್ಮುಖಕ್ಕೆ ಕೊಂಡುಹೋಗಿ ನನ್ನನ್ನು ಅರ್ಪಿಸಿದವಳು ನೀನೇ ಅಲ್ಲವೇ?"

"ಕೇಳು ವಿರೂಪಾಕ್ಷ! ಆ ರಾಣಿಯ ಗುಣವನ್ನು ನೀನೇನು ಬಲ್ಲೆ.? ನೀನು ಆ ರಾಣಿಯ ಸರ್ವಸ್ವವೆಂದು, ಅವಳ ಮನೋವಲ್ಲಭ ನೆಂದು ತಿಳಿದಿರುವೆ. ಆ ರಾಣಿಯು ವಿಲಾಸಿನಿ. ಅವಳಿಗೆ ನಿನ್ನಂತಹ ಪ್ರಣಯಿಗಳು ಎಷ್ಟೋಮಂದಿ ಇದ್ದಾರೆ. ರಾಣಿಯ ಕಣ್ಣಿಗೆ ಸುಂದ ರಾಂಗನಾಗಿ ಕಂಡವನು ಅವಳ ದಾಸಾನುದಾಸನಾಗುತ್ತಾನೆ. ವೀರ ಪುರುಷನೆಂದರೆ ಹೇಗಾದರೂ ರಾಣಿಯು ತನ್ನ ಪಂಜರದಲ್ಲಿ ಹಾಕಿ ಕೊಳ್ಳುತ್ತಾಳೆ. ಕಾರ್ಯಸಾಧನೆಗೆ ಸಹಾಯಕರಾಗುವ ಪುರುಷರುಸಿಕ್ಕಿದರೆ ಅವರನ್ನು ತನ್ನ ಲಾವಣ್ಯವೈಖರಿಗಳಿಂದ ವಶಮಾಡಿಕೊಂಡು ದಾಸಾನು ದಾಸರನ್ನಾಗಿ ಮಾಡಿಕೊಳ್ಳುತ್ತಾಳೆ. ಎಂದು ನಿನ್ನ ಮೇಲೆ ಕೋಪವು ಬರುತ್ತದೆಯೋ ಅದನ್ನು ನೀನೇನು ಬಲ್ಲೆ ? ಅವಳ ಕೋಪಕ್ಕೆ ಪಾತ್ರ ನಾದರೆ ದೀಪಶಿಖೆಯಲ್ಲಿ ಬಿದ್ದ ಪತಂಗದಂತೆ ನೀನು ಸುಟ್ಟುಹೋಗುವೆ. ನಿನಗಿಂತಲೂ ಹೆಚ್ಚು ಕಾರ್ಯದಲ್ಲಿ ಮತ್ತೊಬ್ಬನ ಸಹಾಯವು ಅವಳಿಗೆ ಅವಶ್ಯವಾದರೆ ಅವನನ್ನು ಓಲೈಸಿ ಮರುಳುಮಾಡಿ ವಶಪಡಿಸಿಕೊಂಡು ನಿನ್ನನ್ನು ಅವನಿಗೆ ಬಲಿಕೊಡುತ್ತಾಳೆ. ವಿರೂಪಾಕ್ಷಾ! ರಾಣಿಯ ಗುಣ ಗಳನ್ನು ನೀನರಿಯೆ! ಅವಳ ರೂಪದಲ್ಲಿ ನೀನು ಮುಗ್ಧನಾಗಿರುವೆ!"

"ಭೈರವಿ, ಸ್ತ್ರೀಯರ ಸೌಂದರ್ಯವು ಪುರುಷರಿಗೆ ತಿಳಿಯುವಷ್ಟು ಸ್ತ್ರೀಯರಿಗೆ ತಿಳಿಯುವುದೇನು? ಸ್ತ್ರೀಯರು ದರ್ಪಣದ ಮುಂದೆ ನಿಂತು ಲೋಕದಲ್ಲಿರುವ ಸಮಸ್ತ ಸುಂದರಿಯರಿಗಿಂತಲೂ ತಾವು ಸೌಂದರ್ಯಾಧಿ ಕರೆಂದು ಭಾವಿಸುತ್ತಾರೆ. ಪುರುಷರು ಸ್ತ್ರೀಯರ ಸೌಂದರ್ಯಾತಿಶಯ ವನ್ನು ಅಳೆಯಬಲ್ಲರು. ನಿನ್ನ ಕಣ್ಣುಗಳು ರಾಣಿಯ ಕಣ್ಣುಗಳಿಗಿಂತ ಶತಾಧಿಕ ತೇಜೋವಿರಾಜಮಾನವಾದವುಗಳು. ನಿನ್ನ ಅಧರವು ಮೋಹಕ ವಾದುದು. ನಿನ್ನ ವಾಣಿಯು ಅಮೃತ ನಿಶ್ಯಂದಿ. ನಿನ್ನ ಚಾತುರ್ಯವು ನನ್ನನ್ನು ಮುಗ್ಧನನ್ನಾಗಿ ಮಾಡಿದೆ. ನನ್ನ ಹೃದಯದಲ್ಲಿ ರಾಣಿಯ ರೂಪಿಗಿಂತಲೂ ನಿನ್ನ ಲಾವಣ್ಯವು ಅತಿಶಯವಾದುದೆಂದು ಸಹಸ್ರಬಾರಿ ಪ್ರಕಾಶವಾಗಿದೆ. ನಾನು ರಾಣಿಯನ್ನು ಸರ್ವಥಾ ನೀನು ಹೇಳುವಷ್ಟು ಕಠೋರ ಹೃದಯಳೆಂದು ಭಾವಿಸುವುದಿಲ್ಲ. ಅವಳು ನನಗಾಗಿ

ಪ್ರಾಣವನ್ನೂ ಒಪ್ಪಿಸಲು ಸಿದ್ಧಳಾಗಿದ್ದಾಳೆ. "ಭೈರವಿ, ನೀನು ಏನೇ ಹೇಳು, ಏನೇಮಾಡು. ನಾನು ಚೆಲುವಮ್ಮಣ್ಣಿಯಲ್ಲಿ ಆತ್ಮಾರ್ಪಣ ಮಾಡಿದ್ದೇನೆ."

ಭೈರವಿಯು ಫಣಿನಿಯಂತೆ ಎದ್ದುನಿಂತು ಗದ್ಗದ ಕಂಠದಿಂದ—"ಪಾಷಂಡ! ಹೋಗು ನರಕಕ್ಕೆ ಹೋಗು. ನಾನು ಆ ರಾಣಿಯಮೇಲೆ ಸೇಡು ತೀರಿಸಿಕೊಳ್ಳುವುದನ್ನು ನೋಡು ನಿಮ್ಮ ಅಂತರಂಗವನ್ನು ಮಂತ್ರಿಯು ತಿಳಿದಿದ್ದಾನೆ. ಯುವರಾಜನು ಚೆನ್ನಾಗಿ ಅರಿತಿದ್ದಾನೆ. ಮಲ್ಲಿಕಾರ್ಜುನಮಂದಿರದ ಗುರುದೇವನು ಖಚಿತ ಮಾಡಿಕೊಂಡಿದ್ದಾನೆ. ನೋಡು ವಿರೂಪಾಕ್ಷ! ನೀನೂ ರಾಣಿಯೂ ಸುಟ್ಟು ಭಸ್ಮವಾಗಿ ಹೋಗಬೇಕು. ಇಲ್ಲವೇ ಈ ನಗರದ ರಾಜ್ಯವು ಸ್ಮಶಾನವಾಗಿ ಹೋಗಬೇಕು. ಇವೆರಡರಲ್ಲಿ ಒಂದು ಈ ಭೈರವಿಯು ಪಣತೊಟ್ಟಿದ್ದಾಳೆ."

ವಿರೂಪಾಕ್ಷನು ನಗುತ್ತಾ—"ಭೈರವಿ, ರಾಣಿ ಚೆಲುವಮ್ಮಣ್ಣಿಯೊಡನೆ ಧಗಧಗನೆ ಉರಿಯುವ ಚಿತೆಯನ್ನು ಸಜೀವವಾಗಿ ಏರುವುದು ಒಂದು ಆನಂದ. ನನಗೆ ಈ ಪೃಥ್ವೀಮಂಡಲದ ಸುಖಭೋಗಗಳೆಲ್ಲವೂ ಒಂದು ತೂಕ. ಚೆಲುವಮ್ಮಣ್ಣಿಯು ಒಂದು ತೂಕ. ನೀನು ನನ್ನನ್ನು ಬಿಟ್ಟುಹೋಗು, ಕಾಡಬೇಡ. ಪುನಃ ನಿನ್ನ ಮುಖವನ್ನು ತೋರಬೇಡ ಬೇರಾವನನ್ನಾದರೂ ಮದುವೆ ಮಾಡಿಕೊಂಡು ಸುಖವಾಗಿ ಬಾಳು."

"ನೀಚನೆ! ಇನ್ನು ನನಗೆ ಮದುವೆಯೆಂದರೇನು? ದಿನದಿನಕ್ಕೆ ಒಬ್ಬೊಬ್ಬ ಪುರುಷನೊಡನೆ ವಿಹರಿಸಲು ನಾನು ನಗರದ ರಾಣಿಯಲ್ಲ. ನೀನು ಮಾತ್ರವೇಕೆ? ಈ ಜಗತ್ತಿನಲ್ಲಿರುವ ಪುರುಷರೆಲ್ಲರೂ ಪಾಷಂಡರು, ಪಾಪಿಗಳು," ಎಂದು ರೋದನಮಾಡುತ್ತಾ ವಿರೂಪಾಕ್ಷನ ಭವನವನ್ನು ಬಿಟ್ಟು ಹೊರಟು ಹೋದಳು. ವಿರೂಪಾಕ್ಷನು ವಿಷಣ್ಣನಾಗಿ ಕುಳಿತುಕೊಂಡನು. ಭೈರವಿಯು ಹೊರಟು ಹೋದರೂ ಅವಳ ಮಾತುಗಳು ವಿರೂಪಾಕ್ಷನ ಹೃದಯಲ್ಲಿ ಶಲ್ಯದಂತೆ ತಿವಿಯುತ್ತಿದ್ದವು. ರಾಣಿಯು ಭೈರವಿಯು ಹೇಳಿದಂಥಾ ಹೆಂಗಸೇ ಆಗಿದ್ದರೆ ಅವಳು ರಾಕ್ಷಸಿಯಾಗಿರಬೇಕು. ಅಂತಹ ದಿವ್ಯಸುಂದರ ಮೂರ್ತಿಯಲ್ಲಿ ಪ್ರೇಮದಿಂದ

ವರಕಹೊಬ್ಬ ಸ್ವರ್ಣಮೂರ್ತಿಯಂತಿರುವ ನಗರದ ರಾಣಿಯಲ್ಲಿ ಅಂತಹ ಕಳಂಕವೆಲ್ಲಿ ಬರಬೇಕು? ರಾಣಿಯ ಔದಾರ್ಯ, ಪ್ರೇಮ ಎಲ್ಲಕ್ಕಿಂತಲೂ ಉಜ್ವಲವಾದ ಆವಳ ರೂಪ, ಅದರಲ್ಲಿ ನನ್ನ ಮನವು ನೆಟ್ಟುಹೋಗಿದೆ. ಭೈರವಿಯು ಹುಚ್ಚಿ! ಶುದ್ಧ ಹುಚ್ಚಿ!" ಎಂದು ಕೊಂಡನು.

---

೧೨

## ಭೈರವಿಯ ಸ್ವಪ್ನ

ರಾಮಕೃಷ್ಣನು ಅಗಾಧ ಚಿಂತಾಮಗ್ನನಾಗಿದ್ದಾನೆ. ಅವನ ಮನಸ್ಸು ಸಮಾಧಾನವಾಗಿಲ್ಲ. ಇಂಥದೇ ಮಾಡಬೇಕೆಂಬ ನಿರ್ಧಾರವಿಲ್ಲ ಅಂದು ಮಹಾರಾಣಿಯ ಭೇಟಿಮಾಡಿ ಮಂತ್ರಿಪದವಿಯನ್ನು ಪರಿತ್ಯಾಗ ಮಾಡುವುದಾಗಿ ತಿಳಿಸಿದನು. ಹಾಗೆ ಮಾಡಿದ್ದರೆ ಎಷ್ಟೋ ಚೆನ್ನಾಗಿತ್ತು. ಯುವರಾಜನಮಾತಿಗೆ ಮರುಳಾಗಿ ಆ ನಿರ್ಧಾರದಿಂದ ವಿಮುಖನಾದನು. ದಿನದಿನಕ್ಕೆ ಮನಸ್ಸಿನ ಯಾತನೆಯು ಹೆಚ್ಚಾಗುತ್ತಿದೆ. ಮಹಾರಾಣಿಯ ವಿಚಾರವಾಗಿ ಅವನ ಕಿವಿಗೆ ಅನೇಕ ದೂರುಗಳು ಬೀಳುತ್ತಿವೆ. ಈಗ ಅವನಿಗೆ ಮಹಾರಾಣಿಯನ್ನು ಕಂಡರೆ ಎಳ್ಳಷ್ಟೂ ಸರಿಬೀಳುವುದಿಲ್ಲ. ಮಹಾರಾಣಿಯ ವರ್ತನೆಯನ್ನು ಪರೀಕ್ಷಿಸಲೋಸುಗ ವಿಶೇಷವಾಗಿ ಮಹಾರಾಣಿಯ ಅಂತಃಪುರಕ್ಕೆ ಹೋಗಿ ಮಾತುನಾಡುತ್ತಾನೆ. ಎಷ್ಟೋ ಮಾತುಗಳನ್ನಾಡುತ್ತಾನೆ. ಮುಖಭಾವದಲ್ಲಾಗಲೀ, ಇಂಗಿತದಲ್ಲಾಗಲೀ ನಯವಿನಯಗಳಲ್ಲಾಗಲೀ ರಾಣಿಯು ಒಂದೇ ಸಮನಾಗಿದ್ದಾಳೆ. ರಾಣಿಯ ಗಾಂಭೀರ್ಯ, ಅವಳ ದೇಶಪ್ರೇಮ, ಪ್ರಜಾವಾತ್ಸಲ್ಯ, ದೈವ ಭಕ್ತಿ ಇವೆಲ್ಲವನ್ನೂ ನೋಡಿದರೆ ಮಹಾರಾಣಿಯು ಪರಮ ಪವಿತ್ರ ವಸ್ತುವೆಂದು ಅವನು ನೂರುಬಾರಿ ತನ್ನ ಮನಸ್ಸಿಗೆ ಸಮಾಧಾನ ಹೇಳುತ್ತಾನೆ. ಮಹಾರಾಣಿಯ ಮೇಲಿನ ದೂರುಗಳನ್ನು ಕೇಳಿದರೆ

ಕರ್ಣ ಕಠೋರವಾಗಿದೆ. ಒಂದೊಂದುಬಾರಿ ಈ ದೂರು ಹೇಳುವ ಈ ಕ್ಷುದ್ರಜನಗಳನ್ನೆಲ್ಲಾ ತಲೆ ಕಡಿಸಿ ಹಾಕಬೇಕೆಂದು ಉದ್ರೇಕಗೊಳ್ಳು ತ್ತಾನೆ. ಮತ್ತೊಮ್ಮೆ ಈ ರಾಣಿಯನ್ನು ಪ್ರತ್ಯಕ್ಷವಾಗಿ ಜನಗಳ ಎದುರಿಗೆ ಶೂಲಕ್ಕೇರಿಸಿ ಅವಳ ವಿಟಪುರುಷರುಗಳನ್ನು ಚಿತ್ರವಧೆಮಾಡಿಸಿ ನಗರದ ರಾಜಮನೆತನದ ಪಾಪವನ್ನು ತೊಳೆಯಬೇಕೆಂದು ಸ್ಥಿರಮನಸ್ಸುಮಾಡಿ ಕಟಕಟನೆ ಹಲ್ಲುಕಡಿಯುತ್ತಾನೆ. ಇಂತಹ ಡೋಲಾಯಮಾನ ಹೃದಯ ನಾಗಿ ರಾಮಕೃಷ್ಣನು ಒಂದೂ ದಿಕ್ಕುತೋರದೆ ಹಗಲಿರುಳೂ ಚಿಂತಾಮಗ್ನ ನಾಗಿ ಕಾಲಕಳೆಯುತ್ತಿದ್ದಾನೆ.

ರಾಜಕುಲದಲ್ಲಿ ಸಂಭಾವಿತರಾದವರಿಗೆ ರಾಣಿಯ ನಡವಳಿಕೆಗಳು ಸ್ವಲ್ಪವೂ ಸಮಾಧಾನಕರವಾಗಿಲ್ಲ. ಅವರು ರಾಣಿಯನ್ನು ಏನು ಮಾಡಬಲ್ಲರು ? ಮಹಾಮಂತ್ರಿ ರಾಮಕೃಷ್ಣನೊಡನೆ ಹೋಗಿ ರಾಣಿಯ ಸ್ವಚ್ಛಂದ ವೃತ್ತಿಯನ್ನು ಪ್ರಸ್ತಾಪಿಸಲು ಯಾರಿಗೂ ಧೈರ್ಯವಿಲ್ಲ. ಆದರೆ ಆ ದೊಡ್ಡ ಮನುಷ್ಯರು, ಮಹಾಬುದ್ಧಿಶಾಲಿಗಳಾದ ಮಂತ್ರಿಗಳಿಗೆ ಈ ವಿಚಾರಗಳು ತಿಳಿಯದೆ ಇದೆಯೇನು ? ನಾವು ಹೇಳುವುದೇಕೆ ? ಅವರೇ ನೋಡಿಕೊಳ್ಳುತ್ತಾರೆ ! ಎಂದು ತಮ್ಮತಮ್ಮಲ್ಲೇ ಮಾತನಾಡಿ ಕೊಳ್ಳುತ್ತಾರೆ. ಮಹಾಜನರಲ್ಲಿಯೂ ಅಲ್ಲಲ್ಲಿ ಈ ಮಾತುಗಳು ಒಬ್ಬ ರಿಂದೊಬ್ಬರಿಗೆ ಕೇಳಿಬರುತ್ತಿವೆ. ಆದರೆ ಪ್ರತ್ಯಕ್ಷವಾಗಿ ಮಹಾರಾಣಿ ಯನ್ನು ಕಂಡರೆ ಎಲ್ಲರೂ ದಿಗ್ಭ್ರಾಂತರಾಗಿ ಹೋಗುತ್ತಾರೆ. ರಾಣಿಯು ಮಹಾಜನರ ಮಧ್ಯದಲ್ಲಿ ಮಾತನಾಡಿದರೆ ಪ್ರಜಾವಾತ್ಸಲ್ಯವು ಪ್ರವಾಹವಾಗಿ ಹರಿಯುತ್ತದೆ. ಮಲ್ಲಿಕಾರ್ಜುನ ದೇವಾಲಯದಲ್ಲಿ ಮಹಾ ರಾಣಿಯು ಬಂದು ಭಕ್ತವೃಂದದ ಮಧ್ಯದಲ್ಲಿ ಸಮಾವೇಶ ಮಾಡಿದಾಗ ಮೂರ್ತಿಮತ್ತಾದ ಭಕ್ತಿಯಂತೆ ಕಂಗೊಳಿಸುತ್ತಾಳೆ. ದೀನದರಿದ್ರರನ್ನು ಮಹಾರಾಣಿಯು ಕರುಣೆಯಿಂದ ಆದರಿಸುವಾಗ ಸಾಕ್ಷಾತ್ ಅನ್ನಪೂ ರ್ಣಾದೇವಿಯಂತೆ ವಿರಾಜಿಸುತ್ತಾಳೆ. ಬಡವರು, ದೊಡ್ಡವರು, ವಿರಕ್ತರು ರಾಜಕಾರಣಪಟುಗಳು, ಭಕ್ತರು, ಯಾರು ಮಹಾರಾಣಿಯನ್ನು ಕಂಡರೂ ಅವಳು ನಗರವನ್ನು ಉದ್ಧಾರಮಾಡಲು ಬಂದಿರುವ ಮಹಾದೇವಿ

ಯೆಂದು ಎಲ್ಲರೂ ಭಾವಿಸುತ್ತಾರೆ.ಆಗ ಅಲ್ಲಲ್ಲಿ ಜನಗಳ ಬಾಯಿಯಲ್ಲಿ ಕೇಳಿರುವ ಮಾತುಗಳು ಕ್ಷುದ್ರವಾದವುಗಳೆಂದು ಜನತೆಯು ಭಾವಿಸಿ ಮರೆತುಬಿಡುತ್ತದೆ. ವಿದ್ವಾಂಸರು ಆ ಮಹಾರಾಣಿಯ ಗುಣಗಳನ್ನು ನೋಡಿ "ಅಯ್ಯೋ, ಈ ಮಹಾರಾಣಿಗೆ ಹಾಳು ಲೋಕವು ಎಂತಹ ಕಳಂಕವನ್ನು ಹಚ್ಚುತ್ತದೆ ? ಎಷ್ಟು ಪಾಪ ! ಮಹಾರಾಣಿಯ ಯೌವನ, ರೂಪಸಂಪತ್ತು ಅವಳು ವಿಧವೆಯಾದರೂ ರಾಣಿಗಿರಿಯ ವೈಭವದಿಂದ ಅವಳ ಮುಖದಲ್ಲಿ ವಿರಾಜಿಸುವ ಸೌಮಂಗಲ್ಯ ಕಳೆ ಇವುಗಳನ್ನು ನೋಡಿ ಕುತ್ಸಿತ ಜನರು ಕಟ್ಟು ಕಥೆಗಳನ್ನು ಕಟ್ಟುತ್ತಾರೆ" ಎಂದು ಹೇಳುತ್ತಾರೆ. ಹೀಗೆ ಲೋಕಭಾವನೆಯು ಸಿತಾಸಿತವಾಗಿದೆ.

ರಾಮಕೃಷ್ಣನು ಯಾವ ನಿರ್ಧಾರಕ್ಕೂ ಬರುವಹಾಗಿಲ್ಲ. ಆದರೆ ಸಮಯವನ್ನು ಕಾಯಬೇಕು. ರಾಣಿಯ ದೋಷಗಳು ಬಹುದಿನ ಹೀಗೆ ಅಡಗಿರಲಾರವು ಒಂದಲ್ಲ ಒಂದು ದಿನ ಬಹಿರಂಗಕ್ಕೆ ಬರಲೇ ಬೇಕು, ಎಂದು ಸಮಾಧಾನ ಮಾಡಿಕೊಳ್ಳುತ್ತಾನೆ. ರಾಮಕೃಷ್ಣನಿಗೆ ವಿರೂಪಾಕ್ಷನಮೇಲೆ ಮೊದಲಿದ್ದ ಅಭಿಮಾನವು ಈಗಿಲ್ಲ. ಆ ಪುತ್ರ ಸಮಾನ ವಾತ್ಸಲ್ಯವು ಈಗಿಲ್ಲ. ಒಂದೊಂದುಬಾರಿ ತಾನೇ ತನ್ನ ಹಸ್ತದಿಂದ ಅವನ ತಲೆಯನ್ನು ಕತ್ತರಿಸಿ ಹಾರಿಸಿಬಿಡಬೇಕೆಂದು ಭಾವಿಸುತ್ತಾನೆ. ಹಾಗಾದರೆ ರಾಮಕೃಷ್ಣನು ವಿರೂಪಾಕ್ಷನನ್ನು ಶಿಕ್ಷಿಸಲಿಲ್ಲ ವೇಕೆ? ಹತ್ತುಸಹಸ್ರ ಯೋಧರ ನಾಯಕನಾದ ವಿರೂಪಾಕ್ಷನನ್ನು ಕೆಣಕಲು ರಾಮಕೃಷ್ಣನಿಗೆ ಭಯವೇನು? ಇಲ್ಲ ರಾಮಕೃಷ್ಣನು ಏಕಾಕಿಯಾಗಿ ಹತ್ತುಸಹಸ್ರ ಜನರನ್ನು ಎದುರಿಸಿ ವಿರೂಪಾಕ್ಷನನ್ನು ಹಿಡಿದು ತನ್ನ ಕೈಯಿಂದಲೇ ಕುತ್ತಿಗೆಯನ್ನು ಮುರಿದು ಬಿಸುಡುವಷ್ಟು ಎದೆಗಾರತನವುಳ್ಳವನು. ಆದರೆ ಕಾರಣವಿರಬೇಕು. ಕೈಮಿಂಚಿದ ಮೇಲೆ ಚಿಂತಿಸುವಂತಿರಬಾರದು. ಇಷ್ಟೊಂದು ಮಹಾಪ್ರಯತ್ನದ ಅವಶ್ಯಕತೆಯಿಲ್ಲ. ಸರಿಯಾದ ಸಂದುಕಟ್ಟು ಸಿಕ್ಕಿದರೆ ಒಂದು ಹುಲ್ಲು ಕಡ್ಡಿಯಿಂದ ವಿರೂಪಾಕ್ಷನ ಶಿರಸ್ಸನ್ನು ಹಾರಿಸಬಲ್ಲ ಬುದ್ಧಿಕುಶಲತೆಯು ರಾಮಕೃಷ್ಣನಿಗುಂಟು. ಆದರೆ ತಪ್ಪು ಸಿಗಬೇಕು. ಅದಕ್ಕಾಗಿ

ರಾಮಕೃಷ್ಣನು ತನ್ನ ಗುಪ್ತಚಾರರನ್ನು ಸರ್ವತ್ರ ನಿಯೋಗಿಸಿದ್ದಾನೆ. ಅರಮನೆಯಲ್ಲಿ ಗುಪ್ತಚಾರರಿದ್ದಾರೆ. ರಾಜಧಾನಿಯಲ್ಲಿ ಗುಪ್ತಚಾರರಿದ್ದಾರೆ. ಮಲ್ಲಿಕಾರ್ಜುನ ದೇವಾಲಯದಲ್ಲಿ ಗುಪ್ತಚಾರರಿದ್ದಾರೆ. ವಿರೂಪಾಕ್ಷನ ಭವನದಲ್ಲಿ ರಾಮಕೃಷ್ಣನ ಗೂಢಚಾರರಿದ್ದಾರೆ. ರಾಮಕೃಷ್ಣನಿಗೆ ನಿತ್ಯವೂ ಬಂದು ಸಿಕ್ಕಿದ ಕಥೆಗಳನ್ನು ವರದಿಮಾಡ ಕೂಡದು. ರಾಮಕೃಷ್ಣನ ಗುಪ್ತಚಾರರು ಅಂತಹ ಗುಪ್ತಚಾರರಲ್ಲ. ಆದರೆ ಸಮಯವು ಸಿಕ್ಕಿದರೆ ಅಲ್ಲಿಯೇ ಪ್ರತ್ಯಕ್ಷಪ್ರಮಾಣವನ್ನು ಸಿದ್ಧ ಮಾಡಿಕೊಡುವಂತಿರಬೇಕು.

ಈ ಗುಪ್ತಚಾರರಲ್ಲಿ "ಬೃಂದಾ" ಎಂಬುವಳು ಒಬ್ಬ ಹೂವಾಡಗಿತ್ತಿ. ಇವಳು ಹೂವು ಕಟ್ಟಿ ಮಾರುತ್ತಾಳೆ. ಅರಮನೆಗೆ ಮಹಾರಾಣಿಯವರಿಗೆ, ಹೂವು ಕೊಡುವವಳು. ರಾಜಧಾನಿಯಲ್ಲಿ ಅನೇಕ ರಸಿಕರು ಅವಳಲ್ಲಿ ಹೂವು ಕೊಳ್ಳಲು ಬರುತ್ತಾರೆ. ಬೃಂದೆಯು ಸಂಧ್ಯಾಕಾಲವಾಗುತ್ತಲೇ ಎಲ್ಲ ಕಾರ್ಯಗಳನ್ನೂ ಬಿಟ್ಟು ಮಡಿಮಾಡಿಕೊಂಡು ಬುಟ್ಟಿಯಲ್ಲಿ ಕಟ್ಟಿದ ಹೂವುಗಳನ್ನು ಶೇಖರಿಸಿಕೊಂಡು ಪ್ರತಿದಿನವೂ ಮಲ್ಲಿಕಾರ್ಜುನಸ್ವಾಮಿಗೆ ಅರ್ಪಣೆಮಾಡಲು ದೇವಾಲಯಕ್ಕೆ ಹೋಗುತ್ತಾಳೆ. ಅವಳನ್ನು ಎಲ್ಲರೂ ಬಲ್ಲರು. ಸಾಧಾರಣವಾಗಿ ಬೃಂದೆಗೆ ತಿಳಿಯದವರಾರೂ ಇಲ್ಲ. ಆಗಾಗ ಭೈರವಿಯು ಬಂದು ಬೃಂದೆಯ ಹತ್ತಿರ ಪುಷ್ಪಮಾಲಿಕೆಗಳನ್ನು ತೆಗೆದುಕೊಳ್ಳುತ್ತಿದ್ದಳು. ಬೃಂದೆಯು ಯಾವಾಗಲೂ ಗಿರಿಜೆಯ ಹತ್ತಿರ ದುಡ್ಡು ತೆಗೆದುಕೊಳ್ಳುತ್ತಿರಲಿಲ್ಲ. ಆದರೆ ಗಿರಿಜೆಯು ತಾನಾಗಿ ದುಡ್ಡು ಕೊಟ್ಟರೆ ಬೇಡವೆಂದೂ ಹೇಳುತ್ತಿರಲಿಲ್ಲ. ಹೀಗೆಯೇ ಇವರಿಬ್ಬರಿಗೂ ಒಂದುವಿಧವಾದ ಸ್ನೇಹವು ಬೆಳೆದಿತ್ತು. ವಯಸ್ಸಿನಲ್ಲಿ, ರೂಪ ಲಾವಣ್ಯಗಳಲ್ಲಿ, ಇವರಿಬ್ಬರೂ ಒಂದೇವಿಧವಾಗಿದ್ದರು. ಅನೇಕ ದಿವಸಗಳಿಂದ ಇವರಿಬ್ಬರಿಗೂ ಪರಸ್ಪರ ಪರಿಚಯವಿತ್ತು. ಗಿರಿಜೆಯು ಈಚೆಗೆ ಯಾವಾಗಲೂ ಭೈರವಿಯ ವೇಷದಲ್ಲಿ ಓಡಿಯಾಡುವುದನ್ನು ಬೃಂದೆಯು ನೋಡಿದ್ದಳು. ಆದರೆ ಈ ಭೈರವಿಯಲ್ಲಿ ಏನೋ ಬದಲಾವಣೆಯಾಗಿದೆ ಎಂದು ಬೃಂದೆಯು ಕಂಡುಹಿಡಿದಿ

ದ್ದಳು. ಬೃಂದೆಯು ರಾಮಕೃಷ್ಣನ ಗುಪ್ತಚಾರಳೆಂಬುವುದನ್ನು ಭೈರವಿಯು ಸ್ವಪ್ನದಲ್ಲಿಯೂ ಅರಿಯಳು.

ಒಂದುದಿನ ಅಕಸ್ಮಾತ್ತಾಗಿ ಭೈರವಿಯೂ ಬೃಂದೆಯೂ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಸಂಧಿಸಿದರು. ಬೃಂದೆಯು ಭೈರವಿಯನ್ನು ದಾರಿಯಲ್ಲಿ ತಡೆದು ನಿಲ್ಲಿಸಿದಳು.

"ತಂಗಿ, ಇದೇನು ವೇಷ? ಏಕೆ ಈ ವೇಷವನ್ನು ಪರಿಗ್ರಹಿಸಿದ್ದಿ? ನಿನ್ನ ವಿರಕ್ತಿಗೆ ಕಾರಣವೇನು?"

ಭೈರವಿಯು ಬೃಂದೆಯ ಹೆಗಲಮೇಲೆ ಕೈಹಾಕಿಕೊಂಡು ಮುಂದೆಮುಂದೆ ಹೆಜ್ಜೆಯಿಡುತ್ತಾ "ಬೃಂದೆ, ನನಗೆ ಈ ವೇಷದಿಂದ ಎಷ್ಟೋ ಮನಶ್ಶಾಂತಿಯುಂಟಾಗಿದೆ. ನಾನು ಈಗ ಅಂತಃಪುರದಲ್ಲಿ ರಾಣಿಯ ಸಹಚಾರಿಯಾಗಿರಲು ಮನಸ್ಸಿಲ್ಲದವಳಾಗಿದ್ದೇನೆ. ನನಗೊಂದು ಗೊತ್ತಾದ ವಾಸಸ್ಥಾನವಿಲ್ಲ. ಈ ವೇಷದಲ್ಲಿ ನಾನು ಸ್ವಚ್ಛಂದವಾಗಿ ತಿರುಗಬಹುದು. ನನಗೆ ಯಾರ ಭಯವೂ ಇಲ್ಲ."

"ಭೈರವಿ, ನೀನು ಯಾವ ವೇಷದಲ್ಲಿದ್ದರೂ ನಾನು ನಿನ್ನನ್ನು ಗುರುತಿಸಬಲ್ಲೆ. ಮಹಾರಾಣಿಯವರಿಗೆ ಅಷ್ಟೊಂದು ಪ್ರಿಯಳಾಗಿದ್ದ ನಿನಗೆ ಅಂತಃಪುರದಲ್ಲಿರಲು ಇಷ್ಟು ಬೇಸರವೇಕೆ?"

"ತಂಗಿ! ರಾಣಿಯಲ್ಲೇನೂ ತಪ್ಪಿಲ್ಲ. ಅವಳು ನನ್ನನ್ನು ಮೊದಲಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಾಳೆ. ನನಗೆ ಆ ಅರಮನೆಯ ವಾಸವು ಬೇಸರವಾಗಿದೆ. ಆ ಐಶ್ವರ್ಯವು ನನಗೆ ಕಹಿಯಾಗಿದೆ. ಆ ದೊಡ್ಡಸ್ತಿಕೆಯ ಬಂಧನವನ್ನು ಸಹಿಸಲಾರದೇ ಪಂಜರದಿಂದ ಹಾರಿಹೋದ ಪಕ್ಷಿಯಂತೆ ಅಲೆಯುತ್ತಿದ್ದೇನೆ. ಇದನ್ನು ನೀನು ನಂಬುವೆಯಾ?" ಎಂದಳು.

"ನಂಬದೇ ಏನು? ನನಗೆ ನಿನ್ನ ಮನಸ್ಸು ಪುಸ್ತಕವನ್ನು ಬಿಚ್ಚಿ ಓದಿದಂತೆ ಬೋಧೆಯಾಗುತ್ತದೆ. ಅರಳಿದ ಮಲ್ಲಿಗೆಯ ಹೂವಿನ ಸುವಾಸನೆಯನ್ನು ಘ್ರಾಣವು ಹಿಡಿಯುವಂತೆ ನಿನ್ನ ಮನಸ್ಸನ್ನು ಹಿಡಿಯುವುದು ನನಗೆ ಸುಲಭವಾಗಿದೆ. ನೀನು ಯಾರೋ ಒಬ್ಬ ಪುರುಷನಲ್ಲಿ ಪ್ರೇಮವನ್ನಿಟ್ಟು ಸಫಲವಾಗದೇ ವಂಚಿತಳಾಗಿರುವಿ. ನಿನ್ನಂಥಾ

ಸೌಂದರ್ಯವತಿಯನ್ನು, ನವಯೌವನ ಸಂಪನ್ನಳಾದ ತರುಣೀಮಣಿ ಯನ್ನು ಓಲೈಸದ ಪುರುಷನಾವನೆಂದು ನನಗೆ ಆಶ್ಚರ್ಯವಾಗಿದೆ. ಅಷ್ಟೇ! ಆ ಪುರುಷನಾರೆಂದು ಹೇಳುವೆಯಾ? ಆ ಮಹಾಪುರುಷನನ್ನು ಒಮ್ಮೆ ನಾನೂ ನೋಡುವೆನು."

"ಅಯ್ಯೋ ಸೋದರೀ, ಜನ್ಮಜನ್ಮಾಂತರಕ್ಕೂ ಪುರುಷರ ಸಹ ವಾಸಕ್ಕೆ ಹೋಗದಂತೆ ಮಲ್ಲಿಕಾರ್ಜುನದೇವನು ನಿನ್ನನ್ನು ಅನುಗ್ರಹಿ ಸಲಿ. ಪುರುಷರು ಮೋಸಗಾರರು. ಭ್ರಮರದಂತೆ ಹೂವಿನಿಂದ ಹೂವಿಗೆ ಹಾರುವ ಚಂಚಲಾತ್ಮರು. ಹೆಂಗಸರನ್ನು ಒಂದು ಬಾರಿ ಮೋಸಮಾಡಿ ದರೆ ಎಂದೆಂದಿಗೂ ಅವರ ದಾಸ್ಯದಲ್ಲಿ ಆ ಹೆಂಗಸು ತೊಳಲುವಂತೆ ಮಾಡುವ ಯಾವುದೋ ಮಂತ್ರವನ್ನು ಕಲಿತಿರುವ ಮಾಟಗಾರರು. ಪುರುಷರು!—ಈ ಜನ್ಮದಲ್ಲಿ ಪುರುಷರನ್ನು ನಂಬಬೇಡ ತಂಗೀ, ಈ ಪ್ರಪಂಚದಲ್ಲಿ ಮಹಾಪರಾಕ್ರಮಿಯೆಂದು ತೋರುವ ದಂಭಗಾರನೂ ಹೇಡಿಯೆಂದು ತಿಳಿ. ಅವನ ಧರ್ಮ ಕರ್ಮ ಎಲ್ಲವೂ ಐಶ್ವರ್ಯದಲ್ಲಿ ತೇಲಿ ಹೋಗುತ್ತದೆ. ನಡೆ, ಇನ್ನು ಎಂದೆಂದಿಗೂ ಆ ಮಾತನ್ನೆತ್ತಬೇಡ."

ಬೃಂದೆಯು ನಗುತ್ತಾ, "ಹಾಗಾದರೆ ನೀನು ಒಬ್ಬ ಪಾಷಂಡನನ್ನು ಮದುವೆಯಾಗಿ ಗೃಹತ್ಯಾಗಮಾಡಿ ಈ ಭೈರವಿಯ ವೇಷವನ್ನು ಧಾರಣೆ ಮಾಡಿರುವೆಯೇನು? ಆ ಪಾಷಂಡನು ಅನ್ಯಾನುರಕ್ತನಾಗಿ ಅಲೆಯು ತ್ತಿದ್ದಾನೇನು? ನೀನು ಪುನಃ ಗೃಹಿಣಿಯಾಗುವ ಆಸೆಯಿಲ್ಲವೇನು? ಈ ಕಥೆಯುಲ್ಲಾ ಯಾವಾಗ ನಡೆದುದು? ಎಲ್ಲಿ ನಡೆದುದು" ಎಂದು ಕೇಳಿದಳು.

ಭೈರವಿಯು ನಿಟ್ಟುಸಿರು ಬಿಟ್ಟು, "ಸಾಕು ಹೋಗು, ನನ್ನನ್ನು ಮಾತನಾಡಿಸಬೇಡ. ಕಥೆಯುಂತೆ ಕಥೆ ಸ್ತ್ರೀಯ ಬಾಳು ಹಾಳಾಗುವು ದಕ್ಕೆ ರಾಮಾಯಣದಂಥಾ ಕಥೆಯಾಗಬೇಕೇನು? ಅಯ್ಯೋ ಹುಚ್ಚೀ! ಒಂದು ದಿವಸ, ಒಂದೇ ದಿವಸ, ಜಾಜಿಯುಕುಸುಮವು ಅರಳಿ ಸುವಾಸನೆ ಯನ್ನು ಸೂಸಿ ಬಾಡಿ, ಗಿಡದಡಿಯಲ್ಲಿ ಬಿದ್ದು ಮಣ್ಣಾಗಿಹೋಗುವಂತೆ

ಸ್ತ್ರೀಯ ಕಥೆಯು ಒಂದು ದಿವಸದ ಕಥೆ. ಕ್ಷಣ ಭಂಗುರ. ಸುಖವೆಂದರೆ ಒಂದೇ ದಿನ. ಒಂದು ಕ್ಷಣ. ಆಮರಣಪರ್ಯಂತ ದುರಂತ ದುಃಖ ಮಯವಾದ ಜೀವನ. ಕಷ್ಟಜೀವನ. ರಾಜಭವನದಲ್ಲಿರುವ ದಿವ್ಯ ಸುಂದರಿಯ ಕಥೆಯೂ, ಬೀದಿಯಲ್ಲಿ ಭಿಕ್ಷವೆತ್ತಿ ತಿಂದು ಈ ಕ್ಷೇತ್ರದಲ್ಲಿ ಅಲೆಯುವ ಭಿಕಾರಿಣಿಯ ಕಥೆಯೂ ಒಂದೇ. ಹೋಗು ನಡೆ, ನನ್ನನ್ನು ಬಿಟ್ಟು, ಹೋಗು." ಎಂದಳು.

"ಬೇಡ ತಂಗಿ, ಇಂದು ನಾನು ನಿನ್ನನ್ನು ಬಿಟ್ಟುಹೋಗುವುದಿಲ್ಲ. ನಿನ್ನ ಉದ್ವೇಗದಲ್ಲಿ ನೀನು ಈ ವನಾಂತರಾಳದಲ್ಲಿ ಆತ್ಮಹತ್ಯಮಾಡಿ ಕೊಳ್ಳುವೆ. ನಡೆ! ನನ್ನ ಮನೆಗೆ ನಡೆ! ನನ್ನ ಗುಡಿಸಿಲಿನಲ್ಲಿ ಈ ರಾತ್ರಿ ಇರು. ನನ್ನ ಮನೆಯಲ್ಲಿ ಮತ್ತಾರೂ ಇಲ್ಲ. ನಮ್ಮ ಅಜ್ಜಿಯೊಬ್ಬಳೆ ಇದ್ದಾಳೆ. ಅವಳಿಗೆ ನಿನ್ನನ್ನು ನೋಡಿದರೆ ಎಷ್ಟೋ ಸಂತೋಷ ವಾಗುತ್ತದೆ. ನಡೆಹೋಗೋಣ!" ಎಂದು ಒಲಾತ್ಕರಿಸಿ ಭೈರವಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಭೈರವಿಯು ನಿರಾಸಕ್ತ ಮನಸ್ಕಳಾಗಿ ಬೃಂದೆಯ ಮನೆಗೆ ಹೋದಳು. ಅಲ್ಲಿ ಆರಾತ್ರಿ ಬಹಳ ಉಪಚಾರಮಾಡಿ ಬೃಂದೆಯು ಭೈರವಿಗೆ ಭೋಜನ ಮಾಡಿಸಿದಳು. ತನ್ನ ಕೋಣೆಯಲ್ಲಿಯೇ ಅವಳಿಗೆ ಹಾಸಿಗೆ ಹಾಸಿಕೊಟ್ಟು ತಾನೂ ಹಾಸಿಗೆಯನ್ನು ಹಾಸಿಕೊಂಡು ಅವಳ ಪಕ್ಕದಲ್ಲಿ ಮಲಗಿದಳು. ಅವರಿಬ್ಬರೂ ಎಷ್ಟೋಹೊತ್ತು ಮಾತನಾಡುತ್ತಿದ್ದರು. ಒಬ್ಬರಿಗೊಬ್ಬರು ಯಥೋಚಿತವಾಗಿ ತಮ್ಮ ಬಾಲ್ಯದ ಕಥೆಗಳನ್ನು ಹೇಳಿಕೊಂಡರು. ಬಹಳ ಹೊತ್ತಿನ ಮೇಲೆ ಬೃಂದೆಯು ನಿದ್ರಾಭಿಭೂತಳಾದಳು. ಭೈರವಿಯೂ ನಿದ್ರಾವಶಳಾದಳು. ಆ ನಿದ್ರೆಯಲ್ಲಿ ಅವಳೊಂದು ಸ್ವಪ್ನವನ್ನು ಕಂಡಳು. ಅದೊಂದು ವಿಚಿತ್ರವಾದ ಸ್ವಪ್ನ.

"ಗಿರಿಜೆಯು ವೇಷ ಭೂಷಣಗಳಿಂದಲಂಕೃತಳಾಗಿ ವಿರೂಪಾಕ್ಷನ ಮನೆಯಲ್ಲಿ ಹೋಗಿ ವಿರೂಪಾಕ್ಷನ ಜೊತೆಯಲ್ಲಿ ಶೃಂಗಾರ ವೈಭವದಲ್ಲಿ ಮೆರೆಯುತ್ತಿರುವಂತೆ ಸ್ವಪ್ನವನ್ನು ಕಂಡಳು. ವಿರೂಪಾಕ್ಷನು ತನ್ನನ್ನು ವಿವಾಹಮಾಡಿಕೊಳ್ಳುವಂತೆ ಆ ಸ್ವಪ್ನದಲ್ಲಿ ಯಾಚಿಸಿದಳು.

ವಿರೂಪಾಕ್ಷನು ಗಿರಿಜೆಯನ್ನು ದೂರ ತಳ್ಳಿದಂತೆ, ಗಿರಿಜೆಯು ನೆಲದ ಮೇಲೆ ಬಿದ್ದು ಹೊರಳುತ್ತಾ ವಿರೂಪಾಕ್ಷನನ್ನು ಪ್ರಣಯಭಿಕ್ಷೆ ಬೇಡುತ್ತಿರುವಂತೆ, ವಿರೂಪಾಕ್ಷನು ನಿರ್ದಯನಾಗಿ ಅವಳನ್ನು ತಿರಸ್ಕರಿಸುವಂತೆ, ಒಂದಾನೊಂದು ದಿನ ಭಿಕಾರಿಯಂತೆ ಭೈರವಿಯ ದಯಾಭಿಕ್ಷೆಯನ್ನು ಬೇಡುತ್ತಾ ಹುಚ್ಚನಂತೆ ಮಲ್ಲಿಕಾರ್ಜುನ ಕ್ಷೇತ್ರದಲ್ಲಿ ಅಲೆಯುತ್ತಿದ್ದ ವಿರೂಪಾಕ್ಷನು ಇಂದು ಜಗದೀಶ್ವರನಂತೆ ಸಿಂಹಾಸನಾರೂಢನಾಗಿ ತನ್ನನ್ನು ಕಾಲಿನಿಂದ ಒದ್ದು ಪಾತಾಳಕ್ಕೆ ತಳ್ಳಿ ಚೆಲುವಮ್ಮಣ್ಣಿಯ ಪ್ರಣಯ ಭಿಕ್ಷೆಯನ್ನು ಬೇಡುತ್ತಿರುವಂತೆ, ಚೆಲುವಮ್ಮಣ್ಣಿಯು ಕೈಯಲ್ಲಿ ವಿಷಪಾತ್ರವನ್ನು ತೆಗೆದುಕೊಂಡು ಬಂದು ಕುಣಿಯುತ್ತಾ ಕುಣಿಯುತ್ತಾ ಸಿಂಹಾಸನದ ಮೆಟ್ಟಲುಗಳನ್ನು ಹತ್ತಿ ವಿರೂಪಾಕ್ಷನ ಬಾಯಿಯಲ್ಲಿ ಆ ವಿಷಪಾತ್ರೆಯನ್ನಿಟ್ಟು ಕುಡಿಯುವಂತೆ ಪ್ರೇರೇಪಿಸುತ್ತಿರುವಂತೆ, ವಿರೂಪಾಕ್ಷನು ಅದನ್ನು ಅಮೃತವೆಂದು ಭಾವಿಸಿ ಗಟಗಟನೆ ಕುಡಿದು ಕಣ್ಣುಮುಚ್ಚಿ ಚೀತ್ಕಾರಮಾಡುತ್ತಾ ಸಿಂಹಾಸನದಿಂದ ಕೆಳಗುರುಳಿ, ಘೋರನರಕದಲ್ಲಿ ಬಿದ್ದು ಹಾಹಾಕಾರಮಾಡುತ್ತಿರುವಂತೆ, ಚೆಲುವಮ್ಮಣ್ಣಿಯು ಹುಚ್ಚಳಂತೆ ಕೇಕೆ ಹಾಕುತ್ತಾ ಆ ಸಿಂಹಾಸನವನ್ನು ಕಾಲಿನಿಂದ ಒದ್ದು ಭೈರವ ನರ್ತನವನ್ನು ಮಾಡುತ್ತಿರುವಂತೆ ಗಿರಿಜೆಯು ಆ ರೂಪವನ್ನು ನೋಡಿ ಭಯವಿಹ್ವಲಳಾಗಿ ಚಿಟ್ಟನೆ ಚೀರಿದಂತೆ" ಸ್ವಪ್ನವನ್ನು ಕಂಡಳು.

ವಾಸ್ತವವಾಗಿಯೂ ಭೈರವಿಯು ಹಾಸಿಗೆಯಮೇಲೆ ಮಲಗಿ ಚಿಟ್ಟನೆ ಚೀರಿದಳು. ಬೃಂದೆಗೂ, ಅವಳ ಅಜ್ಜಿಗೂ ಹೊಡೆದೆಬ್ಬಿಸಿದಂತೆ ಎಚ್ಚರವಾಯಿತು. ಬೃಂದೆಯು ದೀಪವನ್ನು ದೊಡ್ಡದುಮಾಡಿ ಆ ದೀಪವನ್ನು ಭೈರವಿಯ ಮುಖದ ಸಮೀಪದಲ್ಲಿ ಹಿಡಿದು ನೋಡಿದಳು. ಭೈರವಿಯು ಕಣ್ಣು ಬಿಟ್ಟಿದ್ದಳು. ಶರೀರವೆಲ್ಲವೂ ಕಂಪಾಯಮಾನವಾಗಿತ್ತು. ಬೃಂದೆಯು ಭೈರವಿಯ ಎದೆಯಮೇಲೆ ಕೈಯಿಟ್ಟು ನೋಡಿದಳು. ಎದೆಯು ಡವಡವನೆ ಹೊಡೆದುಕೊಳ್ಳುತ್ತಿತ್ತು. ಬೃಂದೆಯು "ಅಕ್ಕ, ಏನಾಯಿತು? ನಿನಗೆ ಈ ಅವಸ್ಥೆಯುಂಟಾಗಲು ಕಾರಣವೇನು?

ನೀನು ಭಯಂಕರವಾಗಿ ಚೀತ್ಕಾರಮಾಡಿದುದೇಕೆ ? ನಿನಗೇನಾಗಿದೆ ? ಈಗ ಎಚ್ಚರವಾಗಿರುವುದೆ ? " ಎಂದು ಕೇಳಿದಳು.

ಭೈರವಿಯು ಸಣ್ಣದನಿಯಿಂದ "ಎಚ್ಚರಗೊಂಡಿದ್ದೇನೆ. ಭಯ ಪಡಬೇಡ. ನಾನು ಚೀತ್ಕಾರಮಾಡಿದ್ದು ನಿಜ. ನಾನೊಂದು ಸ್ವಪ್ನವನ್ನು ಕಂಡೆ. ಆ ಸ್ವಪ್ನದ ಭಯಾನಕ ಘಟನೆಗಳಿಂದ ಚೀತ್ಕಾರಮಾಡಿದೆ, ಅಷ್ಟೆ !"

ಬೃಂದೆಯೂ, ಅವಳ ಅಜ್ಜಿಯೂ ಅವಳ ಸ್ವಪ್ನ ವೃತ್ತಾಂತ ವೇನೆಂದು ಕುತೂಹಲದಿಂದ ಕೇಳಿದರು. ಭೈರವಿಯು, "ನನ್ನನ್ನು ಕೇಳಬೇಡಿರಿ. ಅದು ನನ್ನ ಸ್ವಂತದ ಕಥೆ. ಸ್ವಪ್ನದಲ್ಲಿಯೂ ನನ್ನ ಸ್ವಂತ ಕಥೆಯನ್ನೆ ನಾನು ಕಂಡೆ. ನನ್ನ ಕಥೆಯು ಅಷ್ಟು ಭಯಾನಕವಾದುದು. ಅದನ್ನು ನಾನು ಯಾರಿಗೂ ಹೇಳುವಂತಿಲ್ಲ."

ಬೃಂದೆಯು ಕರುಣಾರಸವನ್ನು ಸೂಸುವ ಧ್ವನಿಯಿಂದ "ತಂಗಿ, ನಿನ್ನ ಕಥೆಯು ಅಷ್ಟು ಜಘನ್ಯವಾದುದೇ ?" ಎಂದು ಕೇಳಿದಳು.

ಭೈರವಿಯು ನಗುತ್ತಾ, "ಅಲ್ಲ. ನನ್ನ ಕಥೆಯಲ್ಲಿ ನನ್ನ ಜಘನ್ಯ ಕೃತ್ಯಗಳೇನೂ ಇಲ್ಲ. ಅದು ಲೋಕಸಹಜವಾದುದು. ಆ ಕಥೆಯು ಹೇಗೆ ಸಮಾಪ್ತವಾಗುವುದೆಂದು ಯಾವಾಗಲೂ ನಾನು ಕಾತುರಳಾಗಿ ಚಿಂತಿಸುತ್ತಿದ್ದೆ. ಇಂದು ನನ್ನ ಸ್ವಪ್ನದಲ್ಲಿ ಅದರ ಪರಿಣಾಮವನ್ನು ನೋಡಿದೆ," ಎಂದು ಹೇಳಿದಳು. ಅಷ್ಟರೊಳಗಾಗಿ ಅರುಣೋದಯದ ಕೋಳಿ ಕೂಗಿತು.

ಬೃಂದೆಯು ಭೈರವಿಯನ್ನು ತನ್ನ ಮನೆಯಲ್ಲಿಯೇ ಇರುವಂತೆ ಎಷ್ಟೋ ಬೇಡಿಕೊಂಡಳು. ಅವಳ ಉಪಾಯಗಳೊಂದೂ ಸಾಗಲಿಲ್ಲ. ಭೈರವಿಯು ಮಲ್ಲಿಕಾರ್ಜುನಕ್ಷೇತ್ರವನ್ನು ಬಿಟ್ಟು ಮತ್ತೆಲ್ಲಿಯೂ ಇರ ಲೊಲ್ಲೆನೆಂದು ಹಟಹಿಡಿದಳು. ಆದರೆ ಅವರಿಬ್ಬರಿಗಿದ್ದ ಗೆಳೆತನವು ಪ್ರಗಾಢರೂಪವನ್ನು ತಾಳಿತು. ಭೈರವಿಯು ಬೃಂದೆಯೊಡನೆ ತನ್ನ ಕಥೆಯನ್ನೆಲ್ಲಾ ಬಿಚ್ಚಿ ಬಿಚ್ಚಿ ಹೇಳಿದಳು. ಬೃಂದೆಯು ಆಶ್ಚರ್ಯಮಗ್ನ ಳಾಗಿ ಎಲ್ಲವನ್ನೂ ಕೇಳಿದಳು. ಬೃಂದೆಯು ಚತುರೆ. ಅವಳ ಬುದ್ಧಿಯು

ಭೈರವಿಯ ಬುದ್ಧಿಗಿಂತಲೂ ಕಡಮೆಯಾದುದಲ್ಲ. ಅವಳ ಕಾರ್ಯಕ್ಕೆ ಭೈರವಿಯು ಸಿಕ್ಕಿದ್ದು ಎಷ್ಟೋ ಸಾಧಕವಾಯಿತು. ನಗರದ ರಾಣಿಯ ಭಯಂಕರ ಕೃತ್ಯಗಳಿಗೆ ಭೈರವಿಯು ಪ್ರತ್ಯಕ್ಷ ಸಾಕ್ಷಿ. ಅವಳಿಂದ ಎಷ್ಟೋ ರಾಜಕಾರ್ಯಗಳು ಆಗಬೇಕಾಗಿವೆ. ಅವಳನ್ನು ಸಂರಕ್ಷಣೆ ಮಾಡುವುದು ಬೃಂದೆಗೆ ಬಲುದೊಡ್ಡ ಕಾರ್ಯವಾಗಿ ಪರಿಣಮಿಸಿತು. ನಗರದ ರಾಣಿಯಾಗಲೀ, ವಿರೂಪಾಕ್ಷನಾಗಲೀ ಬಹುದಿವಸ ಈ ಭೈರವಿಯನ್ನು ಜೀವಂತಳಾಗಿರಲು ಬಿಟ್ಟಿರಲಾರರೆಂದು ಬೃಂದೆಯ ಮನಸ್ಸಿಗೆ ಧೃಢ ವಾಗಿ ತೋರಿತು.

---

## ೧೩

## ಭವಾನೀರಾಣಿ

ಬೃಂದೆಯು ಸಮಯವರಿತು ಏಕಾಂತದಲ್ಲಿ ಈ ಎಲ್ಲ ವೃತ್ತಾಂತ ಗಳನ್ನೂ ಮಂತ್ರಿ ರಾಮಕೃಷ್ಣನಿಗೆ ಅರುಹಿದಳು. ಮಹಾ ಮಂತ್ರಿಯು ಈ ಚರಿತ್ರೆಯನ್ನು ನಂಬಿದವನಂತೆಯೂ ತೋರ್ಪಡಿಸಿಕೊಳ್ಳಲಿಲ್ಲ. ಉಪೇಕ್ಷಿಸಿದವನಂತೆಯೂ ಬಿಟ್ಟುಬಿಡಲಿಲ್ಲ. ಅವನು ಬೃಂದೆಯನ್ನು ಕುರಿತು :—

“ಬೃಂದೆ, ಏನಾದರೇನು? ಭೈರವಿಯು ಒಬ್ಬ ವಿರಕ್ತಸನ್ಯಾಸಿನಿ. ಅವಳ ಕಥೆಯು ಹೇಗಿದ್ದರೇನು? ಅವಳನ್ನು ಸಂರಕ್ಷಿಸುವುದು ನಮ್ಮ ಕಾರ್ಯ. ನೀನು ಅವಳ ಮೇಲೆ ಪ್ರೀತಿಮಾಡುವೆ. ಬೃಂದೆ, ಅವಳನ್ನು ನಿನ್ನ ಮನೆಯಲ್ಲಿ ಇಟ್ಟುಕೊಳ್ಳುವುದು ಅಷ್ಟು ಉಚಿತವಲ್ಲ. ಎಂದಾದರೂ ನೀನು ಪ್ರತ್ಯಕ್ಷವಾಗಿ ರಾಣಿಯ ದೃಷ್ಟಿಗೆ ಬೀಳುವೆ. ನೀನು ಎಲ್ಲಿರುವೆಯೋ ಎಲ್ಲಿಗೆ ಹೋಗುವೆಯೋ ಏನು ಮಾಡುವೆಯೋ ಯಾರು ಬಲ್ಲರು? ಈ ಭೈರವಿಯನ್ನು ಜೊತೆಜೊತೆಯಲ್ಲಿ ಕಟ್ಟಿಕೊಂಡು ನೀನು ಎಲ್ಲಿ ಅಲೆಯುವೆ? ಏನಾದರೂ ಉಪಾಯಾಂತರದಿಂದ ಭೈರವಿ

ಯನ್ನು ಕರೆದುಕೊಂಡು ಹೋಗಿ ಭವಾನೀರಾಣಿಯವರ ಆಶ್ರಯದಲ್ಲಿ ಸೇರಿಸಿಬಿಡು. ಭವಾನೀರಾಣಿಯವರಲ್ಲಿ ಅವಳ ಚರಿತ್ರೆಯನ್ನೇನೂ ಹೇಳಬೇಡ. ಅವರಾಗಿ ಅರಿತುಕೊಂಡರೆ ನಮಗೆ ಬಾಧಕವೂ ಇಲ್ಲ. ಭೈರವಿಯು ಭವಾನೀರಾಣಿಯವರಲ್ಲಿದ್ದರೆ ಯಾರೂ ಅವಳ ಗೋಜಿಗೆ ಹೋಗುವುದಿಲ್ಲ" ಎಂದು ಹೇಳಿದನು. ಅವಳು ಮಂತ್ರಿಯ ಅಪ್ಪಣೆಯನ್ನು ಪಡೆದು ಹೊರಟಳು.

ಬೃಂದೆಯು ಭೈರವಿಯೊಡನೆ ಪ್ರಸ್ತಾಪತ್ವೇನ ಭವಾನೀರಾಣಿಯ ಮಾತನ್ನೆತ್ತಿದಳು. ಬೃಂದೆಯು "ಭೈರವಿ, ನೀನು ಭವಾನೀರಾಣಿಯವರ ದರ್ಶನಮಾಡಿರುವೆಯಾ ?" ಎಂದು ಕೇಳಿದಳು. ಭೈರವಿಯು "ಬೃಂದೆ, ನಾನು ಭವಾನೀರಾಣಿಯನ್ನರಿಯೆ. ಈ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಆ ರಾಣಿಯ ಹೆಸರು ಪ್ರತಿಯೊಂದು ಕಡೆಯಲ್ಲಿಯೂ ಕೇಳಿಬರುತ್ತದೆ. ನಗರದ ರಾಣಿಯೂ ಕೂಡ ಭವಾನೀರಾಣಿಯ ದಾನಧರ್ಮಗಳನ್ನು ನೋಡಿ, ಆ ರಾಣಿಯ ಹೆಸರು ಕೇಳಿ ಅಚ್ಚರಿಗೊಂಡಿದ್ದಾಳೆ. ನಾನು ಭವಾನೀರಾಣಿಯನ್ನು ಕಾಣೆ. ಎಂದೋ ಒಂದುದಿನ, ಮಲ್ಲಿಕಾರ್ಜುನ ಕ್ಷೇತ್ರದಲ್ಲಿ ವಿರೂಪಾಕ್ಷನೊಡನೆ ಅಲೆಯುತ್ತಿದ್ದಾಗ ದೂರದಿಂದ ತೇಜಸ್ವಿನಿಯಾದ ಸನ್ಯಾಸಿಯೊಬ್ಬಳನ್ನು ಕಂಡೆನು. ಅಂಥಾ ದಿವ್ಯತೇಜೋಮಯವಾದ ವದನಾರವಿಂದವನ್ನು ನಾನು ಎಲ್ಲಿಯೂ ಕಂಡಿರಲಿಲ್ಲ. ಆ ಮಹಾನುಭಾವಳು ಅದೃಶ್ಯಳಾಗಿ ಹೋದಮೇಲೆ ಅವಳಾರೆಂದು ವಿಚಾರಿಸಿದೆನು. ಅವಳೇ ಭವಾನೀರಾಣಿಯೆಂದು ಭಿಕ್ಷುಕರು ಹೇಳಿದರು. ಆ ದಿವ್ಯವಾದ ಮುಖಕಮಲವನ್ನು ನಾನು ಮರೆತಿಲ್ಲ. ಆದರೆ ಆ ಮಹಾರಾಣಿಯು ಎಲ್ಲಿರುವಳೋ ನಾನರಿಯೆ. ನೀನು ಅವಳನ್ನು ಬಲ್ಲೆಯೇನು ?" ಎಂದು ಕೇಳಿದಳು.

ಬೃಂದೆಯು ಆಶ್ಚರ್ಯದಿಂದ, "ಭೈರವಿ, ಈ ನಗರದಲ್ಲಿ ನೀನು ಯಾರಾದರೊಬ್ಬರನ್ನು ಅರಿಯೆನೆಂದು ಹೇಳಿದರೆ ನನಗೆ ಆಶ್ಚರ್ಯವಾಗುತ್ತದೆ."

"ಬೃಂದೆ, ಸೋದರಿ, ನನ್ನ ಮಾತನ್ನು ನಂಬು. ನಗರದ ರಾಣಿಗೆ ಯಾರ ಪರಿಚಯವಿಲ್ಲವೋ ಅವರ ಪರಿಚಯ ನನಗೂ ಇಲ್ಲ. ಈ

ನಗರದರಾಣಿಗೂ ಭವಾನೀರಾಣಿಗೂ ಏನೋ ಒಂದು ದುರವಗಾಹವಾದ ಬಾಂಧವ್ಯವಿದೆ. ಅವರು ಒಬ್ಬರನ್ನೊಬ್ಬರು ಎಂದೂ ಸಂಧಿಸಿಲ್ಲ. ನಗರದ ರಾಣಿಗೆ ಭವಾನೀರಾಣಿಯ ಸಂದರ್ಶನ ಕುತೂಹಲವಿತ್ತು. ಆದರೆ ಏನೋ ಬಲವಾದ ಪ್ರತಿಬಂಧಕವಿದ್ದಿತೆಂದು ತೋರುತ್ತದೆ. ಅವರಿಬ್ಬರ ದರ್ಶನವು ಸಂಘಟಿಸಲಿಲ್ಲ."

"ಭೈರವಿ, ನಿಮ್ಮ ರಾಣಿಯ ಕಥೆಯನ್ನು ಕಟ್ಟಿಕೊಂಡು ನನಗೇನು? ನಿನಗೆ ಕುತೂಹಲವಿದ್ದರೆ ನಾನು ಕರೆದುಕೊಂಡುಹೋಗಿ ಭವಾನೀ ರಾಣಿಯ ದರ್ಶನಮಾಡಿಸುವೆನು." ಭೈರವಿಯು ಸಂತೋಷದಿಂದ ಒಪ್ಪಿಕೊಂಡಳು.

ಬೃಂದೆಯೂ ಭೈರವಿಯೂ ಮಲ್ಲಿಕಾರ್ಜುನಕ್ಷೇತ್ರದಿಂದ ಹೊರಟೇ ಬಿಟ್ಟರು. ಭವಾನೀರಾಣಿಯ ಆವಾಸಸ್ಥಾನಕ್ಕೆ ಹರಿಹರವೆಂದು ಹೆಸರು. ಇವರು ಆ ಸ್ಥಳವನ್ನು ಸೇರುವ ಹೊತ್ತಿಗೆ ಸಂಧ್ಯಾಕಾಲವಾಗಿತ್ತು. ಸಂಧ್ಯಾಕಾಲ. ಆಕಾಶವು ನಿರ್ಮಲವಾಗಿತ್ತು. ಆದರೂ ಸೂರ್ಯದೇವನು ತನ್ನ ಪ್ರಶಾಂತ ಕಿರಣಗಳಿಂದ ತುಂಗೆಯನ್ನು ಪಾವನಮಾಡುತ್ತಿದ್ದನು. ಭವಾನೀರಾಣಿಯ ಭವನದ ಎದುರಿನಲ್ಲಿಯೇ ತುಂಗೆಯು ಹರಿಯು ತ್ತಿದ್ದಳು. ಪ್ರಶಸ್ತವಾದ ಕಲ್ಲಿನ ಪಾವಟಿಕೆಗಳು ಕಟ್ಟಲ್ಪಟ್ಟಿದ್ದವು ಭೈರವಿಯೂ, ಬೃಂದೆಯೂ ಆ ಪಾವಟಿಕೆಗಳನ್ನಿಳಿದು ತುಂಗೆಯ ನೀರನ್ನು ಬೊಗಸೆಯಲ್ಲಿ ತೆಗೆದು ನಾಲ್ಕಾರು ಬೊಗಸೆಯ ನೀರನ್ನು ಕುಡಿದು ಪಾವಟಿಕೆಗಳಮೇಲೆ ಕುಳಿತು ದಣಿವಾರಿಸಿಕೊಳ್ಳುತ್ತಿದ್ದರು. ಭವಾನೀರಾಣಿಯು ಆ ಸಂಧ್ಯಾಕಾಲದಲ್ಲಿ ಬಂದು ತುಂಗೆಯಲ್ಲಿ ಸ್ನಾನ ಮಾಡಿದಳು. ಭವಾನೀರಾಣಿಯು ಸ್ನಾನಮಾಡಿ ತುಂಗೆಯ ಗರ್ಭದಿಂದ ಮೇಲಕ್ಕೆದ್ದಾಗ ಅಮೃತಸರೋವರದಿಂದ ಸಾಕ್ಷಾತ್ ಲಕ್ಷ್ಮಿಯು ಉದ ಯಿಸಿದಂತೆ ತೇಜೋವಿರಾಜಮಾನಳಾಗಿ ಕಂಗೊಳಿಸಿದಳು. ಮೇಲ ಕ್ಕೆದ್ದು ಭಸ್ಮವನ್ನು ಧಾರಣಮಾಡಿ ವಲ್ಕಲಗಳನ್ನುಟ್ಟು ಮಂದಿರದ ಕಡೆ ಹೊರಟಳು. ಬೃಂದೆಯೂ ಭೈರವಿಯೂ ಭವಾನೀರಾಣಿಯ ಸಮೀಪಕ್ಕೆ ಬಂದು ಅಭಿವಾದನಮಾಡಿದರು. ಭವಾನೀರಾಣಿಯು ಬೃಂದೆಯನ್ನು

ಕುರಿತು "ಬೃಂದೆ, ಈ ತರುಣಿಯಾರು?" ಎಂದು ಪ್ರಶ್ನಿಸಿದಳು. ಬೃಂದೆಯು "ಮಹಾರಾಣಿಯವರೇ! ಇವಳೊಬ್ಬ ಅಭಾಗಿನಿ ಈ ಜೀವನದಲ್ಲಿ ಬೇಸರಗೊಂಡು ಮೃತ್ಯುವನ್ನು ಆಲಿಂಗಿಸುವುದರಲ್ಲಿದ್ದಳು. ನಾನು ಅವಳನ್ನು ರಕ್ಷಿಸಿ ತಮ್ಮೆಡೆಗೆ ಕರೆತಂದಿದ್ದೇನೆ." ಎಂದಳು

ಭವಾನೀರಾಣಿಯು ಮುಗುಳು ನಗೆಯಿಂದ ಭೈರವಿಯನ್ನು ಕುರಿತು, "ಮಗಳೇ, ನೀನು ಪತಿಗೃಹದಿಂದ ತ್ಯಾಗಮಾಡಲ್ಪಟ್ಟಿರುವೆಯೇನು? ಮಾತಾಪಿತೃಗಳಾಗಲೀ, ಸೋದರಿಯರಾಗಲೀ, ಯಾರೂ ನಿನ್ನನ್ನು ಆದರಿಸುವವರಿಲ್ಲವೇನು?"

ಭೈರವಿಯು ಕೈಮುಗಿದು, "ತಾಯೇ, ಮಾತಾಪಿತೃಗಳು ಬಂಧುಬಾಂಧವರು ಯಾರೂ ಇಲ್ಲ ನಾನು ಅವಿವಾಹಿತಳು."

ಭವಾನೀರಾಣಿಯು ತನ್ನಷ್ಟಕ್ಕೆ ತಾನೇ, "ಬಂಧುಬಾಂಧವರಿಲ್ಲ! ಅವಿವಾಹಿತಳು! ಜೀವನದಲ್ಲಿ ಬೇಸರ! ಜಗನ್ಮೋಹಕವಾದ ರೂಪರಾಶಿ! ಭೈರವಿಯ ವೇಷ! ಇದೆಲ್ಲಾ ನಿಜವೇ?"

"ಭೈರವಿಯು ರುಷ್ಟಳಾಗಿ, "ತಾಯೆ ನಿಜ. ತಾವು ಇದನ್ನು ನಿಜವೆಂದು ನಂಬದಿದ್ದರೆ ಈ ತುಂಗೆಯ ಗರ್ಭದಲ್ಲಿ ಸಮಾಧಿಯಾಗುತ್ತೇನೆ ಈ ಮಹಾತಾಯಿಯು ನನ್ನನ್ನು ನಂಬುತ್ತಾಳೆ."

ಭವಾನೀರಾಣಿಯು ನಕ್ಕು, "ದೇವರು ಅನುಗ್ರಹಿಸಿರುವ ಯೌವನವನ್ನು ಮೂರ್ಖಸ್ತ್ರೀಯಂತೆ ಜಲದಲ್ಲಿ ಪರಿತ್ಯಾಗಮಾಡುವಿಯೇಕೆ? ಆ ತುಂಗೆಯು ಮೂರ್ಖಸ್ತ್ರೀಯರಿಗೆಲ್ಲಾ ಮುಕ್ತಿಯನ್ನೀಯುವವಳಾಗಿದ್ದರೆ ಅವಳಲ್ಲಿ ಒಂದು ಜಲಬಿಂದುವೂ ಇರುತ್ತಿರಲಿಲ್ಲ ಸಾಯುವಿಯೇಕೆ? ಬಾ! ನನ್ನ ಜೊತೆಯಲ್ಲಿ ಬಾ! ಭಗವತ್ಸೇವೆ ಮಾಡು. ಮಹಾದೇವನು ಶಾಂತಿಯನ್ನು ಕರುಣಿಸುವನು" ಎಂದು ಮುಂದೆ ಮುಂದೆ ಹೋದಳು. ಬೃಂದೆಯೂ ಭೈರವಿಯೂ ಹಿಂದೆ ಹಿಂದೆ ಹೋದರು.

ಭವಾನೀರಾಣಿಯ ಅರಮನೆಯೊಳಗೆ ಶಿವಾಲಯದಲ್ಲಿ ಪೂಜಾವಿಧಾನಗಳು ಪೂರೈಸಿ ಮಂಗಳಾರತಿಯ ಸಮಯವಾಗಿತ್ತು. ದೇವ್ಯಾ

ಲಯದ ಚತುರ್ದಿಕ್ಕುಗಳಲ್ಲಿಯೂ ಘಂಟಾನಾದಗಳು ಕೇಳಲಾರಂಭ ವಾದವು. ಸಹಸ್ರಸಹಸ್ರ ದೀಪಗಳು ಪ್ರಜ್ವಲಿತವಾದವು. ಧೂಪ, ದೀಪ, ನೈವೇದ್ಯಗಳಾದ ಮೇಲೆ ಮಹಾಮಂಗಳಾರತಿಯಾಯಿತು. ಭವಾನೀರಾಣಿಯು ಭಕ್ತಿಭಾವದಿಂದ ಮಹಾದೇವನನ್ನು ವಂದಿಸಿ ಪ್ರಸಾದವನ್ನು ಪರಿಗ್ರಹಿಸಿ ತನ್ನ ಭವನದೊಳಕ್ಕೆ ತೆರಳಿದಳು. ಬೃಂದೆಯೂ ಭೈರವಿಯೂ ಅವಳೊಡನೆ ಹೋದರು. ಭವಾನಿಯು "ಭೈರವಿ, ನೀನು ಇಲ್ಲಿ ಇರುವುದಾದರೆ ಇರು. ನಿನ್ನ ಚಿತ್ತವು ಉದ್ವಿಗ್ನ ವಾಗಿರುವಂತಿದೆ. ಈ ವಾತಾವರಣದಲ್ಲಿ ಶಾಂತಿಯು ಲಭಿಸುವುದು" ಎಂದು ಆಶೀರ್ವದಿಸಿದಳು.

ಬೃಂದೆಯ ಕಾರ್ಯವಾಯಿತು. ಅವಳು ಮರುದಿನ ಪ್ರಾತಃಕಾಲ ಸ್ನಾನಾದಿಗಳನ್ನು ತೀರಿಸಿ, ಮಹಾದೇವನನ್ನು ಪೂಜಿಸಿ, ಭವಾನೀ ರಾಣಿಯ ದರ್ಶನವನ್ನು ಪಡೆದು ಅವಳಿಂದ ಅನುಮತಿಯನ್ನು ಹೊಂದಿ ಭೈರವಿಯನ್ನು ಬೀಳ್ಕೊಂಡು ಹೊರಟುಹೋದಳು. ಬೃಂದೆಯನ್ನು ಬೀಳ್ಕೊಡುವಾಗ ಭೈರವಿಯು ಅಳುತ್ತಿದ್ದಳು. ಅವಳಿಗೆ ಈ ಜಗತ್ತಿನಲ್ಲಿ ಇದ್ದ ಏಕಮಾತ್ರ ಸ್ನೇಹಿತಳೆಂದರೆ ಬೃಂದೆಯೇಆಗಿದ್ದಳು. ಭಗವಂತನು ಅದನ್ನು ಇಂದು ದೂರಮಾಡಿದನು. ಭೈರವಿಯು ಇಂದು ಭವಾನೀ ರಾಣಿಯಿಂದ ರಕ್ಷಿತಳಾದ ಸನ್ಯಾಸಿನಿ.

ಭೈರವಿಯು ಭವಾನೀರಾಣಿಯ ಸಾನ್ನಿಧ್ಯವನ್ನು ಸೇರಿದ ಕ್ಷಿಪ್ರ ಕಾಲದಲ್ಲಿಯೇ ಅವಳು ಭವಾನೀರಾಣಿಯ ಅಚ್ಚುಮೆಚ್ಚಿನ ಶಿಷ್ಯಳಾದಳು ಭೈರವಿಯ ಸಾಹಸವನ್ನು ಎಷ್ಟೋ ಸಂದರ್ಭಗಳಲ್ಲಿ ಭವಾನೀರಾಣಿಯ ಮನವನ್ನು ಮೆಚ್ಚಿಸಿತು. ಭೈರವಿಯ ವೈರಾಗ್ಯವು ನಿಜವಾದು ದೆಂಬುದನ್ನು ಅರಿತುಕೊಳ್ಳಲು ಭವಾನೀರಾಣಿಗೆ ಹೆಚ್ಚುಕಾಲಾವಕಾಶವು ಬೇಕಾಗಲಿಲ್ಲ. ಭೈರವಿಯು ಭವಾನೀರಾಣಿಯ ಆಶ್ರಯವನ್ನು ಸೇರಿದ ಸ್ವಲ್ಪದಿವಸಗಳಲ್ಲಿ ಒಂದು ಆಶ್ಚರ್ಯವಾದ ಘಟನೆಯು ನಡೆಯಿತು.

ತೀರ್ಥಹಳ್ಳಿಯಲ್ಲಿ ಎಳ್ಳಮಾವಾಸ್ಯೆಯ ಜಾತ್ರೆಗೆ ನಗರದಕಡೆ ಯಿಂದ ಅನೇಕ ಯಾತ್ರಾರ್ಥಿಗಳು ಯಾತ್ರೆಯನ್ನು ನೆರವೇರಿಸಿಕೊಂಡು

ಹಿಂತಿರುಗುತ್ತಿದ್ದರು. ಭವಾನೀರಾಣಿಯ ವಾಸಸ್ಥಳಕ್ಕೆ ಸಮೀಪದಲ್ಲಿಯೇ ಒಂದು ದೋಣಿಯ ಗಂಡಿಯಿತ್ತು. ಅನೇಕ ಯಾತ್ರಿಕರು ಪೂರ್ವಭಾಗಕ್ಕೆ ಹಿಂತಿರುಗಿ ಬರುವವರು ಆ ದೋಣಿಯ ಗಂಡಿಯಲ್ಲಿ ನದಿಯನ್ನು ದಾಟಬೇಕಾಗಿತ್ತು. ಅನೇಕರು ಅಲ್ಲಿ ದಾಟಿ ತಮ್ಮ ಮನೆಗಳಿಗೆ ಹೋಗುತ್ತಿದ್ದರು. ಭೈರವಿಯು ಯಾವಾಗಲೂ ದೋಣಿಯಲ್ಲಿ ಕುಳಿತು ಹುಟ್ಟುಹಾಕುತ್ತಾ ನದಿಯ ಗರ್ಭದಲ್ಲಿ ಸಂಚಾರಮಾಡುತ್ತಿದ್ದಳು. ಅವಳ ಅರ್ಧಕಾಲವೆಲ್ಲಾ ಈ ನದಿಯಾಟದಲ್ಲಿಯೇ ಕಳೆಯುತ್ತಿತ್ತು. ಅಂದು ತನ್ನ ದೋಣಿಯ ಆಟವನ್ನು ಮುಗಿಸಿ ದೋಣಿಯನ್ನು ದಡಕ್ಕೆ ಕಟ್ಟಿಹಾಕಿ ಒಂದು ಬೋರೆಗಲ್ಲಿನಮೇಲೆ ಭೈರವಿಯು ನಿಂತಿದ್ದಳು.

ದೂರದಲ್ಲಿ ಒಂದು ದೋಣಿಯು ಬರುತ್ತಿತ್ತು. ಅದರಲ್ಲಿ ಜನರು ತುಂಬಾ ಕಿಕ್ಕಿರಿದುಹೋಗಿದ್ದರು. ಅಂಬಿಗನು ನಿರ್ಭಯವಾಗಿ ದೋಣಿಯನ್ನು ದಾಟಿಸುತ್ತಿದ್ದನು. ಸಂಜೆಯಹೊತ್ತು ಅತಿಕ್ರಮಿಸುತ್ತಿದುದರಿಂದ ಯಾತ್ರಿಕರು ದೋಣಿದಾಟಲು ಬಹಳ ಆತುರವುಳ್ಳವರಾಗಿದ್ದರು. ದೋಣಿಯು ಪ್ರವಾಹದಲ್ಲಿ ಮೇಲಿನಿಂದ ವೇಗವಾಗಿ ಕೆಳಗೆ ಬರುತ್ತಿದ್ದಿತು. ಅಂಬಿಗನು ಹುಟ್ಟುಹಾಕುತ್ತಾ ಆ ದೋಣಿಯನ್ನು ಪ್ರವಾಹದ ಸುಳಿವಿನಿಂದ ತಪ್ಪಿಸಿ ಸಮಸ್ಥಳಕ್ಕೆ ಒಯ್ಯಲು ಅಸಮಸಾಹಸಮಾಡಿದನು. ಸ್ವಲ್ಪದರಲ್ಲಿ ಅವನ ಕೈ ಮಿಂಚಿಹೋಗಿ ದೋಣಿಯು ಬಂಡೆಗೆ ಹೊಡೆಯಿತು. ಆ ರಭಸಕ್ಕೆ ದೋಣಿಯು ತಲೆಕೆಳಗಾಗಿಹೋಯಿತು. ಜನರೆಲ್ಲರೂ ಹಾಹಾಕಾರಮಾಡುತ್ತಾ ನೀರಿನಲ್ಲಿ ಮುಳುಗಿದರು. ಒಬ್ಬಿಬ್ಬರು ಆ ಪ್ರವಾಹದಲ್ಲಿ ತಲೆಯೆತ್ತಿ ಈಜುವಂತೆ ಕಂಡಿತು. ಅಂಬಿಗನು ನೀರಿನಲ್ಲಿ ಹಾರಿ ಪ್ರಯಾಣಿಕರ ಪ್ರಾಣವನ್ನು ಉಳುಹಲು ಯತ್ನಿಸಿದನು. ಒಬ್ಬಿಬ್ಬರನ್ನು ಹಿಡಿತಂದು ದಡಕ್ಕೆ ಹಾಕಿದನು. ಇದಿಷ್ಟು ದೃಶ್ಯವನ್ನು ನೋಡುತ್ತಾ ಆ ಬಂಡೆಯಮೇಲೆ ನಿಂತಿದ್ದ ಭೈರವಿಯು ತನ್ನ ಸೆರಗನ್ನು ಸೊಂಟಕ್ಕೆ ಬಿಗಿದು ಕಟ್ಟಿ ಆ ಜಲದಲ್ಲಿ ಹಾರಿದಳು. ದೂರದಿಂದ ಈ ಘಟನೆಯನ್ನು ಭವಾನೀರಾಣಿಯು ನೋಡುತ್ತಿದ್ದಳು. ಅವಳ ಕಣ್ಣಿಗೆ ಭೈರವಿಯು ಬಂಡೆಯ ಮೇಲಿನಿಂದ ಹಾರಿದ್ದು ಕಂಡಿತು. ಭವಾನೀ

ರಾಣಿಯು ನದಿಯ ಸಮೀಪಕ್ಕೆ ಬಂದು ಈ ಅನಾಹುತವನ್ನು ಅರ್ಥ ಮಾಡಿಕೊಂಡಳು. ತಾನು ಆ ಬಂಡೆಯ ಮೇಲಕ್ಕೆ ಹತ್ತಿ ನೀರಿನಲ್ಲಿ ನೋಡಿದಳು. ಎಲ್ಲಿಯೂ ಭೈರವಿಯು ಕಾಣಲಿಲ್ಲ. ಆದರೆ ಭೈರವಿಯು ಈಜುವುದನ್ನು ಬಲ್ಲಳೆಂದು ಭವಾನೀರಾಣಿಗೆ ಗೊತ್ತಿತ್ತು. ಭೈರವಿಯು ಒಂದು ಪ್ರಾಣವನ್ನಾದರೂ ಉಳಿಸುತ್ತಾಳೆಂದು ಭವಾನೀರಾಣಿಯು ಭಾವಿಸಿದಳು. ಅದಕ್ಕೆ ಸರಿಯಾಗಿ ಭೈರವಿಯು ಒಂದು ವ್ಯಕ್ತಿಯನ್ನು ಕೈಯಲ್ಲಿ ತಬ್ಬಿಕೊಂಡು ಈಜಿಕೊಂಡು ಮೇಲಕ್ಕೆ ಬಂದು ಎರಡು ಕೈಗಳಿಂದಲೂ ಎತ್ತಿತಂದು ದಡದಮೇಲೆ ಹಾಕಿದಳು. ಅಷ್ಟುಹೊತ್ತಿಗೆ ಅಸ್ತವ್ಯಸ್ತವಾಗಿ ಆ ವ್ಯಕ್ತಿಯು ಮರಣೋನ್ಮುಖಳಾಗಿದ್ದಳು. ಭೈರವಿಯು ಗಟ್ಟಿಯಾಗಿ ಕೂಗಿ "ದೇವಿಯವರೇ, ಈ ಶರೀರದಲ್ಲಿ ಕುಟುಕುಜೀವವಿದೆ, ನೀವು ಕಾಪಾಡಿರಿ, ನಾನು ಮತ್ತೊಂದು ಪ್ರಾಣವನ್ನು ಉಳಿಸಲಾಗುವುದೇ ನೋಡುತ್ತೇನೆ" ಎಂದು ಹೇಳಿ ಪುನಃ ನೀರಿನಲ್ಲಿ ಹಾರಿ ಜಲಗರ್ಭದಲ್ಲಿ ಅದೃಶ್ಯಳಾದಳು. ಭವಾನೀರಾಣಿಯು ಸಮೀಪಕ್ಕೆ ಬಂದಳು. ಭೈರವಿಯು ಪುನಃ ಎರಡು ಶರೀರಗಳನ್ನು ಎತ್ತಿಕೊಂಡು ದಡಕ್ಕೆ ಬಂದಳು. ಆವೆರಡೂ ಗತಪ್ರಾಣಗಳಾಗಿದ್ದವು.

ಭೈರವಿಯು ಮೊದಲು ತಂದ ಸ್ತ್ರೀವ್ಯಕ್ತಿಯಲ್ಲಿ-ಕುಟುಕುಪ್ರಾಣವಿದ್ದಿತು. ಭವಾನೀರಾಣಿಯು ಚಿಕಿತ್ಸೆಮಾಡುತ್ತಿದ್ದಳು. ಭೈರವಿಯು ಮೇಲೆ ಬಂದಳು. ಅಂಬಿಗನೂ ಮೇಲೆ ಬಂದನು. ಅಷ್ಟುಜನ ಯಾತ್ರಿಕರಲ್ಲಿ ಉಳಿದವರು ನಾಲ್ಕುಮಂದಿ ಮಾತ್ರ. ಮೂರುಮಂದಿ ತಾವಾಗಿ ಈಜಿಕೊಂಡು ಬಂದವರು. ಭೈರವಿಯು ಮೇಲೆ ತಂದು ಹಾಕಿದ ಸ್ತ್ರೀವ್ಯಕ್ತಿಯೊಂದು. ಉಳಿದ ನಾಲ್ಕಾರು ಗತಪ್ರಾಣರಾದ ಯಾತ್ರಿಕರು. ಅಂಬಿಗನು, ಭೈರವಿಯು, ಭವಾನೀರಾಣಿಯು ಬಹುಹೊತ್ತು ಆ ಶರೀರಗಳಲ್ಲಿ ಪ್ರಾಣಸಂಚಾಲನವಾಗುವುದೋ ಎಂದು ಸರ್ವಪ್ರಯತ್ನ ಮಾಡಿ ನೋಡಿದರು. ಆ ಪ್ರಾಣಗಳು ಎಂದೋ ಹಾರಿ ಹೋಗಿದ್ದುವು. ಅಳಿದುಳಿದ ಯಾತ್ರಿಕರು ಅಜ್ಞಾನಾವಸ್ಥೆಯಲ್ಲಿದ್ದ ಸ್ತ್ರೀವ್ಯಕ್ತಿಯ ಗುರುತುಹಿಡಿದರು. ಅವರು ಹೇಳಿದ ಕಥೆಯು ದುಃಖ

ಕರವಾಗಿದ್ದಿತು. ಆ ಯುವತಿಯ ತಂದೆಯೂ ಒಬ್ಬ ಮುದುಕಿಯೂ ತಮ್ಮ ಜೊತೆಯಲ್ಲಿ ಜಾತ್ರೆಗೆ ಬಂದಿದ್ದರೆಂದೂ ಈ ಕುಟುಂಬದಲ್ಲಿದ್ದವರೇ ಮೂವರೆಂದೂ, ಉಳಿದವರಿಬ್ಬರು ನದೀಗರ್ಭದಲ್ಲಿ ಮುಳುಗಿಹೋದ ರೆಂದೂ ತಿಳಿಸಿದರು. ಭೈರವಿಯು ಏನೋ ನೆನೆಗೊಂಡವಳಂತೆ ಯಾತ್ರಿಕರನ್ನು ಕುರಿತು, "ಆ ಯಜಮಾನನ ಹೆಸರೇನು?" ಎಂದು ಕೇಳಿದಳು. ಅವರು "ಮಲ್ಲಪ್ಪ" ಎಂದು ಹೇಳಿದರು. ಭೈರವಿಯು ವ್ಯಗ್ರಧ್ವನಿಯಿಂದ "ಈ ಯುವತಿಯ ಹೆಸರು ಮಲ್ಲಿಗೆಯೇನು?" ಎಂದು ಕೇಳಿದಳು. ಯಾತ್ರಿಕರು ಆಶ್ಚರ್ಯದಿಂದ "ಅಹುದು" ಎಂದರು. ಭೈರವಿಯು ನಿರಾಶೆಯ ಧ್ವನಿಯಿಂದ "ಗಂಗಹಳ್ಳಿ" ಎಂದಳು. ಹೌದೆಂದು ಯಾತ್ರಿಕರು ಉತ್ತರವಿತ್ತರು. ಭೈರವಿಯು ಅಜ್ಞಾನಾವಸ್ಥೆಯಲ್ಲಿದ್ದ ಆ ಯುವತಿಯನ್ನು ಎತ್ತಿಕೊಂಡು ಭವಾನೀರಾಣಿಯ ಗೃಹಾಭಿಮುಖವಾಗಿ ಹೊರಟಳು. ಭವಾನೀರಾಣಿಯು ಹಿಂದೆಹಿಂದೆ ಹೋಗುತ್ತಾ, ಭೈರವಿಯನ್ನು ಕುರಿತು, "ಭೈರವಿ, ಇವಳನ್ನು ನೀನು ಬಲ್ಲೆಯಾ? ಇವರು ನಿನ್ನ ಅನುಬಂಧಿಗಳೇ?'' ಎಂದು ಪ್ರಶ್ನೆಮಾಡಿದಳು. ಭೈರವಿಯು, ''ಬಲ್ಲೆ ತಾಯೆ, ಒಂದುಬಾರಿ ನೋಡಿದ್ದೇನೆ'' ಎಂದು ಹೇಳಿ ಮತ್ತೇನನ್ನೂ ಹೇಳದೇ ಮುಂದೆಮುಂದೆ ಹೊರಟು ಹೋದಳು. ಯಾತ್ರಿಕರು ದಡದಲ್ಲಿದ್ದ ಒಂದೆರಡು ಶವಗಳನ್ನು ಮಣ್ಣು ಮಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಮಲ್ಲಿಗೆಗೆ ಜ್ಞಾನಬರುವುದಕ್ಕೆ ಮೂರು ದಿನಗಳಾದವು. ಭೈರವಿಯು ಎಡೆಬಿಡದೆ ಅವಳನ್ನು ನೋಡಿಕೊಳ್ಳುತ್ತಾ ಉಪಚರಿಸುತ್ತಿದ್ದಳು. ನಾಲ್ಕನೆಯದಿನ ಮಲ್ಲಿಗೆಯು ಕಣ್ಣುಬಿಟ್ಟು ನೋಡಿದಳು. ಯಾವುದೋ ಹೊಸಸ್ಥಳದಲ್ಲಿ ಇದ್ದೇನೆಂದು ಅವಳಿಗೆ ಬೋಧೆಯಾಯಿತು. ಸ್ವಲ್ಪ ಹೊತ್ತಿನಮೇಲೆ ''ನಾನೆಲ್ಲಿದ್ದೇನೆ'' ಎಂದು ಸಣ್ಣದನಿಯಿಂದ ಪ್ರಶ್ನೆಮಾಡಿದಳು. ''ನೀನು ಸುರಕ್ಷಿತವಾದ ಪ್ರದೇಶದಲ್ಲಿದ್ದೀಯೆ'' ಎಂದು ಭೈರವಿಯು ಸಂತೈಸಿದಳು. ಮಲ್ಲಿಗೆಯು ಭೈರವಿಯನ್ನು ಗುರುತಿಸಲಾರದೇ ಹೋದಳು. ಆದರೂ ಭೈರವಿಯ ಕರಸ್ಪರ್ಶದಿಂದ ಏನೋ ಸಮಾಧಾನವಾದವಳಂತೆ ಮಲ್ಲಿಗೆಯ ಮುಖಭಾವದಲ್ಲಿ

ತೋರಿತು. ಮೂರನೆಯ ದಿವಸವೇ ಮಲ್ಲಿಗೆಯು ಜ್ವರಪೀಡಿತಳಾಗಿ ದ್ದಳು. ಅವಳಿಗೆ ಜ್ವರ ಬಿಟ್ಟು ಜ್ಞಾನವುಬಂದು ಬದುಕಿಕೊಂಡಳು ಎಂದು ಹೇಳುವ ಹೊತ್ತಿಗೆ ಒಂದು ತಿಂಗಳು ಕಳೆದುಹೋಗಿತ್ತು. ಮಲ್ಲಿಗೆಯು ಈಗ ಸಂಪೂರ್ಣ ಆರೋಗ್ಯವನ್ನು ಹೊಂದಿದ್ದಾಳೆ. ಭವಾನೀರಾಣಿಯ ದರ್ಶನದಿಂದ ಸಂತುಷ್ಟಳಾಗಿದ್ದಾಳೆ. ಭೈರವಿಯ ಸಹವಾಸದಿಂದ ಧೈರ್ಯದಿಂದಿದ್ದಾಳೆ. ತನ್ನ ತಂದೆಯೂ ಅತ್ತೆಯೂ ನೀರಿನಲ್ಲಿ ಮುಳುಗಿಹೋದರೆಂದು ಅವಳಿಗೆ ತಿಳಿಯಿತು. ಎಷ್ಟೋ ಅತ್ತಳು. ಅತ್ತು ಅತ್ತು ಒಂದು ಸಮಾಧಾನಸ್ಥಿತಿಗೆ ಬಂದಳು. ಇವಳಿಗೆ ದೇಹಾರೋಗ್ಯವು ಬಂದು, ಶರೀರದಲ್ಲಿ ಚೈತನ್ಯವು ಬರುತ್ತಲೇ ಭವಾನೀರಾಣಿಯು ಆ ಯುವತಿಯನ್ನು ಸಮೀಪಕ್ಕೆ ಕರೆದು "ಮಗಳೇ, ನೀನು ಬದುಕಿಕೊಂಡೆ. ನಿನಗೆ ಮನೆಮಾರುಗಳೆಲ್ಲಾ ಇವೆಯೆಂದು ಭೈರವಿಯು ಹೇಳುತ್ತಾಳೆ. ನೀನು ನಿನ್ನ ಮನೆಗೆ ಹೋಗಿ ಸೇರಿ ಕೊಳ್ಳುವುದಾದರೆ ಸೇರಿಕೋ" ಎಂದು ಹೇಳಿದಳು. ಮಲ್ಲಿಗೆಯು ಕಂಬನಿ ಸುರಿಸುತ್ತಾ "ತಾಯೆ, ನಾನು ಏಕಾಕಿನಿ ನನಗೆ ಸರ್ವದಾ ಭಯವಾಗುತ್ತದೆ. ಆ ಮನೆಯನ್ನು ನೆನೆದುಕೊಂಡರೆ ಹೃದಯವು ನಡುಗುತ್ತದೆ. ನನ್ನ ತಂದೆಯೊಬ್ಬನೇ ನನಗೆ ಸರ್ವ ಆದರಸ್ಥಾನನಾಗಿ ದ್ದನು. ಅವನು ಕಾಲವಶನಾದಮೇಲೆ ಆ ಮನೆಯಲ್ಲಿ ನಾನು ಹೋಗಿ ಹೇಗಿರಲಿ?" ಎಂದು ನಮಸ್ಕಾರ ಮಾಡಿದಳು. ಭೈರವಿಯು "ತಾಯೆ, ಏಕಾಕಿನಿಯಾಗಿ ಇವಳನ್ನು ತಾವುತಾನೇ ಹೇಗೆ ಕಳುಹಿಸುವಿರಿ? ಈ ಜಗತ್ತಿನಲ್ಲಿ ಇಷ್ಟೊಂದು ರೂಪಲಾವಣ್ಯವತಿಯಾದ ಬಾಲಿಕೆಯನ್ನು ಏಕಾಕಿನಿಯಾಗಿ ಬಿಡುವುದು ಸರಿಯೇ? ಇವಳು ನಮ್ಮಲ್ಲಿಯೇ ಇರಲಿ, ತಮ್ಮ ಪರಿಚಾರಿಕೆಯಾಗಿ ಸೇವೆ ಮಾಡುತ್ತಾಳೆ" ಎಂದು ಹೇಳಿದಳು. ಭವಾನೀರಾಣಿಯು ಮಲ್ಲಿಗೆಯನ್ನು ತಲೆಸವರಿ ಸಂತೈಸಿ "ಮಗಳೇ, ನನ್ನ ಸೇವೆಗೆ ಯಾರು ಬೇಕು? ನೀನು ಭಗವತಿಯ ಸೇವೆಮಾಡುತ್ತಾ ಇಲ್ಲಿರು" ಎಂದು ಆಶ್ರಯವಿತ್ತಳು. ಅಂದಿನಿಂದ ಭೈರವಿಯೂ, ಮಲ್ಲಿಗೆಯೂ ಒಂದು ಗಿಡದಲ್ಲಿ ಬಿಟ್ಟ ಎರಡು ಪುಷ್ಪಗಳಂತೆ ಸಂತೋಷ ದಿಂದ ಭವಾನೀರಾಣಿಯ ಆಶ್ರಯವನ್ನು ಹೊಂದಿದ್ದರು.

೧೪

## ಯುವರಾಜನ ಅಜ್ಞಾತವಾಸ

ಯುವರಾಜ ಚೆನ್ನಬಸಪ್ಪನಾಯಕನು ಇಂದು ಕಿಶೋರ ಬಾಲಕನಲ್ಲ. ಪ್ರೌಢವಯಸ್ಸಿನ ಯುವಾಪುರುಷ. ಬಸಪ್ಪನಾಯಕರು ಕಾಲವಾದಂದಿನಿಂದ ನಗರದ ರಾಜ್ಯದಲ್ಲಿ ಎಷ್ಟೋ ಘಟನಾವಳಿಗಳು ನಡೆದು ಹೋಗಿವೆ. ನಗರದ ರಾಣಿಯ ಪ್ರಭಾವವು ದಿನದಿನಕ್ಕೆ ಬೆಳೆಯುತ್ತಿದೆ. ಯುವರಾಜನು ಇಂದು ಲೋಕವನ್ನರಿಯದ ಪೋರನಲ್ಲ. ಎಲ್ಲ ರಾಜಕೀಯ ವಿದ್ಯಾಮಾನಗಳೂ ಅವನಿಗೆ ಪ್ರತ್ಯಕ್ಷವಾಗಿ ಗೋಚರವಾಗಿವೆ. ನಗರದ ರಾಣಿಯ ವಿಲಾಸ ಚರಿತ್ರೆಗಳು ಅವನ ಕಿವಿಯನ್ನು ಮುಟ್ಟಿವೆ. ರಾಣಿ ಚೆಲುವಮ್ಮಣ್ಣಿಯ ಪ್ರಣಯಪಾತ್ರರಾದವರು ರಾಜ್ಯದಲ್ಲಿ ಕಂಟಕಪ್ರಾಯರಾಗಿದ್ದಾರೆಂದು ಅವನಿಗೆ ಎಷ್ಟೋ ಸಮಾಚಾರಗಳಿಂದ ತಿಳಿಯ ಬಂದಿದೆ. ರಾಣಿಯ ದುಷ್ಟಾಚರಣೆಯೇ ಇಷ್ಟಕ್ಕೆಲ್ಲಾ ಕಾರಣವೆಂದು ಅವನು ಅರಿತಿದ್ದಾನೆ. ಮಂತ್ರಿ ರಾಮಕೃಷ್ಣನು ಅಸಮಾಧಾನದಿಂದ ಕುದಿಯುತ್ತಿದ್ದಾನೆಂದು ಯುವರಾಜನಿಗೆ ಗೊತ್ತಿದೆ. ಮಂತ್ರಿಯೊಡನೆ ತಾನು ಪ್ರತ್ಯಕ್ಷವಾಗಿ ಚಿಕ್ಕತಾಯಿಯ ದುರಾಚರಣೆಯನ್ನು ಪ್ರಸ್ತಾಪ ಮಾಡಲು ಸಂಕೋಚದಿಂದ ಹಿಂತೆಗೆಯುತ್ತಾನೆ. ಏಕೆ ? ಇಷ್ಟು ದುಃಖ ಪಡಲೇಕೆ ? ರಾಜ್ಯದಲ್ಲಿ ಅನೇಕ ಅನಾಹುತಗಳು ಆಗಲೇಕೆ? ನಾನು ರಾಣಿಯನ್ನು ಕತ್ತರಿಸಿ ತುಂಡುಮಾಡಿ ಬಿಸುಡುವೆನು ಎಂದು ಕ್ರೋಧೋದ್ದೀಪಿತನಾಗಿ ಶಪಥಮಾಡುತ್ತಾನೆ. ರಾಣಿಯನ್ನು ವಧೆಮಾಡುವುದು ಅಷ್ಟೇನು ಪರಾಕ್ರಮದ ಕಾರ್ಯವಲ್ಲ. ಅದರ ಪರಿಣಾಮವು ಭಯಂಕರವಾದುದು ನಗರದ ರಾಜ್ಯವು ಏನಾಗಬೇಕು? ವಂಶಾನುಕ್ರಮವಾಗಿ ನನ್ನ ಪಾಲಿಗೆ ಬಂದಿರುವ ರಾಜ್ಯಕ್ಕೆ ನಾನೇ ರಾಜನಾಗಬಾರದೇಕೆ? ಆಗಬಹುದು! ಮಂತ್ರಿಯು ನನಗೆ ಬೆಂಬಲಕೊಡುತ್ತಾನೆ. ರಾಜ್ಯದಲ್ಲಿರುವ ಸತ್ಪುರುಷರೆಲ್ಲರೂ ನನಗೆ ಸಹಾಯಕರಾಗುತ್ತಾರೆ ದುರ್ಜನರನ್ನು ಲಕ್ಷಿಸಬೇಕಾಗಿಲ್ಲ. ಅವರೆಲ್ಲರನ್ನೂ ಹಿಡಿದು ಪ್ರತ್ಯಕ್ಷವಾಗಿ ಶೂಲಕ್ಕೇರಿಸಿ ನಾಶನ

ಮಾಡಬಹುದು. ಆದರೆ ಸೂರ್ಯಚಂದ್ರರಿರುವವರೆಗೂ ನಗರದ ರಾಜನು ಮಾತೃವಧೆಯನ್ನು ಮಾಡಿ ಸಿಂಹಾಸನವನ್ನೇರಿದನೆಂದು ಅಪಖ್ಯಾತಿಯು ಈ ರಾಜಮನೆತನಕ್ಕೆ ತಪ್ಪದು. ಹೇಗಾದರೂ ನಗರದ ರಾಜ್ಯವು ಅಸ್ತವಾಗಿಹೋಗುವ ಕಾಲವು ಪ್ರಾಪ್ತವಾಗಿದೆ. ನನ್ನ ಹೆಸರಿನಲ್ಲಿ ಅಸ್ತವಾಗುವುದಕ್ಕಿಂತ ರಾಣಿಯ ಹೆಸರಿನಲ್ಲಿಯೇ ನಾಶವಾಗಿಹೋಗಲಿ. ಆದರೆ ನಾನು ಈ ರಾಜ್ಯದಲ್ಲಿ ಇನ್ನು ಒಂದುಕ್ಷಣ ನಿಲ್ಲಲಾರೆ. ನಾನು ಇಂದೇ ಈ ರಾಜ್ಯವನ್ನು ಬಿಟ್ಟು ಹೊರಟುಹೋಗುತ್ತೇನೆ ಎಂದು ನಿಶ್ಚಯಿಸಿದನು. ಹೇಗೋ ರಾಜ್ಯಪರಿತ್ಯಾಗಮಾಡಿ ಹೊರಟು ಹೋಗುವ ನಾನು ಸುಮ್ಮನೇ ಹೋಗುವುದೇಕೆ? ರಾಣಿಯನ್ನು ನೋಡಿ ಒಂದುಬಾರಿ ಅವಳೊಡನೆ ಖಡಾಖಡಿಯಾಗಿ ಮಾತನಾಡಿ ಹೊರಟು ಹೋಗುತ್ತೇನೆ. ರಾಣಿಯು ನನ್ನನ್ನೇನು ಮಾಡಬಲ್ಲಳು? ಹೀಗೆಂದು ನಿಶ್ಚಯಿಸಿ ರಾಣಿಯ ಅಂತಃಪುರಕ್ಕೆ ಯುವರಾಜನು ಹೋದನು.

"ಯುವರಾಜನು ಅಂತಃಪುರವನ್ನು ಪ್ರವೇಶಮಾಡುತ್ತಲೇ ರಾಣಿ ಚಲುವಮ್ಮಣ್ಣಿಯು ಹಜಾರಕ್ಕೆ ಬಂದು ಮಂದಹಾಸದಿಂದ ಯುವರಾಜ ನನ್ನು ಮಾತನಾಡಿಸಿ ಕೈಹಿಡಿದು ಕರೆದುಕೊಂಡು ತನ್ನಕೊಠಡಿಯೊಳಗೆ ಆಸನದಲ್ಲಿ ಕುಳ್ಳಿರಿಸಿದಳು. ತಾನೂ ಎದುರಿಗೆ ಬಂದು ಆಸನದಲ್ಲಿ ಕುಳಿತುಕೊಂಡಳು. ಯುವರಾಜನು ರಾಣಿಯ ಮುಖವನ್ನು ನೋಡು ತ್ತಾನೆ. ಅದೇ ಪ್ರಶಾಂತವಾದ ಜ್ಯೋತಿರ್ಮಯವಾದ ಕಣ್ಣುಗಳು! ಪ್ರೇಮವನ್ನು ಸೂಸುವ ಮಂದಹಾಸ. ಅವನ ಹೃದಯವು ಬಡಿದು ಕೊಳ್ಳಲಾರಂಭಿಸಿತು. ಈ ರಾಣಿಯಲ್ಲಿ ಕಳಂಕವಿದೆಯೇ? ಸುಳ್ಳು. ನಾನು ಮಾತೃದ್ರೋಹಿಯಾಗುತ್ತೇನೆ. ಇಂಥಾ ನಿಷ್ಕಳಂಕ ದೈವೀಪ್ರಭೆ ಯಿಂದ ಕಂಗೊಳಿಸುತ್ತಿರುವ ರಾಣಿಯಲ್ಲಿ ನಾನು ಹೇಗೆ ಕಳಂಕವನ್ನು ಹೇಳಲಿ? ಸಾಧನೆಗೆ ಏನು ಆಧಾರವಿದೆ? ಎಂದುಕೊಂಡು ವಿಷಾದ ದಿಂದ ನಿಟ್ಟುಸಿರುಬಿಟ್ಟು ಕುಳಿತು ಕೊಂಡನು. ರಾಣಿಯು ಕುಶಲ ಪ್ರಶ್ನೆಯನ್ನು ಮಾಡಿ "ಯುವರಾಜನೇ! ನಿನ್ನನ್ನು ನೋಡಿ ಬಹಳ ದಿನಗಳಾದವು. ನಿನ್ನ ಮುಖವು ಕಾಂತಿವಿಹೀನವಾಗಿರುವುದೇಕೆ?

ಈ ಜಗತ್ತಿನಲ್ಲಿ ನನಗೆ ಪರಮಪ್ರೇಮಾಧಾರವಾದ ವಸ್ತುವೆಂದರೆ ನೀನೊಬ್ಬ. ನಾನು ಯುವರಾಜನಿಗೆ ತಕ್ಕ ಕನ್ಯೆಯನ್ನು ಹುಡುಕಿ ಮದುವೆಯನ್ನು ಮಾಡಿ ಈ ಸಿಂಹಾಸನವನ್ನು ಕೊಟ್ಟು ನೀನು ರಾಜ್ಯ ಭಾರಮಾಡುವುದನ್ನು ನೋಡಿ ಸಂತೋಷಿಸಬೇಕೆಂದಿದ್ದೇನೆ. ಇನ್ನು ಕಾಲಹರಣಮಾಡಲಾಗದು. ನಾನು ಎಲ್ಲವನ್ನೂ ಸಿದ್ಧಗೊಳಿಸುತ್ತೇನೆ."

ಯುವರಾಜನು ದೈನ್ಯಸ್ವರದಿಂದ "ಮಹಾರಾಣಿಯವರೇ ನಾನು ಮದುವೆಯಾಗುವುದಿಲ್ಲ. ನಾನು ಸಿಂಹಾಸನವನ್ನೇರುವುದೂ ಇಲ್ಲ. ಈ ಸಿಂಹಾಸನವು ತಮಗೆ ತಕ್ಕದು. ನಾನು ಯಾವಾಗಲೂ ಹೀಗೆಯೇ ಇರುತ್ತೇನೆ. ಆದರೆ ಏಕೋ ಈಗ ನನ್ನ ಮನಸ್ಸು ಪರಿತಪ್ತವಾಗಿದೆ. ಈ ರಾಜ್ಯದಲ್ಲಿ ಇರಲು ಮನಸ್ಸಿಲ್ಲ. ನಾನು ದೇಶಾಂತರ ಹೋಗಿ ಯಾತ್ರೆಗಳನ್ನು ಮಾಡಿಕೊಂಡು ಬರಬೇಕೆಂದಿದ್ದೇನೆ. ಅಪ್ಪಣೆಯನ್ನು ಬೇಡಲು ಬಂದಿದ್ದೇನೆ."

ರಾಣಿಯು ಆಶ್ಚರ್ಯ ಚಕಿತಳಾಗಿ, "ಯುವರಾಜನೇ, ದೇಶಾಟನೆ ಯೆಂದರೇನು? ತೀರ್ಥಯಾತ್ರೆಗಳೆಂದರೇನು? ಮದುವೆಯಾಗುವು ದಿಲ್ಲವೆಂದರೇನು? ಈ ರಾಜವಂಶವು ಬೆಳೆಯಬೇಡವೇ? ನೀನು ಸಿಂಹಾಸನವನ್ನೇರದಿದ್ದರೆ ಸ್ತ್ರೀಯರ ರಾಜ್ಯಭಾರವನ್ನು ಬಹುದಿವಸ ಈ ಪ್ರಜೆಗಳು ಸಮ್ಮತಿಸುವುದಿಲ್ಲ."

"ರಾಣಿಯವರೇ! ಹಾಗಂದರೇನು? ಈ ಹಿಂದೂಸ್ಥಾನದಲ್ಲಿ ಎಷ್ಟೋಮಂದಿ ರಾಣಿಯರು ರಾಜ್ಯಭಾರಮಾಡಿಲ್ಲವೇ? ತಾವು ಹಾಗೆಯೇ ರಾಜ್ಯಭಾರಮಾಡುತ್ತಿದ್ದೀರಿ. ನಾನು ವಿವಾಹಮಾಡಿಕೊಳ್ಳು ವುದೂ ಇಲ್ಲ, ಈ ರಾಜ್ಯದಲ್ಲಿರುವುದೂ ಇಲ್ಲ, ನನಗೆ ಅಪ್ಪಣೆಕೊಡಿರಿ" ಎಂದು ಆಸನದಿಂದ ಎದ್ದನು. ರಾಣಿಯು ಎಷ್ಟೋವಿಧವಾಗಿ ಯುವ ರಾಜನನ್ನು ಸಮಾಧಾನಗೊಳಿಸಲು ಪ್ರಯತ್ನಪಟ್ಟಳು. ಅವನ ಸ್ಥಿರ ಸಂಕಲ್ಪವನ್ನು ಹಿಂತಿರುಗಿಸಲು ಶಕ್ತಳಾಗಲಿಲ್ಲ. ಹಾಗೆಯೇ ನೀರವ ವಾಗಿ ಕುಳಿತುಕೊಂಡಳು. ಯುವರಾಜನು ಹೊರಟುಹೋದನು. ಅವನು ಯಾವ ಕಾರ್ಯವನ್ನು ವಿರೋಧದಿಂದ ಮಾಡಬೇಕೆಂದು

ಬಂದಿದ್ದನೋ ಆ ಕಾರ್ಯವು ಸಫಲವಾದಂತೆಯೇ ಆಯಿತು. ರಾಣಿಯ ಮನಸ್ಸಿನ ಮೇಲೆ ಅಶನಿಪಾತವಾದಂತಾಯಿತು. ಅವಳಿಗೆ ಸಕಲವೂ ಪ್ರತ್ಯಕ್ಷವಾದಂತೆ ಗೋಚರವಾಯಿತು. ಯುವರಾಜನು ವಿಮುಖನಾಗಿ ದ್ದಾನೆ. ಅಷ್ಟುಮಾತ್ರವಲ್ಲ. ಕಥೆಕಥೆಯಾಗಿ ಅದನ್ನೆಲ್ಲಾ ಅತಿಶಯೋಕ್ತಿ ಯಿಂದ ಕೇಳಿ ಮನಸ್ಸಿಗೆ ಹಚ್ಚಿಕೊಂಡಿದ್ದಾನೆ. ಯುವರಾಜನನ್ನು ನೋಡಿದರೆ ನನಗೆ ನಾಚಿಕೆಯಾಗುತ್ತದೆ. ನಾನೇನುಮಾಡಲಿ? ಯುವ ರಾಜನು ಇದ್ದರೆ ಇರಲಿ. ಹೊರಟುಹೋದರೆ ಹೋಗಲಿ. ಅವನು ಧೀರ ಪುರುಷನೂ ಅಲ್ಲ. ಸಿಂಹಾಸನಕ್ಕೆ ಅರ್ಹನಾದವನೂ ಅಲ್ಲ. ನಾನೇಕೆ ದುಃಖಪಡಬೇಕು? ಈ ರಾಜ್ಯದಲ್ಲಿ ನನ್ನ ವಿರೋಧಿಗಳು ಅನೇಕ ರಿದ್ದಾರೆ. ಸ್ವಯಂ ಮಹಾಮಂತ್ರಿಯೇ ವಿರೋಧಿಯಾಗಿದ್ದಾನೆ. ಯುವರಾಜನು ಅಪ್ರಸನ್ನನಾಗಿದ್ದರೆ ನನಗೇನು? ನನ್ನ ಸುಖಕ್ಕೆ ಯಾರು ಅಡ್ಡಿಬಂದರೂ ನಾನೇಕೆ ಸಹಿಸಬೇಕು? ಎಂದುಕೊಂಡು ವಿಷಣ್ಣಭಾವದಿಂದ ರಾಣಿಯು ನಿರಾಶಳಾದಳು.

ಯುವರಾಜನು ಅಂತಃಪುರದಿಂದ ಹೊರಟುಹೋಗಿ ಎಷ್ಟೋ ಕಾಲವಾಗಿತ್ತು. ಸಂಧ್ಯಾಸಮಯಕ್ಕೆ ಸರಿಯಾಗಿ ಯುವರಾಜನು ಮಲ್ಲಿ ಕಾರ್ಜುನ ದೇವಾಲಕ್ಕೆ ಹೋಗಿ ದೇವರ ದರ್ಶನಮಾಡಿದನು. ತನ್ನ ಮನಸ್ಸಿನ ದುಗುಡವನ್ನು ಅಭಿರಾಮಸ್ವಾಮಿಯಲ್ಲಿ ಹೇಳಿಕೊಂಡು ನೀರವವಾಗಿ ಅತ್ತನು. ಅಭಿರಾಮಸ್ವಾಮಿಯು ಯುವರಾಜನನ್ನು ಆಶೀರ್ವದಿಸಿ "ಮಹಾಮಂತ್ರಿ ರಾಮಕೃಷ್ಣನನ್ನು ಭೇಟಿಮಾಡಿ ಅವರ ಆಜ್ಞಾನುವರ್ತಿಯಾಗಿ ನಡೆಯುವುದು ಶ್ರೇಯಸ್ಕರ"ವೆಂದು ಹೇಳಿದನು. ಯುವರಾಜನು ಆದಿನ ಅರಮನೆಗೆ ಹೋಗಲಿಲ್ಲ. ಅವನು ಎಲ್ಲಿದ್ದನೋ ಯಾರಿಗೂ ಗೊತ್ತಿಲ್ಲ.

ಮರುದಿನ ಪ್ರಾತಃಕಾಲದಲ್ಲಿ ಮಹಾಮಂತ್ರಿಯ ಮನೆಗೆ ಹೋಗಿ ಭೇಟಿಯಿತ್ತನು. ತನ್ನ ಮನದ ಉದ್ವೇಗವನ್ನು ಯಥೋಚಿತವಾಗಿ ಮಂತ್ರಿಯಲ್ಲಿ ತಿಳಿಸಿದನು. ಮಂತ್ರಿಯು ಯುವರಾಜನು ಕೆಲವು ದಿವಸ ಗಳು ಅಜ್ಞಾತವಾಸಮಾಡುವುದು ಶ್ರೇಯಸ್ಕರವೆಂದೂ, ಅಷ್ಟರಲ್ಲಿ

ನಗರದ ರಾಜಕೀಯವು ಪರಿವರ್ತನವಾಗುವುದೆಂದೂ ತಿಳಿಸಿದನು. ಅಂದಿನಿಂದ ಯುವರಾಜನು ಅಜ್ಞಾತವಾಸಮಾಡಲು ಪ್ರಾರಂಭಿಸಿದನು. ಯುವರಾಜನು ತನ್ನ ಚಲನವಲನಗಳು ಯಾರಿಗೂ ತಿಳಿಯದೆಂದು ಭಾವಿಸಿದ್ದನು. ಪ್ರತಿಯೊಂದುಕ್ಷಣದಲ್ಲಿಯೂ ಯುವರಾಜನು ಎಲ್ಲಿದ್ದಾನೆಂದು ಮಂತ್ರಿಗೆ ವರದಿಯಾಗುತ್ತಿದ್ದಿತು. ರಾಣಿಯು ಯುವರಾಜನು ಅರಮನೆಯ ವಾಸವನ್ನು ಪರಿತ್ಯಜಿಸಿ ಹೊರಟುಹೋಗಿದ್ದಾನೆಂಬುದನ್ನು ಖಚಿತಮಾಡಿಕೊಂಡು ತನ್ನ ಗುಪ್ತಚಾರರಿಂದ ಯುವರಾಜನ ನೆಲೆಯನ್ನು ಶೋಧಿಸಲು ಪ್ರಯತ್ನಮಾಡಿದಳು. ಮಹಾಮಂತ್ರಿಯ ತಂತ್ರದಿಂದ ಯುವರಾಜನ ನೆರಳನ್ನೂ ಕಂಡುಹಿಡಿಯಲು ರಾಣಿಗೆ ಸಾಧ್ಯವಾಗಲಿಲ್ಲ.

ಯುವರಾಜನು ಈ ಅಜ್ಞಾತವಾಸದಲ್ಲಿ ಆಗಾಗ ಭೈರವಿಯ ದರ್ಶನ ಮಾಡುತ್ತಿದ್ದನು. ಬೃಂದೆಯು ಎಷ್ಟೋಬಾರಿ ಯುವರಾಜನನ್ನು ಸಂಧಿಸಿದ್ದಳು. ಒಂದೆರಡು ಬಾರಿ ಭವಾನೀರಾಣಿಯ ದರ್ಶನ ಮಾಡಿದ್ದನು. ಮಲ್ಲಿಕಾರ್ಜುನಕ್ಷೇತ್ರಕ್ಕೆ ಯುವರಾಜನು ಆಗಾಗ ಬಂದು ಮಹಾದೇವನ ದರ್ಶನಮಾಡುತ್ತಿದ್ದನು. ಅರಮನೆಯ ವಾಸವಿಲ್ಲ. ರಾಜವೈಭವವಿಲ್ಲ. ರಾಜಪುರುಷರ ಸಹವಾಸವಿಲ್ಲ. ಮಹಾರಾಣಿಯ ದರ್ಶನವಿಲ್ಲ. ಅಷ್ಟೇಹೊರತು ಅಜ್ಞಾತವಾಸವೆಂದರೆ ಅದರಲ್ಲಿ ನಿಗೂಢವಾದ ರಹಸ್ಯವೇನೂ ಇರಲಿಲ್ಲ. ಯುವರಾಜನಿಗೆ ಸಾಕ್ಷಾತ್ತಾಗಿ ಯಾರೂ ದ್ವೇಷಿಗಳಿರಲಿಲ್ಲ. ಪ್ರೀತ್ಯಾಸ್ಪದರೂ ಇರಲಿಲ್ಲ. ಆದರೆ ಬಹುಜನರಿಗೆ ಯುವರಾಜರಮೇಲೆ ಒಂದು ವಿಧವಾದ ಅಭಿಮಾನವಿತ್ತು. ಮಂತ್ರಿಯು ಎಂದೋ ಒಂದು ದಿನ ಉಪಾಯಾಂತರದಿಂದ ಈ ಯುವರಾಜನನ್ನು ಪಟ್ಟಕ್ಕೇರಿಸುತ್ತಾನೆಂದು ಅನೇಕರ ಅಭಿನಿವೇಶವಿತ್ತು.

ಒಂದು ದಿನ ಆಕಸ್ಮಾತ್ತಾಗಿ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಯುವರಾಜನು ಭೈರವಿಯನ್ನು ಕಂಡನು. ಅವಳ ಜೊತೆಯಲ್ಲಿ ಸಖಿಯೊಬ್ಬಳನ್ನು ಕಂಡನು. ಆ ಸಖಿಯು ನಿರಾಭರಣೆಯಾಗಿದ್ದಳು. ಆ ಯುವತಿಯು ವಲ್ಕಲಗಳನ್ನು ತೊಟ್ಟಿದ್ದರೂ ಶೋಭಾಯಮಾನವಾದ

ಸೌಂದರ್ಯ ರಾಶಿಯು ಎದ್ದು ಕಾಣಬಾರದೆಂದು ಭೈರವಿಯು ತನ್ನ ಹರಕು ಬಟ್ಟೆಯನ್ನು ಆ ಸಖಿಯಮೇಲೆ ಹೊದ್ದಿಸಿದ್ದಳು. ಆದರೂ ಆ ಸ್ವರ್ಣಚ್ಛಾಯೆಯ ದೇಹಕಾಂತಿಯನ್ನು ಮುಚ್ಚಲು ಸಾಧ್ಯವಾಗುತ್ತಿರಲಿಲ್ಲ. ಆ ದುಂಡಾದ ಮುಖಪದ್ಮ. ಅದರಮೇಲೆ ಹಾರಾಡುತ್ತಿರುವ ಮುಂಗೂದಲು, ಪ್ರಶಾಂತವಾದ ಆಲೋಲನೇತ್ರಗಳು. ಆ ಮನೋಹರವಾದ ಅಧರ. ಆ ಸಂಪಿಗೆಯ ಮಗ್ಗಿನಂತಹ ನಾಸಿಕ. ದೀರ್ಘವಾದ ಭ್ರೂಯುಗ್ಮ. ಮನೋಹರವಾದ ಕಂಠದೇಶ, ಉಬ್ಬಿದ ವಕ್ಷಸ್ಥಲ. ಮೃದುವಾದ ಆರಕ್ತವಾದ ಹಸ್ತಪಾದಗಳು. ನಿತಂಬದಮೇಲೆ ಹಾರುತ್ತಿರುವ ಕೇಶದಾಮ. ಇವೆಲ್ಲವೂ ಆ ರಮಣಿಯ ಮನೋಹರ ಸೌಂದರ್ಯಕ್ಕೆ ಸಾಕ್ಷೀಭೂತವಾಗಿದ್ದವು. ಭೈರವಿಯು ಯುವರಾಜನನ್ನು ತಡೆದು ನಿಲ್ಲಿಸಿದಳು. ಯುವರಾಜನನ್ನು ಕುಶಲಪ್ರಶ್ನೆಮಾಡಿದಳು. ಯುವರಾಜನು:—

"ಭೈರವಿ, ನೀನೆಲ್ಲಿರುವೆ? ನಮ್ಮ ಅಂತಃಪುರದಲ್ಲಿ ಬಹು ದಿನಗಳಿಂದ ನಿನ್ನ ದರ್ಶನವೇ ಇಲ್ಲ. ನೀನು ಈಗ ನಮ್ಮ ಮಹಾರಾಣಿಯವರ ಸನ್ನಿಧಾನದಲ್ಲಿಲ್ಲವೇನು?"

"ಯುವರಾಜರೇ, ನಾನು ಆ ಮಹಾರಾಣಿಯವರ ಸಹವಾಸದಲ್ಲಿಲ್ಲ. ಭವಾನಿರಾಣಿಯವರ ಸನ್ನಿಧಾನದಲ್ಲಿ ಇದ್ದೇನೆ."

"ಭೈರವಿ, ನಮ್ಮ ಮಹಾರಾಣಿಯವರ ಸಾನ್ನಿಧ್ಯವನ್ನು ನೀನೇಕೆ ಬಿಟ್ಟೆ?"

"ಯುವರಾಜರೇ, ಆ ರಾಣಿಯವರ ಸಾಮೀಪ್ಯವನ್ನು ತಾವೇಕೆ ಬಿಟ್ಟಿರಿ?"

"ಭೈರವಿ, ನಿನ್ನೊಡನೆ ವಿತಂಡವಾದ ಮಾಡುವುದಕ್ಕೆ ನನಗೆ ಸಮಯವಿಲ್ಲ. ನಾನು ಹೋಗುತ್ತೇನೆ. ಅಪ್ಪಣೆಕೊಡು."

"ಯುವರಾಜರೇ! ನೀವು ಎಲ್ಲಿಗೆ ಹೋಗುತ್ತೀರಿ? ನಿಮ್ಮ ಆವಾಸಸ್ಥಾನಕ್ಕೆ ನನ್ನನ್ನೂ ಕರದೊಯ್ಯಲಾರಿರಾ?" ಎಂದು ನಕ್ಕಳು.

ಯುವರಾಜನು ಖಿನ್ನನಾಗಿ ಅದಕ್ಕೆ ತಕ್ಕ ಉತ್ತರವನ್ನು ಕೊಡದೆ "ಭೈರವಿ, ಈ ನಿನ್ನ ಗೆಳತಿ ಯಾರು?" ಎಂದು ಕೇಳಿದನು.

"ಯುವರಾಜರೇ! ಇವಳೊಬ್ಬ ಅಭಾಗಿನಿ, ವನಲತೆ. ರಾಜ ವೈಭವದಲ್ಲಿರುವ ತಮಗೇಕೆ ಇಂತಹ ಹವ್ಯಾಸ?"

"ಭೈರವಿ, ಈ ನಿನ್ನ ವನಲತೆಯು ಅರಮನೆಯ ಉದ್ಯಾನಲತೆಗಿಂತಲೂ ಎಷ್ಟೋ ಶೋಭಾಯಮಾನವಾಗಿರುವುದು."

"ಯುವರಾಜರೇ! ತಮ್ಮಂತಹ ಶ್ರೀಮಂತರ ಹವ್ಯಾಸವು ಸಾಕು. ತಾವು ತಮ್ಮ ದಾರಿಯನ್ನು ಹಿಡಿದು ಹೊರಡಿರಿ. ನಾವು ನಮ್ಮ ಆಶ್ರಮಕ್ಕೆ ತೆರಳುವೆವು."

"ಭೈರವಿ, ನಾನು ಬೇಕಾದರೆ ನಿಮ್ಮ ಜೊತೆಯಲ್ಲಿ ಬಂದು ನಿಮ್ಮ ಆಶ್ರಮಕ್ಕೆ ನಿಮ್ಮಿಬ್ಬರನ್ನೂ ಬಿಟ್ಟು ಬರುವೆನು."

"ಬೇಡ ಯುವರಾಜರೇ! ಬೇಡ. ನೀವು ನಿಮ್ಮ ದಾರಿಯನ್ನು ಹಿಡಿದು ಹೊರಡಿರಿ."

"ಭೈರವಿ, ಈ ನಿನ್ನ ವನಲತೆಯ ಹೆಸರೇನು?"

ಭೈರವಿಯು ನಕ್ಕು, "ಹೆಸರೇ? ಮಲ್ಲಿಗೆ! ಭವಾನೀರಾಣಿಯವರ ಪಾಲಿತ ಪುತ್ರಿ! ತಿಳಿಯಿತೆ?" ಎಂದಳು.

ಯುವರಾಜನು ಮತ್ತೊಮ್ಮೆ ಅವಳನ್ನು ನೋಡಿ, 'ಎಂತಹ ಸೌಂದರ್ಯ?' ಎಂದುಕೊಂಡು ತೆರಳಿದನು. ಅವನು ಹೊರಟುಹೋದ ಮೇಲೆ ಮಲ್ಲಿಗೆಯು ಭೈರವಿಯನ್ನು ಕುರಿತು, "ಭೈರವಿ, ಇವನಾರು?" ಎಂದು ಕೇಳಿದಳು.

ಭೈರವಿಯು ನಗುತ್ತಾ, "ಅವನು ಈ ರಾಜ್ಯದ ಯುವರಾಜ. ಯಾರೋ ಬಡಪಾಯಿಯೆಂದು ತಿಳಿಯಬೇಡ."

ಮಲ್ಲಿಗೆಯು ನಗುತ್ತಾ, "ಭೈರವಿ, ಆತನನ್ನು ನಾನೇಕೆ ಬಡಪಾಯಿಯೆಂದು ತಿಳಿಯುವೆನು? ಮಹಾಪುರುಷರ ಲಕ್ಷಣಗಳೆಲ್ಲವೂ ಆತನ ಮುಖದಲ್ಲಿ ಕಂಗೊಳಿಸುತ್ತಿವೆ. ನೀನು ಆತನ ದರ್ಶನ ಮಾಡಿದ ಮೊದಲುಗೊಂಡು, ಯುವರಾಜ, ಮಹಾರಾಜನೆಂದು ಸಂಬೋಧಿಸುತ್ತಿರುವೆ.

ನಾನು ಅವನನ್ನು ಈ ರಾಜ್ಯದ ರಾಜನೆಂದು ಮೊದಲೇ ತಿಳಿದು ಕೊಂಡೆನು." ಎಂದಳು.

ಭೈರವಿಯು ನಗುತ್ತಾ, ಮಲ್ಲಿಗೆಯ ಬೆನ್ನು ಚಪ್ಪರಿಸಿ, "ತಂಗಿ, ಅವನಿಗೆ ಈ ರಾಜ್ಯವಿಲ್ಲ. ಈ ರಾಜ್ಯವು ಮಹಾರಾಣಿ ಚೆಲುವಮ್ಮಣ್ಣಿ ಯದು. ತಿಳಿಯಿತೇ? ಆ ರಾಜ್ಯ, ಆ ಅರಮನೆ, ಆ ವೈಭವಗಳ ಮಾತು ನಮಗೇಕೆ? ನಡೆ ಹೋಗೋಣ." ಎಂದು ಹೇಳಿ ಮಲ್ಲಿಗೆಯನ್ನು ಕರೆದುಕೊಂಡು ಹೊರಟುಹೋದಳು.

ಯುವರಾಜನು ಆ ಮಲ್ಲಿಗೆಯನ್ನು ಮರೆಯಲೇ ಇಲ್ಲ. ಅವನ ಚಿತ್ತಭಿತ್ತಿಯಲ್ಲಿ ಮಲ್ಲಿಗೆಯ ಸುಂದರವದನಾರವಿಂದವು ಚಿತ್ರಿತವಾಗಿ ದ್ದಿತು. ಅವನ ಹೃದಯದಲ್ಲಿ ಅದುವರೆಗೆ ಯಾವ ಸ್ತ್ರೀರೂಪವೂ ಬಿಂಬಿತ ವಾಗಿರಲಿಲ್ಲ. ಯುವರಾಜನು ಆ ಮಲ್ಲಿಗೆಯನ್ನು ಎಷ್ಟೋ ವಿಧವಾಗಿ ಚಿಂತಿಸಿದನು. ಮನಸ್ಸಿನಿಂದ ಮರೆಯಲು ಪ್ರಯತ್ನಮಾಡಿದನು. ಅವನ ಚಿಂತೆ, ಆವೇಶ, ಉದ್ವೇಗಗಳಲ್ಲಿ ಮಲ್ಲಿಗೆಯನ್ನು ಮರೆತುಬಿಟ್ಟನು. ದಿನ ಕಳೆದಂತೆಲ್ಲಾ ಯುವರಾಜನು ಚಿಂತಾಮಗ್ನನಾದನು. ನಗರದ ರಾಜ್ಯವನ್ನು ಪರಿತ್ಯಾಗಮಾಡಿಯೇಬಿಡಬೇಕೆಂದು ಮತ್ತೊಮ್ಮೆ ಚಿಂತಿಸಿ ದನು. ಮಂತ್ರಿಗೆ ನಾನೇಕೆ ಹೇಳಬೇಕು? ಮಂತ್ರಿಯು ನನಗೆ ಅಪ್ಪಣೆ ಕೊಡದಿದ್ದರೆ ನಾನೇನು ಮಾಡಬೇಕು? ಎಂದು ಚಿಂತಿಸತೊಡಗಿದನು. ಕಟ್ಟಕಡೆಗೆ ಒಂದುಬಾರಿ ಭವಾನೀರಾಣಿಯ ದರ್ಶನಮಾಡಿ ನಗರದ ರಾಜ್ಯದಿಂದ ಹೊರಟುಹೋಗಬೇಕೆಂದು ನಿಶ್ಚಯಿಸಿದನು. ಅಂದೇ ಅಶ್ವಾರೂಢನಾಗಿ ಭವಾನೀರಾಣಿಯ ವಾಸಗೃಹದತ್ತ ತೆರಳಿದನು.

---

## ೧೫

## ಚೆಲುವಮ್ಮಣ್ಣಿಯ ಆಶಂಕೆ

ಬಿದನೂರಿಗೆ ಎರಡು ಹರದಾರಿ ದೂರದಲ್ಲಿ ನಿರ್ಮಲವಾಗಿ ಹರಿಯುವ ತುಂಗೆಯ ತೀರದಲ್ಲಿ ವಿಶಾಲವಾದ ವನಪ್ರದೇಶದಲ್ಲಿ ಒಂದು

ಭವ್ಯಾಕಾರವಾದ ಅರಮನೆ. ಮುಂದುಗಡೆ ವಿಶಾಲವಾದ ಪಡಸಾಲೆಗಳು. ಉಭಯಪಾರ್ಶ್ವಗಳಲ್ಲಿಯೂ ಎಂಟುಎಂಟು ಕಂಬಗಳಿಂದ ರಂಜಿತವಾಗಿದೆ. ಆ ಪಡಸಾಲೆಗಳ ಗೋಡೆಗಳಮೇಲೆ ನಗರದ ರಾಜವಂಶೀಯರ ಚಿತ್ರಗಳು ಚಿತ್ರಿತವಾಗಿವೆ. ಮತ್ತೊಂದು ಪಡಸಾಲೆಯ ಗೋಡೆಯ ಮೇಲೆ ದಕ್ಷಿಣಾಮೂರ್ತಿಯ ತಪಸ್ಸು, ಪಾರ್ವತಿಯ ಪರಿಚರ್ಯೆ, ಕಾಮದೇವನ ಅಟ್ಟಹಾಸ, ಪಾರ್ವತೀಪರಿಣಯ ಇವೆಲ್ಲವೂ ಚಿತ್ರಿತವಾಗಿವೆ. ಆ ವಿಶಾಲವಾದ ಪಡಸಾಲೆಗಳಮೇಲೆ ಶತರಂಜಿಗಳು ಹಾಸಲ್ಪಟ್ಟವೆ. ಎರಡು ಪಡಸಾಲೆಗಳ ಮಧ್ಯದಲ್ಲಿ ಹೆಬ್ಬಾಗಿಲು, ಹೆಬ್ಬಾಗಿಲನ ಮೇಲುಗಡೆ ಗಣಪತಿಯ ಪ್ರತಿಮೆ. ಎರಡು ಪಾರ್ಶ್ವಗಳಲ್ಲಿಯೂ ಗಜಸ್ತಂಭಗಳು. ಹೆಬ್ಬಾಗಿಲನ್ನು ದಾಟಿ ಒಳಗೆಹೋದರೆ ಚಚ್ಚೌಕವಾದ ಪಡಸಾಲೆಗಳಿಂದ ಅಲಂಕೃತವಾದ ಚೌಕಿ. ನಾಲ್ಕು ಪಡಸಾಲೆಗಳ ಮಧ್ಯದಲ್ಲಿ ವಿಶಾಲವಾದ ಅಂಗಳ. ಆ ಅಂಗಳದ ಮಧ್ಯದಲ್ಲಿ ಶಿಲಾನಿರ್ಮಿತವಾದ ದೇವಾಲಯ. ದೇವಾಲಯದ ಬಾಗಿಲುಗಳು ರಜತಮಯವಾದವುಗಳು. ಒಳಗೆ ಶಿವಲಿಂಗ. ಎರಡುಕಡೆಯೂ ಬೆಳ್ಳಿಯ ಕಂಬಗಳಲ್ಲಿ ನಂದಾದೀಪವು ಉರಿಯುತ್ತಿದೆ. ಚಿನ್ನದ ಮುಖವಾಡದಿಂದ ಪರಿಶೋಭಿಸುತ್ತಿರುವ ಶಿವಲಿಂಗವು ಮಹಾದ್ವಾರದಿಂದಲೇ ಪ್ರತ್ಯಕ್ಷವಾಗುತ್ತದೆ. ಆ ನಾಲ್ಕು ಪಡಸಾಲೆಗಳನ್ನು ದಾಟಿ ಒಳಗೆಹೋದರೆ ವಿಶಾಲವಾದ ಭೋಜನದ ಚೌಕಿ. ಅದರ ಹಿಂದುಗಡೆ ವಿಶಾಲವಾದ ಪಾಠಶಾಲೆ. ಹೆಬ್ಬಾಗಿಲನ್ನು ದಾಟಿ ಪಡಸಾಲೆಗಳ ಎಡಬಲಭಾಗಗಳನ್ನು ದಾಟಿ ಹೋದರೆ ಪ್ರಶಸ್ತವಾದ ಮೆಟ್ಟಲುಗಳು. ಆ ಮೆಟ್ಟಲುಗಳನ್ನು ಏರಿದರೆ ಮೇಲೆ ವಿಶಾಲವಾದ ಚೌಕಿ. ಆ ಚೌಕಿಯ ಮಧ್ಯದಲ್ಲಿ ದೊಡ್ಡ ವಿಮಾನದಂತೆ ಅಲಂಕೃತವಾಗಿರುವ ಮೇಲುಕಟ್ಟು. ಆ ಹಜಾರವು ಅನೇಕ ರಜತಪೀಠಗಳಿಂದಲೂ, ಭದ್ರಾಸನಗಳಿಂದಲೂ ಅಲಂಕೃತವಾಗಿದೆ. ಆ ಮಧ್ಯದಲ್ಲಿ ಸ್ವರ್ಣಮಯವಾದ ರತ್ನಖಚಿತವಾದ ಸಿಂಹಾಸನ. ಆ ಸಿಂಹಾಸನದಮೇಲೆ ಸದಾಶಿವರಾಯನ ತೈಲರಂಜಿತ ಚಿತ್ರಪಠವು ಇಡಲ್ಪಟ್ಟಿದೆ. ಆ ಚಿತ್ರಪಠವು ಮುಕ್ತಾಹಾರಗಳಿಂದ

ಅಲಂಕೃತವಾಗಿದೆ. ಹಜಾರದ ಎಡಗಡೆ ವಿಶಾಲವಾದ ಕೋಣೆಗಳು. ಅಲ್ಲಿ ಗೋಡೆಗೆ ಅನೇಕ ಚಿತ್ರಪಠಗಳು ಕಟ್ಟಲ್ಪಟ್ಟಿವೆ. ಆ ಚಿತ್ರಪಠಗಳು ಸುಪ್ರಸಿದ್ಧ ಚಿತ್ರಕಾರರಿಂದ ಚಿತ್ರಿತವಾದವುಗಳು. ಒಂದುಕಡೆ ಗಂಗಾವತರಣ. ಮತ್ತೊಂದುಕಡೆ ಪರಶುರಾಮನು ಭೂಮಿಯನ್ನು ಗೆದ್ದು ಬ್ರಾಹ್ಮಣರಿಗೆ ದಾನಮಾಡುತ್ತಿರುವ ದೃಶ್ಯ. ಮತ್ತೊಂದು ಕಡೆ ಈಶ್ವರನು ನರ್ತನಮಾಡುತ್ತಾ ಇರುವ ನಟರಾಜ ವೈಭವ. ಪಾರ್ವತಿಯು ನಗುತ್ತಾ ಆ ನಾಟ್ಯದಲ್ಲಿ ಮಗ್ನಳಾಗಿರುವ ದೃಶ್ಯ. ಆ ಪಾರ್ವತಿಯ ಚಿತ್ರವನ್ನು ಕಂಡರೆ ಸಾಕ್ಷಾತ್ ಷೋಡಶ ಜೀವ ಕಲಾಮೂರ್ತಿಯು ನಿಂತು ನಗುತ್ತಿರುವಂತೆ ಬೋಧೆಯಾಗುತ್ತದೆ. ಬಲ ಭಾಗದಲ್ಲಿ ಮತ್ತೊಂದು ಕೋಣೆ. ಆ ಕೋಣೆಯು ದಿವ್ಯವಾದ ಪೂಜಾ ಗೃಹ. ಅಲ್ಲಿ ಸ್ವರ್ಣಖಚಿತವಾದ ಭವಾನೀಮೂರ್ತಿಯು ವಿರಾಜಮಾನವಾಗಿದೆ. ಪೂಜಾಸಾಮಗ್ರಿಗಳು ಸಿದ್ಧವಾಗಿವೆ. ರಜತಸ್ತಂಭಗಳಲ್ಲಿ ದೀಪಗಳು ಸರ್ವದಾ ಉರಿಯುತ್ತಿವೆ. ಸುವಾಸನೆಯ ಧೂಪ, ಊದುಬತ್ತಿಗಳು ಘಮಘಮಿಸುತ್ತಿವೆ. ಆ ಪೂಜಾಗೃಹವನ್ನು ಪ್ರವೇಶಮಾಡಿದರೆ ಕೈಲಾಸದಲ್ಲಿ ಭವಾನಿಯ ಅಂತಃಪುರವನ್ನು ಹೊಕ್ಕಂತೆ ಬೋಧೆಯಾಗುತ್ತದೆ. ಕೆಳಗಿನ ಹಜಾರದಲ್ಲಿ ಭೋಜನಶಾಲೆಯಲ್ಲಿ ಪ್ರತಿದಿನವೂ ಬ್ರಾಹ್ಮಣೋತ್ತಮರುಗಳಿಗೆ, ಸಾಧುಸಂತರಿಗೆ, ಸನ್ಯಾಸಿಗಳಿಗೆ, ವಿರಕ್ತರಿಗೆ, ಮೃಷ್ಟಾನ್ನಭೋಜನವೂ ದೊರೆಯುತ್ತದೆ. ಪರಿಚಾರಕರು, ಪರಿಚಾರಣಿಯರು, ಅತಿಥಿಗಳನ್ನು ಆದರಿಸುವುದರಲ್ಲಿ ತೋರುವ ಶ್ರದ್ಧೆಯು ಆಶ್ಚರ್ಯವನ್ನುಂಟುಮಾಡುತ್ತದೆ. ನಮ್ಮ ವಾಚಕರು ಈಗಾಗಲೇ ಇದು ಭವಾನೀರಾಣಿಯ ಗೃಹವೆಂದು ಅರಿತಿದ್ದಾರೆ. ಭವಾನೀರಾಣಿಯು ಈ ಅತಿಥಿಸತ್ಕಾರವನ್ನುಮಾಡುವ ವಿಧಾನವು ಮತ್ತೆಲ್ಲಿಯೂ ಕಂಡುಕೇಳಿಲ್ಲದಂತಹದು. ಉಪಾಸಕನು ಉಪಾಸ್ಯದೇವತೆಯನ್ನು ಹೇಗೆ ಆರಾಧಿಸುತ್ತಾನೋ ಭವಾನೀರಾಣಿಯು ಈ ಅತಿಥಿಗಳನ್ನು ಹಾಗೆ ಆದರಿಸಿ ಸತ್ಕರಿಸುತ್ತಾಳೆ. ಪ್ರಾತಃಕಾಲ ದೇವಪೂಜೆಯಾದನಂತರ ಭವಾನೀರಾಣಿಯು ಕೆಳಗಿಳಿದುಬಂದು ಮಹಾದ್ವಾರವನ್ನು ದಾಟ

ಗಣಪತಿಯ ಚೌಕಿಗೆ ಬರುತ್ತಲೇ ನೂರಾರು ದೀನಕಂಠಗಳಿಂದ ಜಯ ಧ್ವನಿಯು ಕೇಳಿಬರುತ್ತದೆ. ಭವಾನೀರಾಣಿಯು ಪ್ರತಿದಿನವೂ ದೀನ ದರಿದ್ರರಿಗೆ ಧನವಸನಗಳನ್ನು ದಾನಮಾಡುತ್ತಾಳೆ. ಎಲ್ಲರಿಗೂ ಭೋಜನವು ಆಗುತ್ತದೆ. ವಿದ್ವಾಂಸರಿಗೆ ಪಾರಿತೋಷಕಗಳು ಸಿಗುತ್ತವೆ. ಭಕ್ತರಿಗೆ ಪೂಜೆಯೂ ದೊರೆಯುತ್ತದೆ. ಹೀಗೆ ನಿತ್ಯವೂ ಭಗವತಿಯ ಆರಾಧನೆಯು ನಡೆಯುತ್ತದೆ. ಇಂದು ಭವಾನೀರಾಣಿಯು ಅನ್ಯಮನಸ್ಕಳಾಗಿ ಮೇಲಿನ ಹಜಾರದಲ್ಲಿ ಸದಾಶಿವರಾಯರ ಚಿತ್ರಪಟವಿರುವ ಮಹಲಿನಲ್ಲಿ ಕುಳಿತಿದ್ದಾಳೆ. ಎದುರಿಗೆ ಯುವರಾಜ ಕುಳಿತಿದ್ದಾನೆ. ಅವರಿಬ್ಬರಲ್ಲಿ ಹೀಗೆ ಮಾತುಕಥೆ ನಡೆಯುತ್ತಿದೆ:—

"ಯುವರಾಜ! ನೀನು ಈ ರಾಜ್ಯದ ಯುವರಾಜನು. ನೀನು ಈ ರಾಜ್ಯವನ್ನು ಪರಿತ್ಯಜಿಸಿದರೆ ಈ ರಾಜ್ಯಕ್ಕೆ ದಿಕ್ಕಾರು? ಈ ಸಿಂಹಾಸನವು ಮಣ್ಣುಪಾಲಾಗಿಹೋಗುವುದು. ಈ ರಾಜ್ಯದಲ್ಲಿ ನಡೆಯುವ ಶಿವಧರ್ಮವು ಲುಪ್ತವಾಗಿಹೋಗುವುದು. ನೀನೇಕೆ ಈ ರಾಜ್ಯವನ್ನು ಬಿಟ್ಟುಹೋಗುವೆ? ಎಲ್ಲಿಗೆ ಹೋಗುವೆ?"

"ಭವಾನೀರಾಣಿಯವರೇ, ಇಂದು ತಮ್ಮಲ್ಲಿ ಮುಚ್ಚುಮರೆಯಿಲ್ಲದೆ ನನ್ನ ಮನಸ್ಸಿನ ಕಷಾಯವನ್ನೂ ದುಃಖವನ್ನೂ ಹೇಳಿಬಿಟ್ಟು ಹೋಗಬೇಕೆಂದೇ ಬಂದಿದ್ದೇನೆ. ಹೇಳುತ್ತೇನೆ ಕೇಳಿರಿ. ನಾನು ಹೇಳುವ ಮಾತುಗಳನ್ನೆಲ್ಲಾ ಅಕ್ಷರಶಃ ನಂಬಿರಿ. ಧರ್ಮರಾಜ್ಯವಾಗಿದ್ದ ಈ ನಗರದ ರಾಜ್ಯವು ನರಕವಾಗಿ ಪರಿಣಮಿಸಿದೆ. ರಾಣಿ ಚೆಲುವಮ್ಮಣ್ಣಿಯವರ ಕಳಂಕವನ್ನು ವರ್ಣಿಸಲು ಸಾಧ್ಯವಿಲ್ಲ. ನನಗೆ ಆ ಮಾತುಗಳನ್ನು ನುಡಿಯಲು ಬಾಯಿ ಬಾರದು. ಆ ನಿಂದೆಯನ್ನು ಕೇಳುವುದು ಕರ್ಣಕಠೋರವಾಗಿದೆ. ನಮ್ಮ ರಾಜ್ಯದಲ್ಲಿ ಅನಾಮಧೇಯರಾದ, ಅಜ್ಞಾತ ಕುಲಗೋತ್ರರು ಎಷ್ಟೋಮಂದಿ ದೊಡ್ಡ ಅಂತಸ್ತುಗಳಲ್ಲಿದ್ದಾರೆ. ಇದಕ್ಕೆಲ್ಲಾ ಮಹಾರಾಣಿಯವರ ದುಶ್ಚರಿತ್ರೆಯೇ ಕಾರಣವಾಗಿದೆ. ಮಂತ್ರಿಗಳು ಎಲ್ಲವನ್ನೂ ನೋಡಿ ಸಹಿಸಿಕೊಂಡು ಮೌನದಿಂದಿದ್ದಾರೆ. ನಾನು ಇವೆಲ್ಲಕ್ಕೂ ಪ್ರತಿಕ್ರಿಯೆಯನ್ನು ಆಚರಿಸಬೇಕು. ಇಲ್ಲವೇ ಈ ರಾಜ್ಯವನ್ನು ಬಿಟ್ಟು

ದೂರ ಹೊರಟುಹೋಗಬೇಕು. ಅಥವಾ ಹೇಡಿಯಂತೆ ಆತ್ಮಹತ್ಯ ಮಾಡಿಕೊಳ್ಳಬೇಕು. ಈ ದೇಶವನ್ನು ಪರಿತ್ಯಾಗಮಾಡಿ ಬಲುದೂರ ದೇಶಕ್ಕೆ ಹೊರಟುಹೋಗಬೇಕೆಂದು ಸಂಕಲ್ಪ ಮಾಡಿದ್ದೇನೆ. ರಾಣಿಯು ಪ್ರತಿಕ್ಷಣದಲ್ಲಿಯೂ ನಾನು ವಿರುದ್ಧಾಚರಣೆಯನ್ನು ಮಾಡುತ್ತಿದ್ದೇನೆಂದು ಬಗೆದಿದ್ದಾಳೆ. ಈ ಅಪಖ್ಯಾತಿಗಳಿಗೆಲ್ಲಾ ನಾನೇ ಕಾರಣಕರ್ತನೆಂದು ಅವಳು ಭಾವಿಸಿದ್ದಾಳೆ. ಉಪಾಯಾಂತರದಿಂದ ನನ್ನನ್ನು ಗುಪ್ತವಾಗಿ ವಧೆಮಾಡಿಸಬೇಕೆಂದೂ ಪ್ರಯತ್ನಮಾಡುತ್ತಿದ್ದಾಳೆಂದು ಕೇಳಿದ್ದೇನೆ."

"ಯುವರಾಜ, ನಿನ್ನ ಮನೋಗತವು ನನಗೆ ಅರ್ಥವಾಗುತ್ತದೆ. ಆದರೆ ನೀನು ದೈವದ ವಿಚಿತ್ರಗತಿಯನ್ನು ಅರಿಯೆ. ಯಾವಾಗಲೂ ಧರ್ಮಕ್ಕೇ ಜಯವಾಗುತ್ತದೆ. ನಗರದ ರಾಣಿಯ ಅಧರ್ಮವು ನಿನಗೆ ಎಂದೆಂದಿಗೂ ಸೋಂಕುವುದಿಲ್ಲ. ಆದರೆ ನಿನ್ನ ಮಲತಾಯಿಯ ನಡವಳಿಕೆಗಳಿಂದ ನಿನ್ನ ಹೃದಯವು ಅಪವಾದದಿಂದ ಕುಗ್ಗಿರುವುದು ಸಹಜವೇ ಸರಿ. ಆದರೆ ಎಂದಾದರೊಂದುದಿನ ಉತ್ತಮಕಾಲವು ಬಂದೇ ಬರುತ್ತದೆ. ನೀನು ನಗರದ ರಾಜ್ಯದಲ್ಲಿ ಧರ್ಮವನ್ನು ರಕ್ಷಣೆಮಾಡು. ನಗರದ ರಾಣಿಯಾಗಲೀ, ಅವಳ ಅನುಚರರಾಗಲೀ ನಿನ್ನನ್ನು ಏನೂ ಮಾಡಲಾರರು."

"ಮಾತೆಯವರೇ, ತಾವು ನುಡಿಯುತ್ತಿರುವ ದೈವ, ಧರ್ಮ ಇದೊಂದೂ ನನಗೆ ಅರ್ಥವಾಗುವುದಿಲ್ಲ. ಈ ಕಾಲದಲ್ಲಿ ಅಧರ್ಮಕ್ಕೇ ಜಯವೆಂದು ನನಗೆ ಪ್ರತ್ಯಕ್ಷವಾಗಿ ತೋರುತ್ತಿದೆ. ಈ ರಾಜ್ಯದಲ್ಲಿದ್ದು ಚೆಲುವಮ್ಮಣ್ಣಿಯ ವಿಲಾಸ ಭೋಗಗಳಿಂದ ನಮ್ಮ ಕುಲವು ಕಳಂಕಿತವಾಗುತ್ತಿರುವುದನ್ನು ಕಣ್ಣಾರ ನೋಡುತ್ತಾ ಸಹಿಸುವುದೆಂತು? ನಾನು ಎಷ್ಟೋಬಾರಿ ಚೆಲುವಮ್ಮಣ್ಣಿಯನ್ನು ನನ್ನ ಕೈಯಿಂದಲೇ ಕತ್ತರಿಸಿ ಹಾಕಿಬಿಡಬೇಕೆಂದು ಸಂಕಲ್ಪಿಸಿದ್ದೇನೆ. ಮಾತೃವಧೆಗೆ ಹೃದಯವು ಭಯಪಡುತ್ತದೆ. ನಾನು ಚೆಲುವಮ್ಮಣ್ಣಿಯನ್ನು ಕತ್ತರಿಸಿ ಹಾಕಿದರೆ ಈ ಲೋಕವು ಅವಳ ಪಾಪಗಳನ್ನು ಮರೆತು, ನಾನು ಮಾತೃವಧೆ

ಮಾಡಿದ ಮಹಾಪಾಪಿಯೆಂದು ದೂರುತ್ತದೆ. ಲೋಕನಿಂದೆಗೆ ಗುರಿಯಾದ ನಾನು ಈ ರಾಜ್ಯವನ್ನು ಪರಿಪಾಲಿಸುವುದೆಂತು? ಈ ಸಿಂಹಾಸನವನ್ನು ಅಳವಳಿಸುವುದೆಂತು?"

"ಯುವರಾಜ, ನಿನ್ನ ಹೃದಯದ ದುಃಖವು ನನಗೆ ಅರ್ಥವಾಗುತ್ತದೆ. ರಜೋಗುಣದಿಂದ ಉದ್ದೀಪ್ತವಾದ ನಾರೀಹೃದಯವನ್ನು ನಾನು ಅರಿಯಬಲ್ಲೆ. ನಿನ್ನನ್ನು ನನ್ನ ಜೊತೆಯಲ್ಲಿ ಇಟ್ಟುಕೊಳ್ಳುವುದು ನನಗೆ ಕಷ್ಟವಲ್ಲ. ಆದರೆ ಈ ರಾಜ್ಯದ ರಾಜಕೀಯದಲ್ಲಿ ಪ್ರತ್ಯಕ್ಷವಾಗಿಯಾಗಲೀ, ಅಪ್ರತ್ಯಕ್ಷವಾಗಿಯಾಗಲೀ ಸಂಬಂಧಿಸುವುದಿಲ್ಲವೆಂದು ಮಲ್ಲಿಕಾರ್ಜುನದೇವರ ಸನ್ನಿಧಿಯಲ್ಲಿ ಅಭಿರಾಮಸ್ವಾಮಿಗೆ ಪ್ರಮಾಣ ಮಾಡಿಕೊಟ್ಟಿದ್ದೇನೆ. ನೀನು ದೇಶಾಂತರಗತನಾಗುವುದು ನನಗೆ ಇಷ್ಟವಿಲ್ಲ. ನಾನು ತಪಸ್ವಿನಿಯಲ್ಲ. ನನಗೆ ಮುಂದಾಗುವುದರ ಅರಿವಿಲ್ಲ. ಆದರೂ ಯಾವುದೋ ಒಂದು ಭಗವಂತನ ಪ್ರಸಾದದಿಂದ ನೀನು ಸಿಂಹಾಸನವನ್ನು ಏರುವಿ ಎಂಬ ವಿಶ್ವಾಸವಿದೆ. ನೀನು ಈ ರಾಜ್ಯದಲ್ಲೇ ಇರು. ಭಗವಂತನು ನಿನ್ನನ್ನು ಕಾಪಾಡುತ್ತಾನೆ. ನಾನೂ ನನ್ನ ಸಂಕಲ್ಪವನ್ನು ಬಿಡುವುದಿಲ್ಲ. ರಾಣಿಯನ್ನು ಸನ್ಮಾರ್ಗಕ್ಕೆ ಎಳೆಯಲು ನನ್ನ ಸರ್ವಪ್ರಯತ್ನವನ್ನೂ ಮಾಡುತ್ತೇನೆ. ಅವಳಾಗಿ ಸಿಂಹಾಸನವನ್ನು ಪರಿತ್ಯಾಗಮಾಡಿ ನಿನಗೊಪ್ಪಿಸಿದರೆ ಸರ್ವವೂ ಮಂಗಳಕರವಾಗುವುದು. ಮಹಾಮಂತ್ರಿಯ ಅಭಿನಿವೇಶವು ಹಾಗೆಯೇ ಇರುವುದು. ಭವಾನಿಯ ಆಶೀರ್ವಾದವಿದ್ದರೆ ಅದು ಸಿದ್ಧಿಸುವುದಕ್ಕೆ ಬಹುಕಾಲ ಬೇಕಾಗುವುದಿಲ್ಲ. ನಿನಗೆ ದೇವಿಯು ಮಂಗಳವನ್ನುಂಟುಮಾಡಲಿ" ಎಂದು ಆಶೀರ್ವದಿಸಿದಳು. ಅಷ್ಟರಲ್ಲಿ ಮಧ್ಯಾಹ್ನದ ಸಮಯವಾಗುತ್ತಾ ಬಂದಿತು. ಭವಾನೀರಾಣಿಯು "ಯುವರಾಜರೇ, ಇಂದು ಈ ದೇವಿಯ ಗೃಹದಲ್ಲಿಯೇ ನೀವು ಆರೋಗಣೆಯನ್ನು ತೀರಿಸಿಕೊಂಡು ಹೊರಡಬೇಕು" ಎಂದು ಪ್ರಾರ್ಥಿಸಿದಳು. ಯುವರಾಜನು ಸಂತೋಷದಿಂದ ಸಮ್ಮತಿಸಿದನು. ದೇವಿಯು ಸ್ನಾನಗೃಹಕ್ಕೆ ತೆರಳಿದಳು.

ಭವಾನೀರಾಣಿಯು ಸ್ನಾನವನ್ನು ತೀರಿಸಿಕೊಂಡು ಭವಾನಿಯ

ಪೂಜೆಗೆ ಬಂದಳು. ವಿಶಾಲವಾದ ಪೂಜಾಮಂದಿರದಲ್ಲಿ ಸ್ವರ್ಣಮಂಟಪ ದಲ್ಲಿ ಭವಾನಿಯ ಮೂರ್ತಿಯು ವಿರಾಜಿಸುತ್ತಿತ್ತು. ಎದುರಿಗೆ ವಿಶಾಲ ವಾದ ರಜತಪೀಠವು ಕಂಗೊಳಿಸುತ್ತಿತ್ತು. ಮುಂದುಗಡೆ ಚಿನ್ನದ ತಟ್ಟೆ ಗಳಲ್ಲಿ ಗಂಧ ಪುಷ್ಪ ಮುಂತಾದ ಪೂಜಾಸಾಮಗ್ರಿಗಳು ಸಿದ್ಧವಾಗಿದ್ದವು. ಭವಾನೀರಾಣಿಯು ಗೈರಿಕ ವಸನಗಳನ್ನು ಧರಿಸಿ, ವಿಭೂತಿಯನ್ನು ಲಲಾಟದಲ್ಲಿ ಧಾರಣಮಾಡಿದಳು. ಕೊರಳಲ್ಲಿ ಸ್ಫಟಿಕ ಮಾಲೆಗಳನ್ನು ಧರಿಸಿದಳು. ಕೇಶದಾಮವು ಕಟ್ಟಲ್ಪಟ್ಟು ಪುಷ್ಪಗುಚ್ಛದಿಂದ ಅಲಂಕೃತ ವಾಗಿತ್ತು. ಭವಾನೀರಾಣಿಯು ಪೀಠದಮೇಲೆ ಬಂದು ಕುಳಿತು ಭಕ್ತಿ ಭಾವದಿಂದ ದೇವಿಯನ್ನು ಪೂಜಿಸಿದಳು. ಮಂಗಳಾರತಿಯ ಸಮಯ ದಲ್ಲಿ ಪರಿಚಾರಿಕೆಯೊಬ್ಬಳು ಬಂದು ಆರತಿಗಳನ್ನು ಎತ್ತಿಕೊಡು ತ್ತಿದ್ದಳು. ಅಲ್ಲಿ ಮತ್ತಾರೂ ಇರಲಿಲ್ಲ. ರಾಜಕುಮಾರನು ಭಕ್ತಿಭಾವ ದಿಂದ ಕೈಮುಗಿದು ನಿಂತಿದ್ದನು. ಮಂಗಳಾರತಿಯು ಪೂರೈಸುತ್ತಲೇ ದೇವಿಗೆ ನಮಿಸಿ ಭವಾನೀರಾಣಿಯ ಕಡೆ ನೋಡಿದನು. ಮತ್ತೊಮ್ಮೆ ಆ ಪರಿಚಾರಿಕೆಯ ಕಡೆ ನೋಡಿದನು. ಎಂತಹ ಜಾಜ್ವಲ್ಯಮಾನವಾದ ಸೌಂದರ್ಯ! ಪರಿಚಾರಿಕೆಯು ಸ್ವರ್ಣಪುತ್ಥಳಿಯಂತಿದ್ದಾಳೆ. ದೇವಿಯೋ ಪರಿಚಾರಿಣಿಯೋ, ಆ ಪರಿಚಾರಿಣಿಯೇ ದೇವಿಯೋ ಎಂದು ಯುವ ರಾಜನು ದಿಗ್ಭ್ರಾಂತನಾದನು. ಭವಾನೀರಾಣಿಯು ಮಂತ್ರಪುಷ್ಪವನ್ನು ಸಮರ್ಪಿಸಿ ದೇವಿಯ ಪೂಜೆಯನ್ನು ಮುಗಿಸಿ ಪ್ರಸಾದವನ್ನು ಸ್ವೀಕರಿಸಿ ಹಣೆಯಲ್ಲಿ ಧರಿಸಿದಳು. ಆ ವಿಭೂತಿಯಿಂದ ರಂಜಿತವಾಗಿದ್ದ ಲಲಾಟ ದಲ್ಲಿ ಭ್ರೂಮಧ್ಯದಲ್ಲಿ ಕುಂಕುಮಪ್ರಸಾದವನ್ನು ಭವಾನೀರಾಣಿಯು ಧರಿಸುತ್ತಲೇ ಪ್ರಸನ್ನ ತೇಜೋಮಯವಾದ ಮುಖಮಂಡಲವು ಕುಂಕು ಮಾನ್ವಿತವಾಗಿ ಸಾಕ್ಷಾತ್ ದಾಕ್ಷಾಯಿಣಿಯ ಮುಖದಂತೆ ಕಂಗೊಳಿಸು ತ್ತಿದ್ದಿತು. ಭವಾನೀರಾಣಿಯು ಮಂದಹಾಸವನ್ನು ಬೀರುತ್ತಾ ಯುವರಾಜನಿಗೆ ಭವಾನಿಯ ಪ್ರಸಾದವನ್ನು ಕೊಟ್ಟಳು. ಪಕ್ಕದಲ್ಲಿ ನಿಂತಿದ್ದ ಪರಿಚಾರಿಕೆಗೂ ಪ್ರಸಾದವನ್ನಿತ್ತಳು. ಅವರಿಬ್ಬರ ಮುಖವನ್ನು ದಯಾರ್ದ್ರಭಾವದಿಂದ ನೋಡಿದಳು. ಯುವರಾಜನನ್ನು ಕರೆದು ಕೊಂಡು ಭೋಜನಶಾಲೆಗೆ ಹೊರಟುಹೋದಳು.

ಭೋಜನಶಾಲೆಯಲ್ಲಿ ಅಣಿಯಾಗಿದ್ದ ಸಾಮಗ್ರಿಗಳನ್ನು ಪರಿಚಾರಿಕೆಯು ಯುವರಾಜನ ಮುಂದೆ ತಂದಿಟ್ಟಳು. ಯುವರಾಜನಿಗೆ ಬೇಕಾದ ಭೋಜ್ಯಗಳನ್ನು ಪರಿಚಾರಿಕೆಯು ಬಡಿಸುತ್ತಾ ನಿಂತಿದ್ದಳು. ಭವಾನೀರಾಣಿಯು ಸಮೀಪದಲ್ಲಿಯೇ ಕುಳಿತಿದ್ದಳು. ಯುವರಾಜನು ಭೋಜನವನ್ನು ತೀರಿಸಿ ವಿಶ್ರಾಂತಿಯನ್ನು ಹೊಂದಿ ತಾನು ಅಲ್ಲಿಂದ ಹೊರಡಲು ಭವಾನೀರಾಣಿಯ ಅಪ್ಪಣೆಯನ್ನು ಬೇಡಿದನು. ರಾಣಿಯು ಅಪ್ಪಣೆಯಿತ್ತಳು. ಯುವರಾಜನು ಅಲ್ಲಿಂದ ಹೊರಡುವಾಗ ಭವಾನೀರಾಣಿಯನ್ನು ನಮ್ರಭಾವದಿಂದ ವಂದಿಸಿ, "ಮಾತೆಯವರೆ! ಆ ತಮ್ಮ ಪರಿಚಾರಿಣಿಯು ಯಾರು?" ಎಂದು ಪ್ರಶ್ನೆ ಮಾಡಿದನು. ಭವಾನೀರಾಣಿಯು ಗಂಭೀರಭಾವದಿಂದ "ಅವಳೊಬ್ಬ ಬಡಹುಡುಗಿ. ಹೆಸರು ಮಲ್ಲಿಕಾ. ನನ್ನ ಪಾಲಿತ ಪುತ್ರಿ. ಅರ್ಥಾತ್ ಭವಾನೀದೇವಿಯ ಪುತ್ರಿ" ಎಂದು ನುಡಿದಳು. ಯುವರಾಜನು ಕೈಮುಗಿದು ಹೊರಟುಹೋದನು. ಹೋಗುತ್ತಾ ಮಹಡಿಯಿಂದ ಕೆಳಗಿಳಿದು ಪಡಸಾಲೆಯನ್ನು ದಾಟಿ ಬರುವಾಗ ಈಶ್ವರದೇವಾಲಯದ ಬಾಗಿಲಿನಲ್ಲಿ ಆ ಸಂಧ್ಯಾಕಾಲದ ಪ್ರಭಾಮಯವಾದ ಸೂರ್ಯದೇವನ ಹಣ್ಣು ಕಿರಣಗಳ ಸ್ವರ್ಣಪ್ರಭೆಯಲ್ಲಿ ಮಲ್ಲಿಗೆಯು ಕೈಮುಗಿದು ನಿಂತಿದ್ದುದನ್ನು ಕಂಡನು. ಯುವರಾಜನು ಮತ್ತೊಮ್ಮೆ ಈಶ್ವರನಿಗೆ ಕೈಮುಗಿದು ಎದುರಿಗೆ ನಿಂತಿದ್ದ ಆ ತರುಣಿಯನ್ನು ನೋಡುತ್ತ ನೋಡುತ್ತ ಮಹಾದ್ವಾರವನ್ನು ದಾಟಿ ಹೊರಟುಹೋದನು.

ಯುವರಾಜನ ವಾಸಸ್ಥಾನವು ಯಾವುದೋ, ಸಹಚರರು ಯಾರೋ, ಹಗಲೆಲ್ಲಾ ಎಲ್ಲೆಲ್ಲಲೆಯುವನೋ, ರಾತ್ರಿ ಎಲ್ಲಿ ತಂಗುವನೋ, ಎಲ್ಲಿ ಊಟಮಾಡುವನೋ, ಯಾವ ವೇಷದಿಂದ ಎಲ್ಲಿ ಸಂಚರಿಸುವನೋ ಯಾರಿಗೂ ಗೊತ್ತಿಲ್ಲ. ರಾಣಿ ಚೆಲುವಮ್ಮಣ್ಣಿಯು ಯುವರಾಜನನ್ನು ಪತ್ತೆಮಾಡಲು ಎಷ್ಟೋ ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ. ಯುವರಾಜನು ನಗರದ ರಾಜ್ಯವನ್ನು ಬಿಟ್ಟು ಎಲ್ಲಿಯೋ ದೇಶಾಂತರಗತನಾಗಿರಬೇಕೆಂದು ರಾಣಿಯು ಭಾವಿಸಿದ್ದಳು. ರಾಣಿಯ ಅನುಚರರ, ಸಹಚರರ

ಕೌಶಲವು ಫಲಕಾರಿಯಾಗಲಿಲ್ಲ. ಏಕೆಂದರೆ ಸರ್ವದಾ ಮಂತ್ರಿ ರಾಮಕೃಷ್ಣನ ಬುದ್ಧಿಶಕ್ತಿಯು ಯುವರಾಜನನ್ನು ರಕ್ಷಿಸುತ್ತಿದ್ದಿತು. ರಾಮಕೃಷ್ಣನ ಶಿಷ್ಯಳಾದ ಬೃಂದೆಯು ಮಂತ್ರಿ ರಾಮಕೃಷ್ಣನ ಗುಪ್ತ ಚಾರಳೆಂಬುದನ್ನು ಯಾರೂ ಅರಿಯರು. ಅವಳು ಮಲ್ಲಿಕಾರ್ಜುನ ಮಂದಿರದಲ್ಲಿ ಭಕ್ತರ ಮಧ್ಯದಲ್ಲಿ ಭಕ್ತಳು. ಬಿದನೂರಿನ ಅಂಗಡಿಬೀದಿ ಯಲ್ಲಿ ಹೂವಾಡಗಿತ್ತಿ. ಅರಮನೆಯಲ್ಲಿ, ಅಂತಃಪುರದಲ್ಲಿ, ನಿರರ್ಗಳ ಪ್ರವೇಶವುಳ್ಳವಳು. ರಾಜಕರ್ಮಚಾರಿಗಳಲ್ಲಿ ಬಹುಮಂದಿಗೆ ಆಪ್ತಳು. ಅವಳ ನಡೆನುಡಿಗಳಲ್ಲಿ ಯಾರಿಗೂ ಸಂಶಯವಿಲ್ಲ. ಆದರೆ ಪುರುಷ ರೆಲ್ಲರೂ ಪುಣ್ಯವತಿಗಳಲ್ಲ. ಬೃಂದೆಯ ರೂಪರಾಶಿಯನ್ನು ನೋಡಿ, ಮರುಳಾಗಿ, ಅವಳನ್ನು ಕೆಣಕಿ, ಮುಖಭಂಗಿತರಾದವರು ಎಷ್ಟೋ ಮಂದಿ. ಇವಳು ವಿರಕ್ತಳೇ? ಅಲ್ಲ! ಗೃಹಸ್ಥಳೇ? ಅಲ್ಲ! ಭಕ್ತಳೇ? ಅಲ್ಲ! ಅಂತಃಪುರದ ಪರಿಚಾರಕಳೇ? ಅಲ್ಲ! ಹಾಗಾದರೆ ಅವಳೇನು? ಅದೇ ಗುಪ್ತಚಾರರ ವಿಶೇಷಗುಣ. ಅವರ ಅಂತರಾಳವನ್ನು ಕಂಡು ಹಿಡಿಯಲು ಯಾರಿಂದಲೂ ಸಾಧ್ಯವಾಗದಿರುವುದೇ ಅವರ ಸಾಮರ್ಥ್ಯ. ದೊಡ್ಡ ದೊಡ್ಡ ಮಹಲುಗಳಿಗೆ ಪೂಜೆಗೆ ಹೂವು ಕೊಡುವಂತೆ ಮಹಾ ಮಂತ್ರಿ ರಾಮಕೃಷ್ಣನ ಮನೆಗೂ ಹೂವು ಕೊಡುತ್ತಾಳೆ. ರಾಮಕೃಷ್ಣನ ಮನೆಯಿಂದ ನಿರ್ಮಾಲ್ಯ ಪುಷ್ಪಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ತನ್ನ ಮನೆಗೆ ತರುತ್ತಾಳೆ. ಬಡಹುಡುಗಿಯರಿಗೆ ಮುಡಿದುಕೊಳ್ಳಲು ಆ ಪುಷ್ಪಗಳನ್ನು ಕೊಡುತ್ತಾಳೆ. ಪೂಜಾಪುಷ್ಪಗಳನ್ನು ತೆಗೆದುಕೊಂಡು ಹೋಗಿ ಕೊಡುವಾಗ, ನಿರ್ಮಾಲ್ಯ ಪುಷ್ಪಗಳನ್ನು ತರುವಾಗ ಗುಪ್ತ ಪತ್ರಗಳು ಆ ಪುಷ್ಪಗಳ ಒಳಗೆ ಗರ್ಭಿತವಾಗಿರುತ್ತವೆ. ಅವೆಲ್ಲವೂ ಸಾಂಕೇತಿಕ ಭಾಷೆ. ಯುವರಾಜನನ್ನು ರಕ್ಷಣೆಮಾಡುವ ಭಾರವು ಬೃಂದೆಯದು. ವಾಚಕರು ಚತುರಳಾದ ರಾಣಿಯ ಆಗ್ರಹಕ್ಕೆ ಪಾತ್ರ ನಾದ ಯುವರಾಜನನ್ನು ಬೃಂದೆಯು ಕಾಪಾಡಬಲ್ಲಳೆಂದರೆ ಆಶ್ಚರ ಪಡಬಹುದು. ಆದರೆ ರಾಣಿಗಿಂತಲೂ ಬೃಂದೆಯೇ ಚತುರಳು. ಅದನ್ನು ರಾಮಕೃಷ್ಣನು ಚೆನ್ನಾಗಿ ಅರಿತಿದ್ದನು. ರಾಮಕೃಷ್ಣನಿಗೆ

ಬೃಂದೆಯ ಮೂಲಕ ಯುವರಾಜನು ಭವಾನೀರಾಣಿಯ ಆಶ್ರಯದಲ್ಲಿ ರುವ ಮಲ್ಲಿಕೆಯಲ್ಲಿ ಅನುರಕ್ತನಾಗಿದ್ದಾನೆಂದು ತಿಳಿಯುಬಂದಿತು.

ರಾಮಕೃಷ್ಣನು ಒಂದು ದಿನ ಭವಾನೀರಾಣಿಯ ವಾಸಸ್ಥಾನಕ್ಕೆ ಹೋಗಿ ದರ್ಶನವಿತ್ತನು. ಭವಾನೀರಾಣಿಯೊಡನೆ ಅನೇಕ ಯೋಗ ಕ್ಷೇಮಗಳನ್ನು ಮಾತನಾಡಿದನು. ಕೊನೆಯಲ್ಲಿ ಭವಾನೀರಾಣಿಯ ಪಾಲನೆಯಲ್ಲಿದ್ದ ಮಲ್ಲಿಕೆಯನ್ನು ಯುವರಾಜನಿಗೆ ಕೊಟ್ಟು ವಿವಾಹ ಬೆಳಸಬೇಕೆಂದು ಬೇಡಿದನು. ಭವಾನೀರಾಣಿಯು ಮಂತ್ರಿಯನ್ನು ಕುರಿತು :—

"ಮಹಾಮಂತ್ರಿಗಳೇ! ನಿಮ್ಮ ಬುದ್ಧಿಗೆ ಗ್ರಹಣಹಿಡಿಯುವುದೆಂದು ನಾನು ಎಂದೂ ಭಾವಿಸಿರಲಿಲ್ಲ. ಯುವರಾಜನು ಮಹಾರಾಣಿ ಚೆಲುವಮ್ಮಣ್ಣಿಯ ವಿರೋಧವನ್ನು ಕಟ್ಟಿಕೊಂಡು ಎಲ್ಲಿಯೋ ಅಜ್ಞಾತ ವಾಸದಲ್ಲಿ ಕಾಲಕಳೆಯುತ್ತಿದ್ದಾನೆ. ಅವನು ವಿವಾಹಿತನಾದರೆ, ಎಲ್ಲಿ ಈ ಸತಿಪತಿಯರು ವಾಸಮಾಡುವುದು ? ಇವರುಗಳು ಸುಖವಾಗಿ ಇರುವು ದೆಂತು? ಇವರನ್ನು ರಕ್ಷಿಸಬಲ್ಲವರಾರು ? ಇದನ್ನೆಲ್ಲಾ ನೀವು ಯೋಚನೆ ಮಾಡಲಿಲ್ಲವೇ ?" ಎಂದಳು.

"ಯೋಚನೆ ಮಾಡಿದ್ದೇನೆ. ಈ ವಿವಾಹವನ್ನು ಮಾಡಿಸದಿದ್ದರೆ ಯುವರಾಜನು ಬುದ್ಧಿಭ್ರಮಣೆಯಿಂದ ಹುಚ್ಚನಾಗುವನು. ತಾವು ಸಮ್ಮತಿಸಿದರೆ ನಾನು ಈ ವಿವಾಹವನ್ನು ಮಾಡಿಸುತ್ತೇನೆ. ನನ್ನ ರಕ್ಷಣೆ ಇರುವವರೆಗೆ ಯುವರಾಜನನ್ನು ರಾಣಿಯೂ ಏನೂ ಮಾಡಲಾರಳು. ಯುವರಾಜನು ನನ್ನ ಅನುಮತಿಯಂತೆಯೇ ಅಜ್ಞಾತವಾಸದಲ್ಲಿದ್ದಾನೆ. ಅಜ್ಞಾತವಾಸವು ಪೂರ್ತಿಯಾಗಿದೆಯೆಂದೇ ನನ್ನ ಭಾವನೆ. ಈ ರಾಜ್ಯದಲ್ಲಿ ಸೇನಾಧಿಪತಿಗಳೆಲ್ಲರೂ ನನ್ನ ಅಧೀನರಾಗಿರುವರು. ಯುವರಾಜನು ವಿವಾಹಿತನಾಗಿ ಪ್ರತ್ಯಕ್ಷವಾಗಿ ನಗರದಲ್ಲಿರಲಿ. ನಗರದ ಅರಮನೆಯನ್ನು ಅವನಿಗೆ ಬಿಡಿಸಿ ಕೊಡುವೆನು. ರಾಣಿಯ ಚಾತುರ್ಯವು ಅಲ್ಲಿ ಸಾಗಲಾರದು."

"ಮಂತ್ರಿಗಳೇ! ಯಾವಾಗಲೂ ಈ ಲೋಕದಲ್ಲಿ ಸ್ತ್ರೀಯರಿಗೆ ಜಯ.

ನೀವು ಅಪಜಯವನ್ನು ಹೊಂದುವಿರಿ. ಭವಾನಿಯ ಇಚ್ಛೆಯಿದ್ದಂತಾಗಲಿ. ಆದರೆ ಆ ಮಲ್ಲಿಕೆಯನ್ನು ಕೇಳಿ, ಅವಳು ಒಪ್ಪುವುದಾದರೆ ನಾನು ಈ ವಿವಾಹಕ್ಕೆ ಸಮ್ಮತಿಸುವೆನು."

"ಭವಾನೀರಾಣಿಯವರೇ, ಮಲ್ಲಿಕಾರ್ಜುನ ಕ್ಷೇತ್ರದಲ್ಲಿ ಭೈರವಿಯು ಮಲ್ಲಿಕೆಯ ಒಪ್ಪಿಗೆಯನ್ನು ಪಡೆದಿರುವಳು. ಅಷ್ಟೇಕೆ ಸಾಕ್ಷಾತ್ ಮಲ್ಲಿಕಾರ್ಜುನ ಸನ್ನಿಧಾನದಲ್ಲಿ ಮಲ್ಲಿಕೆಯನ್ನು ಯುವರಾಜರು ದೈವೀ ವಿವಾಹದಿಂದ ಪರಿಗ್ರಹಿಸಿದರು."

"ದೇವೀಭವಾನಿಯ ಇಚ್ಛೆಯಿದ್ದಮೇಲೆ ನನ್ನದೇನಿದೆ? ನಾನು ಸಂತೋಷದಿಂದ ಒಪ್ಪುತ್ತೇನೆ. ಈ ಇಡೀ ನಗರದ ಸಮಸ್ತ ರಾಜಕೀಯವೂ ತಮ್ಮ ಕೈಯ್ಯಲ್ಲಿದೆ. ಈ ಯುವರಾಜರ ವಿವಾಹದಲ್ಲಿಯೂ ಏನೋ ಒಂದು ಮಹತ್ತರ ರಾಜಕೀಯವಿದೆಯೆಂದೇ ನನ್ನ ಭಾವನೆ. ಭವಾನೀ ಕೃಪೆಯಿದ್ದಂತಾಗುವುದು."

ಮಂತ್ರಿ ರಾಮಕೃಷ್ಣನು ಭವಾನೀರಾಣಿಯ ಅಪ್ಪಣೆ ಪಡೆದು ಹೊರಟುಹೋದನು. ಮಾರನೇ ದಿನವೇ ಯುವರಾಜನ ಸವಾರಿಯು ಭವಾನೀರಾಣಿಯವರ ಸದನಕ್ಕೆ ಬಂದೇಬಿಟ್ಟಿತು. ಯುವರಾಜರ ಜೊತೆಯಲ್ಲಿ ಬೃಂದೆಯೂ ಬಂದಳು. ಭವಾನೀರಾಣಿಯು ಯುವರಾಜನನ್ನು ಆದರದಿಂದ ಸ್ವಾಗತಿಸಿ ಮಂಗಳಸ್ನಾನಾದಿಗಳನ್ನು ಮಾಡಿಸುವಂತೆ ಪರಿಚಾರಿಕೆಯರಿಗೆ ಆಜ್ಞಾಪಿಸಿ ಅದೇದಿನವೇ ಭವಾನೀದೇವಿಯ ದೇವಮಂದಿರದಲ್ಲಿ ಯುವರಾಜನಿಗೂ ಮಲ್ಲಿಕೆಗೂ ಭಗವತಿಯ ಪ್ರಸಾದವನ್ನು ಅನುಗ್ರಹಿಸಿದಳು.

ಭವಾನೀರಾಣಿಯು "ಯುವರಾಜನೇ, ಈ ಮಲ್ಲಿಕೆಯು ಅನಾಥಳಾಗಿದ್ದಳು ನಾನು ಭವಾನಿಯ ಸೇವೆಗಾಗಿ ಇಲ್ಲಿಗೆ ಕರೆತಂದು ರಕ್ಷಿಸುತ್ತಿದ್ದೆ. ಇಂದು ನೀನು ಅವಳನ್ನು ಕರೆದೊಯ್ಯುವೆ. ನಿಮ್ಮಿಬ್ಬರ ಪ್ರಣಯವು ಭಗವಂತನಿಂದ ಅನುಗ್ರಹಿತವಾಗಿದೆಯೆಂದು ತಿಳಿದಿದ್ದೇನೆ. ಮಂತ್ರಿ ರಾಮಕೃಷ್ಣನು ಈ ವಿವಾಹಕ್ಕಾಗಿ ನನ್ನಲ್ಲಿ ಪ್ರಾರ್ಥನೆಮಾಡಿದನು. ಅದನ್ನು ನೆರವೇರಿಸಿದ್ದೇನೆ" ಎಂದಳು.

ಮಲ್ಲಿಕೆಯನ್ನು ಕುರಿತು “ಮಲ್ಲಿಗೆ, ಇಂದು ನೀನು ಯುವರಾಜನ ಧರ್ಮಪತ್ನಿಯಾಗಿದ್ದಿ. ಒಂದಲ್ಲ ಒಂದು ದಿನ ಈ ನಗರದ ಸಿಂಹಾಸನ ವನ್ನು ಏರುವಿ. ಆದಕ್ಕೆ ತಕ್ಕ ಗುಣಗಳು ನಿನ್ನಲ್ಲಿರುವುವು. ಹಾಗೆಯೇ ಈ ನಗರದ ರಾಜ್ಯದ ಕಷ್ಟಸುಖಗಳನ್ನು ನೀವಿಬ್ಬರೂ ಹೊರಬೇಕಾಗು ವುದು. ನಿಮಗೆ ಭಗವಂತನು ಅಷ್ಟೈಶ್ವರ್ಯಗಳನ್ನು ಕೊಡಲೆಂದು ಆಶೀರ್ವದಿಸುವೆನು” ಎಂದು ಅಪ್ಪಣೆಯಿತ್ತು ಭವಾನೀರಾಣಿಯು ಅವ ರಿಬ್ಬರನ್ನೂ ಹೊರಗಿನ ಮಹಲಿಗೆ ತಂದುಬಿಟ್ಟಳು. ಅಷ್ಟರಲ್ಲಿ ಭೈರ ವಿಯು ಹರನಾಮಗಳನ್ನು ಹಾಡುತ್ತಾ ಆ ಹಜಾರಕ್ಕೆ ಬಂದಳು. ಅವಳು ಮಲ್ಲಿಗೆಯನ್ನು ಬಾಚಿ ತಬ್ಬಿಕೊಂಡು “ನೋಡು ಮಲ್ಲಿಗೆ, ಅಂದಿನ ನೆನಪಿದೆಯೇ ನಿನಗೆ? ನಾನು ನಿನ್ನ ಕೈನೋಡಿ ಸಾಮುದ್ರಿಕ ವನ್ನು ಹೇಳಲಿಲ್ಲವೆ? ‘ನೀನು ಮಹಾರಾಜನ ರಾಣಿಯಾಗುವಿ’ ಎಂದು ಅಂದು ನಾನು ಹೇಳಿದ ಮಾತು ಇಂದು ನಿಜವಾಯಿತಲ್ಲವೇ? ನನಗೇನು ಪುರಸ್ಕಾರ ಕೊಡುವಿ” ಎಂದು ಹಾಸ್ಯಮಾಡುತ್ತಾ ಮಲ್ಲಿಗೆಯ ಕಪೋಲದ ಮೇಲೆ ಮುತ್ತಿಟ್ಟಳು. ಯುವರಾಜನನ್ನು ನಗುಮೊಗ ದಿಂದ ಸಂಭಾವಿಸಿ ಎದುರಿಗೆ ನಿಂತಿದ್ದ ಭವಾನೀರಾಣಿಗೆ ಅಭಿವಂದನ ಮಾಡಿದಳು.

ನಗರದ ಅರಮನೆಯು ಪೂರ್ವದಲ್ಲಿ ಅತ್ಯಂತ ರಾಜವೈಭವದಿಂದ ಮೆರೆಯುತ್ತಿದ್ದ ಅರಮನೆ. ನಗರದ ರಾಜರುಗಳು ನಗರದ ಅರಮನೆ ಯಲ್ಲಿ ವಾಸಮಾಡುವುದೂ ಉಂಟು. ಕೆಳದಿಯಲ್ಲಿ ಆಡಳಿತ ನಡೆಸು ವುದೂ ಉಂಟು. ಬಿದನೂರಿನಲ್ಲಿ ರಾಜ್ಯಭಾರಮಾಡುವುದೂ ಉಂಟು. ಈಗ ರಾಣಿ ಚೆಲುವಮ್ಮಣ್ಣಿಯು ಬಿದನೂರಿನಲ್ಲಿಯೇ ರಾಜ್ಯಭಾರ ಮಾಡುತ್ತಿದ್ದಾಳೆ. ರಾಜವೈಭವವೆಲ್ಲವೂ ಅಲ್ಲಿದೆ. ನಗರದಲ್ಲಿ ಯಾವ ಆಟ್ಟಹಾಸವೂ ಇಲ್ಲ. ಅರಮನೆಯ ಹೊರಬಾಗಿಲಿನಲ್ಲಿ ಪಹರೆ, ಚಾವಡಿ, ಎಲ್ಲಾ ಅರಮನೆಯ ಐಶಕ್ಕಿಗೆ ತಕ್ಕಂತೆ ಇದೆ. ಒಳಗಡೆ ನಾಲ್ಕಾರು ಪರಿಜನರಿಗಿಂತಲೂ ಹೆಚ್ಚಾಗಿಲ್ಲ. ಅವರು ಬ್ರಾಹ್ಮಣರು. ಎಲ್ಲರೂ ಮಂತ್ರಿ ರಾಮಕೃಷ್ಣನಿಂದ ನಿಯುಕ್ತರಾದವರು. ಆ ಅರಮನೆಗೆ

ಭೈರವಿ, ಬೃಂದೆಯರೇ, ಯಜಮಾನಿಯರು. ನಮ್ಮ ಕಥೆಗೆ ಮುಖ್ಯ ಕ್ಷೇತ್ರವು ಬಿದನೂರು. ನಗರದ ಅರಮನೆಯು ಪ್ರಧಾನ ಕ್ಷೇತ್ರವಲ್ಲ. ಉಪಕಥೆಯಲ್ಲಿ ಕಥಿತವಾದ ಒಂದು ಭಾಗ ಮಾತ್ರ. ಅದನ್ನು ವರ್ಣಿಸುವುದರಿಂದ ನಮ್ಮ ಕಥೆಗೇನೂ ಹೆಚ್ಚು ಸಂಬಂಧವಿಲ್ಲ.

ಬಿದನೂರಿನ ಅರಮನೆಗೆ ಆ ವಿವಾಹದ ಸಮಾಚಾರವು ತಲುಪಿತು. ರಾಣಿಯು ಆಶ್ಚರ್ಯಮಗ್ನಳಾದಳು. ಯುವರಾಜನ ವಿವಾಹದಲ್ಲಿ ರಾಣಿಯು ಅಪ್ರಸನ್ನಳಾಗಿದ್ದಳೆಂದು ಹೇಳಲಾಗದು. ಯಾವುದಾದರೂ ದೊಡ್ಡ ವಂಶದಲ್ಲಿ ಹೆಣ್ಣು ತಂದು ಯುವರಾಜನಿಗೆ ಮದುವೆ ಮಾಡಬೇಕೆಂದೇ ರಾಣಿಗೆ ಅಪೇಕ್ಷೆಯಿದ್ದಿತು. ನಗರದ ರಾಜವೈಭವಕ್ಕೆ ತಕ್ಕಂತೆ ಅಟ್ಟಹಾಸದಿಂದ ಯುವರಾಜನ ವಿವಾಹವನ್ನು ನೆರವೇರಿಸಿ ತನ್ನ ಔದಾರ್ಯವನ್ನು ತೋರಿಸಬೇಕೆಂದು ರಾಣಿಯು ಬಗೆದಿದ್ದಳು. ಈ ವಿವಾಹದ ಸಮಾಚಾರವನ್ನು ಕೇಳಿ ರಾಣಿಯು ಚಿಂತಿಸತೊಡಗಿದಳು. ವಿವಾಹವು ಆಡಂಬರವಿಲ್ಲದೇ ಭವಾನೀರಾಣಿಯ ಗೃಹದಲ್ಲಿ ನೆರವೇರಿಸಲ್ಪಟ್ಟಿತು. ಬಡಸಂಸಾರಿಗಳ ವಿವಾಹಕ್ಕಿಂತಲೂ ನಿರಾಡಂಬರವಾಗಿ ವಿವಾಹವಾಯಿತು. ಭವಾನೀರಾಣಿಯಿಂದ ಪಾಲಿತಳಾಗಿದ್ದ ಅನಾಥ ಬಾಲಿಕೆಯು ಯುವರಾಜನ ರಾಣಿ. ಇದರಲ್ಲಿ ಏನೋ ಐತಿಹ್ಯವಿದೆ. ಈ ನಗರದ ರಾಜ್ಯದಲ್ಲಿ ಯಾವುದೋ ಒಂದು ಬಿರುಗಾಳಿಯು ಏಳುತ್ತಿರುವಂತಿದೆ. ಯುವರಾಜನು ಎಲ್ಲಿದ್ದನೋ ಎಲ್ಲಿಂದ ಬಂದನೋ ಯಾರೂ ಅರಿಯರು. ನಗರದ ರಾಜ್ಯಕ್ಕೆ ಏನಾದರೂ ಆಪತ್ತು ಸಂಭವಿಸುವುದೋ ಏನೋ ಎಂದು ನನ್ನ ಮನವು ತಲ್ಲಣಿಸುತ್ತಿದೆ. ನನ್ನ ಮೇಲೆಯೇ ಪಿತೂರಿಯು ನಡೆಯುತ್ತಿದ್ದರೂ ನಡೆಯುತ್ತಿರಬಹುದು. ನಾನು ಈ ರಾಣಿಗಿರಿಯ ಅಟ್ಟಹಾಸಗಳಿಗೂ ಸುಖಭೋಗಗಳಿಗೂ ಮರುಳಾಗಿ ಕುಳಿತಿಲ್ಲ. ಇಂದೇ ಮರಣವು ಸಂಭವಿಸುವುದಾದರೂ ಸಂತೋಷದಿಂದ ಸಿದ್ಧಳಾಗಿದ್ದೇನೆ. ಆದರೆ ರಾಜಕೀಯವು ಬೇರೆಯಾಗಿದೆ. ನಗರದಲ್ಲಿ ವಿರೋಧಾನಲವೆದ್ದರೆ, ಪರರಾಜರಿಗೆ ಆಸ್ಪದವಾಗುತ್ತದೆ. ಈ ರಾಜ್ಯದಲ್ಲಿಯೇ ಅರಮನೆಯಲ್ಲಿ ಪಿತೂರಿಯು

ನಡೆಯುತ್ತಿದ್ದರೆ ಸ್ವಾರ್ಥಪರರಾದವರಿಗೆ ಒಳ್ಳೆಯ ಸಂಚು ಸಿಕ್ಕಿದಂತಾಗುತ್ತದೆ. ಹೇಗಾದರೂ ನಾನು ಜಾಗರೂಕಳಾಗಿರಬೇಕು. ವಂಶ ಪಾರಂಪರ್ಯವಾಗಿ ಈ ರಾಜ್ಯದ ಅಧಿಕಾರ ದಂಡವನ್ನು ಸ್ವೀಕರಿಸಿರುವ ಮಹಾಮಂತ್ರಿ ರಾಮಕೃಷ್ಣನು ವಿರುದ್ಧಾಚರಣೆಯಲ್ಲಿ ಎಸಗುತ್ತಿರುವನೆಂದು ಹೇಗೆ ನಂಬಲಿ? ಈ ಸಂಚುಗಳೆಲ್ಲಾ ಅವನ ಬುದ್ಧಿಗೆ ಗೋಚರವಾಗುತ್ತಿಲ್ಲವೆಂದು ಹೇಗೆ ಬಗೆಯಲಿ? ಈ ಭವಾನೀರಾಣಿಯು ನಿಜವಾದ ಸನ್ಯಾಸಿನಿಯೆಂದು ನಾನು ಒಪ್ಪುವುದೇ ಇಲ್ಲ. ಅವಳು ಎಂಥಾ ಮಹಾನುಭಾವಳಾದರೂ ಅವಳಾರೆಂದು ತಿಳಿಯದೇ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಈ ಅರಮನೆಯಲ್ಲಿ ಯಾರು ನನ್ನವರು? ಈ ರಾಜ್ಯದಲ್ಲಿ ಯಾರು ನನ್ನವರು? ಭವಾನೀರಾಣಿಯು ನನ್ನ ಶತ್ರುವಾದರೆ, ಮಹಾಮಂತ್ರಿಯು ನನ್ನಲ್ಲಿ ಆಗ್ರಹಗೊಂಡಿದ್ದರೆ, ಈ ಪರಿಜನರೆಲ್ಲರೂ ಅವರ ಕಡೆಯವರು. ನನಗೆ ಇರಲು ಈ ಜಗತ್ತಿನಲ್ಲಿ ಸ್ಥಳವು ಎಲ್ಲಿದೆ? ನಾನು ರಾಣಿಯೆಂದರೆ ಎಂತಹ ರಾಣಿಗಿರಿ? ಇದೆಲ್ಲಾ ವಿಚಿತ್ರ ವ್ಯಾಪಾರವಾಗಿದೆ. ನಾನು ಇದರ ಪರಿಶೋಧನೆಯನ್ನು ಮಾಡಲೇಬೇಕು—ಹೀಗೆಂದು ಚಿಂತಿಸುತ್ತಿದ್ದಳು.

---

## ೧೬

## ಕಾಮಾಂಧತೆಯ ವಿಷಚಕ್ರ

ಚೆಲುವಮ್ಮಣ್ಣಿಯು ಅಸಾಧಾರಣ ವ್ಯಕ್ತಿ. ಅವಳ ಮನೋಭಾವವು ವಿಚಿತ್ರವಾದುದು. ಅವಳಿಗೆ ರಾಣಿಗಿರಿಯೆಂಬುದು ಒಂದು ಹೆಮ್ಮೆ. ಆ ರಾಣಿಪದವಿಯ ಲೋಭಕ್ಕೊಳಗಾದ ಚೆಲುವಮ್ಮಣ್ಣಿಗೆ ಎಷ್ಟು ಕಷ್ಟಗಳನ್ನಾದರೂ ಎದುರಿಸಬಲ್ಲ ಧೈರ್ಯಸ್ಥೈರ್ಯಗಳು. ಒಂದು ಕಡೆ ಮೈಸೂರಿನ ಹೈದರಲ್ಲೀಖಾನನ ಪ್ರಚಂಡ ಪರಾಕ್ರಮ. ಮತ್ತೊಂದು ಕಡೆ ಯುವರಾಜ ಚೆನ್ನಬಸಪ್ಪನಾಯಕ, ಮಹಾಮಂತ್ರಿ ರಾಮಕೃಷ್ಣ

ಇವರುಗಳ ಪಿತೂರಿ, ಭವಾನೀರಾಣಿಯ ಪ್ರಭಾವ. ಇವೆಲ್ಲವೂ ನಗರದ ರಾಣಿಗೆ ಮನೋವ್ಯಥೆಯನ್ನುಂಟುಮಾಡುತ್ತಿದ್ದರೂ ರಾಣಿಯು ಕುಗ್ಗಿದ ಮನಸ್ಸುಳ್ಳವಳಾಗಿರಲಿಲ್ಲ. ಅವಳ ವಿಲಾಸ ವೈಭವಗಳಲ್ಲಿ ಯಾವು ದಕ್ಕೂ ಕೊರತೆಯಿರಲಿಲ್ಲ. ಜಗದೀಶನು ತನಗೆ ಬೇಕಾದುದನ್ನು ಸೃಜಿಸಿ, ಅವರನ್ನು ಈ ಲೋಕದಲ್ಲಿ ಆಟವಾಡಿಸಿ ಬೇಕಾದಾಗ ಮೃತ್ಯು ರೂಪದಲ್ಲಿ ಲಯಮಾಡುವಂತೆ ರಾಣಿಯು ತನ್ನ ಭೋಗವಿಲಾಸಗಳಿಗೆ ಬೇಕಾದುದನ್ನು ಸೃಷ್ಟಿಸಬಲ್ಲವಳಾಗಿದ್ದಳು. ಅವಳ ಪ್ರೇಮ ದೃಷ್ಟಿಯು ಯಾರಮೇಲೆ ಬಿದ್ದರೆ ಅವರು ಭಾಗ್ಯಶಾಲಿಗಳಾಗುತ್ತಿದ್ದರು. ಪ್ರೇಮ ಭಂಗವಾದರೆ ರಾಣಿಯ ಕಿರುನಗೆಯೇ ವಿಷವಾಗಿ ಪರಿಣಮಿಸಿ ಅವರು ಈ ಲೋಕದಿಂದ ಮಾಯವಾಗುತ್ತಿದ್ದರು. ನಗರದರಾಣಿಯು ತನ್ನ ಸುಖಭೋಗಗಳಲ್ಲಿ ಕೊಂಚವೂ ಅತಿರೇಕ ವ್ಯತಿರೇಕಗಳಿಲ್ಲವೆಂದು ಭಾವಿಸಿದ್ದಳು. ಭಗವಂತನು ಈ ಜನ್ಮವಿತ್ತಿರುವುದು ಸುಖಕ್ಕಾಗಿ. ಈ ರೂಪಲಾವಣ್ಯಗಳನ್ನು ಅನುಗ್ರಹಿಸಿರುವುದು ಸುಖಕ್ಕಾಗಿ. ಈ ಐಶ್ವರ್ಯ ವಿತ್ತಿರುವುದು ಸುಖಕ್ಕಾಗಿ. ಈ ಕಲೆಗಳನ್ನು ಅನುಗ್ರಹಿಸಿರುವುದು ಪ್ರೇಮಾರಾಧನೆಗಾಗಿ. ಮಾತ್ಸರ್ಯಪೂರಿತರಾದ ಜನರು ನಿಂದಿಸುತ್ತಾರೆ ಎಂದು ರಾಣಿಯು ಭಾವಿಸುತ್ತಿದ್ದಳು.

ಅವಳ ದೈವಭಕ್ತಿಯೂ ಅಂತಹುದೇ ಆಗಿದ್ದಿತು. ದೈವಭಕ್ತಿ, ದಾನಧರ್ಮ, ಬಡಬಗ್ಗರ ರಕ್ಷಣೆ ಈ ಎಲ್ಲ ಸದ್ಗುಣಗಳಲ್ಲಿಯೂ ನಗರದ ಸಿಂಹಾಸನಕ್ಕೇರಿದ ಯಾವ ರಾಜರಿಗೂ ನಗರದ ರಾಣಿಯು ಕಡಮೆ ಯಾಗಿರಲಿಲ್ಲ. ಅವಳ ಐಶ್ವರ್ಯವು ಅಪಾರವಾದುದು. ಅರಮನೆಯಲ್ಲಿ ನೆಲಮಾಳಿಗೆಯು ತುಂಬಾ ಸ್ವರ್ಣಮುದ್ರೆಗಳು ತುಂಬಿದ್ದವು. ಹಿಂದೂಸ್ಥಾನದಲ್ಲಿ ಮತ್ತೆಲ್ಲಿಯೂ ಇಷ್ಟು ಸ್ವರ್ಣದ ನಾಣ್ಯಗಳಿರಲಿಲ್ಲವೆಂದು ಚರಿತ್ರೆಯಲ್ಲಿ ಪ್ರಸಿದ್ಧಿಯಾಗಿದೆ. ಆ ಸ್ವರ್ಣವು ಹೇಗೆ ಶೇಖರಿಸಲ್ಪಟ್ಟ ತೆಂಬುದಕ್ಕೆ ಎಷ್ಟೋ ಕಥೆಗಳಿವೆ. ವಿಜಯನಗರದಲ್ಲಿ ವಿದ್ಯಾರಣ್ಯರಿಂದ ಶೇಖರಿಸಲ್ಪಟ್ಟಿದ್ದ ಸ್ವರ್ಣಭಂಡಾರವೇ ಇಲ್ಲಿಗೆ ಬಂದಿದೆಯೆಂದು ಒಂದು ಐತಿಹ್ಯ. ಸದಾಶಿವರಾಯರಿಗೆ ಭವಾನಿಯು ಪ್ರತ್ಯಕ್ಷಳಾಗಿ ಸ್ವರ್ಣ

ವರ್ಷವನ್ನು ಕರೆಸಿದಳೆಂದು ಒಂದು ಕಥೆ. ಶಿವಪ್ಪನಾಯಕರು ಮಹಾರಾಷ್ಟ್ರದಲ್ಲಿ ಹೋಗಿ ಶಿವಾಜೀಮಹಾರಾಜರು ಗುಪ್ತವಾಗಿಟ್ಟದ್ದ ಸ್ವರ್ಣಭಂಡಾರವನ್ನು ನಗರಕ್ಕೆ ತಂದರೆಂದು ಒಂದು ಸಾಹಸದ ಕಥೆ. ಹೀಗೆ ಎಷ್ಟೋ ಕಥೆಗಳಿವೆ. ಆದರೆ ಆ ಸ್ವರ್ಣನಿಧಿಯನ್ನು ನೋಡಿದರೆ ಇವೆಲ್ಲ ಕಥೆಗಳೂ ಒಪ್ಪುವಂತಿದೆ. ಅಷ್ಟು ಅತುಲ ಸ್ವರ್ಣಭಂಡಾರಕ್ಕೆ ನಗರದ ರಾಣಿಯು ಸ್ವಾಮಿನಿ. ಚೆಲುವಮ್ಮಣ್ಣಿಗೆ ಆ ಸ್ವರ್ಣದ ಮೋಹ. ಆ ಐಶ್ವರ್ಯಮದ, ಯೌವನ ಪ್ರಾಗಲ್ಭ್ಯ, ರೂಪಲಾವಣ್ಯಗಳ ಹೆಮ್ಮೆ, ಇವೆಲ್ಲವೂ ಏಕತ್ರಸೇರಿ ಆ ರಾಣಿಯನ್ನು ಭೋಗಭಾಗ್ಯದಲ್ಲಿ ಮುಳುಗಿಸಿದ್ದವು. ರಾಣಿಯು ಆಗಾಗ ಯುವರಾಜರ ಚಿಂತೆಯನ್ನು ಮಾಡುವಳು. ಮಹಾಮಂತ್ರಿಯ ಭೀತಿಯನ್ನು ಹಚ್ಚಿಕೊಳ್ಳುವಳು. ಭವಾನೀರಾಣಿಯ ಕೀರ್ತಿಯಲ್ಲಿ ಮಾತ್ಸರ್ಯವನ್ನು ತಳೆಯುವಳು. ಉತ್ತರಕ್ಷಣದಲ್ಲಿಯೇ ಅವೆಲ್ಲವನ್ನೂ ತೊರೆದುಬಿಟ್ಟು ತನ್ನ ಮಹದೈಶ್ವರ್ಯ, ಸುಖಭೋಗಗಳಲ್ಲಿ ಮಗ್ನಳಾಗಿ ಆನಂದಪರವಶಳಾಗುವಳು. ರಾಣಿಯು ನಗರದ ರಾಜ್ಯದಲ್ಲಿ ಎಲ್ಲೆಲ್ಲಿ ಪ್ರಕೃತಿ ಸೌಂದರ್ಯವಿದೆಯೋ ಅಲ್ಲೆಲ್ಲಾ ವಿಹಾರಸ್ಥಾನಗಳನ್ನು ಕಲ್ಪಿಸಿದ್ದಳು. ಇಂತಹ ವಿಹಾರಸ್ಥಾನಗಳು ಎಲ್ಲೆಲ್ಲಿಯೂ ಇರುತ್ತಿದ್ದವು. ಚೆಲುವಮ್ಮಣ್ಣಿಯು ತನ್ನ ಪ್ರೀತಿಭಾಜನರೊಡನೆ ಈ ವಿಹಾರಸ್ಥಾನಗಳಲ್ಲೆಲ್ಲಾ ಸ್ವಚ್ಛಂದವಾಗಿ ವಿಹರಿಸುತ್ತಿದ್ದರೂ, ರಾಜಕಾರ್ಯಗಳಲ್ಲಿ ಪ್ರಮತ್ತಳಾಗಿರಲಿಲ್ಲ. ರಾಜ್ಯದ ಬಿಗಿಯು ತಪ್ಪಿರಲಿಲ್ಲ. ನಗರದರಾಣಿಯ ರಾಜ್ಯವೈಖರಿಯಿಂದ ಹೀಗಿತ್ತೆಂದು ಹೇಳಿದರೂ ಹೇಳಬಹುದು. ರಾಮಕೃಷ್ಣನ ಪ್ರಭಾವದಿಂದ ನಗರದ ರಾಜ್ಯದ ಬಿಕ್ಕಟ್ಟು ಸಡಿಲವಾಗದೇ ಇದೆಯೆಂದು ದೇಶವಿದೇಶಗಳಲ್ಲೆಲ್ಲಾ ಖ್ಯಾತಿಯಿತ್ತು. ನಗರದ ರಾಣಿಯು ಭವಾನೀರಾಣಿಯ ಗುಣಗಳನ್ನೂ ದಾನಧರ್ಮಗಳನ್ನೂ ಬಹಳವಾಗಿ ಕೇಳಿದ್ದಳು.

ಯಾವ ಕಡೆಯಿಂದ ಭವಾನೀರಾಣಿಯ ಸಮಾಚಾರವು ಕೇಳಿಬಂದರೂ ಆದು ಗೌರವಾಸ್ಪದವಾದುದಾಗಿಯೇ ಇರುತ್ತಿದ್ದಿತು. ನಗರದ ರಾಜ್ಯದಲ್ಲಿ ಭವಾನೀರಾಣಿಯ ಮೇಲೆ ದೋಷಾರೋಪಣೆ ಮಾಡುವ

ಪಾಪಿಯು ಒಬ್ಬನಾದರೂ ಇರಲಿಲ್ಲ. ನಗರದ ರಾಣಿಯು ಗುಣಗ್ರಹಣ ಮಾಡುವಂಥಾ ಉದಾರ ಸ್ವಭಾವದವಳು. ರಾಣಿಗೆ ಭವಾನೀರಾಣಿಯ ದರ್ಶನವನ್ನು ಮಾಡಬೇಕೆಂದು ಎಷ್ಟೋ ದಿವಸಗಳಿಂದ ಬಹಳ ಆಸೆ ಇದ್ದಿತು. ಆದರೆ ಮನಸ್ಸಿನಲ್ಲಿ ಒಂದೇ ಒಂದು ಕಳಂಕ. ನಗರದ ರಾಣಿಯ ಮೇಲೆ ಅಸಮಾಧಾನಗೊಂಡವರೆಲ್ಲಾ ಒಂದಲ್ಲ ಒಂದು ವಿಧದಲ್ಲಿ ಭವಾನೀರಾಣಿಗೆ ಸಂಬಂಧಪಟ್ಟವರಾಗಿರುತ್ತಾರೆ. ಆದರೆ ಭವಾನೀ ರಾಣಿಯು ತನಗೆ ಪ್ರತಿಕಕ್ಷಿಯೇನು ಎಂದು ಚಿಂತಿಸುತ್ತಾಳೆ. ಎತ್ತಕಡೆ ಯಿಂದಲೂ, ಯಾವ ಸಂದರ್ಭದಲ್ಲಿಯೂ, ಭವಾನೀರಾಣಿಯು ರಾಜ್ಯ ಭಾರದ ಗೋಜಿಗೆ ಹೋಗದೇ ಇದ್ದುದು ನಗರದ ರಾಣಿಗೆ ಆಶ್ಚರ್ಯ ವನ್ನುಂಟುಮಾಡುತ್ತಿತ್ತು. ಯುವರಾಜನ ಮದುವೆಯಾದಮೇಲಂತೂ ರಾಣಿಯ ಆಶ್ಚರ್ಯವು ಇಮ್ಮಡಿಯಾಯಿತು. ಈ ಭವಾನೀರಾಣಿಯ ದಾನಧರ್ಮಗಳು ಆಶ್ಚರ್ಯಜನಕವಾಗಿದ್ದವು. ಇಷ್ಟು ಐಶ್ವರ್ಯವು ಭವಾನೀ ರಾಣಿಗೆ ಎಲ್ಲಿಯದು? ಅವಳ ತಂದೆಗೆ ಚಿನ್ನವನ್ನು ಮಾಡುವುದಕ್ಕೆ ಬರುತ್ತದೆಂದು ಕೇಳಿದ್ದಳು. ಆ ತಂದೆಯಾರು? ಆತನೆಲ್ಲಿರುವನು? ಈ ನಗರದ ರಾಜ್ಯದಲ್ಲಿ ಈ ಭವಾನೀರಾಣಿಯಿರಲು ಕಾರಣವೇನು? ಈ ರಾಣಿಯೆಂಬ ಹೆಸರೇನು? ಹೇಗೂ ಇವಳು ಈ ನಗರದ ರಾಜ ಮನೆತನಕ್ಕೆ ಸಂಬಂಧಿಸಿದವಳೇ ಆಗಿರಬೇಕು. ನಗರದರಾಣಿಗೆ ಭವಾನೀರಾಣಿಯ ತಂದೆಯು ಚಿನ್ನವನ್ನು ಮಾಡುತ್ತಾನೆಂಬ ವಾರ್ತೆ ಯನ್ನು ನಂಬಲು ಇಷ್ಟವಿರಲಿಲ್ಲ. ಚಿನ್ನವನ್ನು ಮಾಡುವುದೆಂದರೇನು? ಭವಾನೀರಾಣಿಯಲ್ಲಿರುವ ಧನಕನಕಗಳೆಲ್ಲವೂ ಈ ನಗರದ ಅರಮನೆ ಯಿಂದಲೇ ಹೋಗಿರಬೇಕು. ಇದರಲ್ಲಿ ಏನೋ ಒಂದು ಪ್ರಗಾಢವಾದ ರಹಸ್ಯವಿರಬೇಕು. ಆ ರಹಸ್ಯವನ್ನು ಇಷ್ಟೊಂದು ಭದ್ರವಾಗಿ ಕಾಪಾಡಲು ಕಾರಣವೇನು? ಈ ಐಶ್ವರ್ಯ, ಈ ಯುವರಾಜನಮೇಲಿನ ಪ್ರೀತಿ, ಮಂತ್ರಿಗೆ ಭವಾನೀರಾಣಿಯಲ್ಲಿರುವ ಅಭಿಮಾನ, ಅವಳ ಹೆಸರಿಗೆ ಸೇರಿ ಕೊಂಡಿರುವ "ರಾಣಿ" ಎಂಬ ಉಪನಾಮ, ಇವೆಲ್ಲವೂ ಆಶ್ಚರ್ಯಜನಕ ವಾಗಿವೆ. ಈ ರಹಸ್ಯವು ಮಹಾಮಂತ್ರಿಗೂ, ಮಲ್ಲಿಕಾರ್ಜುನಕ್ಷೇತ್ರದ

ಅಭಿರಾಮಸ್ವಾಮಿಗೂ ತಿಳಿದಿರಲೇಬೇಕು. ಇವೆಲ್ಲವನ್ನೂ ಒಂದಕ್ಕೊಂದು ಲೆಕ್ಕಹಾಕಿದರೆ ಒಂದಲ್ಲ ಒಂದು ದಿನ ಭವಾನೀರಾಣಿಯೇ ನಗರಕ್ಕೆ ರಾಣಿಯಾಗಬಹುದು. ನಾನು ಸರ್ವರಿಂದಲೂ ವಂಚಿತಳಾಗಿ ಎಲ್ಲಿಯೋ ಪಾತಾಳದಲ್ಲಿ ಬಿದ್ದುಹೋಗಬಹುದು—ಎಂದು ಚೆಲುವಮ್ಮಣ್ಣಿಯು ಚಿಂತಿಸುತ್ತಾಳೆ. ಭವಾನೀರಾಣಿಯು ಸಧವೆಯೋ ವಿಧವೆಯೋ ಎಂದು ಯೋಚಿಸುತ್ತಾಳೆ. ಬ್ರಾಹ್ಮಣಿಯೋ, ವೀರಶೈವಕುಲದವಳೋ, ರಾಜ ಕುಲದವಳೋ ಎಂದು ಊಹಿಸುತ್ತಾಳೆ. 'ಇರಲಿ! ಈ ರಾಣಿಯ ನಿಜ ಸ್ವರೂಪವನ್ನು ಶೋಧನೆಮಾಡದೇ ಇರುವುದು ರಾಜನೀತಿಯಲ್ಲ' ಎಂದು ಭಾವಿಸುತ್ತಾಳೆ. ತನ್ನ ಆಪ್ತರಾದ ವಿರೂಪಾಕ್ಷಯ್ಯ, ಮಾಧವ ರಾಯ, ರಾಮರಾಯ ಮುಂತಾದ ರಾಜಕಾರಣಪಟುಗಳಲ್ಲಿ ಆಗಾಗ ಈ ಭವಾನೀರಾಣಿಯ ವಿಚಾರವನ್ನೆತ್ತಿ ಆ ರಾಣಿಯ ನಿಜತ್ವವನ್ನು ಶೋಧನೆಮಾಡಬೇಕೆಂದು ಹೇಳಿದ್ದಾಳೆ. ಚೆಲುವಮ್ಮಣ್ಣಿಯಿಂದ ಆಜ್ಞಪ್ತರಾದ ಅನೇಕರು ಅನೇಕವಿಧವಾಗಿ ಭವಾನೀರಾಣಿಯ ಶೋಧನೆ ಯಲ್ಲಿ ಹೊರಟಿದ್ದಾರೆ.

ನಗರದರಾಣಿ ಚೆಲುವಮ್ಮಣ್ಣಿಯು ಬಿದನೂರಿನ ರಾಜಕಾರಣ ಗಳಿಂದ ಬೇಸತ್ತು ವಿಶ್ರಾಂತಿಗಾಗಿ ಕಬ್ಬಾಳದುರ್ಗಕ್ಕೆ ಹೋಗಿದ್ದಾಳೆ. ಅವಳ ಸಣ್ಣ ಪರಿವಾರವೂ ಅಲ್ಲಿಗೆ ಹೋಗಿದೆ. ರಾಣಿಯು ಏರ್ಪಡಿಸಿದ್ದ ವಿಹಾರಸ್ಥಾನಗಳಲ್ಲೆಲ್ಲಾ ಕಬ್ಬಾಳದುರ್ಗವು ಅತ್ಯಂತ ಮುಖ್ಯವಾದು ದೆಂದು ಹೇಳಬಹುದು. ಇದು ಅರಣ್ಯ ಮಧ್ಯದಲ್ಲಿದೆ. ಇದರ ಸಮೀಪದಲ್ಲಿ ಯಾವ ನಗರಗಳೂ ಇಲ್ಲ. ಜನರ ಗದ್ದಲವಿಲ್ಲ. ರಾಜ್ಯಾಧಿಕಾರಿಗಳ ಓಡಾಟವಿಲ್ಲ. ಬಡಬಗ್ಗರ, ದೀನದರಿದ್ರರ ಹಾವಳಿಯಿಲ್ಲ. ಆ ಪ್ರಶಾಂತ ಸ್ಥಳವು ಯೋಗಿಗಳಿಗೂ, ಭೋಗಿಗಳಿಗೂ ಅರ್ಹವಾಗಿದೆ. ಈಗ ಅದು ಸುಂದರವಾದ ಭೋಗಮಂದಿರವಾಗಿದೆ. ನಗರದ ರಾಣಿಯು ರಚಿಸಿರುವ ಸ್ವರ್ಗವೆಂದು ಕರೆದರೂ ಒಪ್ಪುವಂತಿದೆ.

ವಸಂತಋತುವಿನ ಸಂಧ್ಯಾಕಾಲ. ಸೂರ್ಯದೇವನು ಪಶ್ಚಿಮ ಸಮುದ್ರದಲ್ಲಿ ತೇಲಾಡುತ್ತಾ ಕ್ಷಣಕ್ಷಣಕ್ಕೂ ಸಮುದ್ರದೊಳಗೆ

ಪ್ರವೇಶಿಸುತ್ತಿದ್ದಾನೆ. ಸೂರ್ಯಕಿರಣಗಳ ಸ್ವರ್ಣಚ್ಛಾಯೆಯು ಭೂವ್ಯೋಮಾಕಾಶಗಳನ್ನು ವ್ಯಾಪಿಸಿದೆ. ಕಬ್ಬಾಳದುರ್ಗದ ಅರಮನೆಯು ಒಂದು ರಮ್ಯವಾದ ಸನ್ನಿವೇಶದಲ್ಲಿ ನಿರ್ಮಿತವಾಗಿದೆ. ಅರಮನೆಯು ಚಿಕ್ಕದಾದರೂ ಒಳಗಿನ ಕಟ್ಟಡವು ಪ್ರಶಸ್ತವಾಗಿದೆ. ಆ ಅರಮನೆಯ ಅಂತಃಪುರವಂತೂ ಅಮೂಲ್ಯವಾದ ಅಲಂಕಾರಗಳಿಂದ ಪರಿಶೋಭಿತವಾಗಿದೆ. ಆ ಅಂತಃಪುರವನ್ನು ನೋಡಿದರೆ ಪುಷ್ಪಕವಿಮಾನದಂತೆ ಕಂಗೊಳಿಸುತ್ತದೆ. ಮೇಲುಗಡೆ ಬಿಸಲುಮಹಡಿಯಲ್ಲಿ ಅಮೃತಶಿಲೆಯ ಮಂಟಪವು ಕಟ್ಟಲ್ಪಟ್ಟಿದೆ. ಆ ಮಂಟಪಕ್ಕೆ ಚಿನ್ನದಿಂದ ಕೆತ್ತಲ್ಪಟ್ಟ ಸ್ತಂಭಗಳನ್ನು ನಿಲ್ಲಿಸಿ ಮೇಲ್ಗಡೆ ನಕಾಶೆಗಳನ್ನು ಮಾಡಿದ ಬೆಳ್ಳಿಯ ವಿತಾನವು ನಿರ್ಮಿತವಾಗಿದೆ. ಅದರ ಮೇಲೆ ನಾಲ್ಕು ಕಡೆಯೂ ಸಣ್ಣ ಸಣ್ಣ ಸ್ವರ್ಣಕಲಶಗಳು. ಮೇಲುಗಡೆ ದೊಡ್ಡದಾದ ಸ್ವರ್ಣದಿಂದ ನಿರ್ಮಿತವಾದ ನವಿಲು. ಮಂಟಪದೊಳಗೆ ಶ್ವೇತವರ್ಣದ ರತ್ನಗಂಬಳಿಯು ಹಾಸಲ್ಪಟ್ಟಿದೆ. ಅದರಮೇಲೆ ಕೆಂಪುಬಣ್ಣದ ಹಂಸತೂಲಿಕೆಯ ಲೋಡುದಿಂಬುಗಳು ಅಲಂಕೃತವಾಗಿವೆ. ಸುತ್ತಲೂ ತೆಳುವಾದ ರೇಶ್ಮೆಯ ಪರದೆಗಳನ್ನು ಎತ್ತಿಕಟ್ಟಿದ್ದಾರೆ. ಪಶ್ಚಿಮದ ಕಡೆಯಿಂದ ಮಂದಮಾರುತವು ಬೀಸುತ್ತಿದೆ. ಆದರೂ ಬಿಸಲಿನ ಬೇಗೆಯು ತಣ್ಣಗಾಗಿಲ್ಲ. ಆ ಮಂಟಪದಲ್ಲಿ ಪ್ರಣಯಿಗಳಿಬ್ಬರು ಕುಳಿತಿದ್ದಾರೆ. ಚೆಲುವಮ್ಮಣ್ಣಿ ಮತ್ತು ವಿರೂಪಾಕ್ಷರುಗಳೇ ಇವರೆಂದು ವಾಚಕರು ಈಗಾಗಲೇ ಅರಿತಿದ್ದಾರೆ. ಈಗ ಇವರ ಪ್ರಣಯವು ಭಯಭೀತಿಗಳಿಂದ ಕೂಡಿದುದಲ್ಲ. ಅವರುಗಳ ಭೋಗಭಾಗ್ಯಗಳಿಗೆ ಯಾರ ಆತಂಕವೂ ಇಲ್ಲ. ಲೋಕದ ಭಯವು ಅವರಿಗಿಲ್ಲ. ಗುರುಹಿರಿಯರ ಭೀತಿಯು ಸುಳಿವಿಲ್ಲ. ಆದರೂ ಅದರಲ್ಲಿ ಏನೋ ಒಂದು ವಿಧವಾದ ಕೊರತೆಯಿದೆ. ಬಹಿರಂಗವಾಗಿ ಅವರುಗಳು ಪತಿಪತ್ನಿಯರೆಂದು ಅಂಕಿತರಾಗಿಲ್ಲ. ಅವರಿಗಿರುವ ರಾಜ್ಯಾಧಿಕಾರ, ಅಪಾರವಾದ ಸಂಪತ್ತು, ಮನ್ನಣೆ, ಇವುಗಳೆಲ್ಲವನ್ನೂ ಅನುಭವಿಸುತ್ತಾ ರಾಜರಾಣಿಯರೆಂದು ಹೆಮ್ಮೆಪಡುವಂತಿಲ್ಲ. ಯಾರೋ ಅಜ್ಞಾತ ಕುಲಗೋತ್ರರಾಗಿ ಎಲ್ಲಿಯೋ ವನತಲದಲ್ಲಿ, ಗುಡಿಸಿಲಿನಲ್ಲಿ,

ಮರದಡಿಯಲ್ಲಿ, ಕಾಲಕಳೆಯುತ್ತಾ ಪ್ರೇಮಪೂಜೆಯನ್ನು ಸಾಂಗಗೊಳಿಸುವ ಸುಖವು ಅವರಿಗಿಲ್ಲ. ಈ ಲೋಕವೇ ಅಂತಹುದು. ಎಲ್ಲದರಲ್ಲಿಯೂ ಯಾವುದೋ ಅಪರಿಪೂರ್ಣತೆ ಇದೆ. ಆ ಅಪರಿಪೂರ್ಣತೆಯಲ್ಲಿಯೂ ಒಂದು ವಿಧವಾದ ಅನಿರ್ವಚನೀಯವಾದ ಸುಖವಿದೆ.

ಚೆಲುವಮ್ಮಣ್ಣಿಗೆ ತನ್ನ ರಾಣಿಗಿರಿಯ ಯೋಚನೆ. ತನ್ನ ಪ್ರಜೆಗಳು ತನ್ನನ್ನು ಎಷ್ಟು ಪ್ರೀತಿಸುತ್ತಾರೋ ಅದರ ಶತಾಧಿಕ ವಾತ್ಸಲ್ಯವನ್ನು ತೋರಿ ಆದರ್ಶರಾಣಿಯಾಗಬೇಕೆಂಬ ಆಸೆ. ತನ್ನ ಸಂಪತ್ತೆಲ್ಲವನ್ನೂ ದಾನಧರ್ಮಗಳಲ್ಲಿ ವಿನಿಯೋಗಿಸಿ ಅಹಲ್ಯಾಬಾಯಿಯಂತೆ ಕೀರ್ತಿಯನ್ನಾರ್ಜಿಸಬೇಕೆಂಬ ಸಂಕಲ್ಪ. ಮಹಾಮಂತ್ರಿ ರಾಮಕೃಷ್ಣನು ದಿನದಿನಕ್ಕೆ ಅಪ್ರಸನ್ನನಾಗಿದ್ದಾನೆಂದು ಚಿಂತೆ. ಯುವರಾಜ ಚೆನ್ನಬಸಪ್ಪನಾಯಕನು ದಿನದಿನಕ್ಕೆ ವಿರೋಧವನ್ನೇ ಬೆಳೆಸುತ್ತಿರಬಹುದೆಂಬ ಶಂಕೆ. ಭವಾನೀರಾಣಿಯು ವಿಷಯದಲ್ಲಿ ಪೂಜ್ಯ ಭಾವವಿಟ್ಟದ್ದಾರೆಂದೂ, ಎಂದಾದರೊಂದುದಿನ ಭವಾನೀರಾಣಿಯು ಮನಸ್ಸುಮಾಡಿದರೆ ತನ್ನ ರಾಣಿಗಿರಿಯು ಚೂರುಚೂರಾಗಿ ಹೋಗುವುದೆಂದೂ ಸಂದೇಹ. ಇಂಥಾ ಹೆಮ್ಮೆ, ಆಸೆ, ಭಯ, ಸಂದೇಹ, ಶಂಕೆ ಇವುಗಳಿಂದ ಆಂದೋಳಿತವಾದ ರಾಣಿಯ ಮನಸ್ಸು ಎತ್ತಕಡೆಯೋ ಹರಿಯುತ್ತಿದೆ.

ವಿರೂಪಾಕ್ಷನಿಗೆ ಚಿಂತೆಯಿಲ್ಲದೇ ಇಲ್ಲ. ನಗರದ ರಾಜ್ಯದಲ್ಲಿ ಅವನೊಬ್ಬ ಮಹಾಪುರುಷನೆಂಬುದೇನೋ ನಿಜ. ರಾಣಿಚೆಲುವಮ್ಮಣ್ಣಿಗೆ ತಾನು ಪ್ರಾಣಾಧಿಕನೆಂಬ ಹೆಮ್ಮೆ ಈ ರಾಜ್ಯದಲ್ಲಿ ಯಾರನ್ನೂ ಲಕ್ಷ್ಯ ಮಾಡದಂತಹ ಧನ, ಯೌವನ, ಮದವು ಅವನನ್ನು ಹುಚ್ಚನನ್ನಾಗಿ ಮಾಡಿದೆ. ಮಹಾಮಂತ್ರಿ ರಾಮಕೃಷ್ಣನು ತನ್ನಮೇಲೆ ಆಗ್ರಹಗೊಂಡಿದ್ದಾನೆಂಬುದು ಅವನಿಗೆ ಗೊತ್ತಿದೆ. ಆದರೆ ಮಂತ್ರಿಯು ತನ್ನನ್ನೇನು ಮಾಡಬಲ್ಲನೆಂಬ ಅಲಕ್ಷ್ಯ! ಯುವರಾಜನಿಗೆ ತನ್ನಮೇಲೆ ಗೌರವವಿಲ್ಲವೆಂಬ ಭಾವನೆ. "ಯುವರಾಜನಿಂದ ನನಗಾಗಬೇಕಾದು

ದೇನು ? ಯುವರಾಜನು ಪಟ್ಟಕ್ಕೆ ಬರುವುದಾದರೆ ಅಂದು ನೋಡಿ ಕೊಳ್ಳೋಣ. ಯುವರಾಜನೆಲ್ಲಿ ? ನಗರದ ಸಿಂಹಾಸನವೆಲ್ಲಿ ? ನಗರದ ರಾಣಿಗಿರಿಯು ಚೆಲುವಮ್ಮಣ್ಣಿಗೆ ಇನ್ನೂ ಎಷ್ಟೋ ಕಾಲ ನಡೆಯುತ್ತದೆ." ವಿರೂಪಾಕ್ಷನು ತನ್ನ ಮಹತ್ತನ್ನು ಎಷ್ಟೊಂದು ಹೆಚ್ಚಾಗಿ ಭಾವಿ ಸುತ್ತಾನೋ ಅಷ್ಟೇ ತನ್ನಮೇಲಿರುವ ದೋಷಾರೋಪಣೆಗಳಿಗಾಗಿ, ವಿರೋಧಕ್ಕಾಗಿ ದುಃಖಪಡುತ್ತಾನೆ. ಅವನಿಗೆ ಸ್ನೇಹಿತರೆಂಬುವರು, ವಿಶ್ವಾಸಿಗಳು, ಆದರ ಮಾಡುವವರು, ಈ ಲೋಕದಲ್ಲಿ ಯಾರೂ ಇಲ್ಲ. ಅವನ ಸರ್ವಸ್ವವೂ ಚೆಲುವಮ್ಮಣ್ಣಿಯು ಮಾತ್ರ. ಆಗಾಗ "ಆ ಚೆಲುವಮ್ಮಣ್ಣಿಯ ಪ್ರೇಮವು ಅಚಂಚಲವಾಗಿರುವುದೇ ?" ಎಂಬ ಸಂದೇಹವು ಬರುತ್ತದೆ. ತನ್ನ ಹೆಮ್ಮೆ ಪ್ರೌಢಿಮೆ ಪ್ರತಾಪಗಳನ್ನೆಲ್ಲಾ ಈ ಸಂದೇಹವು ಒಂದೇಬಾರಿಗೆ ಹಾರಿಸಿಕೊಂಡು ಹೋಗಿಬಿಡುತ್ತದೆ. ಇಂತಹ ಸಂತಪ್ತ ಹೃದಯದಿಂದ ಸಣ್ಣ ನಿಟ್ಟುಸುರುಬಿಟ್ಟು ವಿರೂಪಾಕ್ಷನು ಚೆಲುವಮ್ಮಣ್ಣಿಯ ಮುಖವನ್ನು ನೋಡಿದನು. ಆ ಪ್ರಫುಲ್ಲ ಮಂದಹಾಸ ವಿಕಸಿತವದನಾರವಿಂದದಲ್ಲಿ ಆ ಪ್ರೇಮೋನ್ಮತ್ತ ಚಾಂಚಲ್ಯಮಯ ನೇತ್ರಯುಗ್ಮಗಳು ಅವನಮೇಲೆ ಪ್ರೇಮವರ್ಷವನ್ನು ಸುರಿಸುತ್ತಿರುವಂತೆ ಅವನಿಗೆ ಭಾಸವಾಯಿತು. ವಿರೂಪಾಕ್ಷನು ತನ್ನ ಮನಸ್ಸನ್ನು ಮರೆತು ರಾಣಿಯ ಮುಖವನ್ನು ನೋಡಿದನು.

ವಿರೂಪಾಕ್ಷನು ಪ್ರೇಮವಿಹ್ವಲನಾಗಿ ಚೆಲುವಮ್ಮಣ್ಣಿಯ ಕಂಠಾ ಲಿಂಗನಮಾಡಿಕೊಂಡು, ಅವಳ ಕಪೋಲಗಳನ್ನು ಚುಂಬಿಸುತ್ತಾ "ರಾಣಿ, ನಮ್ಮ ಪ್ರೇಮವು ಶಾಶ್ವತವಾದುದೇ ? ನೀನು ಆಮರಣಾಂತ ನನ್ನನ್ನು ಹೀಗೆಯೇ ಪ್ರೀತಿಯಿಂದ ಪುರಸ್ಕರಿಸುವೆಯಾ ? ನಾವಿಬ್ಬರೂ ಅಗಲಿ ಅಂಧಕಾರದಲ್ಲಿ ನಾನು ತೊಳಲುವಂತಹ ದೆಸೆಯು ಬರುವುದಿಲ್ಲ ವೆಂದು ಅಭಯವನ್ನು ಕೊಡುವೆಯಾ ?" ಎಂದು ಕಂಪಿತಸ್ವರದಿಂದ ರಾಣಿಯನ್ನು ಬೇಡಿದನು.

ಚೆಲುವಮ್ಮಣ್ಣಿಯು ನಗುತ್ತಾ "ಪ್ರಿಯನೇ, ಇಷ್ಟೊಂದು ಭಯವೇಕೆ ? ಈ ಜಗತ್ತಿನಲ್ಲಿ ನಿನಗಾಗಿ, ನಿನ್ನ ಆನಂದಕ್ಕಾಗಿ ಏನು

ಬೇಕಾದರೂ ಮಾಡುವೆನು. ಈ ಸೌಧದಿಂದ ನಾವಿಬ್ಬರೂ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಅತಲಪಾತಾಲದಲ್ಲಿ ಬಿದ್ದು ಈ ಪ್ರಾಣಗಳನ್ನು ಪರಿತ್ಯಜಿಸಬೇಕೆಂದರೂ ನಾನು ಸಂತೋಷದಿಂದ ಸಿದ್ಧಳಾಗಿರುವೆನು. ಈ ಶಿಲಾಮಂಟಪದಲ್ಲಿ ಹೀಗೇಯೇ ಕುಳಿತುಕೊಂಡು ನಾವಿಬ್ಬರೂ ಆಕಾಶದಲ್ಲಿ ಹಾರಿ ಹೋಗೋಣವೆಂದರೂ, ನಾನು ಆನಂದದಿಂದ ಸಿದ್ಧಳಾಗಿರುವೆನು. ನನ್ನ ಹೃದಯದಲ್ಲಿ ಮತ್ತಾರಿಗೂ ಸ್ಥಾನವಿಲ್ಲ. ನನ್ನ ಪರಮಪ್ರಿಯವಾದ ಈ ನಗರದ ರಾಜ್ಯವೊಂದು, ನನ್ನ ಪ್ರಣಯವನ್ನು ಸೂರೆಗೊಂಡಿರುವ ನೀನೊಬ್ಬ. ಇವೆರಡೇ ನನ್ನ ಹೃದಯದಲ್ಲಿ ಎಡೆಮಾಡಿಕೊಂಡಿರುವ ಕಾಮಧೇನು ಕಲ್ಪವೃಕ್ಷಗಳು" ಎಂದು ವಿರೂಪಾಕ್ಷನನ್ನು ಎಡಬಿಡದೇ ಚುಂಬಿಸಿದಳು. ವಿರೂಪಾಕ್ಷನು ಆ ಪ್ರೇಮದಲ್ಲಿ ತೇಲಿಹೋದನು.

ಅವರು ಎಚ್ಚೆತ್ತು ಒಬ್ಬರ ಅವಸ್ಥೆಯನ್ನು ಮತ್ತೊಬ್ಬರು ನೋಡಿಕೊಳ್ಳುವಹೊತ್ತಿಗೆ ಅರ್ಧರಾತ್ರಿಯಾಗಿಹೋಗಿತ್ತು. ಚೆಲುವಮ್ಮಣ್ಣಿಯು ಅಸ್ತವ್ಯಸ್ತವಾಗಿದ್ದ ತನ್ನ ವಸನವನ್ನು ಸರಿಮಾಡಿಕೊಂಡಳು. ಅಲ್ಲಿಯೇ ಹಂಸತೂಲಿಕಾತಲ್ಪದಲ್ಲಿ ಬಿದ್ದಿದ್ದ ಆಭರಣಗಳು ಚಂದ್ರಕಿರಣಗಳಿಂದ ಚಮಕಿತವಾಗಿ ನಗುತ್ತಿರುವಂತೆ ಕಂಗೊಳಿಸುತ್ತಿದ್ದವು. ಆಗ ವಿರೂಪಾಕ್ಷನ ತೊಡೆಯಮೇಲೆ ತಲೆಯನ್ನಿಟ್ಟುಕೊಂಡು ಚೆಲುವಮ್ಮಣ್ಣಿಯು ಅರ್ಧಶಾಯಿತಾವಸ್ಥೆಯಲ್ಲಿ ಮಲಗಿದ್ದಳು. ವಿರೂಪಾಕ್ಷನು ಚೆಲುವಮ್ಮಣ್ಣಿಯ ಬೆನ್ನುಸವರುತ್ತಾ ಮೃದುವಾಗಿ ಬೆನ್ನುತಟ್ಟುತ್ತಾ "ರಾಣಿಯವರೇ, ಅಂತಃಪುರಕ್ಕೆ ದಯಮಾಡಿಸುವಿರಾ?" ಎಂದು ಕೇಳಿದನು. ಚೆಲುವಮ್ಮಣ್ಣಿಯು ತಲೆಯನ್ನಲ್ಲಾಡಿಸಿ ಅಸಮ್ಮತಿಯನ್ನು ತೋರಿ ಸಣ್ಣ ನಗುವನ್ನು ನಕ್ಕಳು. ವಿರೂಪಾಕ್ಷನು ಪುನಃ ರಾಣಿಯನ್ನು ಕುರಿತು, "ರಾಣಿಯವರೇ ಈ ರಾಣಿಗಿರಿಗಿಂತಲೂ ನಮ್ಮ ಸುಖವೇ ಹೆಚ್ಚೆಂದು ನನಗೆ ಅನ್ನಿಸುತ್ತದೆ. ನೀವು ಈ ರಾಣಿಗಿರಿಯನ್ನು ತೊರೆಯಲು ಸಿದ್ಧರಾಗಿದ್ದರೆ ಎಲ್ಲಿಯಾದರೂ ಹೊರಟುಹೋಗೋಣ. ನಮ್ಮಲ್ಲಿ ಬೇಕಾದಷ್ಟು ಚಿನ್ನವಿದೆ. ಅದರಿಂದ ನಾವು ಒಂದು ಹೊಸ

ಲೋಕವನ್ನೆ ನಿರ್ಮಾಣಮಾಡಬಹುದು. ಈ ರಾಜ್ಯದ ತೊಡಕುಗಳಲ್ಲಿ ನಾವೇಕೆ ತೊಡಗಬೇಕು ?"

ರಾಣಿಯು ಮತ್ತೊಂದು ಮನೋಹರವಾದ ನಗುವನ್ನು ನಕ್ಕು, "ವಿರೂಪಾಕ್ಷ, ಉನ್ಮತ್ತನಂತೆ ಮಾತನಾಡುವಿ. ನಾವೆಲ್ಲಿಗೆ ಹೋಗುವುದು? ಈ ಆರ್ಯಾವರ್ತದಲ್ಲಿ ಎಲ್ಲಿ ಹೋಗಲೀ ನನ್ನನ್ನು ಅರಿಯದವರಾರು? ನಗರದ ಮಹಾರಾಣಿಯು ಅಲೆಯುತ್ತಿದ್ದಾಳೆಂದು ಜನರು ಆಡಿಕೊಳ್ಳಲಾರರೇ? ನನ್ನನ್ನು ಮುಸಲ್ಮಾನ್ ಜನಾನಾದಂತೆ ಬುರುಕಿಯನ್ನು ಹಾಕಿ ಮುಚ್ಚಿಟ್ಟುಕೊಳ್ಳುವಿಯೇನು? ನಿನ್ನ ಪರಿಚಯವನ್ನಾದರೂ ಏನೆಂದು ಹೇಳಿಕೊಳ್ಳುವೆ? ಅಯ್ಯೋ ಹುಚ್ಚ! ಎಲ್ಲಿಗೂ ಹೋಗಲಾರೆ. ಎಲ್ಲಿಯೂ ಸುಖವಿಲ್ಲ." ಎಂದಳು.

ವಿರೂಪಾಕ್ಷನು ಸ್ವಲ್ಪ ಉತ್ತೇಜಿತನಾಗಿ, "ರಾಣಿಯವರೇ ಇಲ್ಲಿ ಒಂದು ಕ್ಷಣವೂ ಸುಖವಿಲ್ಲ. ನಿಮಗೆ ಈ ರಾಣಿಗಿರಿಯು ಮುಳ್ಳುಹಾಸಿಗೆಯಂತೆ ಇರುವುದು ಬೋಧೆಯಾಗಿಲ್ಲವೇನು? ನನ್ನ ಜೀವನವು ಕಳ್ಳಜೀವನಕ್ಕಿಂತಲೂ ಹೇಯವಾಗಿದೆಯೆಂದು ಅನ್ನಿಸುವುದಿಲ್ಲವೇನು? ಮಂತ್ರಿಯು ನಮ್ಮಮೇಲೆ ಕಾರ್ಯಭಾರವನ್ನೆಸಗದೇ ಸುಮ್ಮನಿರುವನೆಂದು ನೀವು ನಂಬಿರುವಿರೇನು? ಯುವರಾಜನು ಈ ರಾಜ್ಯಾಧಿಕಾರಕ್ಕೆ ಪ್ರಯತ್ನಿಸದೇ ಇರುವನೆಂದು ಭಾವಿಸುವಿರೇನು? ಇವೆಲ್ಲಕ್ಕೂ ಏನು ಯೋಚನೆಮಾಡಿರುವಿರಿ?" ಎಂದನು.

"ರಾಣಿಯು ವ್ಯಾಧನಿಂದ ಕೆಣಕಲ್ಪಟ್ಟ ಸಿಂಹಿಣಿಯಂತೆ ಎದ್ದು ಕುಳಿತು, ವಿರೂಪಾಕ್ಷಾ, ಏನೆನ್ನುವೆ? ಮಂತ್ರಿಯು ನನ್ನನ್ನು ಭಯಪಡಿಸಿ, ದಮನಮಾಡಿ, ತಾನು ಆಟವಾಡಿಸುವ ಗಿಣಿಯುಮರಿಯಂತೆ ಸ್ವರ್ಣಪಂಜರದಲ್ಲಿ ಇಡಬಲ್ಲನೆಂದು ಭಾವಿಸಿರುವಿಯೇನು? ಯುವರಾಜನು ನನ್ನನ್ನು ಸಿಂಹಾಸನದಿಂದ ನಿರ್ಮಾಲ್ಯ ಪುಷ್ಪಮಾಲಿಕೆಯನ್ನು ತೆಗೆದು ಒಗೆಯುವಂತೆ ತಳ್ಳಿಹಾಕಬಲ್ಲನೆಂದು ಭಾವಿಸಿರುವಿಯೇನು? ಮಂತ್ರಿಯು ನನ್ನ ಮೇಲೆ ಅಸೂಯಾಪರನಾಗಿ, ವಿರುದ್ಧಾಚರಣೆಯನ್ನೆಸಗಿದರೆ ಅವನನ್ನು ಹಿಡಿತರಿಸಿ ಈ ಕಬ್ಬಾಳದುರ್ಗದ ಪಾತಾಳಕೋಟೆಯಲ್ಲಿ

ಸಾಯುವವರೆಗೂ ಬಂದಿಯನ್ನಾಗಿ ಇಡಿಸುವೆನು.” ರಾಣಿಯು ತಿರಸ್ಕಾರಪೂರ್ಣವಾದ ನಗುವನ್ನು ನಗುತ್ತಾ, “ಯುವರಾಜ! ಯುವರಾಜನು ನನಗೆ ಪ್ರತಿಕಕ್ಷಿಯಾಗಿ ನಿಲ್ಲುವುದಾದರೆ ಒಂದು ಕ್ಷಣದಲ್ಲಿ ಅವನ ಶಿರಸ್ಸನ್ನು ಚಂಡಾಡುವಂತೆ ಮಾಡುವೆನು. ಈ ಜಗತ್ತಿನಲ್ಲಿ ನನಗೆ ಎದುರು ಬರುವವರನ್ನು ನಾನು ಸಹಿಸುತ್ತಾ ತಲೆಬಾಗಿ ಸರಿದು ನಿಲ್ಲುವಳಲ್ಲ. ಎಂತಹ ವಿಪತ್ತನ್ನಾದರೂ ಎದುರಿಸಿ ಜಯಿಸಬಲ್ಲೆ. ಇಲ್ಲವೇ, ಈ ಪ್ರಾಣವನ್ನು ತೃಣವಾಗಿ ಚೆಲ್ಲಿಕೊಡಬಲ್ಲೆ. ವಿರೂಪಾಕ್ಷಾ! ನಾನು ಹೆಣ್ಣೆಂಬುದು ನಿಜ. ನನ್ನ ಹೃದಯದಲ್ಲಿ ಪ್ರೀತಿವಾತ್ಸಲ್ಯಗಳ ತುಂಬಿರುವುವೆಂಬುದೂ ನಿಜ. ನಾನು ಖತಿಗೊಂಡರೆ ಇವುಗಳೇ ಹಾಲಾಹಲ ವಿಷವಾಗಿ ಪರಿಣಮಿಸುವುವು. ನಾನು ನಿನ್ನಲ್ಲಿ ಯಾವ ಅಂತರಂಗವನ್ನೂ ಮುಚ್ಚಿಡುವುದಿಲ್ಲ. ಈ ನನ್ನ ಹಸ್ತವು ಹೇಗೆ ಅಮೃತಸ್ಯಂದಿಯೋ ಹಾಗೇ ಹಾಲಾಹಲ ವಿಷಸಿಕ್ತವಾದವು. ನೀನು ಇದನ್ನು ಧೈರ್ಯದಿಂದ ಪರಿಗ್ರಹಿಸುವೆಯಾ?” ಎಂದು ವಿರೂಪಾಕ್ಷನ ಕಡೆಗೆ ಕೈಚಾಚಿದಳು.

ವಿರೂಪಾಕ್ಷನು ಕಂಪಿತಹೃದಯನಾಗಿ, ವಾಙ್ಮೂಢನಾಗಿ, ತನ್ನ ಎರಡು ಕೈಗಳಿಂದಲೂ ರಾಣಿಯು ಚಾಚಿದ ಕೈಯನ್ನು ಹಿಡಿದುಕೊಂಡು ತನ್ನ ಕಣ್ಣುಗಳಿಗೊತ್ತಿಕೊಂಡು ಆ ಹಸ್ತವನ್ನು ಚುಂಬಿಸಿದನು. ಆ ಪ್ರಣಯಿಗಳಿಬ್ಬರೂ ಆ ಚಂದ್ರಶಾಲೆಯ ಮೆಟ್ಟಲುಗಳನ್ನಿಳಿದು ಅಂತಃಪುರದೊಳಗೆ ಹೋದರು.

ಪ್ರಾತಃಕಾಲ ಒಂದು ಆಶ್ಚರ್ಯಕರವಾದ ಘಟನೆಯು ನಡೆಯಿತು. ಸುಮಾರು ಒಂಭತ್ತು ಘಂಟೆಯ ಸಮಯ. ಕಬ್ಬಾಳದುರ್ಗದ ಅರಮನೆಯು ಮಹಾರಾಣಿಯ ಏಕಾಂತವಾಸವೆಂದು ಹೇಳಬಹುದು. ಸುತ್ತಲೂ ಎಷ್ಟೋ ದೂರದವರೆಗೆ ಜನಸಂಚಾರವೇ ಇಲ್ಲ. ಅಂತಹ ಅರಮನೆಯಲ್ಲಿ ರಾಣಿಯು ತನ್ನ ಅಂತಃಪುರದಲ್ಲಿ, ತನ್ನ ವಿಶ್ರಾಂತಿ ಗೃಹದಲ್ಲಿ, ಆಸನದಮೇಲೆ ಕುಳಿತು ಕೇಶವಿನ್ಯಾಸಮಾಡಿಕೊಳ್ಳುತ್ತಿದ್ದಳು. ಆಪ್ತಸಖಿಯೊಬ್ಬಳು ಆ ಮೃದುವಾದ ಕೇಶರಾಶಿಯನ್ನು ಬಾಚಿ ಅಷ್ಟದಳದ ಪದ್ಮಬಂಧನದಂತೆ ಹೆರಳನ್ನು ಕಟ್ಟಿ ಅದಕ್ಕೆ ಮುತ್ತಿನ ಸರವನ್ನು

ಕಟ್ಟಿ ಸಣ್ಣಸಣ್ಣ ತುಲಾಬಿಯ ಮೊಗ್ಗುಗಳನ್ನು ಸುತ್ತಲೂ ಸಿಕ್ಕಿಸಿ ಅಲಂಕರಿಸಿದಳು. ಮಹಾರಾಣಿಯ ಅಲಂಕಾರವು ಇನ್ನೂ ಪರಿಸಮಾಪ್ತ ವಾಗಿರಲಿಲ್ಲ. ಅಷ್ಟರಲ್ಲಿ ದೂರದಲ್ಲಿ ವನಾಂತರಾಳದಿಂದ ಬೋಯಿಗಳ ಸದ್ದು ಕೇಳಲಾರಂಭಿಸಿತು. ರಾಣಿಯು ಜಗ್ಗನೆದ್ದು ವಾತಾಯನದ ಸಮೀಪವನ್ನೈದು ದೃಷ್ಟಿಸಿನೋಡಿದಳು. ಆ ಸದ್ದು ದೂರದಿಂದ ಕೇಳಿಬರುತ್ತಿದ್ದರೂ ಅಸ್ಪಷ್ಟವಾಗಿರಲಿಲ್ಲ. ಆ ಬೋಯಿಗಳು ಕಬ್ಬಾಳ ದುರ್ಗದಕಡೆಗೆ ಬರುತ್ತಿದ್ದಾರೆಂದು ರಾಣಿಯು ಊಹಿಸಿದಳು. ಸ್ವಲ್ಪ ಹೊತ್ತಿನೊಳಗಾಗಿ ಮ್ಯಾನಾ ಕಣ್ಣಿಗೆ ಕಾಣಿಸಿತು. ರಾಣಿಯ ಕುತೂಹಲವು ಅತ್ಯಧಿಕವಾಯಿತು. ಪಕ್ಕದಲ್ಲಿದ್ದ ರಾಧೆಯನ್ನು ಕರೆದು, "ರಾಧೆ! ನೀನು ಹೋಗಿ ಅದಾರು ಬರುತ್ತಿದ್ದಾರೆಂಬುದನ್ನು ವಿಚಾರಿಸಿಕೊಂಡು ಬಾ" ಎಂದು ಹೇಳಿದಳು. ಸ್ವಲ್ಪಹೊತ್ತಿನೊಳಗಾಗಿ ಆ ಅಂದೋಳಿಕೆಯು ಅರಮನೆಯ ಹೊರ ಅಂಗಳಕ್ಕೆ ಬಂದಿಳಿಯಿತು. ಪಹರೆಯವರು ಗಾಬರಿಗೊಂಡು ಓಡಿಬಂದು ಆ ಬೋಯಿಗಳನ್ನು "ಯಾರು?" ಎಂದು ವಿಚಾರಿಸಿದರು. ಆ ಬೋಯಿಗಳ ಮುಖಂಡನು "ರಾಣಿಯವರು ಬಂದಿದ್ದಾರೆ ದೂರ ನಿಲ್ಲು" ಎಂದು ಗದ್ದರಿಸಿದನು.

ಅಷ್ಟರಲ್ಲಿ ಮ್ಯಾನಾದಿಂದ ತೇಜೋವಿರಾಜಮಾನವಾದ ಸ್ತ್ರೀ ಮೂರ್ತಿಯೊಂದು ಗಾಂಭೀರ್ಯದಿಂದ ಕೆಳಗಿಳಿಯಿತು. ಅದೇ ಮ್ಯಾನಾ ದಿಂದ ಭೈರವಿಯೂ ಇಳಿದಳು. ಅಷ್ಟರೊಳಗಾಗಿ ರಾಧೆಯು ಅರಮನೆಯ ಹೆಬ್ಬಾಗಿಲಿಗೆ ಬಂದಿದ್ದಳು. ಅವಳು ಭೈರವಿಯನ್ನು ಕ್ಷಣ ದಲ್ಲಿ ಗುರುತಿಸಿದಳು. ಮುಂದೆ ಮುಂದೆ ವಿಭ್ರಮದಿಂದ ಬರುತ್ತಿರುವ ಮಹಾನುಭಾವಳಾರೆಂಬುದು ಅವಳಿಗೆ ತಿಳಿಯಲಿಲ್ಲ. ಆಗಂತುಕ ಸ್ತ್ರೀ ವ್ಯಕ್ತಿಯು ಆ ಅರಮನೆಯ ಪರಿಚಯವುಳ್ಳವಳಂತೆ ಮುಂದಿನ ತೊಟ್ಟಿ ಯನ್ನು ದಾಟಿ, ಒಳಹಜಾರವನ್ನು ಪ್ರವೇಶಿಸಿದಳು. ಅಷ್ಟುಹೊತ್ತಿಗೆ ರಾಧೆಯು ಬಗ್ಗಿ ಕೈಮುಗಿದು "ಮಹಾದೇವೀ, ತಾವಾರು? ಇಲ್ಲಿಗೇಕೆ ದಯಮಾಡಿಸೋಣವಾಯಿತು?" ಎಂದು ಕೇಳಿದಳು. ಅದಕ್ಕೆ ಆಗಂತು ಕಳು ಗಂಭೀರಭಾವದಿಂದ "ಮಗಳೇ ನಾನೊಬ್ಬ ಸನ್ಯಾಸಿನಿ. ಇಲ್ಲಿಗೆ

ಮಹಾರಾಣಿಯವರನ್ನು ನೋಡುವುದಕ್ಕಾಗಿ ಬಂದಿದ್ದೇನೆ. ನಿಮ್ಮ ಮಹಾರಾಣಿಯವರನ್ನು ಇಲ್ಲಿಗೆ ಕರೆತಾ, ನಾನು ಅವರ ದರ್ಶನಮಾಡಿ ಹೊರಟುಹೋಗುತ್ತೇನೆ." ಎಂದು ಹೇಳಿದಳು. ರಾಧೆಗೆ ಆ ವ್ಯಕ್ತಿಯ ಹೆಸರು ವಿಚಾರಿಸುವ ಧೈರ್ಯವಾಗಲಿಲ್ಲ. ಅವಳು ಪುನಃ ಕೈಮುಗಿದು "ದೇವೀ, ಆಸನದಲ್ಲಿ ಕುಳಿತುಕೊಳ್ಳೋಣವಾಗಲೀ" ಎಂದು ಒಂದು ದಿವ್ಯಾಸನವನ್ನು ತೋರಿದಳು.

"ತಾಯಿ, ತಮ್ಮ ಜೊತೆಯಲ್ಲಿ ಬಂದಿರುವ ಈ ಬೈರಾಗಿಣಿಯೂ ಮಹಾರಾಣಿಯವರ ದರ್ಶನಾರ್ಥವಾಗಿ ಬಂದಿರುವಳೇನು" ಎಂದು ಪ್ರಶ್ನೆಮಾಡಿದಳು.

ಭೈರವಿಯು ನಗುಮುಖದಿಂದ "ಹೌದು, ನಾನು ಈ ಮಹಾದೇವಿಯ ಸಮ್ಮುಖದಲ್ಲಿ ಒಂದುಬಾರಿ ರಾಣಿಯ ದರ್ಶನ ಮಾಡಬೇಕೆಂದು ಬಂದಿದ್ದೇನೆ" ಎಂದಳು.

ರಾಧೆಯು ಲಗುಬಗೆಯಿಂದ ಅಂತಃಪುರಕ್ಕೆ ಓಡಿಹೋಗಿ ಮಹಾರಾಣಿಯವರಲ್ಲಿ ವಿಜ್ಞಾಪಿಸಿದಳು. "ಮಹಾರಾಣಿಯವರೇ! ಯಾರೋ ಒಬ್ಬ ತಪಸ್ವಿನಿಯು ತಮ್ಮ ದರ್ಶನಾಕಾಂಕ್ಷಿಯಾಗಿ ಬಂದಿದ್ದಾರೆ. ಅವರ ಜೊತೆಯಲ್ಲಿ ಭೈರಾಗಿಣಿಯೊಬ್ಬಳು ಬಂದಿದ್ದಾಳೆ. ಅವರು ತಮ್ಮ ದರ್ಶನ ಮಾಡಬೇಕೆಂದು ಹೇಳುತ್ತಾರೆ."

ರಾಣಿಯು ಆಶ್ಚರ್ಯದಿಂದ, "ಸನ್ಯಾಸಿನಿಯು ಬಂದಿದ್ದಾಳೆಯೇ? ಭೈರವಿಯು ಜೊತೆಯಲ್ಲಿ ಬಂದಿದ್ದಾಳೆಯೇ? ಸನ್ಯಾಸಿನಿಯು ಮ್ಯಾನಾದಲ್ಲಿ ರಾಜವೈಭವದಿಂದ ಬರುವುದೆಂದರೆ ಆಶ್ಚರ್ಯವೇ ಸರಿ" ಎಂದಳು.

"ಮಹಾರಾಣಿ, ನನಗೂ ಆಶ್ಚರ್ಯವಾಗಿಯೇ ಇದೆ. ಅವರಾರೆಂದು ಪರಿಚಯವನ್ನು ಕೇಳಲು ನನಗೆ ಧೈರ್ಯವಾಗಲಿಲ್ಲ. ಯಾರೇ ಆಗಲಿ, ಅವಳೊಬ್ಬ ಮಹಾನುಭಾವಳೆಂಬುದರಲ್ಲಿ ಸಂದೇಹವಿಲ್ಲ. ರಾಣಿಯವರೇ ಅದೇಕೋ ಅವರ ಜೊತೆಯಲ್ಲಿ ಬಂದಿರುವ ಭೈರಾಗಿಣಿಯನ್ನು ನೋಡಿದರೆ ನನಗೆ ಸಹನೆಯಾಗಲಿಲ್ಲ."

"ಯಾರಾದರೇನು? ನನಗೂ ಆ ಸನ್ಯಾಸಿನಿಯನ್ನು ನೋಡುವ ಆಸೆ. ನಾನು ಬಂದು ಅವರ ಭೇಟಿಮಾಡುತ್ತೇನೆ" ಎಂದು ಹೇಳಿ ತನ್ನ ಅಲಂಕಾರ ಗೃಹದೊಳಗೆ ಹೋಗಿ ಅಲಂಕರಿಸಿಕೊಂಡು ಹೊರಗೆ ಬಂದಳು. ಹಳದಿಯ ಬಣ್ಣದ ತೆಳ್ಳನೆಯ ಚೀನಾಂಬರವನ್ನು ಉಟ್ಟು, ಆಕಾಶಬಣ್ಣದ ಜರಿಯ ಕಂಚುಕವನ್ನು ತೊಟ್ಟಿದ್ದಳು. ಕೊರಳಲ್ಲಿ ನಾಭಿಯವರೆಗೆ ಮೂರೆಳೆಯ ಮುಕ್ತಾಹಾರವು ಅಲಂಕೃತವಾಗಿತ್ತು. ಕೈಯ್ಯಲ್ಲಿ ವಜ್ರದ ವಲಯಗಳು ಜಗಜಗಿಸುತ್ತಿದ್ದವು. ತೋಳಿನಲ್ಲಿ ಮುತ್ತಿನ ಬಾಜುಬಂದಿಯು ಕಟ್ಟಲ್ಪಟ್ಟಿತ್ತು. ಕಿವಿಗಳಲ್ಲಿ ನೇರಳೆಯ ಹಣ್ಣಿನಂತಹ ನೀಲಮಣಿಗಳು ಅಲಂಕೃತವಾಗಿದ್ದವು. ಹಣೆಯಲ್ಲಿ ಕಸ್ತೂರಿಕಾ ತಿಲಕವು ಕಂಗೊಳಿಸುತ್ತಿತ್ತು. ರಾಣಿಯು ಹೀಗೆ ಅಲಂಕರಿಸಿಕೊಂಡು ಸನ್ಯಾಸಿನಿಯ ಭೇಟಿಗೆ ಬಂದಳು. ಮುಂದೆ ರಾಧೆಯು ದಾರಿತೋರುತ್ತಾ ನಡೆದಳು.

ಸನ್ಯಾಸಿನಿಯಿದ್ದ ಹಜಾರಕ್ಕೆ ರಾಣಿಯು ಪ್ರವೇಶ ಮಾಡುತ್ತಲೇ ಆ ಹಜಾರವೆಲ್ಲವೂ ರಾಣಿಯ ವೈಯ್ಯಾರ, ವೈಖರಿಗಳಿಂದ ಜಗಜಗಿಸುವಂತೆ ಪ್ರಕಾಶಮಾನವಾಯಿತು ಚಾಂಚಲ್ಯವಿಲ್ಲದೇ ಸ್ಥಿರನೇತ್ರಗಳಿಂದ ರಾಣಿಯ ಮಾರ್ಗವನ್ನು ನಿರೀಕ್ಷಿಸುತ್ತಾ, ಗೈರಿಕವಸನಗಳನ್ನು ಧರಿಸಿ, ಸ್ಫಟಿಕಮಾಲಾಲಂಕೃತಳಾಗಿ, ಹಣೆಯಲ್ಲಿ ಭಸ್ಮವನ್ನು ಧರಿಸಿ, ಹುಬ್ಬುಗಳ ಮಧ್ಯದಲ್ಲಿ ಕುಂಕುಮಾಲಂಕೃತಫಾಲದಿಂದಲೂ, ವಿಶಾಲವಾದ, ತೇಜೋವಿರಾಜಮಾನವಾದ ಕಣ್ಣುಗಳಿಂದಲೂ ಶೋಭಿಸುತ್ತಿರುವ ಆ ಗಂಭೀರ ವದನಾರವಿಂದವು ರಾಣಿಯಕಡೆ ತಿರುಗಿತು. ರಾಣಿಯು ಸನ್ಯಾಸಿನಿಯ ಪ್ರಭಾವಾನ್ವಿತವಾದ ಮುಖಮಂಡಲವನ್ನು ನೋಡಿ ಬೆರಗಾಗಿ ಆಸನದ ಸಮೀಪಕ್ಕೆ ಬಂದು ಅಭಿವಂದಿಸಿ ಮುಗುಳುನಗೆಯಿಂದ ಸ್ವಾಗತಿಸಿದಳು.

"ಮಹಾದೇವಿಯವರೇ, ತಾವಾರು? ಇಲ್ಲಿಗೆ ದಯಮಾಡಿಸಿದ ಕಾರಣವೇನು? ತಮಗೆ ನಾನೇನು ಸೇವೆಮಾಡಬಲ್ಲೆ?"

"ರಾಣಿಯವರೇ, ಬಹು ದಿನಗಳಿಂದ ತಮ್ಮ ದರ್ಶನಮಾಡಬೇಕೆಂಬ ಆಸೆಯಿತ್ತು. ನಾವು ಈ ನಗರದ ರಾಜ್ಯದಲ್ಲಿಯೇ ಅನೇಕ

ವರ್ಷಗಳಿಂದ ನೆಲಸಿದ್ದೇವೆ. ಈಗ ಈ ರಾಜ್ಯವನ್ನು ಬಿಟ್ಟು ಕಾಶೀ ಧಾಮಕ್ಕೆ ಹೋಗಬೇಕೆಂದು ನಿಶ್ಚಯಿಸಿದ್ದೇವೆ. ನನ್ನಲ್ಲಿ ಪಿತ್ರಾರ್ಜಿತ ವಾದ ಅಪಾರ ಸಂಪತ್ತಿದೆ. ಬಿದನೂರಿನ ಮಲ್ಲಿಕಾರ್ಜುನ ದೇವಾಲಯ ದಲ್ಲಿ ಅನೇಕ ಧರ್ಮಗಳು ನಡೆಯುತ್ತಿವೆ. ಆ ಧರ್ಮಗಳನ್ನೆಲ್ಲಾ ಹಾಗೆಯೇ ನಡೆಸಿಕೊಂಡು ಬರುವ ಭಾರವು ತಮ್ಮದಾಗಿದೆ. ಆ ಸಂಪತ್ತನ್ನು ತಮ್ಮ ವಶಕ್ಕೆ ಒಪ್ಪಿಸಿ ಹೋಗಬೇಕೆಂದು ಬಂದಿದ್ದೇನೆ."

ರಾಣಿಯು ಆಶ್ಚರ್ಯದಿಂದ, "ಮಹಾದೇವಿಯವರೇ! ಮಲ್ಲಿಕಾರ್ಜುನ ಕ್ಷೇತ್ರದಲ್ಲಿ ನಡೆಯುವ ದಾನಧರ್ಮಗಳಿಗೆ ಧರ್ಮಕರ್ತರು ತಾವೇಯೇನು? ಅಪಾರವಾದ ಸಂಪತ್ತಿಗೆ ಅಧಿಷ್ಠಾತ್ರಿಯೆಂದು ಪ್ರಖ್ಯಾತರಾದ ಭವಾನೀ ರಾಣಿಯವರು ತಾವೇಯೇನು? ನಾನು ಈ ರಾಜಮನೆತನಕ್ಕೆ ವಿವಾ ಹಿತಳಾಗಿ ಬಂದಾಗಿನಿಂದ ತಮ್ಮ ದರ್ಶನಮಾಡಬೇಕೆಂದು ಎಷ್ಟೋ ಆಸೆಪಡುತ್ತಲಿದ್ದೆ. ನನಗೆ ಈ ರಾಣಿಯ ಪಟ್ಟವು ಕಟ್ಟಲ್ಪಟ್ಟಮೇಲೆ ತಮ್ಮ ದರ್ಶನಕ್ಕಾಗಿ ಎಷ್ಟೋ ಪ್ರಯತ್ನಗಳನ್ನು ನಡೆಸಿದ್ದೇನೆ. ಲಭ್ಯವಾಗಲಿಲ್ಲ. ಇಂದು ತಾವಾಗಿಯೇ ದರ್ಶನವನ್ನಿತ್ತಿರಿ. ನಾನು ತಮ್ಮ ಆಜ್ಞಾಧಾರಕಳಾಗಿ ಭಗವತ್ಸೇವೆಯನ್ನು ಸಾಂಗೋಪಾಂಗವಾಗಿ ನಡೆಸಿಕೊಂಡು ಬರುತ್ತೇನೆಂದು ತಮಗೆ ಪ್ರಮಾಣಪೂರ್ವಕವಾಗಿ ಭರವಸೆ ಕೊಡುತ್ತೇನೆ. ಈ ನಗರದ ಸಿಂಹಾಸನದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ತಮ್ಮ ಧರ್ಮವು ಆಚಂದ್ರಾರ್ಕವಾಗಿ ನಡೆಯಿಸಲ್ಪಡು ತ್ತದೆ. ಭವಾನೀರಾಣಿಯವರೇ! ನನ್ನ ಕುತೂಹಲವು ಮಾತ್ರ ಈಗ ನಾಲ್ಮಡಿಯಾಗಿದೆ. ತಮ್ಮ ಪರಿಚಯವು ನನಗೆ ಇನ್ನೂ ಆಗಿಲ್ಲ. ತಾವು ಕಾಶೀಧಾಮಕ್ಕೆ ತೆರಳುವ ಕಾರಣವೇನು? ನನ್ನ ಮೇಲೆ ಅಭಿಮಾನ ವಿಟ್ಟು ದರ್ಶನಕೊಟ್ಟಂತೆಯೇ ದಯಮಾಡಿ ತಮ್ಮ ಪೂರ್ಣಪರಿಚಯ ವನ್ನು ಕೊಡಿರಿ. ತಾವು ಕಾಶೀಧಾಮಕ್ಕೆ ತೆರಳುವ ಕಾರಣವೇನೆಂಬು ದನ್ನು ಅರುಹಿರಿ" ಎಂದು ಕೇಳಿದಳು.

ಸನ್ಯಾಸಿನಿಯು ತಿರಸ್ಕಾರಯುಕ್ತವಾದ ನಗುವನ್ನು ನಕ್ಕು, "ಮಹಾರಾಣಿಯವರೇ, ತಾವು ಬಹಳ ಚತುರರೆಂದು ಕೇಳಿದ್ದೇನೆ.

ಮಹಾರಾಜರವರು ನಿರ್ಯಾಣವನ್ನು ಹೊಂದುವಾಗ ತಮಗೇ ಪಟ್ಟಾಭಿಷೇಕವಾಗಬೇಕೆಂದು ಆಜ್ಞೆ ಮಾಡಿದ್ದಾರೆಂದೂ ಆಗಲೇ ಕೇಳಿದ್ದೆ. ತಮ್ಮಲ್ಲಿ ಅಂತಹ ಪ್ರಭಾವವಿರುವುದರಿಂದಲೇ ಕ್ರಮಪ್ರಾಪ್ತವಾಗಿ ಬರಬೇಕಾದ ಸಿಂಹಾಸನವು ಯುವರಾಜರಿಗೆ ಬರದೇ ತಮ್ಮ ಪಾಲಿಗೆ ಬಂದಿದೆ. ಪುರುಷಯತ್ನವು ಒಂದು ವಿಧವಾಗಿದ್ದರೆ ದೈವಯತ್ನವು ಮತ್ತೊಂದು ವಿಧವಾಗಿರುತ್ತದೆ. ನಾನು ಒಂದು ಸ್ವಪ್ನವನ್ನು ಕಂಡೆನು. ಈ ರಾಜ್ಯಕ್ಕೆ ಬಹಳ ಆಪತ್ತು ಸಂಭವಿಸುವುದೆಂದು ಸ್ವಪ್ನದಲ್ಲಿ ನನಗೊಬ್ಬ ಮಹಾಪುರುಷನು ಹೇಳಿದನು. ಆ ಆಪತ್ತನ್ನು ನೋಡುವ ಮನೋಧೈರ್ಯವು ನನಗಿಲ್ಲ. ಅದನ್ನು ಎದುರಿಸಲು ತಮಗಿರುವಂತಹ ಸಾಹಸವು ನನಗಿಲ್ಲ. ಆದುದರಿಂದ ನಾನು ಅವಿಮುಕ್ತ ಕ್ಷೇತ್ರವಾದ ವಾರಣಾಸಿಗೆ ತೆರಳುವೆನು. ತಾವು ನನ್ನನ್ನು ಅಡ್ಡಿಪಡಿಸಬೇಡಿರಿ. ಪುನಃ ಈಶ್ವರೇಚ್ಛೆಯಿದ್ದರೆ ನಾನು ಬಂದು ಈ ನಗರದಲ್ಲಿ ಮಲ್ಲಿಕಾರ್ಜುನ ಕ್ಷೇತ್ರವನ್ನು ದರ್ಶನಮಾಡುತ್ತೇನೆ. ನನಗೆ ತಮ್ಮ ದರ್ಶನವು ಇದೇ ಮೊದಲನೆಯದು. ಇದೇ ಅಂತ್ಯ ದರ್ಶನ. ಈ ಭೈರವಿಯು ತಮಗೆ ನನ್ನ ನಿಧಿಯಿರುವ ಸ್ಥಳವನ್ನು ತೋರಿಸುವಳು" ಎಂದು ಹೇಳಿ ಆಸನದಿಂದೆದ್ದಳು. ರಾಣಿಯು ಸಮೀಪಕ್ಕೆ ಬಂದು ನಮಸ್ಕಾರ ಮಾಡಿ ಅಂದು ಅಲ್ಲಿಯೇ ಇರಬೇಕೆಂದು ಪ್ರಾರ್ಥಿಸಿದಳು. ರಾಣಿಯು ಎಷ್ಟೇ ವಿಧವಾಗಿ ಕೇಳಿಕೊಂಡರೂ ಸನ್ಯಾಸಿನಿಯು ಮರುಮಾತನಾಡಲಿಲ್ಲ. ಅವಳು ಗದ್ಗದ ಕಂಠದಿಂದ ರಾಣಿಗೆ ಆಶೀರ್ವದಿಸಿ ಆ ಅರಮನೆಯ ಮಹಾದ್ವಾರದ ಕಡೆಗೆ ನಡೆದು ಹೋದಳು. ಆ ಸನ್ಯಾಸಿನಿಯ ಕಣ್ಣುಗಳಲ್ಲಿ ನೀರು ತೊಟ್ಟಿಕ್ಕುತ್ತಿತ್ತು. ಸನ್ಯಾಸಿನಿಯು ಹೋಗಿ ಆಂದೋಳಿಕೆಯಲ್ಲಿ ಕುಳಿತುಕೊಂಡಳು. ಭೈರವಿಯು ಅವಳಿಗೆ ನಮಸ್ಕರಿಸಿದಳು ಪಲ್ಲಕ್ಕಿಯೂ ಹೊರಟು ಹೋಯಿತು. ಬಹಳಹೊತ್ತು ರಾಣಿಯು ಅವಾಕ್ಕಾಗಿ ಆ ದ್ವಾರದಲ್ಲಿಯೇ ನಿಂತುಕೊಂಡು ಭವಾನೀರಾಣಿಯು ಹೋಗುತ್ತಿರುವ ಮಾರ್ಗವನ್ನು ನೋಡುತ್ತಾ ನಿಂತಿದ್ದಳು. ಭೈರವಿಯು ರಾಣಿಯ ಪಕ್ಕದಲ್ಲಿಯೇ ನಿಂತುಕೊಂಡಿದ್ದಳು. ಸ್ವಲ್ಪ ಹೊತ್ತಾದಮೇಲೆ

ರಾಣಿಯು ಹಿಂತಿರುಗಿ "ಭೈರವಿ, ನೀನೆಲ್ಲಿ ಬಂದೆ? ನೀನೆಲ್ಲಿರುವೆ? ನೀನು ನನ್ನ ಅಂತಃಪುರವನ್ನು ಬಿಟ್ಟುಹೋಗಿ ಈ ಭವಾನೀರಾಣಿಯುವರ ಸಾನ್ನಿಧ್ಯದಲ್ಲಿ ಹೇಗೆ ಸೇರಿದೆ?" ಎಂದು ಪ್ರಶ್ನೆ ಮಾಡಿದಳು.

ಭೈರವಿಯು ನಗುತ್ತಾ, "ರಾಣಿಯುವರೇ, ನಾನು ಮೊದಲಿನಿಂದಲೂ ಶೃಂಗಾರ ರಸಿಕಳು. ಭೋಗಭಾಗ್ಯಗಳಲ್ಲಿ ತೇಲುತ್ತಿದ್ದ ಹಂಸಿಯು ನಾನು. ಆದರೆ ನನಗೆ ಈ ಶೃಂಗಾರಭಾಗ್ಯಗಳು ಬೇಸರವನ್ನುಂಟು ಮಾಡಿದವು. ನಾನು ನಿನ್ನ ಕಾರ್ಯಾರ್ಥವಾಗಿ ಈ ವೇಷವನ್ನು ಆಗಾಗ ಧರಿಸುತ್ತಿದ್ದೆ. ಬೇಡರವಳಂತೆ ನಿನ್ನ ಬೇಟೆಯುನ್ನು ಹುಡುಕಿಕೊಂಡು ಈ ವೇಷದಲ್ಲಿ ತಿರುಗುತ್ತಿದ್ದೆ. ಈ ವೇಷದಿಂದಲೇ ನನಗೆ ಈ ಬುದ್ಧಿಯು ಬಂದಿದೆ. ನಾನು ಈಗ ವಿರಕ್ತಳಾಗಿದ್ದೇನೆ. ಈ ದೇವಿಯ ಸಾನ್ನಿಧ್ಯವು ದೊರೆತಂದಿನಿಂದ ನಾನು ಸುಖಿಯಾಗಿದ್ದೇನೆ. ಈ ಭವಾನೀರಾಣಿಯುವರ ಅನುಗ್ರಹವಿಲ್ಲದಿದ್ದರೆ ನಾನು ಎಂದೋ ಮಲ್ಲಿಕಾರ್ಜುನಕ್ಷೇತ್ರದ ವೃಕ್ಷಗಳಲ್ಲಿ ನೇಣುಹಾಕಿಕೊಂಡು ಪ್ರಾಣ ಬಿಡುತ್ತಿದ್ದೆ. ಭವಾನೀರಾಣಿಯುವರು ನನ್ನನ್ನು ಉದ್ಧಾರ ಮಾಡಿದರು. ಇಂದು ಅವರ ಸವಾರಿಯು ಇಲ್ಲಿಗೆ ಬರುತ್ತದೆಯೆಂದೂ ರಾಣಿಯುವರಾದ ತಮ್ಮ ಸವಾರಿಯು ಇಲ್ಲಿರುತ್ತದೆಂದೂ ನಾನು ಭಾವಿಸಿರಲಿಲ್ಲ. ಪುನಃ ಆ ತಪಸ್ವಿನಿಯು ನಿನ್ನ ಮಡಲಿನಲ್ಲಿ ಹಾಕಿ ಹೊರಟು ಹೋದಳು. ನಾನು ದಿಕ್ಕುತೋರದವಳಂತಾಗಿದ್ದೇನೆ" ಎಂದಳು.

"ಗಿರಿಜೆ, ನೀನು ಆಗ್ರಹಗೊಳ್ಳಲಿ, ಅನುಗ್ರಹಮಾಡಲಿ, ನೀನು ನನ್ನವಳು. ಚಿಕ್ಕಂದಿನಿಂದಲೂ ನನ್ನ ಆಟದ ಗೆಳತಿ, ನನಗೆ ರಾಣಿಗಿರಿ ಬಂದಾಗಿನಿಂದಲೂ ನೀನು ನನ್ನ ಸಖಿ. ನಾನು ಮಹಾರಾಣಿಯಾದ ಮೇಲೆಯೂ ನೀನು ನನ್ನ ಮಂತ್ರಿಣಿಯಾಗಬೇಕೆಂದು ನಾನು ಆಸೆ ಪಡುತ್ತಿದ್ದೆ. ನೀನು ಇಂತಹ ವಿರಕ್ತಳಾಗುವೆಯೆಂದು ಕನಸುಮನಸುಗಳಲ್ಲಿಯೂ ನಾನು ಭಾವಿಸಿರಲಿಲ್ಲ. ನನ್ನ ಪದಾರ್ಥವನ್ನು ನನಗೆ ತಂದುಕೊಡಲು ಭವಾನೀರಾಣಿಯುವರು ಇಲ್ಲಿಗೆ ದಯುಮಾಡಿಸಿದರು. ನೀನು ಇಂದು ನನ್ನ ಕೈಗೆ ಸಿಕ್ಕಿದೆ ಬಾ. ಇನ್ನುಮೇಲೆ ಎಲ್ಲಿಯೂ

ತಪ್ಪಿಸಿಕೊಂಡು ಹೋಗಬೇಡ.” ಎಂದು ಸರಸದಿಂದ ಭೈರವಿಯು ಕೈಹಿಡಿದು ಎಳೆದುಕೊಂಡು ರಾಣಿಯು ತನ್ನ ಅಂತಃಪುರಕ್ಕೆ ತೆರಳಿದಳು. ರಾಧೆಯು ಭೈರವಿಯ ಮುಖವನ್ನು ಓರೆಗಣ್ಣಿನಿಂದ ನೋಡುತ್ತಾ ನಕ್ಕು ಹೊರಟುಹೋದಳು. ರಾಣಿಯ ಅಂತಃಪುರದಲ್ಲಿ ರಾಣಿಗೂ ಭೈರವಿಗೂ ಮಾತುಕಥೆಗಳಿಗೆ ಆರಂಭವಾಯಿತು.

“ಗಿರಿಜೆ, ನೀನು ನನ್ನ ಪ್ರಾಣಸಖಿ. ಆ ಭವಾನೀರಾಣಿ ಯಾರೆಂಬುದನ್ನು ಹೇಳು. ಅವಳು ಈ ಅತುಲಸಂಪತ್ತನ್ನು ನನಗೊಪ್ಪಿಸಿ ವಾರಣಾಸಿಗೆ ಹೊರಟುಹೋಗಲು ಕಾರಣವೇನೆಂಬುದನ್ನು ಹೇಳು ?”

“ತಾಯೆ, ಭವಾನೀರಾಣಿಯವರ ಆಜ್ಞೆಯಾಗಿದೆ. ತಾವು ಅವರ ಸ್ವರ್ಣಭಂಡಾರವನ್ನು ಒಪ್ಪಿಸಿಕೊಳ್ಳುವುದಾದರೆ ಇಂದೇ ಒಪ್ಪಿಸಿ ಕೊಳ್ಳಿರಿ. ನಾನು ಇನ್ನುಮೇಲೆ ತಮ್ಮ ಸವಿನುಡಿಗಳಿಗೆ ಮರುಳಾಗಿ ತಮ್ಮ ಸಖಿಯಾಗಿ ಇರಲಾರೆ. ನಾನು ಭವಾನೀರಾಣಿಯವರ ಸಮ್ಮುಖಕ್ಕೆ ಹೊರಟುಹೋಗುತ್ತೇನೆ. ಭವಾನೀರಾಣಿಯವರು ಯಾರೋ ನನಗೆ ಗೊತ್ತಿಲ್ಲ. ನಾನು ಸತ್ಯವನ್ನು ನುಡಿಯುತ್ತೇನೆ ಅವರು ಕಾಶೀ ಯಾತ್ರೆಗೆ ಹೋಗುವ ಕಾರಣವನ್ನು ಮಾತ್ರ ನಾನು ಬಲ್ಲೆ. ಅದು ತಮಗೆ ಅಪ್ರಿಯವಾದುದು. ಆದುದರಿಂದ ಅದನ್ನು ನೀವೇಕೆ ಕೇಳುವಿರಿ ? ನಾನೇಕೆ ಹೇಳಬೇಕು ?”

ಈ ಮಾತುಗಳನ್ನು ಕೇಳಿ ರಾಣಿಗೆ ಕೋಪಬಂದಿತು. ಹಲ್ಲು ಗಳಿಂದ ತನ್ನ ಅಧರವನ್ನು ಕಚ್ಚಿದಳು. ಕ್ಷಣದಲ್ಲಿ ಆ ಕೋಪವನ್ನು ಅಡಗಿಸಿಕೊಂಡು ವಿಕಟವಾದ ನಗುವನ್ನು ನಕ್ಕು, “ಭೈರವಿ, ವಾರಣಾ ಸಿಗೆ ಆ ರಾಣಿಯವರು ಏಕೆ ಹೋಗುತ್ತಾರೆ?” ಎಂದು ಕೇಳಿದಳು.

ಭೈರವಿಯು ತಿರಸ್ಕಾರ ಪೂರ್ಣವಾದ ನಗುವನ್ನು ನಗುತ್ತಾ “ರಾಣಿಯವರೇ, ಭವಾನೀರಾಣಿಯವರು ಈ ನಗರದ ವಿದ್ಯಮಾನ ಗಳನ್ನು ನೋಡಿ ಸಹಿಸಲಾರದೇ ಈ ದೇಶವನ್ನು ತ್ಯಾಗಮಾಡಿ ಹೋಗು ತ್ತಾರೆ. ಅದಕ್ಕೆ ತಮ್ಮ ನಡೆನುಡಿಗಳೇ ಕಾರಣ” ಎಂದಳು.

"ಭೈರವಿ, ನನ್ನ ಅಂತರಂಗ ವಿಚಾರಗಳನ್ನೆಲ್ಲಾ ಯಾರು ಹೇಳಿದರು? ನೀನೇ ಹೋಗಿ ಅವರಲ್ಲಿ ಅನೇಕ ಅಪದೂರುಗಳನ್ನು ದೂರಿರಬೇಕು."

"ರಾಣಿಯವರೇ, ತಮ್ಮ ಅಪದೂರುಗಳನ್ನು ದೂರಿದರೆ ನನಗೆ ಬರುವ ಲಾಭವೇನು? ಅದರಿಂದ ಭವಾನೀರಾಣಿಯವರಿಗಾವರೂ ಪ್ರಯೋಜನವೇನು? ಮಹಾಮಹಿಮರಾದ ಶಿವಪ್ಪನಾಯಕರ ಕುಲಕ್ಕೆ ಕಳಂಕ ತಟ್ಟಿತಲ್ಲಾ ಎಂದು ದುಃಖದಿಂದ ಭವಾನೀರಾಣಿಯವರು ಪರಿತಪಿಸುತ್ತಿದ್ದಾರೆ. ಮಹಾಮಂತ್ರಿಗಳಾದ ರಾಮಕೃಷ್ಣರವರ ಹೃದಯವು ಉದ್ವಿಗ್ನವಾಗಿದೆ. ಬಹುಮಂದಿ ಪಾಳೇಗಾರರು ಕ್ರುದ್ಧರಾಗಿದ್ದಾರೆ. ಇನ್ನೇನುಬೇಕು ತಮ್ಮ ವೈಭವಕ್ಕೆ?"

ರಾಣಿಯು ಕ್ರುದ್ಧಳಾಗಿ, "ಮುಚ್ಚು, ಬಾಯಿಮುಚ್ಚು, ಬಾಂದಿ. ನೀನು ನನ್ನ ಎದುರಿಗೆ ನಿನ್ನ ಮನಬಂದಂತೆ ಪ್ರಲಾಪಿಸುತ್ತಿರುವೆ. ನಿನಗೆ ಎಷ್ಟು ಧೈರ್ಯ? ಮತ್ತಾರಾದರೂ ನನ್ನೆದುರಿನಲ್ಲಿ ಹೀಗೆ ನುಡಿದಿದ್ದರೆ ಕುದಿಯುವ ಸುಣ್ಣದ ಕಡಾಯಿನಲ್ಲಿ ಹಾಕಿ ಸುಡಿಸುತ್ತಿದ್ದೆ" ಎಂದಳು.

ಭೈರವಿಯು ವಿಕಟವಾದ ನಗುವನ್ನು ನಕ್ಕು—"ರಾಣಿಯವರೇ! ನನ್ನ ಇಷ್ಟಾರ್ಥವು ಸಫಲವಾದಂತಾಯಿತು. ನಿಮ್ಮ ಹೃದಯವು ಸುಣ್ಣದ ಕಡಾಯಿಯಲ್ಲಿ ಬೇಯುವಂತೆ ಪ್ರಕ್ಷುಬ್ಧವಾಗಿದೆ. ಹಾಗೆ ಮಾಡಬೇಕೆಂದೇ ನಾನು ನಿಮ್ಮ ಸಮ್ಮುಖಕ್ಕೆ ಬಂದೆ. ನೀವು ನನ್ನನ್ನು ಅದಕ್ಕಿಂತಲೂ ಕ್ರೂರವಾಗಿ ಕೊಲ್ಲಬಲ್ಲಿರೆಂದು ನಾನು ಬಲ್ಲೆ. ಅಂದು ನೀವು ತಂದ ಶರಬತ್ತಿನ ಪಾತ್ರೆ! ಜ್ಞಾಪಕವಿದೆಯೇ? ಆ ಪಾತ್ರೆಯನ್ನು ನಾನು ಭದ್ರವಾಗಿ ಇಟ್ಟಿದ್ದೇನೆ. ನಾನೆಷ್ಟರವಳು? ನನ್ನನ್ನು ಒಂದು ಕ್ಷಣದಲ್ಲಿ ಕೊಲ್ಲಬಲ್ಲಿರಿ. ಆದರೆ ಅದರಿಂದ ನಿಮಗೇನೂ ಲಾಭವಾಗುವುದಿಲ್ಲ. ಆದುದರಿಂದ ನೀವು ನನ್ನನ್ನು ಕೊಲ್ಲುವುದಿಲ್ಲ. ಅಷ್ಟೇ ಅಲ್ಲ. ಭವಾನೀರಾಣಿಯವರು ಈಗ ತಾನೇ ತಮಗೊಪ್ಪಿಸಿದ ಸ್ವರ್ಣನಿಧಿಯ ಗುಟ್ಟನ್ನು ಬಲ್ಲವಳು ನಾನೊಬ್ಬಳೇ. ಅಲ್ಪಳಾದ, ಅತ್ಯಲ್ಪಳಾದ ನನ್ನನ್ನು ಕೊಂದುಬಿಟ್ಟರೆ ತಮಗೆ ಆ ಅಮೋಘವಾದ ಸ್ವರ್ಣನಿಧಿಯು ಮಾಯವಾಗಿಹೋಗುತ್ತದೆಂಬುದನ್ನು ಅರಿಯಿರಾ ನೀವು?" ಎಂದಳು.

ರಾಣಿಯು ಹಲ್ಲು ಕಡಿಯುತ್ತಾ, "ಬಾಂದಿ, ಮಾತನಾಡಬೇಡ ಹೋಗು. ನನ್ನೆದುರಿನಲ್ಲಿ ನಿಲ್ಲಬೇಡ. ನಿನ್ನ ಭವಾನೀರಾಣಿಯ ಐಶ್ವರ್ಯವು ನನಗೆ ತೃಣಪ್ರಾಯವಾದುದು. ಅದನ್ನು ನಾನು ಸ್ವೀಕರಿಸಿದರೆ ಈ ನಗರದ ಸಿಂಹಾಸನಕ್ಕೆ ಅಪಮಾನಮಾಡಿದಂತಾಗುತ್ತದೆ. ನಾನು ಬಲ್ಲೆ. ನನಗೆ ಅದು ಬೇಕಾಗಿಲ್ಲ. ನೀನು ಅಲ್ಪಪ್ರಾಣಿಯೆಂಬುದನ್ನು ನಾನು ನೂರುಬಾರಿ ಹೇಳುತ್ತೇನೆ. ಆದುದರಿಂದಲೇ ನಿನ್ನನ್ನು ಶಿಕ್ಷಿಸದೇ ಬಿಟ್ಟುಬಿಡುತ್ತೇನೆ. ನಡೆ, ನನ್ನೆದುರಿಗೆ ನಿಲ್ಲಬೇಡ" ಎಂದು ಗದ್ದರಿಸಿದಳು.

ಭೈರವಿಯು ನಗುತ್ತಾ, "ರಾಣಿಯವರೇ! ನಾನು ಹೊರಟು ಹೋಗುತ್ತೇನೆ. ಆದರೆ ನಾನು ಯಾವಾಗಲೂ ನಿಮ್ಮ ಬೆನ್ನುಹತ್ತಿದ ಬೇತಾಳವೆಂದು ತಿಳಿಯಿರಿ. ನಿಮ್ಮ ಪಾಪದ ಪುರಾಣವನ್ನು ಚಿತ್ರಿಸುವ ಚಿತ್ರಗುಪ್ತನೆಂದು ತಿಳಿಯಿರಿ" ಎಂದು ಅಂತಃಪುರದಿಂದ ಹೊರಗೆ ಹೋದಳು.

ರಾಣಿಯು ತನ್ನ ಅಂತಃಪುರದಲ್ಲಿ ಕುಳಿತು ಬಹಳ ಹೊತ್ತು ಯೋಚಿಸಿದಳು. ಕಡೆಗೆ ಒಂದು ಪತ್ರವನ್ನು ಬರೆದಳು. ಆ ಪತ್ರವನ್ನು ಪುನಃಪುನಃ ಓದಿದಳು. ಆ ಪತ್ರವು ಈ ಪರಿಯಾಗಿದ್ದಿತು :

ಭವಾನೀರಾಣಿಯವರೇ !

ತಮ್ಮ ದರ್ಶನದಿಂದ ನನಗೆಷ್ಟು ಸಂತೋಷವಾಯಿತೋ ತಾವು ತಮ್ಮ ಪೂರ್ಣಪರಿಚಯವನ್ನು ಕೊಡದಿದ್ದುದರಿಂದ ಅಷ್ಟೇ ವಿಷಾದವಾಗಿದೆ. ನಗರದ ಮಹಾರಾಣಿಯು ತಮ್ಮ ಪೂರ್ಣ ಭಿಕ್ಷೆಯನ್ನು ಸ್ವೀಕರಿಸುವುದು ಲಾಂಛನಾಸ್ಪದವಾದುದೆಂದು ಭಾವಿಸುತ್ತಾಳೆ. ಇನ್ನು ಮೇಲೆ ಮಲ್ಲಿಕಾರ್ಜುನಕ್ಷೇತ್ರದಲ್ಲಿ ತಮ್ಮ ಧರ್ಮದಲ್ಲಿ ಒಂದು ದೀವಿಗೆಯೂ ಉರಿಯಕೂಡದೆಂದು ರಾಜಾಜ್ಞೆಯಾಗುವುದು. ಈಗಿರುವದಕ್ಕಿಂತಲೂ ಶತಾಧಿಕವಾಗಿ ಭಗವತ್ಸೇವೆ ನಡೆಯುವಂತೆ ನಗರದ ರಾಜ್ಯದಿಂದ ವ್ಯವಸ್ಥೆ ಮಾಡಲಾಗುವುದು. ತಾವು ನಗರದ ರಾಜ್ಯವನ್ನು ಬಿಟ್ಟು

ಹೋಗುವುದಾದರೆ ಅದಕ್ಕಾಗಿ ನಾನು ವಿಷಾದಿಸುವುದಿಲ್ಲ. ಆದರೆ ತಮ್ಮ ಪೂರ್ಣಪರಿಚಯವನ್ನು ಕೊಡದೇ ತಾವು ನಗರದ ರಾಜ್ಯದ ಗಡಿಯನ್ನು ದಾಟಲಾರಿರಿ. ತಮ್ಮ ಪೂರ್ಣ ಪರಿಚಯವನ್ನು ಕೊಟ್ಟು ತಮ್ಮ ಸ್ವರ್ಣ ನಿಧಿಯನ್ನು ನಿರಾತಂಕವಾಗಿ ಸಾಗಿಸಿಕೊಂಡು ಬೇರಾವರಾಜ್ಯಕ್ಕಾದರೂ ತಾವು ಹೊರಟು ಹೋಗಲು ಯಾರ ಅಡ್ಡಿಯೂ ಇರುವುದಿಲ್ಲ. ತಾವು ಇಷ್ಟು ದಿನಗಳು ನನಗೆ ದರ್ಶನಕೊಡದೆ ಅಗೋಚರರಾಗಿದ್ದುದು ಎಷ್ಟು ಆಶ್ಚರ್ಯಕರವಾದುದೋ ಇಂದು ತಾವು ದರ್ಶನವಿತ್ತುದು, ಹಟಾತ್ತನೆ ಹೊರಟು ಹೋದುದೂ, ಅದಕ್ಕಿಂತಲೂ ಅತಿಶಯ ಆಶ್ಚರ್ಯಜನಕ ವಾದುದು. ನಾನು ತಮ್ಮನ್ನು ಸುಲಭವಾಗಿ ಮರೆತುಬಿಡುವುದಿಲ್ಲ.

ತಮ್ಮ ಸಹೋದರಿ,
**ಚೆಲುವಮ್ಮಣ್ಣಿ.**

ಹೀಗೆ ಪತ್ರವನ್ನು ಬರೆದು ಲಕ್ಕೋಟೆಯಲ್ಲಿ ಹಾಕಿ ಮುದ್ರೆಯನ್ನು ಒತ್ತಿಸಿ, ಭೈರವಿಯನ್ನು ಪುನಃ ಒಳಗೆ ಕರೆಸಿ "ಭೈರವಿ, ತೆಗೆದುಕೋ. ಈ ಪತ್ರವನ್ನು ನಿಮ್ಮ ಸನ್ಯಾಸಿನಿ ರಾಣಿಗೆ ತಲುಪಿಸು. ನಾವು ಅವರ ನಿಧಿಯನ್ನು ತಿರಸ್ಕರಿಸಿದ್ದೇವೆಂದು ಇದರಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದೆ ನಿನ್ನನ್ನು ಕ್ಷಮಿಸಿದ್ದೇನೆ. ನೀನು ನನ್ನ ಬಾಲ್ಯದ ಗೆಳತಿ. ಹೋಗು" ಎಂದು ಹೇಳಿ ಆ ಲಕ್ಕೋಟೆಯನ್ನು ಭೈರವಿಯ ಕೈಯಲ್ಲಿತ್ತಳು. ಭೈರವಿಯು ಆ ಪತ್ರವನ್ನು ಸ್ವೀಕರಿಸಿ ಆ ಅರಮನೆಯಿಂದ ಹೊರಟು ಹೋದಳು.

ರಾಣಿಯು ಇಂದಿನ ಪ್ರಾತಃಕಾಲದ ಘಟನೆಗಳನ್ನೆಲ್ಲಾ ಸ್ಮೃತಿ ಪಥಕ್ಕೆ ತಂದುಕೊಂಡಳು. ಭವಾನೀರಾಣಿಯ ಪ್ರಕಾಶಮಾನವಾದ ಕಣ್ಣುಗಳ ದೃಷ್ಟಿಯು ಅವಳ ಮನಸ್ಸನ್ನು ಕುಕ್ಕುತ್ತಿತ್ತು. ಭವಾನೀ ರಾಣಿಯ ದಿವ್ಯತೇಜಃಪುಂಜವಾದ ಮುಖಮಂಡಲವು ರಾಣಿಯ ಹೃದಯಪಟಲದಮೇಲೆ ಉಜ್ವಲವಾಗಿ ಪ್ರತಿಬಿಂಬಿಸುತ್ತಿತ್ತು. ಭವಾನೀ ರಾಣಿಯ ಅಮೃತದಂತಹ ಮಾತುಗಳು ನಗರದರಾಣಿಯ ಮನಸ್ಸಿನಲ್ಲಿ

ಪುನಃಪುನಃ ಪ್ರತಿಧ್ವನಿತವಾಗುತ್ತಿತ್ತು. ಕ್ರೋಧದಿಂದಾಗಲೀ, ದುಃಖ ದಿಂದಾಗಲೀ, ಆ ಹೃದಯದಲ್ಲಿ ನೆಟ್ಟ ಭವಾನೀರಾಣಿಯ ಕಣ್ಣುಗಳನ್ನು ಕಿತ್ತುಹಾಕಲು ಚೆಲುವಮ್ಮಣ್ಣಿಗೆ ಶಕ್ಯವಾಗಲಿಲ್ಲ. ಭವಾನೀರಾಣಿಯ ಆ ದಿವ್ಯಸುಂದರ ವದನವನ್ನು ಹೃದಯಪಟಲದಿಂದ ಅಳಿಸಿಬಿಡಲು ಚೆಲುವಮ್ಮಣ್ಣಿಗೆ ಶಕ್ತಿಯಿರಲಿಲ್ಲ. ಆದರಿಂದ ರಾಣಿಯ ಕ್ರೋಧವು ದುಃಖರೂಪವನ್ನು ತಾಳಿತು. ರಾಣಿಯು ಕಿಶೋರಿಯಂತೆ ಅಳ ತೊಡಗಿದಳು. ಬಿಕ್ಕಿಬಿಕ್ಕಿ ಅತ್ತಳು. "ನಾನು ಭವಾನೀರಾಣಿಯನ್ನು ನನ್ನ ಸಮೀಪದಲ್ಲಿಯೇ ನಿಲ್ಲಿಸಿಕೊಳ್ಳಲಾರದೆ ಹೋದನೇಕೆ? ಅದು ನನ್ನ ದೌರ್ಬಲ್ಯವಲ್ಲವೇ? ಆ ಹಾಳು ಭೈರವಿಯೊಡನೆ ಮಾತನಾಡಿದೆ ನೇಕೆ? ಅದು ನನ್ನ ಮಂದಬುದ್ಧಿಯ ಫಲವಲ್ಲವೇ? ಭವಾನೀರಾಣಿಯ ತಪ್ಪೇನು? ಎಂತಹ ಉದಾರಭಾವ! ಎಂತಹ ಗಾಂಭೀರ್ಯ! ತಪ್ಪೆಲ್ಲವೂ ನನ್ನದು. ಹೇಗಾದರೂ ಮಾಡಿ ನಾನು ಮತ್ತೊಮ್ಮೆ ಭವಾನೀರಾಣಿಯ ದರ್ಶನ ಮಾಡುತ್ತೇನೆ. ಆ ದೇವಿಯು ನನ್ನನ್ನು ಅನುಗ್ರಹಿಸಿದರೆ ನಾನು ಅವಳ ಶಿಷ್ಯಳಾಗುತ್ತೇನೆ ಈಗ ಅವಳನ್ನು ಹುಡುಕುವದೆಂತು?" ಎಂದು ಹಂಬಲಿಸತೊಡಗಿದಳು. ರಾಧೆಯನ್ನು ಗಟ್ಟಿಯಾಗಿ ಕೂಗಿದಳು. ರಾಧೆಯು ಸಮೀಪಕ್ಕೆ ಬಂದುನಿಂತಳು. ರಾಣಿಯು "ರಾಧೆ! ಆ ಭವಾನೀರಾಣಿಯನ್ನು ನೀನು ಇಂದು ಪ್ರಾತಃಕಾಲ ದರ್ಶನ ಮಾಡಿದೆಯಲ್ಲವೇ? ಆ ಮಹಾಮಹಿಮಳನ್ನು ಹೇಗಾದರೂ ಮಾಡಿ ಮತ್ತೆ ಕರೆತರಬಲ್ಲೆಯಾ? ನಿನಗೆ ಪುರಸ್ಕಾರ ಗಳನ್ನು ಕೊಡುವೆನು" ಎಂದಳು.

"ತಾಯೆ, ತಮ್ಮ ಕಾರ್ಯಕ್ಕಿಂತಲೂ ನನಗೆ ಮಿಗಿಲಾದುದೇನಿದೆ? ನಾನು ಹೇಗಾದರೂ ಆ ಸನ್ಯಾಸಿನಿಯನ್ನು ಇಲ್ಲಿಗೆ ಕರೆತರುವೆನು. ಅಪ್ಪಣೆ ಕೊಡೋಣವಾಗಲಿ" ಎಂದು ಹೇಳಿ ರಾಧೆಯು ಆ ಅರಮನೆ ಯಿಂದ ಹೊರಟುಹೋದಳು.

ವಿರೂಪಾಕ್ಷನು ಭವಾನೀರಾಣಿಯು ಈ ಅರಮನೆಗೆ ಪ್ರವೇಶ ಮಾಡಿದ ಮೊದಲುಗೊಂಡು ಹೊರಟುಹೋಗುವವರೆಗೆ ನಡೆದ ವೃತ್ತಾಂತ

ವೆಲ್ಲವನ್ನೂ ಮರೆಯಲ್ಲಿ ನಿಂತು ನೋಡುತ್ತಿದ್ದನು. ಅವನಿಗೆ ಭವಾನೀ ರಾಣಿಯನ್ನು ನೋಡಿ ಯಾವ ಗೌರವಬುದ್ಧಿಯೂ ಹುಟ್ಟಲಿಲ್ಲ. ರಾಣಿಯರಿಬ್ಬರೂ ಸಂಧಿಸಿ ಮಾತನಾಡುವಾಗ ಯಾರ ರೂಪವು ಹೆಚ್ಚು ಎಂದು ಅವನು ಒರೆ ಹಚ್ಚುತ್ತಿದ್ದನು. ಒಂದುಬಾರಿ ಭವಾನೀರಾಣಿಯ ಉಜ್ವಲರೂಪವು ಮಿಗಿಲಾದುದೆಂದು ಅವನಿಗೆ ಭಾಸವಾಗುತ್ತಿದ್ದಿತು. ಹೀಗೆ ಆ ಎರಡು ಸೌಂದರ್ಯಗಳ ತುಲನೆಯಲ್ಲಿ ವಿರೂಪಾಕ್ಷನು ನೈ ಮರೆತಿದ್ದನು. ಭವಾನೀರಾಣಿಯು ಅರಮನೆಯನ್ನು ಬಿಟ್ಟು ಹೊರಟು ಹೋದಮೇಲೆ ಅವನ ಮನಸ್ಸಿನಲ್ಲಿ ಭವಾನೀರಾಣಿಯ ಸುಂದರ ಮೂರ್ತಿಯೇ ಕುಣಿಯುತ್ತಿತ್ತು. ಅವನು ಆ ರಾಣಿಯು ಮ್ಯಾನಾ ಹೋದ ದಾರಿಯಲ್ಲಿ ಸ್ವಲ್ಪ ದೂರ ಹೋಗಿ ಹಿಂತಿರುಗಿ ಬರುತ್ತಿದ್ದನು. ದಾರಿಯಲ್ಲಿ ಭೈರವಿಯನ್ನು ಕಂಡನು. ಭೈರವಿಯು ಮಹಾದೇವನ ನಾಮಗಳನ್ನು ಹಾಡುತ್ತಾ ಹೋಗುತ್ತಿದ್ದಳು. ಎದುರಿಗೆ ಬರುತ್ತಿರುವ ವಿರೂಪಾಕ್ಷನನ್ನು ಅವಳು ಗಮನಿಸಲೇ ಇಲ್ಲ.

ವಿರೂಪಾಕ್ಷನು ಭೈರವಿಯನ್ನು ಅಡ್ಡಗಟ್ಟಿದನು. ಭೈರವಿಯು ಜಗ್ಗನೆ ಎದುರಿಗೆ ನಿಂತಿರುವರಾರೆಂದು ನೋಡಿದಳು. ಅವಳ ಕ್ರೋಧವು ನೂರುಮಡಿಯಾಯಿತು. ಅವಳು ತನ್ನ ಕೈಯಲ್ಲಿದ್ದ ತ್ರಿಶೂಲವನ್ನು ಅವನ ಎದೆಗೆ ಚಾಚಿ, "ವಿರೂಪಾಕ್ಷ, ಇಲ್ಲೇಕೆ ಬಂದೆ? ನನ್ನನ್ನೇಕೆ ಅಡ್ಡಗಟ್ಟಿದೆ? ಒಂದೇಬಾರಿಗೆ ನಿನ್ನ ಪ್ರಾಣವನ್ನು ಹಾರಿಸುತ್ತೇನೆ" ಎಂದು ಘರ್ಜಿಸಿದಳು. ವಿರೂಪಾಕ್ಷನು ನಗುತ್ತಾ ಆ ತ್ರಿಶೂಲವನ್ನು ತನ್ನ ಎಡಗೈಯಿಂದ ಕಿತ್ತುಕೊಂಡು—"ಭೈರವಿ, , ಮತ್ತಾರಾದರೂ ಆಗಿದ್ದರೆ ನಿನ್ನ ಆಟಾಟೋಪವನ್ನು ನೋಡಿ ನಡುಗಿಹೋಗುತ್ತಿದ್ದನು. ವಿರೂಪಾಕ್ಷನು ಇಂತಹ ಭೈರವಿಯನ್ನು ಆಡಿಸುವ ಮಹಾಭೈರವ. ಅದಿರಲಿ ಭೈರವಿ! ನೀನೆಲ್ಲಿರುವೆ? ಎಲ್ಲಿಗೆ ಹೋಗುತ್ತಿರುವೆ" ಎಂದನು

ಭೈರವಿಯು ಕೋಪದಿಂದ, "ನೀಚನೇ, ನನ್ನ ಗೋಜಿಗೆ ಬರ ಬೇಡ. ನನ್ನ ಮಾತು ನಿನಗೇಕೆ? ಆ ಅರಮನೆಯಲ್ಲಿ ರಾಣಿ ಚೆಲುವಮ್ಮಣ್ಣಿ ಇದ್ದಾಳೆ. ಅವಳ ಪದತಲದಲ್ಲಿ ಬಿದ್ದು ಕೇಳಿಕೋ.

ನಿನಗೆ ನಾನೇಕೆ ಬಂದೆನೆಂಬುದನ್ನು ಅವಳು ಹೇಳುತ್ತಾಳೆ. ನಾನು ಎಲ್ಲಿರುವೆನೆಂಬುದನ್ನೂ ಅವಳಿಂದ ತಿಳಿದುಕೋ. ಎಂದಾದರೊಂದು ದಿನ ನನ್ನ ತ್ರಿಶೂಲವು ನಿನ್ನ ರಕ್ತ ಪಾನಮಾಡುತ್ತದೆ. ದಾರಿಬಿಡು" ಎಂದು ಅಳುತ್ತಾ ಮುಂದೆಮುಂದೆ ಸರಿದಳು. ವಿರೂಪಾಕ್ಷನು ಅವಳ ತೋಳನ್ನು ಹಿಡಿದುಕೊಂಡು "ಭೈರವಿ, ಹೋಗಿ ಬಾ. ಇಲ್ಲಿ ನಾನು ನಿನ್ನನ್ನು ಕಾಡಿಸುವುದಿಲ್ಲ. ನನ್ನಲ್ಲಿ ವಲಿಯುದ ಹೆಣ್ಣು ನನಗೆ ತೃಣಕ್ಕಿಂತಲೂ ಕಡೆ. ಹೋಗು ಭೈರವಿ, ಎಲ್ಲಿಯಾದರೂ ಹೋಗು. ಭಿಕ್ಷವೆತ್ತಿ ಹೊಟ್ಟೆ ಹೊರೆದುಕೋ" ಎಂದು ತಳ್ಳಿದನು. ಭೈರವಿಯು ಭೂಮಿಯ ಮೇಲೆ ಮುಗ್ಗರಿಸಿ ಬಿದ್ದಳು.

ವಿರೂಪಾಕ್ಷನು ಅರಮನೆಯ ಒಳಗೆ ಪ್ರವೇಶಮಾಡಿದನು. ಅಂತಃಪುರಕ್ಕೆ ಹೋಗಿ ರಾಣಿಯನ್ನು ಕಂಡನು. ರಾಣಿ ಚೆಲುವಮ್ಮಣ್ಣಿಯ ಮುಖವು ಶುಷ್ಕವಾಗಿದ್ದಿತು. ಅವಳ ಮಂದಹಾಸದಲ್ಲಿ ಮಾಧುರ್ಯವಿರಲಿಲ್ಲ. ಕಣ್ಣುಗಳಲ್ಲಿ ಕಾಂತಿಯಿರಲಿಲ್ಲ. ವಿರೂಪಾಕ್ಷನು ರಾಣಿಯಲ್ಲಿ ಅಂತಹ ದೈನ್ಯಾವಸ್ಥೆಯನ್ನು ಎಂದೂ ಕಂಡಿರಲಿಲ್ಲ. ಅವನು ರಾಣಿಯೊಡನೆ ಭಯದಿಂದ ಮೆಲ್ಲಮೆಲ್ಲನೆ ಮಾತಿಗೆ ಆರಂಭಿಸಿದನು. "ರಾಣಿಯವರೇ, ಇಂದೇಕೆ ಇಷ್ಟೊಂದು ದುಃಖಿಗಳಾಗಿದ್ದೀರಿ?"

"ವಿರೂಪಾಕ್ಷ, ನನ್ನೊಡನೆ ಮಾತನಾಡಬೇಡ. ನಾನು ಇಂದು ದುಃಖಿಯಾಗಿರುವುದು ನಿಜ. ಈದಿನ ಭವಾನೀರಾಣಿಯನ್ನು ದರ್ಶನ ಮಾಡಿದೆ. ಉತ್ತರಕ್ಷಣದಲ್ಲಿಯೇ ಆ ಮಹಾನುಭಾವಳು ನನಗಿತ್ತ ಪ್ರಸಾದವನ್ನು ಭೂಮಿಯಲ್ಲಿ ಚೆಲ್ಲಿದೆ. ಅವಳ ಅನುಗ್ರಹವನ್ನು ತಿರಸ್ಕರಿಸಿ ಪತ್ರವನ್ನು ಬರೆದು ಕಳುಹಿಸಿದೆ. ನಾನು ತಪ್ಪುಮಾಡಿದೆ. ನನ್ನ ಅಪರಾಧವು ಅಕ್ಷಮ್ಯವಾದುದು. ನಾನು ಮತ್ತೊಮ್ಮೆ ಆ ದೇವಿಯ ದರ್ಶನವನ್ನು ಮಾಡುವವರಗೆ ಅನ್ನಾಹಾರಗಳನ್ನು ಸ್ವೀಕರಿಸುವದಿಲ್ಲವೆಂದು ಶಪಥಮಾಡಿದ್ದೇನೆ. ಇಲ್ಲಿ ನನಗೆ ಸಹಾಯಕರಾರೂ ಇಲ್ಲ. ರಾಧೆಯನ್ನು ಆ ದೇವಿಯ ಸಮ್ಮುಖಕ್ಕೆ ಕಳುಹಿಸಿಕೊಟ್ಟದ್ದೇನೆ. ಆ ದೇವಿಯು ನನ್ನ ಅಪರಾಧವನ್ನು ಕ್ಷಮಿಸುವಳೋ ಇಲ್ಲವೋ ಹೇಳಲಾರೆ.

ಭೈರವಿಯು ಈ ಮಧ್ಯೆ ಪುಷ್ಪದಲ್ಲಿ ಕೀಟದಂತೆ ಹತ್ತಿಕೊಂಡಿದ್ದಾಳೆ. ಅವಳು ಏನೇನು ಅನಾಹುತಗಳನ್ನು ತಂದಿಡುವಳೋ ಕಾಣೆ. ವಿರೂಪಾಕ್ಷ! ನೀನೇನು ಮಾಡಬಲ್ಲೆ? ನೀನು ಹೋಗು. ನನ್ನೊಬ್ಬಳನ್ನೇ ಇಂದು ದುಃಖಪಡಲು ಬಿಟ್ಟುಹೋಗು."

"ಇಲ್ಲ ರಾಣಿಯವರೇ, ನಾನು ಭವಾನೀರಾಣಿಯವರಿಂದ ಸ್ಥಳವನ್ನು ಪತ್ತೆಹಚ್ಚಬಲ್ಲೆ. ಆ ಸನ್ಯಾಸಿನಿಯನ್ನು ಪ್ರಾರ್ಥನೆಯಿಂದಲೋ ಉಪಾಯದಿಂದಲೋ ನಿಮ್ಮಲ್ಲಿಗೆ ಕರೆತಂದು ಸ್ನೇಹ ಮಾಡಿಸಬಲ್ಲೆ. ನನ್ನ ಸಾಮರ್ಥ್ಯದಲ್ಲಿ ನಿಮಗೆ ಅಷ್ಟು ನಂಬಿಕೆಯಿಲ್ಲವೆ?"

ರಾಣಿಯು ನಿಟ್ಟುಸಿರುಬಿಟ್ಟು, "ವಿರೂಪಾಕ್ಷ, ಹೇಗಾದರೂ ಮಾಡು ಹೋಗು" ಎಂದಳು.

ವಿರೂಪಾಕ್ಷನು ಅಲ್ಲಿಂದ ಹೊರಗೆ ಹೊರಟನು. ಸ್ವಲ್ಪಹೊತ್ತಿನೊಳಗಾಗಿ ಅಶ್ವಾರೂಢನಾಗಿ ಭೈರವಿಯು ಯಾವ ಮಾರ್ಗದಲ್ಲಿ ಹೋಗುತ್ತಿದ್ದಳೋ ಆ ಮಾರ್ಗಾನುಕ್ರಮಣ ಮಾಡಿದನು. ಮಧ್ಯ ಮಾರ್ಗದಲ್ಲಿ ಭೈರವಿಯು ಒಂದು ಗಿಡದಕೆಳಗೆ ಕುಳಿತಿದ್ದಳು. ಕುದುರೆಯ ಕಾಲುಸಪ್ಪಳವನ್ನು ಕೇಳಿ ದಿಗಿಲುಬಿದ್ದು ನೋಡಿದಳು. ಅಶ್ವಾರೋಹಿಯು ವಿರೂಪಾಕ್ಷನಾಗಿದ್ದನು. ವಿರೂಪಾಕ್ಷನು ಭೈರವಿಯನ್ನು ನೋಡುತ್ತಲೇ ಕುದುರೆಯಿಂದ ಕೆಳಗಿಳಿದನು ಭೈರವಿಯ ಸಮೀಪಕ್ಕೆ ಹೋಗಿ ಮೃದುನುಡಿಗಳಿಂದ ಅವಳನ್ನು ಮಾತನಾಡಿಸಿದನು.

"ಭೈರವೀರಾಣಿ, ಚೆಲುವಮ್ಮಣಿಯು ನಿನ್ನನ್ನು ಕರೆತರುವಂತೆ ಅಪ್ಪಣೆಮಾಡಿದ್ದಾಳೆ, ನಡೆ, ಅರಮನೆಗೆ ಹೋಗುವ."

ಭೈರವಿಯು ಕೋಪದಿಂದ, "ವಿರೂಪಾಕ್ಷ, ನಿನ್ನ ರಾಣಿಯಿಂದ ನನಗೇನು ಕೆಲಸ? ನಿನ್ನೊಡನೆ ನನಗೇನು ಮಾತು? ಹೋಗು ನನ್ನ ಎದುರಿಗೆ ನಿಲ್ಲಬೇಡ" ಎಂದಳು.

ವಿರೂಪಾಕ್ಷನು ಎಷ್ಟೋ ವಿಧವಾಗಿ ಭೈರವಿಯನ್ನು ಸಂತೈಸಿದನು. ಭೈರವಿಯ ಕೈಯಲ್ಲಿದ್ದ ರಾಣಿಯ ಲಕ್ಕೋಟೆಯನ್ನು ಕೈಗೆ ತೆಗೆದುಕೊಂಡು ಮುದ್ರೆಯನ್ನು ಬಿಚ್ಚಿ ಓದಿನೋಡಿದನು.

"ಭೈರವಿ, ಈ ಲಕ್ಕೋಟಿಯನ್ನು ನಿನ್ನಿಂದ ತೆಗೆದುಕೊಂಡು ಭವಾನೀರಾಣಿಯವರಿಗೆ ನಾನೇ ಖುದ್ದು ತಲುಪಿಸಬೇಕೆಂದು ರಾಣಿಯವರ ಅಪ್ಪಣೆಯಾಗಿದೆ. ಭವಾನೀರಾಣಿಯವರು ಎಲ್ಲಿದ್ದಾರೆಯೋ ಹೇಳು ನಾನೇ ತೆಗೆದುಕೊಂಡು ಹೋಗಿ ಈ ಪತ್ರವನ್ನು ತಲಪಿಸುತ್ತೇನೆ" ಎಂದನು.

"ಸರಿಯಾದ ಕೆಲಸ. ಚೆಲುವಮ್ಮಣ್ಣಿಯ ದೂತನಾಗಿ ಹೋಗಲು ನೀನೇ ಲಾಯಕ್ಕಾದ ಮನುಷ್ಯ. ಹೋಗು, ನೀನೇ ತೆಗೆದುಕೊಂಡು ಹೋಗು. ಭವಾನೀರಾಣಿಯವರಿಗೆ ಈ ಪತ್ರವನ್ನೊಪ್ಪಿಸು ನಾನೇ ವಿರೂಪಾಕ್ಷನೆಂದು ಹೇಳಿಕೋ. ನನಗೂ ಬಲು ಸಂತೋಷ ಹೋಗು."

"ಭೈರವಿ, ನೀನೂ ನನ್ನೊಡನೆ ಬಾ. ನಿನಗಿಂತಲೂ ನನಗೆ ಶ್ರೇಯೋಭಿಲಾಷಿಯಾದ ದೂತಿಯು ಮತ್ತಾವಳೂ ಇಲ್ಲ. ಅಂದು ಆ ಚೆಲುವಮ್ಮಣ್ಣಿಯ ಅಂತಃಪುರಕ್ಕೆ ನನ್ನನ್ನು ಕರೆದೊಯ್ದುವಳು ನೀನೇ ಅಲ್ಲವೇ? ಇಂದು ಭವಾನೀರಾಣಿಯವರ ಸಮ್ಮುಖಕ್ಕೂ ನೀನೇ ಕರೆದುಕೊಂಡು ಹೋಗು."

"ಅಯ್ಯೋ ಪಾಪಿಯೇ ನಿನ್ನ ಚೆಲುವಮ್ಮಣ್ಣಿಯೆಲ್ಲಿ, ಭವಾನೀರಾಣಿಯೆಲ್ಲಿ! ಭವಾನೀರಾಣಿಯ ಸಮ್ಮುಖದಲ್ಲಿ ಉಜ್ವಲವಾದ ಪ್ರದೀಪ್ತವಾದ ದೀಪದಲ್ಲಿ ಬೀಳುವ ಪತಂಗದಂತೆ ಉರಿದು ಹೋಗುವೆ ನೀನು. ಪಾಪಿಯೇ, ನಿನ್ನ ದೃಷ್ಟಿಯು ಪಾಪದೃಷ್ಟಿ. ನಿನ್ನ ಮಾತುಗಳು ಪಾಪಾವಿಷ್ಟವಾದವು. ನಿನ್ನ ಶರೀರವು ಪಾಪಪೂರಿತವಾದುದು. ನಿನ್ನ ಜನ್ಮವೇ ಪಾಪಮಯವಾದುದು. ನಿನ್ನ ಮರಣವೂ, ಸಾವೂ ಪಾಪದಲ್ಲಿಯೇ ಆಗುವುದು. ಹೋಗು, ಎಲ್ಲಿಗೆ ಬೇಕಾದರೂ ಹೋಗು. ಭವಾನೀರಾಣಿಯ ಸಮ್ಮುಖಕ್ಕಾದರೂ ಹೋಗು. ರೌರವ ನರಕಕ್ಕಾದರೂ ಹೋಗು. ನಾನು ನಿನ್ನ ಜೊತೆಯಲ್ಲಿ ಬರುವುದಿಲ್ಲ" ಎಂದು ಭೈರವಿಯು ಮುಖವನ್ನು ತಿರುಗಿಸಿಕೊಂಡು ಹೊರಟು ಹೋದಳು.

ವಿರೂಪಾಕ್ಷನು "ಭೈರವಿಯು ಎಲ್ಲಿ ಹೋದರೆ ನನಗೇನು? ನನಗೆ ಬೇಕಾಗಿದ್ದುದು ಪತ್ರ. ಅದು ನನ್ನ ಕೈಗೆ ಸಿಕ್ಕಿದೆ. ಈಗ ಭವಾನೀ

ರಾಣಿಯು ಬಿಡಾರ ಮಾಡಿರುವ ಸ್ಥಳಕ್ಕೆ ನಾನು ಹೋಗಿ ಸೇರಬೇಕಾದರೆ ಹನ್ನೆರಡು ಮೈಲಿಗಳನ್ನು ದಾಟಿ ಹೋಗಬೇಕು. ಹೇಗಾದರೂ ನಾನು ಅಲ್ಲಿಗೆ ಹೊತ್ತು ಮುಳುಗಿದಮೇಲೆಯೇ ತಲುಪಬೇಕು" ಎಂದು ಆಲೋಚಿಸಿಕೊಂಡು ದುರ್ಗದಲ್ಲಿದ್ದ ಅರಮನೆಗೆ ಹಿಂತಿರುಗಿ ಬಂದನು.

ಮಧ್ಯಾನ್ಹ ತನ್ನ ಕಾರ್ಯಗಳೆಲ್ಲವನ್ನೂ ತೀರಿಸಿಕೊಂಡು ಪರಮಾಪ್ತರಾದ ಹತ್ತು-ಹನ್ನೆರಡುಮಂದಿ ಕಟ್ಟಾಳುಗಳನ್ನು ಜೊತೆಯಲ್ಲಿ ಕರೆದುಕೊಂಡು ಹೊರಟನು. ಎಲ್ಲರೂ ಅಶ್ವಾರೋಹಿಗಳಾಗಿ ಆಯುಧ ಪಾಣಿಗಳಾಗಿಯೇ ಹೊರಟರು. ವಿರೂಪಾಕ್ಷನು ಆ ಕಾಡುಹಾದಿಯಲ್ಲಿ ಕುದುರೆಯ ಮೇಲೆ ಕುಳಿತು, "ಭವಾನೀರಾಣಿಯನ್ನು ಹೇಗೆ ಸಂಧಿಸ ಬೇಕು? ಹೇಗೆ ಮಾತನಾಡಬೇಕು?" ಎಂದು ಆಲೋಚಿಸುತ್ತಾ ಕುದುರೆಯ ಮೇಲೆ ನಡೆದನು. ಅವನಿಗೆ ಎಷ್ಟೋ ವಿಧವಾದ ಆಲೋ ಚನೆಗಳು ಹೊಳೆಯ ತೊಡಗಿದವು. ಭವಾನೀರಾಣಿಯು ಗೈರಿಕವಸನ ಧಾರಿಣಿಯಾದ ಸನ್ಯಾಸಿನಿಯಾಗಿದ್ದರೂ ಎಂತಹ ರೂಪ! ಇಷ್ಟೊಂದು ಲೋಕೋತ್ತರ ಸೌಂದರ್ಯವತಿಯು ಸನ್ಯಾಸಗ್ರಹಣ ಮಾಡಿರುವಳೇಕೆ? ಇವಳು ಸರ್ವಸಂಗಪರಿತ್ಯಾಗಿಣಿಯಾದ ಸನ್ಯಾಸಿನಿಯಾಗಿದ್ದರೆ ಜನರು ಯಾರೂ ಕಾಣದಂತೆ ಎಲ್ಲಿಯೋ ತನ್ನನ್ನು ಮರೆಮಾಚಿ ಇಟ್ಟುಕೊಂಡಿರು ವಳೇಕೆ? ಈ ನಗರದ ರಾಜ್ಯದಲ್ಲಿ ಇಷ್ಟುದಿವಸಗಳಮೇಲೆ ಇಂದು ಎಲ್ಲಿಯೋ ಮರೆಯಲ್ಲಿ ನಿಂತು ನಾನು ಅವಳನ್ನು ನೋಡಿದೆ. ಆದರೆ ಹೇಗೆ ಸೌಂದರ್ಯನಿಧಿಯಾಗಿದ್ದಾಳೆಯೋ ಹಾಗೆಯೇ ಸೌಜನ್ಯದ ಖಣಿಯೂ ಆಗಿದ್ದಾಳೆ. ಸುಲಭವಾಗಿ ಅವಳ ಸ್ನೇಹವನ್ನು ಸಂಪಾದನೆ ಮಾಡಬಹುದು. ಹಾಗಾದರೆ ಅದು ನನ್ನ ಭಾಗ್ಯವೇ ಸರಿ. ರಾಣಿ ಚೆಲುವಮ್ಮಣ್ಣಿಯು ಸ್ವಲ್ಪ ಹೆಮ್ಮೆಪಡುವ ಹೆಂಗಸು. ಅವಳು ಭವಾನೀ ರಾಣಿಯ ಐಶ್ವರ್ಯವನ್ನು ತಿರಸ್ಕರಿಸುತ್ತಾಳೆ. ಭೈರವಿಯು ಹೇಳಿದಂತೆ ಭವಾನೀರಾಣಿಯ ಭಾಗ್ಯವು ಚೆಲುವಮ್ಮಣ್ಣಿಯ ಐಶ್ವರ್ಯಕ್ಕಿಂತಲೂ ಮಿಗಿಲಾಗಿಯೇ ಇರಬಹುದು. ನಾನು ಹೇಗಾದರೂ ಮಾಡಿ ಭವಾನೀ ರಾಣಿಯನ್ನು ವಶಪಡಿಸಿಕೊಂಡರೆ ಆ ಐಶ್ವರ್ಯವು ನನ್ನ ಕೈಗೆ ಲಭಿಸಿ

ದರೂ ಅಭಿಸಬಹುದು. ಒಂದುಪಕ್ಷ ಭವಾನೀರಾಣಿಯು ನನ್ನೊಡನೆ ಸೌಜನ್ಯವನ್ನು ತೋರದೆ ತಿರಸ್ಕರಿಸಿದರೆ, ನನ್ನನ್ನು ಕೋಪಗೊಂಡು ತಳ್ಳಿಹಾಕಿದರೆ, ನಾನೇನು ಮಾಡುವುದು? ಭವಾನೀರಾಣಿಯಿಂದ ಅವಮಾನಿತನಾದರೆ ಚೆಲುವಮ್ಮಣ್ಣಿಯು ನನ್ನನ್ನು ಎಷ್ಟು ಲಾಘವ ವಾಗಿ ಕಾಣುವಳು? ನಾನು ಎಂತಹ ಪರಿಹಾಸ್ಯಕ್ಕೆ ದಿಕ್ಕಾಗುವೆನು? ಎಂದುಕೊಳ್ಳುತ್ತಾ ಹೋದನು. ಹೀಗೆಯೇ ಆಲೋಚನೆಗಳಮೇಲೆ ಆಲೋಚನೆಗಳು ಬರುತ್ತಿದ್ದವು. ಎಷ್ಟು ಆಲೋಚನೆಗಳು ಬಂದರೂ ತಾನೇ ಸರ್ವಶಕ್ತನೆಂಬ ಹೆಮ್ಮೆಯು ಅವನನ್ನು ಹುರಿದುಂಬಿಸುತ್ತಿತ್ತು.

ವಿರೂಪಾಕ್ಷನು ಆ ಕಾಡಿನ ಮಧ್ಯದಲ್ಲಿ ಕಲ್ಲುಮಂಟಪದಲ್ಲಿ ಭವಾನೀರಾಣಿಯು ಬಿಡಾರ ಮಾಡಿದ್ದ ಸ್ಥಳದ ಸಮೀಪವನ್ನು ಸೇರಿದನು. ತನ್ನ ಅನುಚರರಿಗೆ ಏನು ಹೇಳಬೇಕೋ ಅವೆಲ್ಲವನ್ನೂ ಹೇಳಿ ಅವರನ್ನೆಲ್ಲಾ ದೂರಬಿಟ್ಟು ತಾನು ಭವಾನೀರಾಣಿಯ ಬಿಡಾರದ ಸಮೀಪಕ್ಕೆ ಹೋದನು. ಬಾಗಿಲಿನಲ್ಲಿ ಕಾದಿದ್ದ ಪರಿಚಾರಕನೊಬ್ಬನನ್ನು ಕಂಡು "ಅಯ್ಯಾ, ಭವಾನೀರಾಣಿಯುವರು ವಸತಿ ಮಾಡಿರುವ ಸ್ಥಳವು ಇದೇಯೋ?" ಎಂದು ವಿಚಾರಿಸಿದನು. ಅವನು ವಿರೂಪಾಕ್ಷನನ್ನು ಆ ಪಾದ ಮಸ್ತಕ ನೋಡಿ ಯಾರೋ ದೊಡ್ಡ ಮನುಷ್ಯನಾದ ರಾಜಪುರುಷನೆಂದು ಭಾವಿಸಿ "ಹೌದು ಒಡೆಯರೇ, ಇದು ಮಹಾರಾಣಿ ಯುವರ ಬಿಡಾರ" ಎಂದು ಹೇಳಿದನು. ವಿರೂಪಾಕ್ಷನು ಸವಿನುಡಿಯಿಂದ ಅವನೊಡನೆ ಮಾತನಾಡುತ್ತಾ "ಅಯ್ಯಾ, ದ್ವಾರಪಾಲಕನೇ, ನಿಮ್ಮ ರಾಣಿಯುವರಲ್ಲಿ ಹೋಗಿ ಬಿನ್ನೈಸು. ನಗರದ ರಾಣಿಯುವರ ಸಮ್ಮುಖ ದಿಂದ ಸಂದೇಶವನ್ನು ತೆಗೆದುಕೊಂಡು ರಾಜಕರ್ಮಚಾರಿಯು ಬಂದಿದ್ದಾ ನೆಂದು ಅರಿಕೆಮಾಡು. ಅವರ ಭೇಟಿಯನ್ನು ನನಗೆ ಮಾಡಿಸು" ಎಂದು ಹೇಳಿದನು. ಆ ದ್ವಾರಪಾಲಕನು ಮಂಟಪದೊಳಗೆ ಪ್ರವೇಶ ಮಾಡಿ ಸುಖಾಸನದಲ್ಲಿ ಕುಳಿತಿದ್ದ ಭವಾನೀರಾಣಿಯುವರಿಗೆ ಕೈಮುಗಿದು, "ದೇವಿಯುವರೇ, ನಗರದ ರಾಣಿಯುವರ ಅರಮನೆಯಿಂದ ಯಾರೋ ರಾಜಕರ್ಮಚಾರಿಗಳು ತಮ್ಮ ದರ್ಶನಾರ್ಥಿಗಳಾಗಿ ಬಂದಿದ್ದಾರೆ"

ಎಂದು ಅರಿಕೆ ಮಾಡಿದನು. ಭವಾನೀರಾಣಿಯು ಆಶ್ಚರ್ಯಕುತೂಹಲ ಗಳಿಂದ "ಅವರನ್ನು ಒಳಗೆ ಕರೆ ತಾ" ಎಂದು ಅಪ್ಪಣೆ ಮಾಡಿದಳು.

ದ್ವಾರಪಾಲಕನು ಆಗಂತುಕನನ್ನು ಜೊತೆಯಲ್ಲಿ ಕರೆದುಕೊಂಡು ಆ ಮಂಟಪದೊಳಗೆ ಪ್ರವೇಶಮಾಡಿದನು. ಆ ಮಂಟಪವು ಎರಡು ಭಾಗಗಳಾಗಿತ್ತು. ಮುಂಭಾಗದ ಮಂಟಪ. ಒಳಾಂಗಣದ ಮಂಟಪ. ಮುಂಭಾಗದ ಮಂಟಪದಲ್ಲಿ ಏನೂ ಇರಲಿಲ್ಲ. ಎರಡು ದೊಡ್ಡ ದೀವಿಗೆ ಗಳು ಉರಿಯುತ್ತಿದ್ದವು. ಒಳಾಂಗಣದ ಮಂಟಪದ ಬಾಗಿಲು ಅರ್ಧ ಮುಚ್ಚಿತ್ತು. ಒಳಗಡೆ ಒಂದು ಪಕ್ಕದಲ್ಲಿ ಚಿಕ್ಕದಾದ ಶತರಂಜಿಯನ್ನು ಹಾಸಿ ಅದರಮೇಲೆ ಮೃದುವಾದ ಒಂದು ತಲ್ಪವು ಅಣಿಮಾಡಲ್ಪಟ್ಟಿದ್ದಿತು. ಆ ತಲ್ಪದಮೇಲೆ ನಯವಾದ ಬಿಳಿಯ ರೇಷ್ಮೆಯ ಬಟ್ಟೆಯು ಹಾಸಲ್ಪಟ್ಟಿದ್ದಿತು. ಎದುರಿಗೆ ಸಣ್ಣದಾದ ಚಚ್ಚೌಕದ ಶತರಂಜಿಯೊಂದು ಹಾಸಲ್ಪಟ್ಟಿದ್ದಿತು. ಎರಡು ಪ್ರಶಸ್ತವಾದ ದೀಪಸ್ತಂಭಗಳಲ್ಲಿ ಬತ್ತಿಗಳನ್ನು ಹಾಕಿ ದೀಪಗಳು ಜೊತ್ತಿಸಲ್ಪಟ್ಟಿದ್ದವು. ದ್ವಾರಪಾಲಕನು ಹೊರಗೆ ನಿಂತು ಕೊಂಡು ಆಗಂತುಕನನ್ನು ಒಳಗೆ ಕಳುಹಿಸಿದನು. ಆಗಂತುಕನು ಮಂಟಪದೊಳಗೆ ಬಂದು ಸುಖಾಸನಾಸೀನಳಾಗಿದ್ದ ಭವಾನೀರಾಣಿ ಯನ್ನು ದರ್ಶನಮಾಡಿದನು. ಸನ್ಯಾಸಿನಿಯನ್ನು ನೋಡಿ ಭಕ್ತಿಭಾವ ದಿಂದ ಎರಡು ಕೈಗಳಿಂದಲೂ ವಂದಿಸಿ ನಿಂತುಕೊಂಡನು. ಭವಾನೀ ರಾಣಿಯು ಮುಗುಳುನಗೆಯಿಂದ "ರಾಜಕರ್ಮಚಾರಿಗಳೇ, ಕುಳಿತು ಕೊಳ್ಳಿರಿ. ತಾವು ದಯಮಾಡಿಸಿದ ಕಾರ್ಯವೇನು?" ಎಂದಳು.

ವಿರೂಪಾಕ್ಷನು ಆಸನದಲ್ಲಿ ಕುಳಿತುಕೊಂಡು "ದೇವಿಯವರೇ, ನಗರದ ರಾಣಿಯವರು ನನ್ನನ್ನು ತಮ್ಮಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ. ಬಹುದಿವಸಗಳಿಂದ ತಮ್ಮ ಜನರನ್ನು ಮಹಾರಾಣಿಯವರು ಕೇಳಿ ದ್ದಾರೆ. ಇಂದು ತಮ್ಮ ದರ್ಶನವು ಲಭ್ಯವಾದರೂ ಅವರಿಗೆ ತಮ್ಮ ಪೂರ್ಣಪರಿಚಯವು ದೊರೆಯದಿದ್ದುದು ಖೇದಕ್ಕೆ ಕಾರಣವಾಗಿದೆ. ತಾವು ಅರಮನೆಗೆ ಮತ್ತೊಮ್ಮೆ ದಯಮಾಡಿಸಿ ಅಲ್ಲಿಯೇ ಒಂದೆರಡು ದಿವಸಗಳು ಬಿಡಾರಮಾಡಬೇಕೆಂದು ನಮ್ಮ ರಾಣಿಯವರು ತಮ್ಮಲ್ಲಿ

ಪ್ರಾರ್ಥನೆಮಾಡುತ್ತಾರೆ. ತಮ್ಮ ಸ್ನೇಹಕ್ಕಾಗಿ ಅವರು ಬಹಳ ಆಸೆ ಪಡುತ್ತಾರೆ." ಎಂದನು

"ರಾಜಕರ್ಮಚಾರಿಗಳೇ, ರಾಣಿಯವರ ಆದರವಿಶ್ವಾಸಗಳಿಗಾಗಿ ನಾನು ಬಹಳ ಸಂತೋಷಪಡುತ್ತೇನೆ. ಆದರೆ ನಾನು ರಾಣಿಯವರ ಅರಮನೆಯಲ್ಲಿದ್ದು ಅವರ ಆತಿಥ್ಯವನ್ನು ಸ್ವೀಕರಿಸಲು ಸಾಧ್ಯವಿಲ್ಲದೆ ಇದೆ. ಅದಕ್ಕಾಗಿ ಅವರಲ್ಲಿ ನಾನು ಕ್ಷಮೆಬೇಡಿದನೆಂದು ನೀವು ನನಗಾಗಿ ತಿಳಿಸಿರಿ."

"ದೇವಿಯವರೇ, ತಾವು ಮಹಾರಾಣಿಯವರ ಸಹವಾಸದಲ್ಲಿ ಒಂದೆರಡು ದಿವಸಗಳು ಇರುವುದಕ್ಕೂ ಒಪ್ಪುವುದಿಲ್ಲ. ಇದಕ್ಕೆ ಏನೋ ಒಂದು ಪ್ರತ್ಯವಾಯವಿರಬೇಕು. ಯಾವುದೋ ಒಂದು ಅಭೇದ್ಯವಾದ ಅಂತರಂಗದಲ್ಲಿ ತಾವು ಮಗ್ನರಾಗಿರಬೇಕು. ಅದು ನಮ್ಮ ಕುತೂಹಲ ವನ್ನು ಹೆಚ್ಚುಮಾಡುತ್ತದೆ."

ಭವಾನೀರಾಣಿಯು ರಾಜಕರ್ಮಚಾರಿಯ ಧ್ವನಿಯಲ್ಲಿ ಕಂಡ ಸ್ವಲ್ಪ ಕಾಠಿಣ್ಯವನ್ನು ಅರ್ಥಮಾಡಿಕೊಂಡು, "ಹೌದು, ರಾಜಕರ್ಮಚಾರಿಗಳೇ, ಪ್ರಬಲವಾದ ಆಭ್ಯಂತರವಿದೆ" ಎಂದು ಉತ್ತರಕೊಟ್ಟಳು.

"ದೇವಿಯವರೇ, ನಮ್ಮ ರಾಜ್ಯದಲ್ಲಿ ಈಗ ಎಷ್ಟೋ ಭಯ ಭೀತಿಗಳು ಕಂಡುಬರುತ್ತಿವೆ. ತಾವು ರಾಣಿಯವರೊಡನೆ ಸಂಭಾಷಣೆ ಮಾಡುವಾಗ ಈ ರಾಜ್ಯಕ್ಕೆ ಪ್ರಬಲವಾದ ಅಪಾಯವು ತಟ್ಟುವುದೆಂದು ತಮಗೆ ಸ್ವಪ್ನವಾದಂತೆ ಹೇಳೋಣವಾಗಿದೆ. ನಾವು ಅದನ್ನು ಸ್ವಪ್ನವೆಂದು ಭಾವಿಸುವುದಿಲ್ಲ. ನಿಜವಾದ ಯಾವುದೋ ತಂತ್ರವಿದೆ ಯೆಂದೂ ಅದರಲ್ಲಿ ತಮ್ಮ ಭಾಗವಿದೆಯೆಂದೂ ನಮಗೆ ಸಂದೇಹವಾಗಿದೆ"

ಭವಾನೀರಾಣಿಯು ನಗುತ್ತಾ "ರಾಜಕರ್ಮಚಾರಿಗಳೇ, ನೀವು ಒಳ್ಳೆಯ ಬುದ್ಧಿವಂತರೆಂದು ಕಾಣುತ್ತದೆ. ಹೌದು, ಈ ರಾಜ್ಯದಮೇಲೆ ಭಯಾನಕ ಕಾರ್ಮೋಡಗಳು ಕವಿದಿವೆ. ಅದು ನನಗೆ ಪ್ರತ್ಯಕ್ಷ ವಾಗಿಯೇ ಇದೆ ಅದರಲ್ಲಿ ನನಗೆ ಭಾಗವಿಲ್ಲದಿದ್ದರೂ ಈ ರಾಜ್ಯದಲ್ಲಿನಡೆ ಯುವ ಕಾರ್ಯಗಳ ಫಲಾಫಲಗಳೆಲ್ಲವೂ ನನಗೆ ತಟ್ಟುತ್ತವೆ. ಆದ್ದರಿಂದಲೇ

ನಾನು ಈ ರಾಜ್ಯವನ್ನು ಬಿಟ್ಟುಹೋಗುವ ನಿಶ್ಚಯ ಮಾಡಿದ್ದೇನೆ."

"ದೇವಿಯವರೇ, ತಾವು ಈ ರಾಜ್ಯವನ್ನು ಬಿಟ್ಟು ಹೋಗುವುದಾದರೆ ಹೊರಟು ಹೋಗಬಹುದು. ತಮ್ಮ ಪೂರ್ಣಪರಿಚಯವನ್ನು ಕೊಟ್ಟು ಹೋಗಬೇಕು. ತಮ್ಮ ನಿಧಿಯನ್ನು ಮಹಾರಾಣಿಯವರು ಸ್ವೀಕರಿಸುವುದಿಲ್ಲ."

ಭವಾನೀರಾಣಿಯು ಆಶ್ಚರ್ಯದಿಂದ, "ನನ್ನ ನಿಧಿಯನ್ನು ಮಹಾರಾಣಿಯು ಸ್ವೀಕರಿಸುವುದಿಲ್ಲ; ನನ್ನ ಪೂರ್ಣಪರಿಚಯವನ್ನು ಕೊಡಬೇಕು! ನಾನು ಹೊರಟು ಹೋಗಬಹುದು! ಓಹೋ! ಇದು ನಿಮ್ಮ ಮಹಾರಾಣಿಯವರ ಅಭಿಪ್ರಾಯವೊ? ಇದಕ್ಕೆ ಆಧಾರವೇನು? ನೀವಾರು? ನಿಮ್ಮ ಹೆಸರೇನು?"

"ಭವಾನೀರಾಣಿಯವರೇ, ನನ್ನ ಹೆಸರು ವಿರೂಪಾಕ್ಷ ಒಡೆಯ. ಆಧಾರವು ಈ ಪತ್ರದಲ್ಲಿದೆ. ತೆಗೆದುಕೊಳ್ಳಿರಿ" ಎಂದು ಎದ್ದುನಿಂತು ಆ ಲಕ್ಕೋಟೆಯನ್ನು ರಾಣಿಯ ಮುಂದಿಟ್ಟು ಸರಿದು ನಿಂತುಕೊಂಡನು. ಭವಾನೀರಾಣಿಯು ಆ ದೀಪದ ಎದುರಿನಲ್ಲಿ ಆ ರಾಜಪುರುಷನನ್ನು ನಖಶಿಖಾಂತವಾಗಿ ದುರದುರನೆ ನೋಡಿದಳು. "ಓಹೋ! ನೀವೋ ವಿರೂಪಾಕ್ಷ ಒಡೆಯರು" ಎಂದು ಹೇಳಿ ಆ ಪತ್ರವನ್ನು ಬಿಚ್ಚಿ ಓದಿಕೊಂಡಳು. "ಕರ್ಮಚಾರಿಗಳೇ, ಇದು ಯಾರ ಕೈಬರಹ?"

"ಭವಾನೀರಾಣಿಯವರೇ! ಇದು ಸ್ವದಸ್ತೂರು ಮಹಾರಾಣಿಯವರ ಕೈಬರಹ."

"ಒಳ್ಳೆಯದು, ನೀವು ಇಲ್ಲಿಂದ ಹೊರಟು ಹೋಗಬಹುದು. ನನ್ನ ನಿಧಿಯು ನನ್ನಲ್ಲಿಯೇ ಇದೆ. ನಿಮ್ಮ ಮಹಾರಾಣಿಯವರು ನನ್ನನ್ನು ಪೂರ್ಣವಾಗಿ ತಿರಸ್ಕರಿಸಿದ್ದಾರೆ. ಸಂತೋಷ. ನೀವು ಇಲ್ಲಿಂದ ಹೊರಟುಹೋಗಿರಿ."

"ಭವಾನೀರಾಣಿಯವರೇ, ಹಾಗೆ ಹೋಗಲು ಸಾಧ್ಯವಿಲ್ಲ. ತಮ್ಮ ಪರಿಚಯವನ್ನು ಕೊಡಬೇಕು. ಅಥವಾ ತಾವೇ ನನ್ನೊಡನೆ ಬರಬೇಕು."

ಭವಾನೀರಾಣಿಯು ಕ್ರೋಧದಿಂದ ಎದ್ದು ನಿಂತು "ನಾನು ನಿಮ್ಮೊಡನೆ ಬರಬೇಕು. ನಾನು ಬಂದಿಯೆಂದು ಭಾವಿಸಿದಿರೋ?" ಎಂದಳು.

"ಹೌದು ಭವಾನೀರಾಣಿಯವರೇ, ತಾವು ಈಗ ಬಂದಿ"

"ಯಾರ ಬಂದಿ? ನನ್ನನ್ನು ಬಂಧಿಸಬಲ್ಲ ಶಕ್ತಿಯು ಯಾರಿಗಿದೆ?"

"ಭವಾನೀರಾಣಿಯವರೇ' ತಾವು ಮಹಾರಾಣಿಯವರ ಬಂದಿ. ನಾನು ತಮ್ಮನ್ನು ಬಂಧಿಸುತ್ತೇನೆ."

ಭವಾನೀರಾಣಿಯು ತನ್ನ ಅನುಚರರನ್ನು ಕೂಗಿಕೊಂಡು ರಭಸದಿಂದ ಹೊರಗೆ ನುಗ್ಗಿದಳು ವಿರೂಪಾಕ್ಷನು ಅಡ್ಡಗಟ್ಟಿ ನಿಂತನು. "ಸನ್ಯಾಸಿಯವರೇ, ತಮ್ಮಕಡೆಯ ಒಂದು ಪಿಳ್ಳೆಯೂ ಹೊರಗಿಲ್ಲ. ಅವರೆಲ್ಲರೂ ಬಂಧನದಲ್ಲಿದ್ದಾರೆ. ತಾವು ಈಗ ಈ ವಿಜನವಾದ ಸ್ಥಳದಲ್ಲಿ ಏಕಾಕಿನಿಯಾಗಿ ನನ್ನ ಬಂದಿಯಾಗಿದ್ದೀರಿ" ಎಂದು ದಿಟ್ಟತನದಿಂದ ಹೇಳಿದನು.

ರಾಣಿಯು ಭಯಪಡಲಿಲ್ಲ. "ವಿರೂಪಾಕ್ಷ, ನೀನು ಮಹಾಪಾಪಿಯೆಂಬುದನ್ನು ಬಲ್ಲೆ. ಮಹಾದೇವನು ನಿನ್ನನ್ನು ಶಿಕ್ಷಿಸುತ್ತಾನೆ. ನನ್ನನ್ನು ಜೀವಸಹಿತವಾಗಿ ನೀನು ಕರೆದುಕೊಂಡು ಹೋಗಲಾರೆ. ನನ್ನ ನಿರ್ಜೀವವಾದ ಶವವನ್ನು ತೆಗೆದುಕೊಂಡುಹೋಗಿ ನಿಮ್ಮ ರಾಣಿಗೆ ಕಾಣಿಕೆಮಾಡು. ನನ್ನ ಈ ನಶ್ವರವಾದ ಶರೀರವು ಚಿತೆಯಮೇಲೆ ಅಗ್ನಿಯಲ್ಲಿ ಬೆಂದುಹೋಗುವುದರೊಳಗಾಗಿ ಈ ಇಡೀ ನಗರದ ರಾಜ್ಯದಲ್ಲಿ ವಿದ್ರೋಹಾನಲವೆದ್ದು ಈ ಸ್ವರ್ಣದಂತಹ ರಾಜ್ಯವು ಸ್ಮಶಾನವಾಗಿ ಹೋಗುವುದು. ಆ ಯಜ್ಞಕುಂಡದಲ್ಲಿ, ನೀನೂ, ನಿನ್ನ ರಾಣಿ, ಎಲ್ಲರೂ ಆಹುತಿಯಾಗುವಿರಿ" ಎಂದು ಕಠೋರಧ್ವನಿಯಿಂದ ನುಡಿದು ತನ್ನ ಸೆರಗಿನ ಕೊನೆಯನ್ನು ಕೈಗೆ ತೆಗೆದುಕೊಂಡು ಗಂಟುಬಿಚ್ಚಿ ಏನನ್ನೋ ಕೈಗೆ ತೆಗೆದುಕೊಂಡು "ಮಹಾದೇವಾ" ಎಂದು ಉಚ್ಚಾರಣೆಮಾಡುತ್ತಾ ಬಾಯಿಯಲ್ಲಿ ಹಾಕಿಕೊಳ್ಳಬೇಕು, ಅಷ್ಟರಲ್ಲಿ ವಿರೂಪಾಕ್ಷನು ಭವಾನೀರಾಣಿಯ ಎರಡು ಕೈಗಳನ್ನೂ ಹಿಡಿದುಕೊಂಡನು. ರಾಣಿಯು ಬಿಡಿಸಿ

ಕೊಳ್ಳಲು ಹೆಣಗಾಡಿದಳು ಕ್ಷಣಕ್ಷಣಕ್ಕೆ ರಾಣಿಯು ಶರೀರವು ಬಳಲುತ್ತ ಬಂದಿತು. ವಿರೂಪಾಕ್ಷನು ಭವಾನೀರಾಣಿಯನ್ನು ನೆಲಪಮೇಲೆ ಕೆಡವಿ ಅವಳ ಕೈಗಳನ್ನು ಬಲವಾಗಿ ಹಿಡಿದುಕೊಂಡು ಕೈಮುಷ್ಟಿಯನ್ನು ಬಿಡಿಸಿ ನೋಡಿದನು. ಆ ಕೈಯಲ್ಲಿ ವಿಷದಗುಳಿಗೆಯಿತ್ತು. ಅದನ್ನು ಕಿತ್ತು ಕೊಂಡನು ಭವಾನೀರಾಣಿಯ ಸೆರಗನ್ನು ಹರಿದು ಬಾಯಿಗೆ ತುರುಕಿದನು. ಮತ್ತೊಂದು ಸೆರಗಿನ ಭಾಗವನ್ನು ಹರಿದು ಕೈಕಾಲುಗಳನ್ನು ಕಟ್ಟಿಹಾಕಿದನು. ಇಷ್ಟುಹೊತ್ತಿಗೆ ಭವಾನೀರಾಣಿಯ ಶರೀರದಲ್ಲಿ ಪ್ರಜ್ಞೆ ತಪ್ಪಿಹೋಗಿ ಬಹಳ ಹೊತ್ತಾಗಿದ್ದಿತು. ಎರಡು ಕೈಗಳಲ್ಲಿಯೂ ಅಡ್ಡಡ್ಡ ಲಾಗಿ ಅವಳನ್ನು ಎತ್ತಿಕೊಂಡು ಹೊರಗೆ ತಂದು ಮ್ಯಾನಾದೊಳಗೆ ಮಲಗಿಸಿದನು. ಅವನಕಡೆಯ ಅನುಚರರು ಮ್ಯಾನಾವನ್ನು ಹೊತ್ತು ಕೊಂಡು ನಡೆದರು. ಭವಾನೀರಾಣಿಯ ಅನುಚರರೆಲ್ಲರೂ ಕಶೆಗಳಿಂದ ಬಂಧಿತರಾಗಿದ್ದರು. ಮ್ಯಾನಾವು ಕಬ್ಬಾಳದುರ್ಗದ ಕಡೆಗೆ ಹೊರಟು ಹೋಯಿತು.

ಹೊತ್ತು ಅರ್ಧರಾತ್ರಿಯು ಅತಿಕ್ರಮಿಸಿ ಹೋಗಿರಬಹುದು. ಮ್ಯಾನಾದ ಪಕ್ಕದಲ್ಲಿ ವಿರೂಪಾಕ್ಷನು ಅಶ್ವಾರೋಹಿಯಾಗಿ ನಡೆದು ಬರುತ್ತಿದ್ದನು. ಅನುಚರರು ಸದ್ದುಮಾಡದೇ ಮ್ಯಾನಾವನ್ನು ಹೊತ್ತು ಕೊಂಡು ವೇಗವಾಗಿ ನಡೆಯುತ್ತಿದ್ದರು. ತಣ್ಣನೆಯ ಗಾಳಿಬೀಸಿ ರಾಣಿಗೆ ಪ್ರಜ್ಞೆಯು ಬಂದಿತ್ತು. ಕೈ ಕಾ ಲು ಗ ಳು ಕಟ್ಟಲ್ಪಟ್ಟಿವೆಯೆಂದೂ ಬಾಯಿಯಲ್ಲಿ ಬಟ್ಟೆ ತುರುಕಿದ್ದಾರೆಂದೂ, ತನ್ನನ್ನು ಎಲ್ಲಿಗೋ ಕೊಂಡು ಹೋಗುತ್ತಿದ್ದಾರೆಂದೂ ಭವಾನೀರಾಣಿಗೆ ಬೋಧೆಯಾಯಿತು. ಆದರೆ ಸನ್ಯಾಸಿನಿಗೆ ಎಳ್ಳಷ್ಟಾದರೂ ಭಯವಾಗಲಿಲ್ಲ.

ಸುಮಾರು ದುರ್ಗದ ಅರಮನೆಗೆ ಇನ್ನು ಎರಡು ಮೈಲಿ ದೂರ ವಿರಬಹುದು. ಅಷ್ಟರಲ್ಲಿ ಹಿಂದುಗಡೆಯಿಂದ ಕುದುರೆಗಳ ಕಾಲು ಸಪ್ಪಳವು ಕೇಳಿಬಂದಿತು. ಕ್ಷಣಾರ್ಧದಲ್ಲಿ ಇಪ್ಪತ್ತು-ಇಪ್ಪತ್ತೈದುಮಂದಿ ಅಶ್ವಾರೋಹಿಗಳು ಆ ಮ್ಯಾನಾವನ್ನು ಸುತ್ತುಗಟ್ಟಿದರು. ಮಹಾ ಪುರುಷನೊಬ್ಬನು ಆ ದಳದ ಅಧಿಪತಿಯಾಗಿ ಬರುತ್ತಿದ್ದನು. ಮತ್ತೊಂದು

ಕುದುರೆಯಮೇಲೆ ಒಬ್ಬ ಸ್ತ್ರೀವ್ಯಕ್ತಿಯು ಕುಳಿತಿದ್ದುದು ಆ ಬೆಳದಿಂಗಳಿ ನಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತಿದ್ದಿತು. ಆ ದಳಪತಿಯು ಒರೆಯಿಂದ ದೀರ್ಘವಾದ ಕತ್ತಿಯನ್ನು ಎಳೆದು ಮೇಲಕ್ಕೆತ್ತಿ ಝಳಪಿಸುತ್ತಾ "ನಿಲ್ಲಿರಿ, ಒಂದು ಹೆಜ್ಜೆಯನ್ನು ಯಾರಾದರೂ ಮುಂದಿಟ್ಟರೆ ಅವರ ಶಿರಸ್ಸು ನೂರು ಹೋಳಾಗಿ ಭೂಮಿಯಲ್ಲಿ ಬೀಳುತ್ತದೆ" ಎಂದು ಘರ್ಜಿಸಿ ಮ್ಯಾನಾವನ್ನು ಅಡ್ಡಗಟ್ಟಿದನು. ಕುದುರೆಯಮೇಲೆ ಕುಳಿತಿದ್ದ ಸ್ತ್ರೀವ್ಯಕ್ತಿಯು ತನ್ನ ಕುದುರೆಯನ್ನು ಮುಂದಕ್ಕೆ ಜುಕಾಯಿಸಿ ವಿರೂಪಾಕ್ಷನ ಕುದುರೆಯ ಎದುರಿಗೆ ತನ್ನ ಕುದುರೆಯನ್ನು ನಿಲ್ಲಿಸಿ ತ್ರಿಶೂಲವನ್ನು ಎರಡು ಕೈಗಳಿಂದಲೂ ವಿರೂಪಾಕ್ಷನ ಎದೆಗೆ ನೇರವಾಗಿ ಹಿಡಿದು "ಪಾಪಿಯೇ, ನೀಚನೇ ನಿಲ್ಲು ಎಲ್ಲಿಗೆ ಹೋಗುವೆ ? ಭವಾನೀರಾಣಿಯವರು ಸಜೀವವಾಗಿರುವರೋ ? ನಿರ್ಜೀವವಾಗಿರುವರೋ ? ನಿನಗೆ ಮೃತ್ಯುವು ಸನ್ನಿಹಿತವಾಗಿದೆ. ನಿನಗೆ ಮಾತಾಪಿತೃಗಳಿಲ್ಲ. ದೇವರಿಲ್ಲ. ನಿನ್ನ ರಾಣಿ ಚೆಲುವಮ್ಮಣ್ಣಿಯನ್ನು ನೆನೆ ಸಿಕೋ. ಮೃತ್ಯುದೇವತೆಯ ಪಾಶವು ನಿನ್ನ ಕೊರಳಿನಲ್ಲಿ ಬೀಳುತ್ತಿದೆ." ಎಂದು ಘರ್ಜಿಸಿದಳು. ವಿರೂಪಾಕ್ಷನು ತನ್ನ ಕುದುರೆಯನ್ನು ಎರಡು ಹೆಜ್ಜೆ ಹಿಮ್ಮೆಟ್ಟಿಸಿ ಒರೆಯಿಂದ ಕತ್ತಿಯನ್ನು ಎಳೆದು ಬೀಸಿದನು. ಭೈರವಿಯ ಕುದುರೆಯು ಮೇಲಕ್ಕೆ ನೆಗೆಯಿತು. ಆ ಕತ್ತಿಯ ಪೆಟ್ಟು ಭೈರವಿಗೆ ಬೀಳುವುದಕ್ಕೆ ಬದಲಾಗಿ ಕುದುರೆಯ ಕೊರಳಿಗೆ ಬಿದ್ದಿತು. ಕುದುರೆಯು ಭೂತಲಶಾಯಿಯಾಗಿ ಬಿದ್ದಿತು. ಭೈರವಿಯು ಕುದುರೆ ಯಿಂದ ಕೆಳಗೆ ಹಾರಿ ಮಾಯವಾದಳು. ಅಷ್ಟರಲ್ಲಿ ವಿರೂಪಾಕ್ಷನನ್ನು ಎದುರಿಸಲು ಬಂದಿದ್ದ ದಳಪತಿಯು ತನ್ನ ಕುದುರೆಯನ್ನು ಮುಂದಕ್ಕೆ ಹಾರಿಸಿ ತನ್ನ ಕ್ಷರವಾಳವನ್ನು ಬೀಸಿದನು. ವಿರೂಪಾಕ್ಷನು ಚೀತ್ಕರಿ ಸುತ್ತಾ ಭೂಮಿಯ ಮೇಲೆ ಬಿದ್ದನು. ಅಷ್ಟರಲ್ಲಿ ಭೈರವಿಯು ಮ್ಯಾನಾ ದಬಾಗಿಲುಗಳನ್ನು ತೆಗೆದು ಭವಾನೀರಾಣಿಯ ಬಂಧನವನ್ನು ಬಿಚ್ಚಿ ದ್ದಳು. ಭವಾನೀರಾಣಿಯೂ ಭೈರವಿಯೂ ಮ್ಯಾನಾದ ಮೇಲೆ ನಿಂತು ನಾಲ್ಕುಕಡೆಯೂ ತಿರುಗಿ ನೋಡಿದರು. ವಿರೂಪಾಕ್ಷನ ಅನುಚರರೆಲ್ಲರೂ

ಬಂಧಿತರಾಗಿದ್ದರು. ವಿರೂಪಾಕ್ಷನು ಭೂಮಿಯಮೇಲೆ ಆಸನ್ನನಾಗಿ ಬಿದ್ದುಹೊರಳುತ್ತಿದ್ದನು. ಭವಾನೀರಾಣಿಯು ಆಶ್ಚರ್ಯದಿಂದ ಭೈರವಿ ಯನ್ನು ನೋಡಿ "ಭೈರವಿ, ನಿನಗೆ ಈ ಸಮಾಚಾರವು ಹೇಗೆ ತಿಳಿಯಿತು? ನಿನಗೆ ಈ ಸಹಾಯವು ಹೇಗೆ ದೊರೆಯಿತು?" ಎಂದು ಕೇಳಿದಳು.

"ದೇವಿ, ಸಾಕ್ಷಾತ್ ಯುವರಾಜರವರು ತಪಸ್ವಿನಿಯಾದ ತಮ್ಮ ರಕ್ಷಣೆಗಾಗಿ ಬಂದಿದ್ದಾರೆ. ವಿರೂಪಾಕ್ಷನ ಮರಣವು ಯುವರಾಜರ ಕೈಯಿಂದ ಆಗಬೇಕಾಗಿದ್ದುದು ವಿಧಿವಿಲಾಸವಾಗಿತ್ತು. ಆ ಪಾಪಿಗೆ ತಕ್ಕ ಶಿಕ್ಷೆಯಾಗಿದೆ. ನೋಡಿರಿ" ಎಂದು ವಿರೂಪಾಕ್ಷನ ಸಮಿಾಪಕ್ಕೆ ಭವಾನೀರಾಣಿಯನ್ನು ಕರತಂದು ನಿಲ್ಲಿಸಿದಳು. ಯುವರಾಜನು ಕರವಾಳವನ್ನು ಭೂಮಿಗೆ ಊರಿಕೊಂಡು ವಿರೂಪಾಕ್ಷನ ಪಕ್ಕದಲ್ಲಿ ನಿಂತಿದ್ದನು. ಒಂದುಬಾರಿ ವಿರೂಪಾಕ್ಷನು ತನ್ನ ವಿಶಾಲವಾದ ಕಣ್ಣು ಗಳನ್ನು ಅರಳಿಸಿ ಭವಾನೀರಾಣಿಯ ಕಡೆಗೆ ದೈನ್ಯದಿಂದ ನೋಡಿದನು. ಮತ್ತೊಮ್ಮೆ ಇನ್ನೊಂದು ಪಕ್ಕಕ್ಕೆ ಮುಖವನ್ನು ತಿರುಗಿಸಿ ಕ್ರೋಧದಿಂದ ಯುವರಾಜನ ಮುಖವನ್ನು ನೋಡಿದನು. ಭೈರವಿಯು "ಪಾಪಿಯೇ ನಿನಗೆ ತಕ್ಕ ಮರಣ, ತಕ್ಕ ಪ್ರಾಯಶ್ಚಿತ್ತ" ಎಂದು ಗಹಗಹಿಸಿ ನಕ್ಕಳು. ವಿರೂಪಾಕ್ಷನ ಅಧರಗಳಲ್ಲಿ ಮಂದಹಾಸವು ಬೆಳಗಿತು. ಸಣ್ಣ ದನಿಯಲ್ಲಿ "ಚೆಲುವೆ, ಚೆಲುವಮ್ಮಣ್ಣಿ" ಎಂದನು. ಪ್ರಾಣವಾಯುವು ಹಾರಿ ಹೋಯಿತು.

ಕಬ್ಬಾಳದುರ್ಗದ ಅರಮನೆಯ ಅಂತಃಪುರದ ಶಯನಾಗಾರದಲ್ಲಿ ಚೆಲುವಮ್ಮಣ್ಣಿಯು ರಾತ್ರಿಯೆಲ್ಲಾ ಅಸ್ತವ್ಯಸ್ತವಾಗಿ ಕಳೆದಳು ರಾಣಿಗೆ ನಿದ್ರೆಬರಲಿಲ್ಲ. ಮನಸ್ಸಿನಲ್ಲಿ ಏನೋ ಕಳವಳ, ಚಿಂತೆ. ಜಾಗ್ರದವಸ್ಥೆ ಯಲ್ಲಿಯೇ ಕಲ್ಪನಾಮಯವಾದ ಅನೇಕ ಸುಖಸ್ವಪ್ನಗಳು. ಮಧ್ಯೆಮಧ್ಯೆ ಕಣ್ಣಿಗೆ ಜೊಂಪು ಹತ್ತಿತೆಂದರೆ ಅನೇಕ ಭಯಂಕರ ಸ್ವಪ್ನಗಳು. ಹೀಗೆ ಅಶಾಂತಚಿತ್ತಳಾಗಿ ಪರ್ಯಂಕದಮೇಲೆ ಹೊರಳುತ್ತಾ ಘಳಿಗೆಘಳಿಗೆಯನ್ನೂ ಯುಗಗಳಂತೆ ಕಳೆಯುತ್ತಿದ್ದಳು. ಹೀಗೆ ಬಹುಹೊತ್ತು ಮಲಗಿರಲು ಸಾಧ್ಯವಾಗಲಿಲ್ಲ. ಎದ್ದು ಕುಳಿತಳು. ಪರ್ಯಂಕದಿಂದೆದ್ದು ವಾತಾಯನದ

ಸಮೀಪಕ್ಕೆ ಹೋಗಿ ಆಕಾಶವನ್ನು ನೋಡಿದಳು. ಆಕಾಶವು ಮೇಘಾವೃತವಾಗಿ ಹೆಪ್ಪುಗಟ್ಟಿದ ಕಪ್ಪುಸಮುದ್ರದಂತೆ ಭಯಾನಕವಾಗಿದ್ದಿತು. ಆ ನೀಲಮಯವಾದ ಮೇಘಮಂಡಲದಲ್ಲಿ ಚಂದ್ರನು, ನಕ್ಷತ್ರಗಳು ಎಲ್ಲಿಯೋ ಅಡಗಿದ್ದವು. ಆ ಕರಾಳ ಮೇಘಮಧ್ಯದಲ್ಲಿಯೂ ಒಂದೊಂದು ನಕ್ಷತ್ರವು ಕಾಣುತ್ತಿದ್ದರೂ ತೇಜೋಹೀನವಾಗಿ ಭಾಸವಾಗುತ್ತಿತ್ತು. ವನಾಂತರಾಳದಲ್ಲಿ ಚಕ್ರವಕ್ಕಿಯು ವಿಕಟಧ್ವನಿಮಾಡುತ್ತಿತ್ತು. ವಜ್ರದಂತೆ ಕಠೋರವಾದ ಚೆಲುವಮ್ಮಣ್ಣಿಯ ಮನಸ್ಸುಕೂಡ ಆ ಪಕ್ಷಿಯ ಧ್ವನಿಯನ್ನು ಕೇಳಿ ಭಯದಿಂದ ತತ್ತರಿಸುತ್ತಿತ್ತು. ಮರುಕ್ಷಣದಲ್ಲಿಯೇ ಸಿಡಿಲು ಗುಡುಗುಗಳಿಂದ ಆರ್ಭಟಿಸುತ್ತಾ ಪಟಪಟನೆ ಮಳೆಯು ಬೀಳಲಾರಂಭಿಸಿತು. ಭೂವ್ಯೋಮಗಳು ಜಲಮಯವಾದಂತೆ ಭಾಸವಾಗುತ್ತಿತ್ತು. ಆ ಬಿಭೀಷಿಕಾದೃಶ್ಯವನ್ನು ನೋಡಲಾರದೆ ಚೆಲುವಮ್ಮಣ್ಣಿಯು ದೀರ್ಘವಾದ ನಿಟ್ಟುಸುರುಬಿಟ್ಟು ವಾತಾಯನದ ಕವಾಟವನ್ನು ಮುಚ್ಚಿ ಆಸನದಮೇಲೆ ಕುಳಿತುಕೊಂಡಳು. ಎದುರಿಗಿದ್ದ ನಿಲುವುಗನ್ನಡಿಯಲ್ಲಿ ಅವಳ ಮುಖವು ಕಾಣುತ್ತಿತ್ತು. ಒಂದುಬಾರಿ ಕಟಾಕ್ಷವನ್ನು ಆ ಕನ್ನಡಿಯಕಡೆಗೆ ಬೀರಿದಳು. ಆಪಾದಮಸ್ತಕವಾಗಿ ಆ ಕನ್ನಡಿಯಲ್ಲಿ ಕಾಣುತ್ತಿರುವ ತನ್ನ ಶರೀರವನ್ನು ನೋಡಿಕೊಂಡಳು. ನಿರಾಭರಣೆಯಾಗಿದ್ದರೂ ಸರ್ವಾವಯವಗಳಲ್ಲಿಯೂ ಹೊರಹೊಮ್ಮುತ್ತಿದ್ದ ತನ್ನ ಸೌಂದರ್ಯವನ್ನು ತಾನೇ ನೋಡಿ ನಕ್ಕಳು. ಮತ್ತೊಮ್ಮೆ ಇಂತಹ ಸೌಂದರ್ಯವು ಈ ಜಗತ್ತಿನಲ್ಲಿ ಮತ್ತಾವ ಹೆಂಗಸಿಗಿದೆ ಎಂದು ಹೆಮ್ಮೆಯಿಂದ ಪುನಃ ತನ್ನ ರೂಪಿನಲ್ಲಿ ತಾನೇ ಮುಗ್ಧಳಾಗಿ ನೋಡಿಕೊಂಡಳು. ಅವಳ ಹೃದಯಾಂತರಾಳದಲ್ಲಿ ಪ್ರೇಮವನ್ನು ಸಂಪಾದಿಸಿರುವ ಪ್ರಿಯತಮರುಗಳನ್ನು ಒಬ್ಬೊಬ್ಬರನ್ನಾಗಿ ನೆನೆಸಿಕೊಂಡಳು. ಎಲ್ಲರಿಗಿಂತಲೂ ವಿರೂಪಾಕ್ಷನೇ ಪ್ರಾಣಾಧಿಕನೆಂದು ಪ್ರೇಮೋನ್ಮತ್ತವಾದ ಮನೋದೇವತೆಯು ಹೇಳಿತು. ಆ ಭಾವದಿಂದ ಚಕಿತಳಾಗಿ ಮತ್ತೊಮ್ಮೆ ನಕ್ಕಳು.

ಬಸಪ್ಪನಾಯಕನ ಜ್ಞಾಪಕವು ಬಂದಿತು. "ಬಸಪ್ಪನಾಯಕನು

ನನ್ನನ್ನು ಎಷ್ಟೊಂದು ಪ್ರೀತಿಸುತ್ತಿದ್ದನು. ಸಾಕ್ಷಾತ್ ಯುವರಾಜರಿಗೆ ಕೂಡ ಈ ರಾಜ್ಯದ ಪಟ್ಟವನ್ನು ಕಟ್ಟದೇ ನನ್ನನ್ನೇ ನಗರದ ಸಿಂಹಾಸನದ ಮೇಲೆ ಕುಳ್ಳಿರಿಸಿದನು" ಎಂಬ ಭಾವವು ರಾಣಿಯ ಮನಸ್ಸಿನ ಮೇಲೆ ಬಂದಿತು. "ಆ ರಾಜನು ಬದುಕಿರುವಾಗ ನನ್ನ ಕರ್ಮಗಳೆಲ್ಲಾ ಗುಪ್ತವಾಗಿಟ್ಟಿದ್ದೆನೆಂಬುದು ನಿಜ. ಇಂದು ಕೈಲಾಸದಲ್ಲಿ ಬಸಪ್ಪನಾಯಕನು ತನ್ನ ಚರ್ಯೆಗಳನ್ನು ನೋಡಿ ಕ್ರೋಧಗೊಳ್ಳುತ್ತಿಲ್ಲವೇನು?" ಎಂದು ಶಂಕಿಸಿದಳು. ಮನವು ತಲ್ಲಣಿಸತೊಡಗಿತು.

ತಕ್ಷಣ ಅವಳ ಹೃದಯಪೀಠದಲ್ಲಿ ಭವಾನೀರಾಣಿಯ ದಿವ್ಯಮೂರ್ತಿಯು ಆವಿರ್ಭವಿಸಿತು. "ಆ ಸನ್ಯಾಸಿನಿಯು ಎಂತಹ ತೇಜಸ್ವಿನಿ! ಅವಳಿಗೆ ನನ್ನ ವಿಲಾಸವಿಹಾರಗಳೆಲ್ಲಾ ಹೇಗೋ ತಿಳಿದಿದೆ. ಆದರೂ ನನ್ನ ಮೇಲೆ ಎಷ್ಟೊಂದು ಕರುಣೆ? ಎಷ್ಟೊಂದು ವಿಶ್ವಾಸ? ನಾನು ಹುಟ್ಟಿದಂದಿನಿಂದ ಇಂತಹ ಕರುಣಾಮೂರ್ತಿಯನ್ನು ಕಂಡುದಿಲ್ಲ ನನಗೆ ಜನ್ಮವಿತ್ತ ತಾಯಿಯ ಪರಿಚಯವಿಲ್ಲ. ನಾನು ನನ್ನ ತಂದೆಯಿಂದ ಪಾಲಿತಳಾದವಳು. ಆದರೆ ಈ ಭವಾನೀರಾಣಿಯ ಮುಖವನ್ನು ನೋಡಿದರೆ ನನ್ನ ಹೃದಯದಲ್ಲಿ ಮಾತೃ ಪ್ರೇಮವು ಉದಯಿಸುತ್ತದೆ. ಭವಾನೀರಾಣಿಯು ಮತ್ತೊಮ್ಮೆ ದರ್ಶನವಿತ್ತರೆ ನಾನು ಅವಳ ಶಿಷ್ಯಳಾಗುತ್ತೇನೆ. ಈ ಚೀನಾಂಬರಗಳನ್ನು ತೊರೆದು ಕಾಷಾಯ ವಸನಗಳನ್ನು ಧರಿಸುತ್ತೇನೆ. ನನ್ನ ಆಭರಣಗಳನ್ನೆಲ್ಲಾ ಬಡಬಗ್ಗರಿಗೆ ದಾನಧರ್ಮವೆಸಗುತ್ತೇನೆ. ನನ್ನ ವಿಲಾಸಭವನಗಳನ್ನೆಲ್ಲಾ ಪೂಜಾಮಂದಿರಗಳನ್ನಾಗಿ ಏರ್ಪಡಿಸಿ ಎಲ್ಲೆಲ್ಲಿಯೂ ಶಿವಪೂಜೆಯು ನಡೆಯುವಂತೆ ಮಾಡಿ ನನ್ನ ಅಂತಃಪುರವನ್ನೆಲ್ಲಾ ಕೈಲಾಸವನ್ನಾಗಿ ಮಾಡುತ್ತೇನೆ. ಪ್ರಜೆಗಳು ನನ್ನಂಥಾ ಸನ್ಯಾಸಿನಿಯನ್ನು ರಾಣಿಯನ್ನಾಗಿಟ್ಟುಕೊಳ್ಳಲು ಒಪ್ಪದಿದ್ದರೆ ಸುಕುಮಾರನಾದ ಯುವರಾಜನಿಗೆ ಪಟ್ಟಗಟ್ಟಿ ನಾನು ಶಾಂತಳಾಗಿ ಭವಾನೀರಾಣಿಯ ಸಹವಾಸದಲ್ಲಿ ಕಾಲಕಳೆಯುತ್ತೇನೆ. ಇನ್ನು ಮೇಲೆ ಈ ವಿಲಾಸ ಜೀವನವು ನನಗೆ ರುಚಿಸದು. ಈ ರಾಜವೈಭವವು ನನಗೆ ಸೋಗಸದು. ಎಂದು ಕಲ್ಪನಾಪ್ರಪಂಚವನ್ನು ನಿರ್ಮಿಸಿಕೊಂಡು ಚಿಂತಾಸಾಗರದಲ್ಲಿ ತೇಲುತ್ತಿದ್ದಳು."

ಪ್ರಾತಃಕಾಲದ ಮುಂಬೆಳಗು ಮೂಡುವ ಸಮಯವಾಗಿತ್ತು. ಆ ದೀಪಪ್ರಭೆಯಲ್ಲಿ ತೀಕ್ಷ್ಣದೃಷ್ಟಿಯಿಂದ ಎದುರಿಗಿದ್ದ ಕನ್ನಡಿಯನ್ನು ನೋಡಿದಳು. ಜಗ್ಗನಳುಕಿಬಿದ್ದು ಹಿಂತಿರುಗಿ ನೋಡಿದಳು. ನಿಜ ವಾಗಿಯೂ ಭೈರವಿಯೇ ಬಂದು ನಿಂತಿದ್ದಳು. ರಾಣಿಯು "ಭೈರವಿ, ನೀನೆಲ್ಲಿ ಬಂದೆ? ನಿನ್ನೆಯದಿನ ನನ್ನನ್ನು ತಿರಸ್ಕರಿಸಿ ಹೊರಟುಹೋಗಿ ದ್ದೆಯಲ್ಲವೇ? ಪುನಃ ನನ್ನಿಂದ ನಿನಗೇನಾಗಬೇಕಾಗಿದೆ?" ಎಂದು ಕೇಳಿದಳು.

ಭೈರವಿಯು ಗಹಗಹಿಸಿ ನಗುತ್ತಾ, ಚಪ್ಪಾಳೆಯನ್ನು ತಟ್ಟಿ, "ರಾಣಿಯವರೇ, ನಿಮ್ಮಿಂದ ನನಗೇನಾಗಬೇಕಾಗಿದೆ? ನಿಮ್ಮ ಮನಸ್ಸು ಎಷ್ಟು ನೊಂದರೆ ನನಗೆ ಅಷ್ಟು ಹಿತವಾಗುತ್ತದೆ. ನಿಮಗೆ ಎಷ್ಟು ದುಃಖ ವಾದರೆ ನನಗೆ ಅಷ್ಟು ಸಂತೋಷವಾಗುತ್ತದೆ. ನೀವು ನಿಮ್ಮ ರಾಣಿಗಿರಿ ಯಿಂದ ನನ್ನನ್ನು ಏನೂ ಮಾಡಲಾರಿರೆಂದು ನಾನು ಬಲ್ಲೆ. ನೋಡಿರಿ, ರಾಣಿಯವರೇ, ನಿಮಗೊಂದು ಸಮಾಚಾರವನ್ನು ತಂದಿದ್ದೇನೆ. ಆ ಸಮಾಚಾರವನ್ನು ಹೇಳಲೇ? ಕೇಳುವಿರಾ?" ಎಂದಳು.

"ಭೈರವಿ, ನಿನಗೆ ಹುಚ್ಚುಹಿಡಿದಿದೆ. ನಾನು ಒಂದುದಿನವಾದರೂ ನಿನ್ನನ್ನು ತಿರಸ್ಕರಿಸಿಲ್ಲ ನಿನ್ನಮೇಲೆ ಎಳ್ಳಷ್ಟಾದರೂ ನನಗೆ ಕೋಪ ವಿಲ್ಲ. ನಿನ್ನ ಈ ವೇಷ! ಅಂತಃಪುರನಿವಾಸಿನಿಯಾದ ನೀನು ಛಳಿ ಗಾಳಿಗಳನ್ನೂ ಮಳೆಬಿಸಿಲುಗಳನ್ನೂ ಲಕ್ಷಿಸದೆ ಹೀಗೆ ಅಹೋರಾತ್ರಿ ನಿಶಾಚರಿಯಾಗಿ ಅಲೆಯುತ್ತಿರುವುದಕ್ಕಾಗಿ ನಾನು ಕನಿಕರಪಡುತ್ತೇನೆ. ನನ್ನ ವಿಷಯದಲ್ಲಿ ನಿನ್ನ ಮನಸ್ಸಿನಮೇಲೆ ಕ್ರೋಧದ್ವೇಷಗಳ ವಿಷಬೀಜ ವನ್ನು ಬಿತ್ತಿದವರಾರೋ ನಾನರಿಯೆ. ಕುಳಿತುಕೋ, ಆಸನದಮೇಲೆ ಕುಳಿತುಕೋ. ನಿನ್ನನ್ನು ನೋಡಿದರೆ ರಾತ್ರಿಯಲ್ಲಾ ನಿದ್ದೆಗೆಟ್ಟು ಬಳಲಿ ರುವಂತಿದೆ, ಕುಳಿತುಕೋ, ಏನು ಹೇಳುವಿಯೋ ಹೇಳು."

"ರಾಣಿಯವರೇ, ಅಷ್ಟು ಉಪೇಕ್ಷೆಯಿಂದ ಮಾತನಾಡಬೇಡಿರಿ. ನಿಮ್ಮ ಕನಿಕರ, ನಿಮ್ಮ ಪ್ರೇಮ ಇವೆಲ್ಲಕ್ಕೂ ಅರ್ಧಕಾಸಿನಷ್ಟು ಬೆಲೆ ಇಲ್ಲ. ರಾಣಿಯವರೇ! ನಾನು ಈ ಅಂತಃಪುರವನ್ನು, ತಮ್ಮ ಸೌಭಾಗ್ಯ

ಸೌಧವನ್ನು ಬಿಟ್ಟು ಹೋದುದು ಹುಚ್ಚಿನಿಂದಲ್ಲ. ನನಗೆ ಈ ಅಂತಃಪುರ ವಾಸವು ಒಂದುಕ್ಷಣ ಸಹಿಸಲಾಗುತ್ತಿರಲಿಲ್ಲ. ತಮ್ಮ ಅಂತಃಪುರದಲ್ಲಿದ್ದಿದ್ದರೆ ನಿಜವಾದ ಹುಚ್ಚಳಾಗಿ ತಮ್ಮನ್ನು ಕತ್ತರಿಸಿ ತುಂಡು ತುಂಡು ಮಾಡಿ ಬಿಸುಡುತ್ತಿದ್ದೆನು."

"ಭೈರವಿ, ಅಷ್ಟು ಕ್ರೋಧವೇಕೆ? ನನ್ನ ಅಪರಾಧವೇನು?"

"ರಾಣಿ, ನಿನ್ನ ಅಪರಾಧವೆಲ್ಲಿಬಂತು? ವಿರೂಪಾಕ್ಷನ ಅಪರಾಧ. ಅವನು ಮೋಸಗಾರ, ವಂಚಕ, ಕೃಪಣ, ಘಾತುಕ. ನನ್ನನ್ನು ವಿವಾಹ ಮಾಡಿಕೊಳ್ಳುವುದಾಗಿ ಮಾತುಕೊಟ್ಟು ನಿನ್ನ ಪ್ರೇಮದ ದಾಸನಾಗಿ ನನ್ನನ್ನು ಕಾಲಿನಿಂದ ಒದ್ದು ತಳ್ಳಿದನು. ಇಂದು ಅದಕ್ಕೆ ತಕ್ಕ ಶಿಕ್ಷೆಯಾಗಿದೆ."

"ಹಾ! ನೀನು ವಿರೂಪಾಕ್ಷನ ಪ್ರೇಯಸಿಯೇ? ವಿರೂಪಾಕ್ಷನು ನಿನ್ನಲ್ಲಿ ಪ್ರೇಮವಿಟ್ಟು ನನ್ನೊಡನೆ ವಂಚನೆಯಿಂದ ವರ್ತಿಸುತ್ತಿರುವನೇ? ಗಿರಿಜೆ, ನೀನು ಬಾಲ್ಯದಿಂದಲೂ ನನ್ನ ಅಂತರಂಗದ ಗೆಳತಿ. ಈ ನಿನ್ನ ಹೃದಯದ ಗುಟ್ಟನ್ನು ಮೊದಲೇ ನನ್ನಲ್ಲಿ ನೀನು ಹೇಳಿದ್ದರೆ ಎಷ್ಟು ಚೆನ್ನಾಗಿತ್ತು? ನಾನು ಸಂತೋಷದಿಂದ ವಿರೂಪಾಕ್ಷನಿಗೂ ನಿನಗೂ ವಿವಾಹಮಾಡಿಸುತ್ತಿದ್ದೆ. ನನಗೆ ವಿರೂಪಾಕ್ಷನ ಹುಚ್ಚುಹಿಡಿದಿರಲಿಲ್ಲ. ವಿರೂಪಾಕ್ಷನು ನನ್ನ ಆಟದ ಬೊಂಬೆ. ಅವನು ನಿನ್ನ ಗೃಹಸ್ಥಾಶ್ರಮದ ಪತಿಯಾದರೆ ನನಗೆಷ್ಟೋ ಆನಂದ. ನೀನು ಇಲ್ಲಿರು. ಈ ಹಾಳು ವೇಷವನ್ನು ತೆಗೆದುಹಾಕು. ಮಂಗಳಸ್ನಾನಮಾಡಿ ದುಕೂಲಗಳನ್ನುಟ್ಟುಕೋ. ಆಭರಣಗಳನ್ನು ತೊಟ್ಟುಕೋ. ನಿನ್ನ ಸೌಂದರ್ಯವು ಹಾಗೆಯೇ ಇದೆ. ನಿನ್ನ ಯೌವನವು ಪ್ರತ್ಯಂಗಗಳಲ್ಲಿಯೂ ಪರಿಶೋಭಿಸುತ್ತಿದೆ. ಈ ವಿಭೂತಿ, ಈ ರುದ್ರಾಕ್ಷಿಗಳು, ಈ ಹರಕುಬಟ್ಟೆಗಳು, ಈ ಧೂಳಿಧೂಸರವಸನ ಇವುಗಳಿಂದ ನೀನು ಮಲಿನವಾಗಿದ್ದರೂ ನಿನ್ನ ಸುಕುಮಾರ ತೇಜಸ್ಸು ಅಚ್ಚಳಿಯದೇ ಇದೆ. ಈ ವೇಷವನ್ನು ಕಿತ್ತುಹಾಕು." ಭೈರವಿಯು ಗಹಗಹಿಸಿ ನಗುತ್ತಾ "ಚೆಲುವಮ್ಮಣ್ಣಿ, ನಿನ್ನ ಕಣ್ಣು ಕಾಮಮೋಹಿತವಾಗಿ ಎಲ್ಲವೂ ರಕ್ತಮಯವಾಗಿ ಕಾಣುತ್ತದೆ. ನನ್ನ

ಶರೀರವು ಕೋಮಲವಾದುದೆಂದೂ ಸೌಂದರ್ಯಪರಿಪೂರ್ಣವಾದುದೆಂದೂ ನಿನಗೆ ಭಾಸವಾಗುತ್ತದೆ. ನನ್ನ ವಿಭೂತಿರುದ್ರಾಕ್ಷಿಗಳು ನಿನಗೆ ಅಸಹ್ಯವನ್ನುಂಟುಮಾಡುತ್ತದೆ. ಮಹಾರಾಣಿ, ಸತ್ಯವನ್ನು ನುಡಿಯುತ್ತೇನೆ, ಕೇಳು ನನ್ನ ಹೃದಯದಲ್ಲಿ ಕಾಮದ ವಾಸನೆಯು ಎಳ್ಳಷ್ಟಾದರೂ ಉಳಿದಿಲ್ಲ. ಕ್ರೋಧದಿಂದ ನನ್ನ ಹೃದಯದಲ್ಲಿ ಜ್ವಾಲಮಾಲೆಗಳು ಉರಿಯುತ್ತಿದ್ದವು. ಆ ಕ್ರೋಧವು ಸಹಸ್ರಫಣಿಗಳ ರೂಪವನ್ನು ತಾಳಿ ವಿರೂಪಾಕ್ಷನನ್ನು ಕಚ್ಚಿ ಅವನ್ನು ಚೀತ್ಕಾರ ಮಾಡುವುದನ್ನು ನೋಡಬೇಕೆಂಬ ದುರಂತವಾದ ಆಸೆಯನ್ನು ತಳೆಯಿತು. ಇಂದು ಆ ಕ್ರೋಧಾಗ್ನಿಯು ಶಮನವಾಯಿತು. ವಿರೂಪಾಕ್ಷನ ಹೃದಯದಲ್ಲಿ ಕರವಾಳವು ನಡಲ್ಪಟ್ಟು ಅವನು ಭೂತಲಶಾಯಿಯಾಗಿ ಚೀತ್ಕರಿಸುತ್ತಿರುವುದನ್ನು ನೋಡಿದೆನು. ಪಾಪಿ! ಕಾಮಾಂಧನಾದ ಪಶು ಆ ಭವಾನೀರಾಣಿಯನ್ನು ಕೆಣಕಿ, ಕೆರಳಿಸಿ, ಪಾಶಗಳಿಂದ ಕಟ್ಟಿ, ಬಲಾತ್ಕರಿಸಿ ಪಲ್ಲಕ್ಕಿಯಲ್ಲಿ ಹಾಕಿಕೊಂಡು ಕರೆತಂದನು. ಆ ದೃಶ್ಯವನ್ನು ಮತ್ತಾರಾದರೂ ಕಂಡಿದ್ದರೆ, ರಾವಣನು ಸೀತಾಪಹರಣ ಮಾಡಿದ ದೃಶ್ಯವನ್ನು ಕಣ್ಣಾರ ಕಂಡಂತೆ ಆಗುತ್ತಿದ್ದಿತು. ತಕ್ಷಣ ಫಲ. ಈ ಕಲಿಗಾಲದಲ್ಲಿ ಪಾಪದ ಪ್ರಾಯಶ್ಚಿತ್ತಕ್ಕೆ ವಿಳಂಬವಾಗುವುದಿಲ್ಲ ರಾಣಿಯವರೇ. ಅರ್ಧರಾತ್ರಿಯಲ್ಲಿ, ಆ ಘೋರಾರಣ್ಯಮಧ್ಯದಲ್ಲಿ ಸಿಡಿಲು ಬಡಿದಂತೆ ವೀರಪುರುಷನು ಬಂದು ವಿರೂಪಾಕ್ಷನನ್ನು ಎದುರಿಸಿದನು. ವಿರೂಪಾಕ್ಷನ ಅನುಚರರು ಚಲ್ಲಾಪಿಲ್ಲಿಯಾಗಿ ಹೋದರು. ನನ್ನ ಕಣ್ಣಮುಂದೆ ಪ್ರತ್ಯಕ್ಷವಾಗಿ ಮಹಾವೀರನ ಕರವಾಳವು ವಿರೂಪಾಕ್ಷನ ಹೃದಯದಲ್ಲಿ ನೆಟ್ಟಿತು. ವಿರೂಪಾಕ್ಷನು ಚೀತ್ಕರಿಸುತ್ತಾ ಭೂಮಿಯಲ್ಲಿ ಹೊರಳುತ್ತಾ ನನ್ನ ಪಾದತಳದಲ್ಲಿ ಬಿದ್ದನು. ಅವನ ಮರಣೋನ್ಮುಖವಾದ ಕಡೆಯ ಶ್ವಾಸವು 'ಚೆಲುವಮ್ಮಣ್ಣಿ, ಚೆಲುವಮ್ಮಣ್ಣಿ' ಎಂಬ ಆರ್ತಧ್ವನಿಯಿಂದ ಕೂಡಿದ್ದಿತು. ಸಮೀಪದಲ್ಲಿ ಬಂಧವಿಮುಕ್ತಳಾದ ಭವಾನೀರಾಣಿಯು ನಿಂತಿದ್ದಳು. ಕ್ರೋಧೋದ್ದೀಪಿತನಾದ ಯುವರಾಜನೇ ವಿರೂಪಾಕ್ಷನನ್ನು ವಧೆಮಾಡಿದ ಮಹಾವೀರನು. ಈ ಎಲ್ಲ ದೃಶ್ಯವನ್ನೂ ನಾನು ಕಣ್ಣಾರ ನೋಡಿದೆನು.

ಆದನ್ನು ಇಲ್ಲಿಗೆ ಬಂದು ವರ್ಣಿಸಿ ಹೇಳುವವರೆಗೆ ನನ್ನ ಮನಸ್ಸಿಗೆ ಸಮಾಧಾನವಿರಲಿಲ್ಲ. ರಾಣಿ! ಈ ಭೂಮಂಡಲದಲ್ಲಿ ವಿರೂಪಾಕ್ಷನಿಲ್ಲ. ಘೋರವಾದ ನರಕದಲ್ಲಿ ಬಿದ್ದು ನರಳುತ್ತಿರುವ ಅವನು ಪ್ರಾಣ ಬಿಡುವಾಗ ನಿನ್ನ ಹೆಸರನ್ನು ಕೂಗುತ್ತಾ ನರಕಕ್ಕೆ ಹೋದನು. ಇನ್ನು ಅವನನ್ನು ನೋಡಬೇಕಾದರೆ ನೀನೂ ನರಕಕ್ಕೆ ಹೋಗಬೇಕು" ಎಂದಳು.

ರಾಣಿ ಚೆಲುವಮ್ಮಣ್ಣಿಯು ಈ ಮಾತುಗಳನ್ನು ಕೇಳಿ, ಕಂಪಿಸುತ್ತಾ ಚೀತ್ಕರಿಸುತ್ತಾ ಭೂಮಿಯಮೇಲೆ ಬಿದ್ದಳು. ಭೈರವಿಯು ಸಮೀಪಕ್ಕೆಬಂದು ಬಗ್ಗಿ ನೋಡಿದಳು. ಪ್ರಾಣವು ಹೋಗಿರಲಿಲ್ಲ. ರಾಧೆಯು ಶೀತಲ ಜಲವನ್ನು ತಂದಳು. ರಾಧೆಯೂ ಭೈರವಿಯೂ ಶೈತ್ಯೋಪಚಾರವನ್ನು ಮಾಡಿದರು. ರಾಣಿಯು ಕಣ್ಣು ಬಿಟ್ಟು ನೋಡಿದಳು. ಬೆಳಗೆ ಬೆಳಗಾಗಿತ್ತು. ಪ್ರಾತಃಕಾಲದ ಸೂರ್ಯಕಿರಣಗಳು ವಾತಾಯನದಿಂದ ಅಂತಃಪುರವನ್ನು ಪ್ರವೇಶಿಸುತ್ತಿದ್ದವು. ಭೈರವಿಯು ರಾಣಿಯ ಗಲ್ಲವನ್ನು ಹಿಡಿದು ಅಲ್ಲಾಡಿಸಿ ನೋಡಿದಳು. ಪ್ರಜ್ಞೆಯಿರಲಿಲ್ಲ. ರಾಣಿಯು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಮೈಯೆಲ್ಲವೂ ಕಂಪಾಯಮಾನವಾಗುತ್ತಿತ್ತು. ಅಂಗಾಂಗಗಳಲ್ಲಿ ಜ್ವರಬಂದಂತೆ ಬಸಿಯು ಏರಿತ್ತು. ರಾಧೆಯೂ ಭೈರವಿಯೂ ರಾಣಿಯನ್ನೆತ್ತಿ ಪರ್ಯಂಕದಮೇಲೆ ಮಲಗಿಸಿದರು. ಸಂಧ್ಯಾಕಾಲದವರೆವಿಗೂ ಸಖಿಯರು ಉಪಚರಿಸುತ್ತಲೇ ಇದ್ದರು. ಸಂಧ್ಯಾಕಾಲದ ಮಂದಮಾರುತವು ಬೀಸುತ್ತಲೇ ಚೆಲುವಮ್ಮಣ್ಣಿಯು ಎದ್ದು ಕುಳಿತಳು. ಈಗ ರಾಣಿಯು ಅಳುತ್ತಿರಲಿಲ್ಲ. ಯಾವುದೋ ಒಂದು ಲೋಕದಲ್ಲಿ ನಿಸ್ತೇಜವಾಗಿ ತೇಲಾಡುತ್ತಿರುವಂತೆ ಹಗುರವಾದ ಮನಸ್ಸಿನಿಂದ ಎದ್ದು ಕುಳಿತಳು. ಸಖಿಯರೆಲ್ಲರೂ ಕಾರ್ಯಾಂತರದಿಂದ ಹೊರಟು ಹೋದರು.

ಭೈರವಿಯು ರಾಣಿಯನ್ನು ಸಂತೈಸುತ್ತಾ, "ರಾಣಿಯವರೇ! ನೀವು ಇಷ್ಟೊಂದು ದುಃಖವಿಹ್ವಲರಾಗುವುದು ಸಹಜವಲ್ಲ. ವಿರೂಪಾಕ್ಷನಿಗಾಗಿ ನೀವು ಇಷ್ಟೊಂದು ಮರುಗಬೇಕೇ? ಲೋಕವು ಏನಂದೀತು?

ಯೊಾವ ವಜ್ರಹೃದಯದಿಂದ ಲೋಕಾಪವಾದವನ್ನು ಲೆಕ್ಕಿಸದೆ ನೀವು ನಿಮ್ಮ ಹೃದಯಪರಿತೋಷಣೆಯನ್ನು ಮಾಡಿಕೊಂಡಿರೋ ಅದೇ ವಜ್ರಹೃದಯದಿಂದ ಆ ವಿರೂಪಾಕ್ಷನನ್ನು ಮರೆತುಬಿಡುವುದು ನಿಮ್ಮಂತಹ ಧೀರರಮಣಿಗೆ ಸಹಜವಾದುದು ವಿರೂಪಾಕ್ಷನು ಮೃತನಾದುದು ಒಂದುವಿಧವಾಗಿ ಶುಭವಾದಂತೆಯೇ ಆಗಿದೆ. ಈ ನಗರದ ರಾಜ್ಯಲಕ್ಷ್ಮಿಗೆ ಹತ್ತಿದ್ದ ಕಳಂಕವು ಅಳಿಸಿಹೋಗುತ್ತದೆ. ರಾಣಿಯವರೇ, ನಿಮ್ಮ ಖ್ಯಾತಿಯು ದೇಶವಿದೇಶಗಳಲ್ಲಿ ಎಷ್ಟೊಂದು ವ್ಯಾಪಿಸಿದೆಯೆಂದು ನೀವು ಅರಿಯಿರಿ. ನಿಮ್ಮ ದೈವಬ್ರಾಹ್ಮಣ ಭಕ್ತಿಯು ಸಜ್ಜನರಿಂದ ಸದಾ ಹೊಗಳಲ್ಪಡುತ್ತಿದೆ. ನಿಮ್ಮ ಉದಾರ ದಾನಧರ್ಮಗಳಿಂದ ಬಡಜನರು ಸಾಕ್ಷಾತ್ ವರಪ್ರದೆಯಾದ ಅನ್ನಪೂರ್ಣಾದೇವಿಯೆಂದು ಭಾವಿಸುತ್ತಾರೆ. ಜನರು ನಿಮ್ಮನ್ನು ಸಾಕ್ಷಾತ್ ಮಾತೃದೇವತೆಯೆಂದು ನೆನೆಯುತ್ತಾರೆ. ಮಂತ್ರಿ ರಾಮಕೃಷ್ಣನು ನಿಮ್ಮಮೇಲೆ ಅಷ್ಟೊಂದು ಕ್ರುದ್ಧನಾಗಿದ್ದಾನೆ. ಯುವರಾಜನು ನಿಮ್ಮನ್ನು ತಿರಸ್ಕರಿಸುತ್ತಿದ್ದಾನೆ. ಈ ರಾಜ್ಯದಲ್ಲಿ ಜಗದ್ಗುರುವಿನಂತೆ ಪೂಜ್ಯನಾದ ಮಲ್ಲಿಕಾರ್ಜುನ ಕ್ಷೇತ್ರದ ಅಭಿರಾಮ ಸ್ವಾಮಿಯು ಅಸಂತುಷ್ಟರಾಗಿದ್ದಾರೆ. ಆದರೇನು? ಇವರಾರೂ ನಿಮ್ಮನ್ನು ಏನೂ ಮಾಡಲಾರದವರಾಗಿದ್ದಾರೆ. ಏಕೆಂದರೆ ನಿಮಗಿರುವ ಅಪಾರವಾದ ಪ್ರಜಾವಾತ್ಸಲ್ಯವೇ ಅದಕ್ಕೆ ಕಾರಣ. ಈ ವಿರೂಪಾಕ್ಷನು ನಿಮ್ಮ ಕೀರ್ತಿಗೆ ಕಳಂಕಪ್ರಾಯನಾಗಿದ್ದನು. ನಿಮ್ಮ ಖ್ಯಾತಿಯೆಂಬ ಮಂದಾರಪುಷ್ಪದಲ್ಲಿ ಕೀಟಪ್ರಾಯನಾಗಿದ್ದನು. ರಾಣಿಯವರೇ, ಇದರಲ್ಲಿ ಯಾರ ತಪ್ಪೂ ಇಲ್ಲ. ಅವನ ತಪ್ಪಿನಿಂದಲೇ ಅವನು ಮೃತನಾದನು. ಭವಾನೀರಾಣಿಯವರಿಗೆ ಯುವರಾಜರ ಆಗಮನವು ಸರ್ವಥಾ ತಿಳಿದಿರಲಿಲ್ಲ. ಅವರು ಬಂಧನದಿಂದ ಮುಕ್ತರಾಗಿ ಬಂದು ನೋಡುವಷ್ಟರಲ್ಲಿ ವಿರೂಪಾಕ್ಷನು ಮೃತಪ್ರಾಯನಾಗಿ ಬಿದ್ದಿದ್ದನು. ಯುವರಾಜನು ರಾತ್ರಿ ಹಗಲೂ ವಿರೂಪಾಕ್ಷನ ನೆರಳನ್ನೆ ಕಾಯುತ್ತಿದ್ದನು ಅವನದೊಂದು ಅಪರಾಧವು ಸಿಕ್ಕಿದರೆ ಸಾಕೆಂದು ಕಾಯುತ್ತಿದ್ದನು ಇಂದು ವಿರೂಪಾಕ್ಷನದು ಮಹಾಪರಾಧ. ಮಹಾ ತಪಸ್ವಿನಿಯಾದ

ಭವಾನೀರಾಣಿಯನ್ನು ಕರಗಳಿಂದ ಬಿಗಿದು, ಬಾಯಿಯಲ್ಲಿ ಬಟ್ಟೆಯನ್ನು ತುರುಕಿ ಬಂದಿಯಾಗಿ ಪಲ್ಲಕ್ಕಿಯಲ್ಲಿ ಕೊಂಡುಹೋಗುವುದೆಂದರೆ ಎಂತಹ ಘಾತುಕತನ? ಯಾವನು ತಾನೇ ಆ ದೃಶ್ಯವನ್ನು ನೋಡಿ ಸಹಿಸಬಲ್ಲನು? ಅವನಿಗೆ ತಕ್ಕ ಪ್ರಾಯಶ್ಚಿತ್ತವಾಯಿತು" ಎಂದಳು.

ರಾಣಿಯು ಭೈರವಿಯ ಬೆನ್ನಮೇಲೆ ಕೈಹಾಕಿ, "ಗಿರಿಜೆ, ನಾನು ವಿರೂಪಾಕ್ಷನಿಗಾಗಿ ದುಃಖಪಡುತ್ತಿಲ್ಲ. ಅವನ ತಪ್ಪಿಗೆ ಅವನು ಶಿಕ್ಷೆಯನ್ನು ಅನುಭವಿಸಿದನು. ಸನ್ಯಾಸಿನಿಯಾದ ಭವಾನೀರಾಣಿಯ ಮೇಲೆ ಅಷ್ಟು ಕೈಮಾಡುವುದೆಂದರೆ ಅದೊಂದು ಘೋರ ಪಾತಕವೇ ಸರಿ. ಅದಕ್ಕಾಗಿ ನಾನು ಚಿಂತಿಸುತ್ತಿಲ್ಲ. ಈ ರಾಜ್ಯದಲ್ಲಿ, ಪರರಾಜ್ಯದಲ್ಲಿ ಈ ಕಥೆಯು ಬಣ್ಣಬಣ್ಣವಾಗಿ ವರ್ಣಿಸಲ್ಪಡುತ್ತದೆ. ಜನರ ಬಾಯಿ ಮುಚ್ಚಬಲ್ಲವರಾರು? ಈ ಕರಾಳಚ್ಛಾಯೆಯು ನಾನೆಲ್ಲಿಹೋದರೆ ಅಲ್ಲಿ ನನ್ನನ್ನು ಹಿಂಬಾಲಿಸಿ ಬರುತ್ತದೆ. ನನ್ನ ದೈವಭಕ್ತಿಯು ಸುಳ್ಳೆಂದು ಜನರು ಆಡಿಕೊಳ್ಳುತ್ತಾರೆ. ನನ್ನ ದಾನಧರ್ಮಗಳು ವಿಡಂಬನೆಯೆಂದು ಜನರು ಕರೆಯುತ್ತಾರೆ. ನನ್ನ ಪ್ರಜಾವಾತ್ಸಲ್ಯವು ಮಾಯೆಯೆಂದು ದೂಷಿಸುತ್ತಾರೆ. ಯುವರಾಜನು ನನ್ನ ಮೇಲೆ ಕಠೋರವಾದ ದ್ವೇಷವನ್ನು ಸಾಧಿಸುತ್ತಾನೆ. ಮಂತ್ರಿಯು ಅಪ್ರಸನ್ನನಾಗಿದ್ದಾನೆ. ನಾನು ಈ ರಾಜ್ಯವನ್ನು ಆಳಬೇಕೇ, ಬಿಟ್ಟುಬಿಡಬೇಕೇ? ಎಂಬ ಸಮಸ್ಯೆಯು ಸರ್ವದಾ ನನ್ನ ಮನಸ್ಸನ್ನು ಅಲ್ಲಕಲ್ಲೋಲಮಾಡುತ್ತದೆ. ನೋಡು ಭೈರವಿ, ಈ ರಾಜ್ಯವನ್ನು ನಾನು ಪರಿತ್ಯಾಗಮಾಡುತ್ತಿದ್ದೆ. ಯುವರಾಜನು ಈ ರಾಜ್ಯಕ್ಕೆ ಅರ್ಹನಲ್ಲ. ನಾನು ಇಂದು ಈ ಸಿಂಹಾಸನವನ್ನು ಪರಿತ್ಯಜಿಸಿದರೆ ನಾಳೆಯೇ ಅದು ಅನ್ಯಾಕ್ರಾಂತವಾಗುತ್ತದೆ ಈ ನಗರದ ರಾಜ್ಯವು ಗಗನನಗರದಂತೆ ಕ್ಷಣಭಂಗುರವಾಗಿ ಹೋಗುವುದು. ನನ್ನ ಕಣ್ಣುಮುಂದೆ ಕಾಣುತ್ತಿದೆ. ನಾನು ಅದನ್ನು ಹೇಗೆ ಬಿಟ್ಟುಬಿಡಲಿ?" ಎಂದಳು.

"ರಾಣಿಯವರೇ, ಸಿಂಹಾಸನಪರಿತ್ಯಾಗಪ್ರಮೇಯವು ಈಗ ಬಂದಿಲ್ಲ. ಈಗ ವಿರೂಪಾಕ್ಷನ ಮರಣವು ಪ್ರಾಪ್ತವಾಗಿದೆ. ಅದರಿಂದ

ಈ ರಾಜ್ಯದಲ್ಲಿ ಅಂತಹ ಮಹತ್ಪರಿಣಾಮಗಳೇನೂ ಆಗುವುದಿಲ್ಲ. ನೀವು ಕೆಲವುಕಾಲ ಶಾಂತಚಿತ್ತರಾಗಿದ್ದರೆ ಎಲ್ಲವೂ ಸರಿಹೋಗುತ್ತದೆ."

"ಗಿರಿಜೆ, ನೀನು ನನ್ನ ಸಾಮೀಪ್ಯವನ್ನು ಬಿಟ್ಟು ಹೋಗುವುದಿಲ್ಲ ವೆಂದು ವಚನವನ್ನು ಕೊಡು. ನಾನು ಸುಖಿಯಾಗುವೆನು. ಈ ಜಗತ್ತಿನಲ್ಲಿ ನಿನಗಿಂತಲೂ ನನಗೆ ಪ್ರಿಯರಾದವರು ಮತ್ತಾರೂ ಇಲ್ಲ. ನಾನು ಪಾಪಮಾಡಿದ್ದರೆ ಅದರಲ್ಲಿ ನೀನೂ ಸಮಭಾಗಿಣಿ. ನಾನು ಪುಣ್ಯವೆಸಗಿದ್ದರೆ ಅದರಲ್ಲಿಯೂ ನೀನು ಸಮಭಾಗಿಣಿ. ವಿರೂಪಾಕ್ಷನನ್ನು ಮಲ್ಲಿಕಾರ್ಜುನಕ್ಷೇತ್ರದಲ್ಲಿ ಮೊದಲುಬಾರಿ ಕಂಡಾಗಲೇ ನನ್ನ ಹೃದಯವು ಅಲ್ಲಕಲ್ಲೋಲವಾಯಿತು. ಎರಡನೆಯ ಬಾರಿ ಅವನನ್ನು ಪುನಃ ನೋಡುವವರೆಗೆ ನನ್ನ ಹೃದಯದಲ್ಲಿ ಅವನ ಬಿಂಬವು ಸ್ಥಿರಮೂರ್ತಿಯಾಗಿದ್ದಿತು. ಮಹಾರಾಜರ ಸಮ್ಮುಖದಲ್ಲಿ ರಾಯಭಾರಿಯಾಗಿ ಅವನನ್ನು ಕಂಡಾಗ ನನ್ನ ಹೃದಯದಲ್ಲಿ ಪ್ರೇಮಾವಲನ ಸಂಚಾಲನವಾಯಿತು. ಅಂದಿನಿಂದ ಪ್ರತಿಯೊಂದು ಘಟ್ಟವನ್ನೂ ನೀನು ಬಲ್ಲೆ. ವಿರೂಪಾಕ್ಷನ ಸಹವಾಸವು ಸುಖಮಯವಾದುದಾಗಿದ್ದರೆ ಅದರಲ್ಲಿ ನಿನ್ನ ಪೂರ್ಣಸಹಾಯವಿಲ್ಲದೇ ಯಾವ ಕಾರ್ಯವೂ ಸಿದ್ಧಿಸುವಂತಿರಲಿಲ್ಲ. ಅವನ ಸಮಾಗಮಕ್ಕೆ ನೀನು ಸಹಾಯಕಳು. ಇಂದು ಅವನ ಅಂತ್ಯೇಷ್ಟಿಗೆ ನೀನೇ ಕಾರಣಕರ್ತಳು. ವಿರೂಪಾಕ್ಷನನ್ನು ತಂದವಳು ನೀನು. ಅವನನ್ನು ಕೊಂದವಳು ನೀನು. ಅವನ ಸಂಸರ್ಗವು ಪಾಪಕರವಾದುದಾಗಿದ್ದರೆ ಆ ಪಾಪಭಾಗಿನಿಯು ನೀನು. ಅದಕ್ಕೆ ಧರ್ಮದೇವತೆಯು ಸಾಕ್ಷಿ. ನಾನು ಸ್ವಲ್ಪವೂ ಅದಕ್ಕೆ ದುಃಖಿಸುವುದಿಲ್ಲ. ನೀನು ನನ್ನೊಡನೆ ಸರ್ವದಾ ಇರುವುದಾದರೆ ನನಗೆ ಯಾವ ದುಃಖವೂ ಇಲ್ಲ."

"ರಾಣಿಯವರೇ ಅದು ನಿಮಗೆ ನನ್ನ ಮೇಲಿರುವ ಪ್ರೇಮಾತಿಶಯ. ನಾನು ಆಮರಣಪರ್ಯಂತರ ನಿಮ್ಮ ಸೇವೆಯಲ್ಲಿದ್ದರೂ ನಿಮ್ಮ ಋಣ ತೀರುವುದಿಲ್ಲ. ಆದರೆ ನಾನು ಭವಾನೀರಾಣಿಯ ಸಮೀಪದಲ್ಲಿ ಸುಖಿಯಾಗಿದ್ದೇನೆ. ಸ್ವತಂತ್ರಳಾಗಿದ್ದೇನೆ. ಈ ಜಗತ್ತಿನಲ್ಲಿ ನನಗೆ ವಾಂಛನೀಯವಾದುದಾವುದೂ ಇಲ್ಲ. ಅಂತಹ ಸುಖಮಯ ಜೀವನದಿಂದ

ವಂಚಿತಳಾಗಿ ಈ ರಾಜಾಂತಃಪುರದಲ್ಲಿ ಇರುವುದೆಂದರೆ ಚಿನ್ನದ ಪಂಜರ ದಲ್ಲಿ ನನ್ನನ್ನು ಬಂಧಿಸಿಟ್ಟಂತೆಯೇ ಸರಿ. ದೇವಿ, ನಿಮ್ಮ ಅಭೀಷ್ಟದಂತೆ ನಿಮ್ಮೊಡನೆ ಇರುವೆನು."

"ಗಿರಿಜೆ, ಒಂದು ಮಾತು. ಸತ್ಯವನ್ನು ಹೇಳು. ಆ ಭವಾನೀ ರಾಣಿ ಯಾರು? ಅವಳು ಸನ್ಯಾಸಿನಿಯಾಗಿರಲು ಕಾರಣವೇನು? ಅವಳಿಗೆ ಈ ರಾಜವೈಭವವೆಲ್ಲಿಯದು? ಇಷ್ಟೊಂದು ಐಶ್ವರ್ಯವೆಲ್ಲಿಯದು? ಈ ದಾನಧರ್ಮಗಳು ಹೇಗೆ ನಡೆಯುತ್ತವೆ?"

"ರಾಣಿಯವರೇ, ಆ ಸನ್ಯಾಸಿನಿಯ ಪೂರ್ವೋತ್ತರಗಳನ್ನು ನಿಜ ವಾಗಿ ನಾನರಿಯೆ. ಭವಾನೀರಾಣಿಯ ಸಾನ್ನಿಧ್ಯದಲ್ಲಿದ್ದರೆ ಅವಳ ವಿಷಯದಲ್ಲಿ ಯಾವ ಶಂಕೆಗೂ ಆಸ್ಪದವೇ ಇಲ್ಲ. ಶಂಕೆ ಬರದೇ ಪೂರ್ವ ಚರಿತ್ರೆಯನ್ನು ಯಾರೂ ಹುಡುಕುವುದಿಲ್ಲ. ಅವಳು ನಿಜವಾದ ಸನ್ಯಾಸಿನಿ. ಅವಳ ತಂದೆಯೊಬ್ಬ ದೇವಿಯ ಉಪಾಸಕನಂತೆ. ಆತನಲ್ಲಿ ಸ್ಪರ್ಶಮಣಿಯಿತ್ತಂತೆ. ಅವನು ಮುಟ್ಟಿದ್ದೆಲ್ಲಾ ಚಿನ್ನವಾಗುತ್ತಿದ್ದಿತಂತೆ. ಅಪಾರ ಸುವರ್ಣನಿಧಿಯನ್ನು ಭವಾನೀರಾಣಿಗೆ ಒಪ್ಪಿಸಿ ಹೋಗಿದ್ದಾನೆ. ಆ ಸುವರ್ಣನಿಧಿಯಿರುವ ಸ್ಥಳವನ್ನು ನಿಮಗೆ ತೋರಿಸುವಂತೆ ನಿಮ್ಮೆದುರಿ ನಲ್ಲಿಯೇ ಆಜ್ಞೆಮಾಡಿದಳು. ಅದೆಲ್ಲವನ್ನೂ ನೀವು ತಿರಸ್ಕರಿಸಿದಿರಿ. ಭವಾನೀರಾಣಿಯ ವಿಷಯದಲ್ಲಿ ಮತ್ತೇನೂ ನನಗೆ ತಿಳಿಯದು."

"ಯುವರಾಜನು ಭವಾನೀರಾಣಿಯನ್ನು ಬಿಡಿಸಲು ಬಂದಿದ್ದ ನೆಂದೂ, ವಿರೂಪಾಕ್ಷನನ್ನು ಸ್ವಹಸ್ತದಿಂದ ವಧೆಮಾಡಿದನೆಂದೂ ನೀನು ಹೇಳಲಿಲ್ಲವೇ? ಯುವರಾಜನಿಗೂ ಭವಾನೀರಾಣಿಗೂ ಸಂಬಂಧವೇನು?"

"ರಾಣಿ, ಯುವರಾಜನು ಭವಾನೀರಾಣಿಯ ಪ್ರೇಮಪುತ್ರನಂತೆ ಇದ್ದಾನೆ. ಮಂತ್ರಿ ರಾಮಕೃಷ್ಣನು ಭವಾನೀರಾಣಿಯ ಸಹೋದರನಂತೆ ಇದ್ದಾನೆ. ಅಭಿರಾಮಸ್ವಾಮಿಯು ಭವಾನೀರಾಣಿಯನ್ನು ಶಿಷ್ಯಳೆಂದು ಭಾವಿಸುತ್ತಾನೆ."

ಚೆಲುವಮ್ಮಣ್ಣಿಯು ನಿಟ್ಟುಸಿರುಬಿಟ್ಟು, "ಇದೆಲ್ಲಾ ಆಶ್ಚರ್ಯವಾಗಿದೆ. ಭವಾನೀರಾಣಿ, ಮಂತ್ರಿ, ಯುವರಾಜ, ಇವರೆಲ್ಲರೂ ಒಂದು ಗುಂಪು

ಕಟ್ಟಿರುವಂತೆ ತೋರುತ್ತದೆ. ನನ್ನ ಮೇಲೆ ವಿರುದ್ಧಾಚರಣೆಯನ್ನು ಮಾಡುವಂತೆ ತೋರುತ್ತದೆ. ಇದರಿಂದ ನನಗೆ ಭಯವಾಗುತ್ತಿದೆ. ಈ ಪ್ರಪಂಚದಲ್ಲಿ ನನಗಾರೂ ಸಹಾಯಕರಿಲ್ಲವೆ ಎನ್ನಿಸುತ್ತದೆ. ನೀನೊಬ್ಬ ಳಾದರೂ ನನಗೆ ಸಹಾಯಮಾಡಲಾರೆಯಾ?" ಎಂದಳು.

ಭೈರವಿಯು ನಗುತ್ತಾ, "ರಾಣಿ, ಹುಚ್ಚು! ನಿನಗೆ ಹುಚ್ಚು ಹಿಡಿದಿದೆ. ಭವಾನೀರಾಣಿಯು ನಿನ್ನ ವಿರೋಧಿಯಲ್ಲ. ಮಂತ್ರಿಯು ನಿನ್ನ ವೈರಿಯಲ್ಲ. ಯುವರಾಜನು ನಿನ್ನ ಪ್ರತಿಕಕ್ಷಿಯಲ್ಲ. ನಿನ್ನ ಹೃದಯದಲ್ಲಿರುವ ನಿನ್ನ ಪಾಪವು ನಿನಗೆ ಭಯಪ್ರದರ್ಶನ ಮಾಡುತ್ತಿದೆ. ಪ್ರತಿಯೊಬ್ಬರನ್ನೂ ವಿದ್ವೇಷಿಗಳೆಂದು ಸಂದೇಹಪಡುವಂತೆ ಮಾಡಿದೆ ನಾನು ನಿನ್ನ ಸಮೀಪದಲ್ಲಿರುವಾಗ ನಿನಗೆ ನನ್ನಮೇಲೆ ಅಪಾರ ಪ್ರೀತಿಯು ತೋರುತ್ತಿದ್ದರೂ ನಾನು ಅಪ್ರತ್ಯಕ್ಷಳಾದರೆ ನನ್ನನ್ನೂ ವಿದ್ವೇಷಿಯೆಂದು ಭಾವಿಸುತ್ತಿ. ನಿನಗೆ ನಿನ್ನ ಮನಸ್ಸಿನ ಕರಾಳರೂಪವು ಎಲ್ಲರನ್ನೂ ವಿದ್ವೇಷಿಗಳೆಂದು ಭಾವಿಸುವಂತೆ ಮಾಡಿದೆ" ಎಂದಳು.

"ಭೈರವಿ, ಈ ವಾದದಿಂದ ಫಲವೇನು? ನಾನು ನಿನ್ನನ್ನು ಪ್ರೀತಿಸುತ್ತೇನೆ. ನೀನು ನನ್ನೊಡನೆ ಸರ್ವದಾ ಇರು ನಾನು ಸಾಯುವಾಗ ನಿನ್ನ ಮುಖವನ್ನು ನೋಡುತ್ತಾ ಮರಣಹೊಂದಿದರೆ ನನಗೆಷ್ಟೋ ಸಂತೋಷವಾಗುತ್ತದೆ" ಎಂದು ರಾಣಿಯು ಭೈರವಿಯನ್ನು ಗಟ್ಟಿಯಾಗಿ ತಬ್ಬಿಕೊಂಡಳು. ಭೈರವಿಯು ಸ್ಖಲಿತವಾಣಿಯಿಂದ "ದೇವಿ, ನಾನು ನಿನ್ನವಳು. ನಾನು ನಿನ್ನವಳು" ಎಂದು ನುಡಿದಳು ಬಹು ಹೊತ್ತು ಇಬ್ಬರೂ ನೀರವವಾಗಿದ್ದರು.

* * * * *

## ಕ್ರೋಧದ ಕಿಡಿ!

ರಾಣಿ ಚೆಲುವಮ್ಮಣ್ಣಿಯು ವಿರೂಪಾಕ್ಷನ ನಿಧನಕ್ಕಾಗಿ ಬಹಳ ಪರಿತಪಿಸಿದಳು. ಯುವರಾಜನ ಸ್ವಹಸ್ತದಿಂದ ಭವಾನೀರಾಣಿಯು

ಸಮ್ಮುಖದಲ್ಲಿ ವಿರೂಪಾಕ್ಷನ ಕೊಲೆಯಾಯಿತೆಂಬುದನ್ನು ನೆನೆದು ಅವಳ ಮನಸ್ಸಿನಲ್ಲಿ ಖೇದ, ಅಪಮಾನ, ಕ್ರೋಧಗಳು ಜ್ವಲಿಸತೊಡಗಿದವು. ಅಂದಿನಿಂದ ಚೆಲುವಮ್ಮಣ್ಣಿಯ ಚಿತ್ತವೃತ್ತಿಯೇ ಬೇರೆಯಾಗಿ ಹೋಯಿತು. ತಾನು ನಗರದ ರಾಣಿಯೆಂಬುವನ್ನು ಅವಳು ಮರತೇ ಬಿಟ್ಟಳು. ಎಂದು ವಿರೂಪಾಕ್ಷನ ವಧೆಯಾಯಿತೋ ಅಂದೇ ರಾಣಿಯು ಕಬ್ಬಾಳದುರ್ಗದ ರಾಜಮಂದಿರದಿಂದ ಬಿದನೂರಿನ ಅರಮನೆಗೆ ಬಂದು ಬಿಟ್ಟಳು. ಅವಳು ವಿಶೇಷವಾಗಿ ಏಕಾಂತವಾಸದಲ್ಲಿರುತ್ತಿದ್ದಳು. ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಬಹಳಹೊತ್ತು ಭೈರವಿಯು ಮಾತ್ರ ಅವಳ ಸಮೀಪದಲ್ಲಿಯೇ ಇರುತ್ತಿದ್ದಳು. ನಗರದರಾಣಿಯ ಮನಸ್ಸು ಪ್ರಫುಲ್ಲವಾಗಿರಲಿಲ್ಲ. ಅವಳ ಮುಖವು ತೇಜೋವಿಹೀನ ವಾಗಿದ್ದಿತು. ಆದರೆ ಪ್ರತ್ಯಕ್ಷ ಕ್ರೋಧೋದ್ದೀಪಿತವಾಗಿದ್ದಿತು.

ವಿರೂಪಾಕ್ಷನ ವಧೆಯನ್ನು ಮಾಡಿದಮೇಲೆ ಯುವರಾಜನು ರಾಣಿಯು ತನ್ನನ್ನು ಸಜೀವವಾಗಿ ಬಿಡುವುದಿಲ್ಲ, ತಾನೇ ರಾಣಿಯನ್ನು ಬಂಧಿಸಿ ಸಿಂಹಾಸನವನ್ನು ಏರಬೇಕೆಂದು ಸಂಕಲ್ಪಿಸಿದನು. ಯುವ ರಾಜನು ರಾಣಿ ಚೆಲುವಮ್ಮಣ್ಣಿಯನ್ನು ಅವಳ ಅಂತಃಪುರದಲ್ಲಿ ಭೇಟಿ ಮಾಡಿದನು. ರಾಣಿಯವರಿಗೂ ಯುವರಾಜರಿಗೂ ಯಥೋಚಿತವಾಗಿ ಸಂಭಾಷಣೆಯು ನಡೆಯಿತು. ಯುವರಾಜನು ರಾಣಿಯವರನ್ನು ಕುರಿತು, "ರಾಣಿಯವರೇ, ನೀವು ಸಿಂಹಾಸನವನ್ನು ಪರಿತ್ಯಜಿಸಬೇಕು. ಈ ಸಿಂಹಾಸನಕ್ಕೆ ನಿಮಗೆ ಯಾವ ಅಧಿಕಾರವೂ ಇಲ್ಲ. ನಾನು ಬಸಪ್ಪ ನಾಯಕರ ಪುತ್ರ. ಅಂದೇ ನಾನು ಈ ಸಿಂಹಾಸನವನ್ನು ಸ್ವೀಕರಿಸಿದ್ದರೆ ಇಷ್ಟು ಅನಾಹುತಗಳಿಗೆ ಕಾರಣವಾಗುತ್ತಿರಲಿಲ್ಲ. ನಿಮ್ಮ ಚರಿತ್ರೆಯು ಕಳಂಕಿತವಾಗಿದೆ. ನಿಮ್ಮ ಪ್ರಣಯ ಪ್ರಸಾದದಿಂದ ಉನ್ಮತ್ತರಾದ ಹಲವು ಅಧಿಕಾರಿಗಳು ಈ ರಾಜ್ಯದಲ್ಲಿ ಪ್ರಜಾಕ್ಷೋಭೆಯನ್ನುಂಟು ಮಾಡುತ್ತಿದ್ದಾರೆ. ಇದನ್ನು ಇನ್ನುಮೇಲೆ ನಾನು ಒಂದು ಕ್ಷಣವೂ ಸೈರಿಸಲಾರೆ. ನೀವು ಸಿಂಹಾಸನವನ್ನು ಪರಿತ್ಯಾಗಮಾಡಿದರೆ ಒಳ್ಳೆಯದು. ಇಲ್ಲದಿದ್ದರೆ ನೀವು ಬಂಧನದಲ್ಲಿರಬೇಕಾಗುವುದು." ಎಂದನು.

ರಾಣಿಯು ತಿರಸ್ಕಾರಪೂರ್ಣವಾದ ನಗುವನ್ನು ನಕ್ಕು "ಯುವರಾಜನೇ, ನೀನು ಉನ್ಮತ್ತನಾಗಿರುವೆ? ನಿನಗೆ ಈ ಸಿಂಹಾಸನದ ಹಕ್ಕೆಲ್ಲಿದೆ? ನೀನು ಬಸಪ್ಪನಾಯಕರ ಔರಸಪುತ್ರನಲ್ಲ. ನೀನು ಜಾರಪುತ್ರ. ಆದುದರಿಂದಲೇ ಬಸಪ್ಪನಾಯಕರು ಮರಣೋನ್ಮುಖರಾದಾಗ ನಿನಗೆ ಪಟ್ಟವನ್ನು ಕಟ್ಟಲಿಲ್ಲ. ನಾನು ಎಂದೋ ನಿನ್ನನ್ನು ಬಂಧನದಲ್ಲಿಡುತ್ತಿದ್ದೆನು. ನಿನ್ನಿಂದ ಉಪಾಯವಿಲ್ಲವೆಂದು ಔದಾಸೀನ್ಯದಿಂದ ದಯೆತೋರಿಬಿಟ್ಟೆನು. ಇಂದು ನಿನ್ನನ್ನು ಬಂಧನದಲ್ಲಿಡಿಸುವೆನು" ಎಂದು ಘರ್ಜಿಸಿದಳು. ಅಂತಃಪುರದ ದರೋಗನಾದ ಮಾಧವರಾಯನು ಸಜ್ಜಾಗಿದ್ದ ರಾಜಭಟರಿಂದ ಕೂಡಿ ಆ ಅಂತಃಪುರಕ್ಕೆ ಬಂದು ಚಿಕ್ಕ ಬಸಪ್ಪನಾಯಕನನ್ನು ಬಂಧಿಸಿ ಎಳೆದುಕೊಂಡುಹೋದನು ರಾಣಿಯ ಅಪ್ಪಣೆಯ ಪ್ರಕಾರ ಅರಮನೆಯಲ್ಲಿ ಗುಪ್ತಸ್ಥಳದಲ್ಲಿ ಯುವರಾಜನನ್ನು ಬಂಧನದಲ್ಲಿಟ್ಟರು. ಮಾಧವರಾಯನು ತಕ್ಕ ಕಾವಲನ್ನು ಏರ್ಪಡಿಸಿದನು. ಈ ಸಮಾಚಾರವು ನಗರದಲ್ಲಿ ಸ್ವಲ್ಪವೂ ತಿಳಿಯದಂತೆ ಬಂದೋಬಸ್ತು ಮಾಡಿದ್ದರು.

ಇಷ್ಟೆಲ್ಲಾ ವ್ಯವಸ್ಥೆಮಾಡಿ ರಾಣಿಯು ತನ್ನ ಅಂತರ್ಗೃಹದಲ್ಲಿ ಕುಳಿತು ಆಲೋಚಿಸತೊಡಗಿದಳು. ತನ್ನ ಮೇಲಿನ ವಿದ್ರೋಹವು ಆರಂಭವಾಯಿತೆಂದೇ ಸಿದ್ಧಮಾಡಿಕೊಂಡಳು. ಯುವರಾಜನ ಬಂಧನದ ಸಮಾಚಾರವು ಹೇಗಾದರೂ ಮಂತ್ರಿಗೆ ತಿಳಿದೇತಿಳಿಯುತ್ತೆಂದೂ, ಈಗ ಪ್ರಜೆಗಳು, ಅಧಿಕಾರಿಗಳು, ಸಮಸ್ತರೂ ಯುವರಾಜನಕಡೆಗೆ ಅರ್ಧ, ತನ್ನ ಕಡೆಗೆ ಅರ್ಧವಾಗಿ ನಗರದ ರಾಜ್ಯವು ಇಬ್ಭಾಗವಾಗಿ ಹೋಗುತ್ತದೆಂದೂ ನಿಶ್ಚಯಮಾಡಿಕೊಂಡಳು. ಯುವರಾಜನು ತನಗೆ ಮಾಡಿದ ಅಪಮಾನದಿಂದ ಕ್ರೋಧಾವಿಷ್ಟಳಾಗಿ ಮಹಾರಾಣಿಯು "ನಗರವು ಉಳಿದರೇನು? ಅಳಿದರೇನು? ಯುವರಾಜನನ್ನು ವಧೆಮಾಡಬೇಕು. ಮಂತ್ರಿಯನ್ನು ಬಂಧಿಸಬೇಕು, ಭವಾನೀರಾಣಿಯನ್ನು ನಿರ್ಬಂಧದಲ್ಲಿಡಬೇಕು, ರಾಮಕೃಷ್ಣನ ಕಡೆಯ ಅಧಿಕಾರಿಗಳನ್ನೆಲ್ಲಾ ಶೂಲಕ್ಕೇರಿಸಬೇಕು" ಎಂದು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡಳು.

ಆದಿನ ರಾಣಿಯು ಸ್ನಾನಭೋಜನಗಳನ್ನು ಮಾಡಲಿಲ್ಲ. ತನ್ನ ಶಯನಾಗಾರದಲ್ಲಿ ಚಿಂತಿಸಿ ಚಿಂತಿಸಿ ಶ್ರಾಂತಳಾಗಿ ಮಲಗಿದಳು.

ಸುಮಾರು ಅರ್ಧರಾತ್ರಿಯ ಹೊತ್ತಾಗಿರಬಹುದು. ಭೈರವಿಯು ಯುವರಾಜನು ಅಂತಃಪುರವನ್ನು ಪ್ರವೇಶಮಾಡಿದಾಗಿನಿಂದ ಅರ್ಧರಾತ್ರಿಯವರೆಗೆ ನಡೆದ ವಿದ್ಯಮಾನಗಳೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದ್ದಳು. ರಾಣಿಯು ಯುವರಾಜನಿಂದ ಆದ ಅಪಮಾನ, ಅಪಮಾನದಿಂದ ಎದ್ದ ಕ್ರೋಧ, ಆ ಕ್ರೋಧದಿಂದ ಹುಟ್ಟಿದ ಪ್ರಳಯಸದೃಶಕಲ್ಪನೆಗಳು, ಇದರಲ್ಲಿ ಭೈರವಿಯನ್ನು ಮರತೇಬಿಟ್ಟದ್ದಳು. ಭೈರವಿಯು ರಾಣಿಯ ಶಯನಾಗಾರಕ್ಕೆ ಬಂದು ನೋಡಿದಳು. ರಾಣಿಯು ಗಾಢನಿದ್ರೆಯಲ್ಲಿದ್ದಳು. ರಾಣಿಯ ಶಯನಾಗಾರದಲ್ಲಿ ನೇತುಹಾಕಿದ್ದ ಕರವಾಳವನ್ನು ಕೈಗೆ ತೆಗೆದುಕೊಂಡಳು. ಮೈತುಂಬ ಮುಸುಗುಹಾಕಿಕೊಂಡಳು. ಮೆಲ್ಲನೆ ಯುವರಾಜನನ್ನು ಬಂಧನದಲ್ಲಿಟ್ಟದ್ದ ಕೋಣೆಯ ಸಮೀಪಕ್ಕೆ ಹೋಗಿ ಅಂತಃಪುರದಿಂದ ಕಾಣುವ ಜಾಲರಿಯಿಂದ ನೋಡಿದಳು. ಯುವರಾಜನು ನಿದ್ರಿಸಿರಲಿಲ್ಲ. ಅಂತಃಪುರದ ಮೆಟ್ಟಲುಗಳನ್ನಿಳಿದು ಯುವರಾಜನನ್ನು ಬಂಧಿಸಿಟ್ಟದ್ದ ಗುಪ್ತಭವನದ ಕಡೆಗೆ ಹೋದಳು. ಅಲ್ಲಿ ಪಹರೆಯವನು ಪಹರೆ ಕೊಡುತ್ತಿದ್ದನು. ಕಾವಲುಗಾರರು ಬಹಳ ಬಂದೋಬಸ್ತಿನಿಂದ ಕಾಯುತ್ತಿದ್ದರು. ಬಾಗಿಲುಗಳು ಭದ್ರವಾಗಿ ಬಂಧಿಸಲ್ಪಟ್ಟತ್ತು. ಅಲ್ಲಿ ಒಂದು ಕಂಡಿಯಿಂದ ನೋಡಿದಳು. ಯುವರಾಜನನ್ನು ಕಾಣಬಹುದಾಗಿದ್ದಿತು. ಪಹರೆಯವರು ಆಗಾಗ ಆ ಕಂಡಿಯಿಂದ ನೋಡುತ್ತಿದ್ದರು. ಭೈರವಿಯು ಆ ಕಾವಲುಗಾರರನ್ನು ನೋಡಿದಳು. ಅವರಮೇಲೆ ಬಿದ್ದು ಅವರೊಡನೆ ಹೋರಾಟಮಾಡುವುದರಿಂದ ಫಲವಿಲ್ಲವೆಂದು ಭಾವಿಸಿದಳು. ಪುನಃ ರಾಣಿಯ ಶಯನಗೃಹದ ಕಡೆಗೆ ಹೋಗಿ ನೋಡಿದಳು. ರಾಣಿಯು ಗಾಢನಿದ್ರೆಯಲ್ಲಿಯೇ ಇದ್ದಳು. ಭೈರವಿಯು ಆ ಶಯನಾಗಾರದ ಬಾಗಿಲುಗಳನ್ನು ಎಳೆದು ಭದ್ರಪಡಿಸಿದಳು. ಪುನಃ ಅಂತಃಪುರದ ಜಾಲರಿಯ ಕಿಟಕಿಯಿಂದ ಯುವರಾಜನನ್ನು ನೋಡಿದಳು. ಯುವರಾಜನು ಸ್ಥಿರನಾಗಿ ಒಂದು

ಕಡೆ ಕಾಲುಮಣೆಯಮೇಲೆ ಕುಳಿತಿದ್ದನು. ಭೈರವಿಯು ಧೈರ್ಯಮಾಡಿ ತನ್ನ ತ್ರಿಶೂಲದಿಂದ ಮೀಟಿ ಆ ಜಾಲರಿಯ ಕಿಟಕಿಯನ್ನು ಕಿತ್ತಳು.

ಅಂತಃಪುರದಿಂದ ತಂದಿದ್ದ ಒಂದು ಉದ್ದವಾದ ಹಗ್ಗವನ್ನು ಇಳಿಬಿಟ್ಟಳು. ಯುವರಾಜನು ಕ್ಷಣಾರ್ಧದಲ್ಲಿ ಆ ಜಾಲರಿಯು ಕಳಚಿಬಿದ್ದುದನ್ನೂ ಮೇಲಿನಿಂದ ಹಗ್ಗವು ಇಳಿಯುತ್ತಿರುವುದನ್ನೂ ಕಂಡನು. ಯಾವುದೋ ಒಂದು ಅಮೃತಹಸ್ತವು ತನ್ನ ಸಹಾಯಕ್ಕೆ ಬಂದಿದೆಯೆಂದು ತಿಳಿದು, ಆ ಹಗ್ಗದ ಸಮೀಪಕ್ಕೆ ಹಾರಿಹೋಗಿ ಆ ಹಗ್ಗವನ್ನು ಹಿಡಿದುಕೊಂಡು ಮೇಲಕ್ಕೆ ಹತ್ತಿ ಹೋದನು ಭೈರವಿಯು ತನ್ನ ಕೈಯನ್ನು ಕೊಟ್ಟು ಯುವರಾಜನನ್ನು ಮೇಲಕ್ಕೆ ಎಳೆದುಕೊಂಡಳು. ಅಂತಃಪುರದ ಒಳಕ್ಕೆ ಯುವರಾಜನು ಬರುತ್ತಲೇ ಭೈರವಿಯು ಹಗ್ಗವನ್ನು ಮೇಲಕ್ಕೆ ಎಳೆದುಕೊಂಡು ಆ ಜಾಲರಿಯನ್ನು ತೆಗೆದು ಅದರ ಸ್ಥಳದಲ್ಲಿಯೇ ಇಟ್ಟಳು. ಭೈರವಿಯು ಯುವರಾಜನನ್ನು ತನ್ನೊಡನೆ ಬರುವಂತೆ ಸನ್ನೆಮಾಡಿ ಅಂತಃಪುರದಿಂದ ಹಿಂದಿನ ಮಾರ್ಗವಾಗಿ ಕರೆದುಕೊಂಡು ಬೇಗಬೇಗ ನಡೆದು ಹೋದಳು. ಅಲ್ಲಿ ಕಾವಲಿದ್ದ ಪಹರೆಯವರು ಭೈರವಿಯನ್ನು ತಡೆಯಲಿಲ್ಲ. ಜೊತೆಯಲ್ಲಿ ಬರುತ್ತಿದ್ದ ಪುರುಷನಾರೆಂದು ಅವರು ವಿಚಾರಿಸಲೂ ಇಲ್ಲ. ಅಂತಃಪುರದಿಂದ ಹಾಗೆ ಅಂತರಂಗವಾಗಿ ಹೋಗಿಬರುವ ಪುರುಷರಲ್ಲಿ ಇವನೂ ಒಬ್ಬನಾಗಿರಬಹುದೆಂದು ಪಹರೆಯವರು ಕಂಡೂಕಾಣದಂತೆ ಸುಮ್ಮನಿದ್ದರು. ಭೈರವಿಯು ಜೊತೆಯಲ್ಲಿದ್ದುದರಿಂದ ಅವರಿಗೆ ಸಂದೇಹಕ್ಕೆ ಆಸ್ಪದವೇ ಇರಲಿಲ್ಲ. ಭೈರವಿಯೂ ಯುವರಾಜನೂ ಬೆಳಗಾಗುವುದರೊಳಗೆ ಬಿದನೂರನ್ನು ಬಿಟ್ಟು ಹೊರಟುಹೋಗಿದ್ದರು. ಯುವರಾಜನು ನಗರಕ್ಕೆ ಹೋಗಿ ತನ್ನ ಅರಮನೆಯಲ್ಲಿ ಸೇರಿಕೊಂಡನು. ಭೈರವಿಯು ಯುವರಾಜನನ್ನು ಅವನ ಅರಮನೆಗೆ ಸೇರಿಸಿ ತಾನು ಭವಾನೀ ರಾಣಿಯ ಗೃಹಾಭಿಮುಖವಾಗಿ ಹೊರಟು ಹೋದಳು.

ಪ್ರಾತಃಕಾಲವಾಗುತ್ತಲೆ ಯುವರಾಜನು ತಪ್ಪಿಸಿಕೊಂಡಿರುವ ಸಮಾಚಾರವು ರಾಣಿಗೆ ವರದಿಯಾಯಿತು. ಭೈರವಿಯು ಅವನನ್ನು

ಬಂಧನದಿಂದ ತಪ್ಪಿಸಿ ಬಿಡಿಸಿಕೊಂಡು ಹೋದಳೆಂದು ಸ್ಪಷ್ಟವಾಗಿ ತಿಳಿಯಿತು. ರಾಣಿಯು ಪದಾಘಾತವಾದ ಫಣಿನಿಯಂತೆ ಕೋಪೋದ್ದೀಪಿತಳಾಗಿ ಅಂತಃಪುರದಲ್ಲಿ ಕುಳಿತು ತನ್ನ ಪರಮಾಪ್ತನೂ, ಪ್ರಣಯಭಾಜನೂ ಆಗಿದ್ದ ರಾಮರಾಯನನ್ನು ಕರೆಸಿದಳು. ರಾಮರಾಯನೊಡನೆ ಈ ಸಕಲ ವೃತ್ತಾಂತವನ್ನೂ ತಿಳಿಸಿ ತಾನು ಆತ್ಮಹತ್ಯ ಮಾಡಿಕೊಳ್ಳುವುದಾಗಿ ರಾಣಿಯು ಅರುಹಿದಳು.

ರಾಮರಾಯನು ನಗರದ ರಾಜ್ಯದಲ್ಲಿ ಪ್ರತಿಷ್ಠಿತನಾದ ಸೇನಾಧಿಪತಿ. ಶಿವಾಜೀಮಹಾರಾಜರ ಕುಲದವನೆಂದು ಹೆಮ್ಮೆಯಿಂದ ಮೆರೆಯುತ್ತಿದ್ದ ವೀರಪುರುಷ. ಅವನು ಮಹಾರಾಣಿಯವರ ಪ್ರೇಮಪ್ರಸಾದಕ್ಕೆ ಭಾಗಿಯಾಗಿದ್ದ ರಾಣಿಯ ನರ್ಮಸಚಿವ. ಇಂತಹ ಪ್ರಣಯಾಕಾಂಕ್ಷಿಗಳು ರಾಣಿಗೆ ಅನೇಕರಿದ್ದರೂ, ಅಂದು ಆ ಸಾನ್ನಿಧ್ಯದಲ್ಲಿ ಯಾರಮೇಲೆ ರಾಣಿಯು ಪರಮಾನುಗ್ರಹವಾಗುವುದೋ ಅಂದು ಅವನು ಇಂದ್ರಪದವಿಯನ್ನು ಪಡೆದವನಂತೆ ಭಾವಿಸುತ್ತಿದ್ದನು. ಇಂತಹ ರಾಣಿಯ ಅನುಚರರಲ್ಲಿ ರಾಮರಾಯನು ಮುಖ್ಯನಾದವನೆಂದು ಹೇಳಿದರೂ ಹೇಳಬಹುದು. ರಾಮರಾಯನು ರಾಣಿಯವರಿಗೆ ಧೈರ್ಯವನ್ನು ಹೇಳಿ "ಮಹಾರಾಣಿಯವರೇ, ತಮಗೆ ಈ ರಾಜ್ಯದ ಪೂರ್ಣಾಧಿಕಾರವಿದೆ. ತಾವು ಏನು ಬೇಕಾದರೂ ಮಾಡಬಹುದು. ಇಂತಹ ಸಂದರ್ಭದಲ್ಲಿ ಧೈರ್ಯವನ್ನು ತಳೆಯಬೇಕು. ನನಗೆ ಅಪ್ಪಣೆಯನ್ನು ಕೊಡಿರಿ. ನಾನು ಯುವರಾಜನೆಲ್ಲಿದ್ದರೂ ಬಂಧಿಸಿ ತಮ್ಮ ಪಾದದಲ್ಲಿ ತಂದು ಕೆಡಹುವೆನು" ಎಂದು ಹೇಳಿದನು. ರಾಣಿಯು ಘರ್ಜಿಸುತ್ತಾ "ರಾಮರಾಯ, ನನ್ನ ಅಪ್ಪಣೆಯನ್ನು ಪಾಲಿಸು. ಯುವರಾಜನನ್ನು ಬಂಧಿಸುವ ಕಾರಣವಿಲ್ಲ. ಅವನು ವಾಸಮಾಡುವ ಅರಮನೆಯ ಸುತ್ತಲೂ ಬಲವಾದ ಸೈನ್ಯದ ಕಾವಲನ್ನಿಡಬೇಕು. ಈ ಪಿತೂರಿಯಲ್ಲಿ ಭವಾನೀರಾಣಿಯು ಮುಖ್ಯಳಾದವಳೆಂದು ನನ್ನ ಭಾವನೆ. ಭವಾನೀರಾಣಿಯನ್ನು ಬಂಧಿಸಿ ನನ್ನ ಸಮ್ಮುಖಕ್ಕೆ ಕರತರಬೇಕು. ಭೈರವಿಯು ಎಲ್ಲಿದ್ದರೂ ಅವಳನ್ನು ಹಿಡಿದು ಬಲವಾದ ಬಂಧನದಲ್ಲಿಡಬೇಕು. ಇಂದಿನಿಂದ ನಗರದ

ರಾಜ್ಯದಲ್ಲಿ ಯಾವ ದೇವಾಲಯದಲ್ಲಿಯೂ, ಯಾವ ಛತ್ರದಲ್ಲಿಯೂ, ಯಾವ ರಾಜಮಾರ್ಗದಲ್ಲಿಯೂ ಭವಾನೀರಾಣಿಯ ಹೆಸರಿನಲ್ಲಿ ಯಾವುದೊಂದು ಧರ್ಮವೂ ನಡೆಯಕೂಡದು. ಭವಾನೀರಾಣಿಯ ಐಶ್ವರ್ಯವನ್ನು ಮುಟ್ಟುಗೋಲುಹಾಕಿ ಈ ಅರಮನೆಗೆ ತೆಗೆದುಕೊಂಡು ಬರಬೇಕು. ಈ ನನ್ನ ಆಜ್ಞೆಯು ಪೂರೈಸುವವರೆಗೆ ನಾನು ಅನ್ನಾಹಾರ ಗಳನ್ನು ಸ್ವೀಕರಿಸುವುದಿಲ್ಲ. ಇಂದು ಸೂರ್ಯನು ಅಸ್ತವಾಗುವದರೊಳಗೆ ಇಷ್ಟು ಕಾರ್ಯಗಳನ್ನು ನಡೆಸತಕ್ಕದ್ದು. ಇದಕ್ಕೆ ಯಾರೇ ಎದುರು ಬರಲಿ ಅವರ ಶಿರಚ್ಛೇದವನ್ನು ಮಾಡತಕ್ಕದ್ದು" ಎಂದು ಅಧಿಕಾರ ವಾಣಿಯಿಂದ ನುಡಿದಳು. ರಾಮರಾಯನು ರಾಣಿಗೆ ಅಭಿವಂದಿಸಿ ಅಂತಃಪುರವನ್ನು ಬಿಟ್ಟು ಹೊರಟನು.

ರಾಮರಾಯನು ರಾಣಿಯ ಆಜ್ಞೆಯನ್ನುನೆರವೇರಿಸಲು ಬೇಕಾದ ಸನ್ನಾಹಗಳನ್ನು ಮಾಡತೊಡಗಿದನು. ರಾಮರಾಯನು ಅಂತಃಪುರ ವನ್ನು ಬಿಟ್ಟುಹೋಗುತ್ತಲೇ ರಾಣಿಯು ಅರಮನೆಯ ದರೋಗನಾದ ಮಾಧವರಾಯನನ್ನು ಕರೆಸಿ, "ಮಾಧವರಾಯ, ನಿನ್ನ ಅಪರಾಧವೇನೂ ಇಲ್ಲ. ಭೈರವಿಯು ನನ್ನ ಆಪ್ತಗೆಳತಿಯಾಗಿದ್ದು ಅವಳು ಯುವರಾಜ ನನ್ನು ಬಂಧನದಿಂದ ಬಿಡಿಸಿಕೊಂಡುಹೋದುದೇನು ಅಂತಹ ಸಾಹಸ ಕಾರ್ಯವಲ್ಲ. ನಾನು ನಿನ್ನಮೇಲೆ ಆಗ್ರಹಗೊಂಡಿಲ್ಲ. ಇನ್ನುಮುಂದೆ ಅರಮನೆಯ ರಾಜಭಟರನ್ನೆಲ್ಲಾ ಬದಲಾಯಿಸಿಬಿಡು. ಹೊಸ ಜನರನ್ನು ನೇಮಿಸು ಅರಮನೆಯೊಳಗೆ ಹೆಂಗಸರಾಗಲೀ, ಗಂಡಸರಾಗಲೀ ಒಂದು ಪಿಳ್ಳೆಯೂ ನಿನ್ನ ಅನುಮತಿಯಿಲ್ಲದೇ ಪ್ರವೇಶಮಾಡಕೂಡದೆಂದು ಒಂದು ಕಟ್ಟಪ್ಪಣೆಮಾಡು. ಸೇನಾಧಿಪತಿ ರಾಮರಾಯನ ಸೈನ್ಯದಲ್ಲಿ ಅಧಿಕಾರಿಯಾಗಿರುವ ಗಫಾರ್‌ಖಾ ಎಂಬ ಪಠಾನ್ ಸೇನಾನಾಯಕ ನನ್ನು ನಮ್ಮ ಸಮ್ಮುಖಕ್ಕೆ ಕರೆಸು" ಎಂದು ಆಜ್ಞಾಪಿಸಿದಳು. ಉತ್ತರ ಕ್ಷಣದಲ್ಲಿಯೇ ಪಠಾಣ ಸೇನಾನಾಯಕನು ರಾಣಿಯವರ ಸಮ್ಮುಖಕ್ಕೆ ಬಂದು ಕುರ್ನಿಸಾತ್ ಮಾಡಿದನು. ರಾಣಿಯು ಗಂಭೀರವಾಣಿಯಿಂದ "ಪಠಾಣ ಸೇನಾಧಿಪತಿಯೇ, ನೀನು ಮಹಾವೀರನೆಂದು ಕೇಳಿದ್ದೇನೆ. ಎಷ್ಟು ಸೈನ್ಯಕ್ಕೆ ನೀನು ಅಧಿಪತಿ?" ಎಂದು ಕೇಳಿದಳು.

ಪಠಾಣ್‌ಸೇನಾನಾಯಕನು "ಮಹಾರಾಣಿಯವರೆ, ನನ್ನ ಸೈನ್ಯ ದಲ್ಲಿ ಐನೂರುಮಂದಿ ಯೋದ್ಧರಿದ್ದಾರೆ. ಸಂಖ್ಯೆಯಲ್ಲಿ ಕಡಿಮೆಯಾದರೂ ಪರಾಕ್ರಮದಲ್ಲಿ ನಾವು ಯಾರಿಗೂ ಹಿಂಜರಿಯುವವರಲ್ಲ. ಈ ಹಿಂದೂ ಜನ ಐದುಸಹಸ್ರ ಸೈನಿಕರು ನಮ್ಮೊಡನೆ ಯುದ್ಧಕ್ಕೆ ನಿಂತರೂ ನಾವು ಒಂದು ಹೆಜ್ಜೆಯನ್ನೂ ಹಿಮ್ಮೆಟ್ಟುವವರಲ್ಲ" ಎಂದು ಹೇಳಿದನು.

ರಾಣಿಯು ಮುಗುಳುನಗುವನ್ನು ನಕ್ಕು "ಸೇನಾನಾಯಕನೇ! ನೀನು ನಗರದ ಅರಮನೆಯಲ್ಲಿ ಕಾವಲುಕಾಯಬೇಕು ಆ ಅರಮನೆಯಲ್ಲಿ ದಂಪತಿಸಮೇತರಾಗಿ ಚೆನ್ನಬಸಪ್ಪನಾಯಕರು ವಾಸಮಾಡುತ್ತಾರೆ. ಅವರು ನಮ್ಮ ವಿದ್ರೋಹಿಗಳಾಗಿದ್ದಾರೆ. ಆ ಅರಮನೆಯನ್ನು ನೀವು ಸರ್ಪಕಾವಲು ಕಾಯಬೇಕು. ಅರಮನೆಯಲ್ಲಿರುವ ಒಂದು ಪ್ರಾಣಿಯೂ ಹೊರಗೆ ಹೋಗಕೂಡದು. ಹೊರಗಿನಿಂದ ಒಂದು ಪಿಳ್ಳೆಯೂ ಒಳಗೆ ಹೋಗಕೂಡದು. ಒಂದುಬಾರಿ ಚೆನ್ನಬಸಪ್ಪನಾಯಕರು ಬಂಧನದಿಂದ ತಪ್ಪಿಸಿಕೊಂಡು ಹೋಗಿದ್ದಾರೆ. ಈಬಾರಿ ಅವರನ್ನು ಎಲ್ಲಿ ಹೋಗುವು ದಕ್ಕೂ ಅಸ್ಪದವೀಯಕೂಡದೆಂದು ನಿಮ್ಮನ್ನು ಕಾವಲಿಗೆ ನೇಮಿಸಿದೆ" ಎಂದು ಹೇಳಿದಳು. ಪಠಾಣಸೇನಾನಿಯು ಕುರ್ನಿಸಾತು ಮಾಡಿದನು. ರಾಣಿಯು ಸಹಸ್ರ ಚಿನ್ನದ ವರಹಗಳನ್ನು ಅವನಿಗೆ ಪಾರಿತೋಷಿಕವಾಗಿ ಕೊಡಿಸಿದಳು. ಅವನು ಸಂತುಷ್ಟನಾಗಿ "ರಾಣಿಯವರೇ, ನಾವು ಉಪ್ಪುಂಡಮನೆಗೆ ಎರಡು ಬಗೆಯುವವರಲ್ಲ" ಎಂದು ಹೇಳಿ ಮತ್ತೊಮ್ಮೆ ಕುರ್ನಿಸಾತು ಮಾಡಿ ಹೊರಟುಹೋದನು.

ರಾಮರಾಯನು ರಾಜಭಟರುಗಳನ್ನು ಜೊತೆಯಲ್ಲಿ ಕರೆದು ಕೊಂಡು ಸಕಲ ಸನ್ನಾಹದೊಡನೆ ಭವಾನೀರಾಣಿಯ ಭವನದ ಕಡೆಗೆ ಹೋದನು. ಇಷ್ಟುಹೊತ್ತಿಗೆ ಮಧ್ಯಾಹ್ನವಾಗಿತ್ತು. ಬ್ರಾಹ್ಮಣರು ಭೋಜನಕ್ಕೇಳುವ ಸಮಯ. ರಾಮರಾಯನು ಭವಾನೀರಾಣಿಯ ಅರಮನೆಯ ದ್ವಾರದಲ್ಲಿ ಹೋಗಿ ನಿಂತು ಭವಾನೀರಾಣಿಯವರಿಗೆ ಹೇಳಿ ಕಳುಹಿಸಿದನು. ಭವಾನೀರಾಣಿಯವರು ಬಂದು ಸೇನಾಧಿಪತಿಯಾದ ರಾಮರಾಯನಿಗೆ ದರ್ಶನವಿತ್ತರು. ರಾಮರಾಯನು ಭವಾನೀರಾಣಿ

ಯುವರಿಗೆ ವಂದನೆಯನ್ನು ಸಮರ್ಪಿಸಿ "ದೇವಿಯವರೇ, ತಮ್ಮ ಭಂಡಾರವನ್ನು ಸರ್ಕಾರದ ವಶಪಡಿಸಬೇಕೆಂದು ಮಹಾರಾಣಿಯವರ ಅಪ್ಪಣೆಯಾಗಿದೆ. ತಮ್ಮನ್ನು ರಾಜಾಸ್ಥಾನಕ್ಕೆ ಕರೆತರಬೇಕೆಂದು ಆಜ್ಞೆಯಾಗಿದೆ" ಎಂದು ವಿನಯದಿಂದ ತಿಳಿಸಿದನು. ಭವಾನೀರಾಣಿಯು ತಿರಸ್ಕಾರಪೂರ್ಣವಾದ ನಗುವನ್ನು ನಕ್ಕು "ಸೇನಾಧಿಪತಿಗಳೇ, ಇದು ಅತ್ಯಂತ ಸುಲಭವಾದ ಕಾರ್ಯ. ಓಲೆಕಾರನು ಈ ಆಜ್ಞೆಯನ್ನು ತಂದಿದ್ದರೆ ನಾನು ಪರಿಪಾಲಿಸುತ್ತಿದ್ದೆನು. ಇಷ್ಟು ರಾಜಭಟರೇಕೆ? ಸೇನಾಧಿಪತಿಗಳಾದ ತಾವು ಇಲ್ಲಿಗೆ ಬರಬೇಕೆ? ನಾನು ವಿರಕ್ತಳಾದ ಸನ್ಯಾಸಿನಿ. ರಾಜಾಜ್ಞೆಯಿಂದಲೇ ಈ ಅರಮನೆಯಲ್ಲಿ ನೆಲಸಿದ್ದೆನು. ಇಂದು ರಾಜಾಜ್ಞೆಯಾದರೆ ಈ ಅರಮನೆಯನ್ನು ತಮಗೆ ಒಪ್ಪಿಸಲು ಸಂತೋಷದಿಂದ ಸಿದ್ಧಳಾಗಿರುವೆನು. ಅರಮನೆಯೊಳಗೆ ಅತಿಥಿಸತ್ಕಾರವಾಗುತ್ತಿದೆ. ಬ್ರಾಹ್ಮಣಭೋಜನವಾಗುತ್ತಿದೆ. ನೀವು ಈ ಚೌಕಿಯಲ್ಲಿ ಕುಳಿತು ವಿಶ್ರಮಿಸಿಕೊಳ್ಳಿರಿ. ನಾನು ಈ ಕಾರ್ಯಗಳನ್ನೆಲ್ಲಾ ಪೂರ್ತಿ ಮಾಡಿ ತಮ್ಮೊಡನೆ ರಾಜಾಸ್ಥಾನಕ್ಕೆ ಬರುವೆನು. ಈ ಕ್ಷಣದಿಂದ ಈ ವಾಸಸ್ಥಾನವು ತಮ್ಮದು. ನಾನು ಇಲ್ಲಿ ಜಲಪಾನ ಮಾಡುವುದಿಲ್ಲ" ಎಂದು ಹೇಳಿದಳು. ರಾಮರಾಯನ ಪರಾಕ್ರಮವು ಎಲ್ಲಿಗೋ ಹೋಯಿತು. ಅವನ ಕಾಲುಗಳು ನಡುಗಿದವು. ಅವನು ಭವಾನೀರಾಣಿಗೆ ಪುನಃ ಅಭಿವಂದಿಸಿ "ಮಹಾದೇವಿಯವರೇ, ನಾನು ರಾಜಾಜ್ಞೆಯನ್ನು ಪಾಲನ ಮಾಡಲೇಬೇಕು. ಅದಕ್ಕಾಗಿ ಬಂದಿದ್ದೇನೆ. ನನ್ನ ಅಪರಾಧವನ್ನು ಕ್ಷಮಿಸಬೇಕು. ನಾನು ತಮ್ಮ ಅಪ್ಪಣೆಯಂತೆ ನಡೆಯುತಕ್ಕವನು" ಎಂದು ಹೇಳಿದನು. ಭವಾನೀರಾಣಿಯು ಒಳಗೆ ಭೋಜನಶಾಲೆಗೆ ಹೊರಟುಹೋದಳು.

ಅರಮನೆಯಿಂದ ನಗರದ ರಾಜ್ಯದಲ್ಲೆಲ್ಲಿಯೂ ಭವಾನೀರಾಣಿಯ ಧರ್ಮಗಳು ನಡೆಯಕೂಡದೆಂದು ಆಜ್ಞಾಪತ್ರಗಳು ಹೊರಟವು. ಮಲ್ಲಿಕಾರ್ಜುನಕ್ಷೇತ್ರದಲ್ಲಿ ರಾಜಭಟರಿಂದ ಸಕಲ ಧರ್ಮಗಳೂ ನಿಲ್ಲಿಸಲ್ಪಟ್ಟವು. ಈ ಆಜ್ಞೆಯನ್ನು ಕೇಳಿ ಅಭಿರಾಮಸ್ವಾಮಿಯು ವಿಚಲ

ನಾಗಲಿಲ್ಲ. ಮಹಾದೇವನ ಸನ್ನಿಧಾನದಲ್ಲಿ ಧ್ಯಾನಮಗ್ನನಾಗಿ ಕುಳಿತನು. ಮಹಾಮಂತ್ರಿ ರಾಮಕೃಷ್ಣನಿಗೆ ಗೂಢಚಾರರು ಈ ಸಮಾಚಾರಗಳನ್ನೆಲ್ಲಾ ತಿಳಿಸಿದರು. ಮಹಾಮಂತ್ರಿ ರಾಮಕೃಷ್ಣನು ಆಶ್ಚರ್ಯಚಕಿತನಾದನು. ನಗರದ ರಾಜ್ಯದಲ್ಲಿ ಒಂದು ಭಯಂಕರವಾದ ಜ್ವಾಲಾಮುಖಿಯೆದ್ದರೆ ಹೇಗಾಗುವುದೋ ಹಾಗೆ ಭಾಸವಾಯಿತು ರಾಮಕೃಷ್ಣನಿಗೆ ನಗರದ ರಾಜ್ಯಭಾರ. ರಾಮಕೃಷ್ಣನು ಧಿರಸುಗಳನ್ನು ಧರಿಸಿಕೊಂಡು ಅಶ್ವಾರೂಢನಾಗಿ ಹೊರಟನು. ಮಂತ್ರಿಯ ಮೈಗಾವಲಿನ ಅನುಚರರು ಅವನ ಹಿಂದೆ ಹೊರಟರು. ಮಹಾಮಂತ್ರಿ ರಾಮಕೃಷ್ಣನು ಕುದುರೆಯನ್ನು ದೌಡಾಯಿಸುತ್ತಾ ಭವಾನೀರಾಣಿಯ ಮಂದಿರದ ಮುಖದ್ವಾರದಲ್ಲಿ ಬಂದಿಳಿದನು. ಅಷ್ಟರಲ್ಲಿ ಅವನ ಕಣ್ಣುಮುಂದೆ ಒಂದು ಘೋರಕೃತ್ಯವನ್ನು ಕಂಡನು.

ಭವಾನೀರಾಣಿಯು ಭೋಜನಗೃಹಕ್ಕೆ ಹೋಗಿ ಅತಿಥಿಗಳ ಸತ್ಕಾರವನ್ನು ಮಾಡುತ್ತಿದ್ದಾಗ ಈ ಸಮಾಚಾರವೆಲ್ಲಾ ಭೈರವಿಗೆ ತಿಳಿಯಿತು. ಭೈರವಿಯು ಬಂದು ಮಹಾದ್ವಾರದಲ್ಲಿ ನಿಂತು ಸೇನಾನಿಯನ್ನು ಕರೆದು "ಸೇನಾರು? ಏತಕ್ಕೆ ಬಂದಿರುವೆ?" ಎಂದು ಘರ್ಜಿಸಿದಳು. ರಾಮರಾಯನು ಅವಳನ್ನು ದೃಷ್ಟಿಸಿ ನೋಡಿದನು. ಭೈರವಿಯ ಪರಿಚಯವು ಅವನಿಗೆ ಚೆನ್ನಾಗಿತ್ತು. ರಾಮರಾಯನು ಭೈರವಿಯ ಮುಂದೆ ಬಂದು ನಿಂತು "ಭೈರವಿ, ನಿನ್ನನ್ನು ಹಿಡಿದು ಬಂಧಿಸಬೇಕೆಂದು ರಾಜಾಜ್ಞೆಯಾಗಿದೆ. ನೀನು ನಮ್ಮ ವಶವರ್ತಿಯಾಗಬೇಕು" ಎಂದು ಉಚ್ಚಕಂಠದಿಂದ ಹೇಳಿದನು. ಭೈರವಿಯು, "ರಾಮರಾಯನೆ, ನನ್ನ ಬಂಧನದಮಾತು ಹಾಗಿರಲಿ. ನಾನು ಯಾವಾಗ ಬೇಕೆಂದರೆ ಆಗ ನಿಮ್ಮೊಡನೆ ಬರುವೆನು. ಎಲ್ಲಿಗೆ ಬೇಕಾದರೂ ಬರುವೆನು. ಭವಾನೀರಾಣಿಯುವರಮೇಲೆ ನಿಮ್ಮ ರಾಣಿಯವರ ಹುಕುಂ ಏನಾಗಿದೆ ಹೇಳು? ನಾನೊಮ್ಮೆ ಕೇಳುವೆನು. ಭವಾನೀರಾಣಿಯವರು ಏನು ಉತ್ತರಕೊಟ್ಟರು? ಅದನ್ನು ಹೇಳು, ಕೇಳುವೆನು" ಎಂದು ಮೂದಲಿಸಿ ನುಡಿದಳು.

"ಭೈರವಿ, ಮಹಾರಾಣಿಯವರ ಆಜ್ಞೆಯು ಅತ್ಯಂತ ಕ್ರೂರವಾಗಿದೆ. ಈ ಭವನವನ್ನು ವಶಪಡಿಸಿಕೊಳ್ಳಬೇಕೆಂದು ಆಜ್ಞೆಯಾಗಿದೆ. ಭವಾನೀರಾಣಿಯ ಭಂಡಾರವನ್ನು ವಶಪಡಿಸಿಕೊಂಡು ಅರಮನೆಗೆ ತರಬೇಕೆಂದು ಆಜ್ಞೆಯಾಗಿದೆ. ಭವಾನೀರಾಣಿಯವರನ್ನೂ ನಿನ್ನನ್ನೂ ಬಂಧಿಸಿ ತರಬೇಕೆಂದು ಆಜ್ಞೆಯಾಗಿದೆ"

ಭೈರವಿಯು ನಗುತ್ತಾ "ರಾಮರಾಯ, ನಿಮ್ಮ ರಾಣಿಗೆ ಹುಚ್ಚು ಹಿಡಿದಿದೆ. ನೀವೆಲ್ಲಾ ಅವಳ ಯಜ್ಞದ ಪಶುಗಳು. ಅಂದು ಆ ವಿರೂಪಾಕ್ಷನನ್ನು ಬಲಿಕೊಟ್ಟಳು. ಇಂದು ನಿನ್ನನ್ನು ಬಲಿಸ್ತಂಭಕ್ಕೆ ಕಟ್ಟದ್ದಾಳೆ. ಅಯ್ಯೋ ಹುಚ್ಚ! ಆ ರಾಣಿಯ ಮಾತುಕೇಳಿ ನೀವು ಎಂತಹ ದುಷ್ಕಾರ್ಯಗಳನ್ನಾದರೂ ಹಿಂದುಮುಂದೆ ನೋಡದೆ ಮಾಡುತ್ತೀರಿ. ನಿಮಗೆಲ್ಲರಿಗೂ ಪ್ರಾಯಶ್ಚಿತ್ತವಾಗುವ ಕಾಲವು ಬಂದಿದೆ" ಎಂದು ಘರ್ಜಿಸಿದಳು.

ಸೇನಾಧಿಪತಿಗೆ ತಡೆಯಲಾರದಷ್ಟು ಕೋಪಬಂದಿತು. ಅವನು ಭೈರವಿಯ ಕೈಹಿಡಿದು ದರದರನೆ ಎಳೆದು "ಬಾಂದಿ, ಬಾಯಿಮುಚ್ಚು. ನಾನು ನಿನ್ನ ಶಿರಚ್ಛೇದಮಾಡಲು ಹಿಂತೆಗೆಯುವುದಿಲ್ಲ." ಎಂದು ಭೈರವಿಯನ್ನು ಕಾಲಿನಿಂದ ಒದ್ದನು. ಈ ಸಮಯಕ್ಕೆ ಸರಿಯಾಗಿ ಮಹಾಮಂತ್ರಿಯು ಆ ಮಹಾದ್ವಾರಕ್ಕೆ ಬಂದು ನಿಂತನು. ಅವನ ರೋಷಾವೇಷಪೂರಿತವಾದ ಕಣ್ಣುಗಳನ್ನು ನೋಡಿ, ರಾಮರಾಯನ ಎದೆಯು ಜಗ್ಗೆಂದಿತು. ಮಹಾಮಂತ್ರಿಯು, "ರಾಮರಾಯ! ಹೆಂಗಸನ್ನು ಮುಟ್ಟಬೇಡ, ಹಿಂದಕ್ಕೆ ಸರಿ" ಎಂದು ಘರ್ಜಿಸಿದನು. ರಾಮರಾಯನು ಗಾಬರಿಯಿಂದ ಹಿಂದಕ್ಕೆ ಸರಿದು ನಿಂತನು.

ಮಹಾಮಂತ್ರಿಯು "ರಾಮರಾಯನೇ, ನೀನು ಇಲ್ಲಿಗೆ ಬರಲು ಕಾರಣವೇನು? ಈ ಸೈನಿಕರನ್ನೇಕೆ ಕರೆತಂದಿದ್ದೀಯೆ? ಇಲ್ಲಿ ಯುದ್ಧದ ಪ್ರಮೇಯವೇನಿದೆ?" ಎಂದನು

ಸೇನಾಧಿಪತಿಯು "ಮಹಾರಾಣಿಯವರ ಆಜ್ಞೆಯಾಗಿದೆ" ಎಂದು ಮಾತನಾಡ ತೊಡಗಿದನು.

ಮಂತ್ರಿಯು ಘರ್ಜಿಸುತ್ತಾ, "ನಿಲ್ಲು. ವಿವೇಕ ಭ್ರಷ್ಟನಾದ ಪಶುವೆ! ಮಹಾರಾಣಿಯವರ ಆಜ್ಞೆ! ನಾನು ಆಜ್ಞೆಮಾಡುತ್ತೇನೆ. ಹಿಂದಕ್ಕೆ ಸರಿದು ನಿಲ್ಲು. ಈ ಸ್ಥಳದಿಂದ ಈ ಕ್ಷಣ ನೀನು ನಿನ್ನ ಅನುಚರರೊಡನೆ ಹಿಂದಕ್ಕೆ ಹೋಗಬೇಕು. ನನ್ನ ಆಜ್ಞೆ." ಎಂದನು

ರಾಮರಾಯನು ದಿಟ್ಟತನದಿಂದ ನಿಂತು, "ನಾನು ತಮ್ಮ ಆಜ್ಞೆಯನ್ನು ಈಗ ಪಾಲಿಸುವಂತಿಲ್ಲ. ಮಹಾರಾಣಿಯವರ ಆಜ್ಞೆಯಾಗಿದೆ. ನಾನು ಮಹಾರಾಣಿಯವರ ಆಜ್ಞೆಯನ್ನು ಪಾಲನೆಮಾಡಬೇಕು. ಇಲ್ಲವೇ ಪ್ರಾಣವನ್ನು ಒಪ್ಪಿಸಬೇಕು. ನಾನು ಎರಡಕ್ಕೂ ಸಿದ್ಧನಾಗಿ ಬಂದಿರುವೆನು."ಎಂದನು

ಮಹಾಮಂತ್ರಿಯು ತುಚ್ಛಭಾವದಿಂದ, "ಸಿದ್ಧನಾಗಿ ಬಂದಿರುವೆ! ನಿಲ್ಲು, ಕತ್ತಿಯನ್ನು ಹಿಡಿದು ಯುದ್ಧಕ್ಕೆ ನಿಲ್ಲು, ನಾನೊಬ್ಬನು ಶತಸಂಖ್ಯಾತರಾದ ಯೋಧರಿಂದ ಕೂಡಿದ ನಿನ್ನೊಡನೆ ಯುದ್ಧಮಾಡುತ್ತೇನೆ. ಧೈರ್ಯವಿದ್ದವರು ನನ್ನೊಡನೆ ಯುದ್ಧಕ್ಕೆ ಬನ್ನಿರಿ" ಎಂದು ಒರೆಯಿಂದ ಕತ್ತಿಯನ್ನು ರಭಸದಿಂದ ಹಿರಿದು ಮೇಲಕ್ಕೆತ್ತಿ ಝಳಪಿಸಿದನು. ಆ ರಾಜಭಟರೆಲ್ಲರೂ "ಮಂತ್ರಿಗಳಿಗೆ ಜಯವಾಗಲಿ" ಎಂದು ಜಯಘೋಷ ಮಾಡಿದರು. ಮಂತ್ರಿಯು ಕತ್ತಿಯನ್ನು ಕೆಳಗಿಳಿಸಿ, "ಹೋಗು, ರಾಮರಾಯ, ನಿನ್ನನ್ನು ಇಂದು ಕ್ಷಮಿಸಿದ್ದೇನೆ. ನಿನ್ನ ತಲೆಯನ್ನು ಕತ್ತರಿಸಿ ಎಸೆಯುತ್ತಿದ್ದೆ. ಅದರಿಂದ ಲಾಭವೇನು? ನನ್ನ ಕತ್ತಿಯು ನಿನ್ನ ಶರೀರ ಸ್ಪರ್ಶಮಾಡಿ ಕಳಂಕಿತವಾಗಕೂಡದು. ಹೋಗು, ಈ ಜಾಗವನ್ನು ಬಿಟ್ಟುಹೊರಡು" ಎಂದು ಹೇಳಿದನು. ಅಷ್ಟರಲ್ಲಿ ಭವಾನೀರಾಣಿಯು ಒಳಗಿನಿಂದ ರಭಸದಿಂದ ಆ ಮಹಾದ್ವಾರಕ್ಕೆ ಬಂದಳು.

ಮಹಾಮಂತ್ರಿಯು ಕುದುರೆಯಿಂದಿಳಿದು ರಾಣಿಯವರಿಗೆ ಅಭಿವಾದನಮಾಡಿದನು.

ರಾಣಿಯವರು ಸಂತೋಷಚಿತ್ತರಾಗಿ "ಮಹಾಮಂತ್ರಿಯೇ, ಮಹಾರಾಣಿಯವರ ಆಜ್ಞೆಯನ್ನು ಪಾಲಿಸಲು ನಾನು ಸಿದ್ಧಳಾಗಿದ್ದೇನೆ. ಈ ನನ್ನ ಸರ್ವಸ್ವವನ್ನೂ ಮಹಾರಾಣಿಗೆ ಅಂದೇ ದಾನಮಾಡಿದ್ದೇನೆ.

ಅಂದು ಮಹಾರಾಣಿಯು ಸ್ವೀಕರಿಸಲಿಲ್ಲ. ಇಂದು ಸ್ವೀಕರಿಸಿದ್ದಾರೆ. ಅಷ್ಟೇ ವ್ಯತ್ಯಾಸ. ನೀವು ಇಷ್ಟುದೂರ ಆಗ್ರಹಗೊಂಡು ಇಲ್ಲಿಗೆ ಬಂದು ದೇಕೆ? ಇದರಿಂದ ಏನು ಪ್ರಮಾದವಾಗುತ್ತಿತ್ತು ?" ಎಂದರು.

ಮಹಾಮಂತ್ರಿಯು ಭವಾನೀರಾಣಿಗೆ ಉತ್ತರ ಕೊಡಲಿಲ್ಲ. ರಾಮರಾಯನಕಡೆಗೆ ತಿರುಗಿ "ಸೇನಾಧಿಪತಿಯೇ, ಇಲ್ಲಿಂದ ಹೊರಟುಹೋಗು, ನೀನು ಇಲ್ಲಿ ಏಕಾಕಿ, ನಿನ್ನ ರಾಜಭಟರು ಈ ಸ್ಥಳವನ್ನು ಬಿಟ್ಟು ಹೊರಟುಹೋಗಿದ್ದಾರೆ. ನಿನ್ನ ಸಮಸ್ತ ಸೈನ್ಯಸಮೇತನಾಗಿ ನೀನು ಇಲ್ಲಿಗೆ ಬಂದರೂ ರಾಣಿಯ ಆಜ್ಞೆಯನ್ನು ನನ್ನ ಎದುರಿನಲ್ಲಿ ಜಾರಿ ಮಾಡಲು ಸಾಧ್ಯವಿಲ್ಲವೆಂದು ನಿಮ್ಮ ರಾಣಿಗೆ ತಿಳಿಸು. ಈ ಸ್ಥಳವನ್ನು ಬಿಟ್ಟು ಹೊರಟುಹೋಗು" ಎಂದು ಆಜ್ಞಾಪಿಸಿದನು. ರಾಮರಾಯನು ಅಲ್ಲಿಂದ ಹೊರಟುಹೋದನು.

ಮಂತ್ರಿಯು ಭವಾನೀರಾಣಿಯನ್ನು ಕುರಿತು "ತಾಯಿಯವರೇ, ಕ್ಷಣಕ್ಷಣಕ್ಕೂ ತಾವು ಆಪತ್ತಿಗೆ ಸಿಕ್ಕುತ್ತಿದ್ದೀರಿ. ಅಂದು ವಿರೂಪಾಕ್ಷನು ತಮ್ಮ ಮೇಲೆ ಆಕ್ರಮಣ ಮಾಡಿದನು. ಇಂದು ಈ ರಾಮರಾಯನು ಆಕ್ರಮಣ ಮಾಡುತ್ತಿದ್ದನು. ತಾವು ಇಲ್ಲಿರಕೂಡದು. ಈ ಸ್ಥಳದಿಂದ ಮಲ್ಲಿಕಾರ್ಜುನಕ್ಷೇತ್ರಕ್ಕೆ ತಾವು ದಯಮಾಡಿಸಿರಿ. ನಾನು ಎಲ್ಲ ವ್ಯವಸ್ಥೆಯನ್ನು ಮಾಡುವೆನು" ಎಂದು ಹೇಳಿ ಭವಾನೀರಾಣಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಮಲ್ಲಿಕಾರ್ಜುನಕ್ಷೇತ್ರಕ್ಕೆ ತೆರಳಿದನು. ಅಲ್ಲಿ ಅಭಿರಾಮಸ್ವಾಮಿಯ ಸನ್ನಿಧಾನದಲ್ಲಿ ಭವಾನೀರಾಣಿಯನ್ನೂ ಭೈರವಿಯನ್ನೂ ಬಿಟ್ಟು ತಾನು ತನ್ನ ಸ್ವಗೃಹಕ್ಕೆ ತೆರಳಿದನು.

---

## ೧೭

## ಪಂಜರದಲ್ಲಿ ಮಂತ್ರಿ

ಸಂಧ್ಯಾಕಾಲವಾಗಿಹೋಗಿತ್ತು. ಈ ಸಮಾಚಾರವೆಲ್ಲವೂ ರಾಣಿಗೆ ವಿದಿತವಾಯಿತು. ರಾಣಿಯು ಅಪಮಾನ ಕ್ರೋಧಗಳಿಂದ ಜ್ವಲಿಸ

ಆರಂಭಿಸಿದಳು. ಅವಳು ರಾಮರಾಯನನ್ನು ಬಹಳ ತುಚ್ಛವಾಗಿ ನುಡಿದು ಅರಮನೆಯಿಂದ ಹೊರಟು ಹೋಗುವಂತೆ ತಿರಸ್ಕರಿಸಿದಳು. ರಾಣಿಗೆ ಆಲೋಚನೆಯನ್ನು ಹೇಳುವರಾರೂ ಇರಲಿಲ್ಲ. ಅವಳಿಗೆ ಆಲೋಚನೆಯು ಬೇಕಾಗಿಯೂ ಇರಲಿಲ್ಲ. ಈ ಜಗತ್ತಿನಲ್ಲಿ ಅವಳೊಬ್ಬಳೇ ಒಂದು, ಈ ನಗರದ ರಾಜ್ಯವೆಲ್ಲವೂ ಒಂದು, ಎಂದು ತೋರುತ್ತಿದ್ದಿತು. ಹೀಗೆಯೇ ಕ್ರೋಧಪೂರ್ಣಿತಳಾಗಿ ರಾಣಿಯು ಅಂತಃಪುರದಲ್ಲಿ ಕುಳಿತಿರುವಾಗ ಮಹಾಮಂತ್ರಿಯು ಮಹಾರಾಣಿಯ ಭೇಟಿಗೆ ಬಂದಿದ್ದಾನೆಂದು ದ್ವಾರಪಾಲಕನು ರಾಣಿಯವರಲ್ಲಿ ಅರಿಕೆ ಮಾಡಿದನು. ರಾಣಿಯ ಆಜ್ಞೆಯಂತೆ ಮಹಾಮಂತ್ರಿಯು ಬಂದು ಅಂತಃಪುರದಲ್ಲಿ ರಾಣಿಯ ಭೇಟಿಮಾಡಿದನು. ರಾಣಿಯು ಎದ್ದು ಮಂತ್ರಿಯನ್ನು ಉಪಚರಿಸಲಿಲ್ಲ. ಆಸನದಲ್ಲಿ ಕುಳಿತುಕೊಳ್ಳುವಂತೆ ಹೇಳಲಿಲ್ಲ. ಮಂತ್ರಿಯ ಮುಖವನ್ನು ನೋಡದೆ ಪರ್ಯಂಕದಮೇಲೆ ಶಿಲಾಪ್ರತಿಮೆಯಂತೆ ಕುಳಿತಿದ್ದಳು. ಮಂತ್ರಿಯು ರಾಣಿಯವರ ಸಮೀಪಕ್ಕೆ ಹೋಗಿ ನಿಂತು "ರಾಣಿಯವರೇ, ನಾನು ರಾಜಕಾರ್ಯಾರ್ಥಿಯಾಗಿ ತಮ್ಮಲ್ಲಿಗೆ ಬಂದಿರುವೆನು" ಎಂದು ಹೇಳಿದನು.

ರಾಣಿಯು ತಿರಸ್ಕಾರದಿಂದ ತಲೆಯೆತ್ತಿ "ಮಹಾಮಂತ್ರಿಗಳೇ ನಾನು ಬಸಪ್ಪನಾಯಕರ ಪಟ್ಟದರಸಿಯೆಂಬುದು ನಿಮಗೆ ಜ್ಞಾಪಕವಿದೆಯೋ? ಅಂತಃಪುರದ ಮರ್ಯಾದೆಯಂತೆ ದೂರಸರಿದು ನಿಲ್ಲಿರಿ. ಆ ಆಸನದಲ್ಲಿ ಕುಳಿತುಕೊಂಡು ನಿಮ್ಮ ರಾಜಕಾರ್ಯವನ್ನು ಹೇಳಿರಿ, ಕೇಳುತ್ತೇನೆ."

ಮಂತ್ರಿಯು ಎರಡು ಹೆಜ್ಜೆ ಹಿಂದಕ್ಕೆ ಸರಿದು, "ಚೆಲುವಮ್ಮಣ್ಣಿಯವರೇ, ಇಂದಿನಿಂದ ಈ ನಗರದ ಸಿಂಹಾಸನವು ನಿಮಗಿಲ್ಲ. ನೀವು ಬಸಪ್ಪನಾಯಕರ ಪತ್ನಿಯೆಂಬುದನ್ನು ನಾನು ಬಲ್ಲೆ. ಇಂದಿನಿಂದ ನೀವು ಬಸಪ್ಪನಾಯಕರ ವಿಧವೆಯಂತೆ ಈ ಅಂತಃಪುರದಲ್ಲಿರಬೇಕೆಂದು ಆಜ್ಞಾಪಿಸಲು ನಾನು ಬಂದಿದ್ದೇನೆ."

ರಾಣಿಯು ಎದ್ದುನಿಂತು "ಮಂತ್ರಿಗಳೇ, ಇರಲಿ. ಈ ರಾಜ್ಯ

ವನ್ನು ಪರಿತ್ಯಾಗಮಾಡಬೇಕೆಂದು ಪಾಳೇಗಾರರೂ, ಸೇನಾಧಿಪತಿಗಳೂ ನ್ಯಾಯಾಧೀಶರೂ ಹೇಳುವುದಾದರೆ ನಾನು ಪರಿತ್ಯಾಗಮಾಡಲು ಸಿದ್ಧಳಾಗಿರುವೆನು. ನಾನು ಸಿಂಹಾಸವವನ್ನು ತ್ಯಾಗಮಾಡುವವರೆಗೆ ನನ್ನ ಆಜ್ಞೆಯನ್ನು ನಡೆಸಬೇಕಾದುದು ನಿಮ್ಮ ಕರ್ತವ್ಯ. ನೀವು ಈ ದಿನ ಮಧ್ಯಾನ್ಹ ಭವಾನೀರಾಣಿಯ ಗೃಹದಲ್ಲಿ ಸೇನಾಧಿಪತಿಯಾದ ರಾಮರಾಯನನ್ನು ಮೋಸಮಾಡಿ ರಾಜಾಜ್ಞೆಯನ್ನು ನಡೆಯಗೊಡದೇ ಹಿಂದಕ್ಕೆ ಕಳುಹಿಸಿದ್ದೀರಿ. ವಿವೇಕಶಾಲಿಗಳಾದ ಮಂತ್ರಿಗಳು ಈ ಅಪರಾಧವನ್ನು ಮಾಡಿದ್ದೇಕೆ? ಮೊದಲು ಆ ಭವಾನೀರಾಣಿ ಯಾರೆಂಬುದನ್ನು ಹೇಳಿರಿ. ಆ ಭವಾನೀರಾಣಿಯನ್ನು ಹಿಡಿತರಿಸಿ ತಮ್ಮನ್ನೂ ಆ ಭವಾನೀರಾಣಿಯನ್ನೂ ನಾಳೆಯದಿನ ವಿಚಾರಣೆ ಮಾಡಿಸುತ್ತೇನೆ. ಅನಂತರ ಈ ಸಿಂಹಾಸನವನ್ನು ಪರಿತ್ಯಾಗ ಮಾಡುತ್ತೇನೆ."

ಮಂತ್ರಿಯು ನಕ್ಕು, "ಒಳ್ಳೆಯ ಪ್ರಾಗಲ್ಭ್ಯ! ಒಳ್ಳೆಯ ಶೌರ್ಯ! ನಾನೇಕೆ ಮುಚ್ಚಿಡಬೇಕು? ಚೆಲುವಮ್ಮಣ್ಣಿಯವರೇ! ಕೇಳಿರಿ. ಆ ಭವಾನೀರಾಣಿಯವರು ನಿಮಗಿಂತಲೂ ಹಿರಿಯರಾದ ಬಸಪ್ಪನಾಯಕರ ಧರ್ಮಪತ್ನಿ. ನಿಮಗೆ ವಿವಾಹವಾಗುವಾಗ ನೀವು ಮೂರನೆಯ ಅರಸಿ ಯೆಂದು ಮಹಾರಾಜರವರು ಹೇಳಿದ್ದುದು ಜ್ಞಾಪಕವಿದೆಯೇ? ಮೊದಲನೆ ಯವರು ಯುವರಾಜ ಚೆನ್ನಬಸಪ್ಪನಾಯಕರಿಗೆ ಜನ್ಮವಿತ್ತ ವೀರಮ್ಮಣ್ಣಿ ಯವರು ಎರಡನೆಯವರು ಭವಾನೀರಾಣಿಯವರು. ನೀವು ಮೂರನೆ ಯವರು. ಭವಾನೀರಾಣಿಯವರ ವಿವಾಹದಲ್ಲಿ ಒಂದು ದೊಡ್ಡ ಗೋಪ್ಯ ವಿದೆ. ಆದುದರಿಂದ ಆ ವಿವಾಹವು ಗೋಪ್ಯವಾಗಿ ನಡೆಯಿತು. ಆ ರಾಣಿಯವರು ರಾಣಿಯವರೆಂಬುದನ್ನು ತಿಳಿಸಿಕೊಳ್ಳದೆ ಪತಿವ್ರತಾ ಧರ್ಮದಿಂದ ಮಹಾರಾಜರವರ ಅನುವರ್ತಿಯಾಗಿದ್ದರು. ನೀವು ಸಿಂಹಾಸನವನ್ನೇರಿದಿರಿ. ನಿಮ್ಮ ಮೇಲೆ ಒಂದರಮೇಲೊಂದು ಭಯಂಕರವಾದ ಅಪರಾಧಗಳಿವೆ. ಇಂದು ನೀವು ಮಹಾರಾಣಿಯಲ್ಲ. ಅಪರಾಧಿ! ಆದುದರಿಂದ ನನ್ನನ್ನು ವಿಚಾರಣೆಮಾಡಲು ನಿಮಗೆ

ಅಧಿಕಾರವಿಲ್ಲ. ಅನ್ಯಾಯವಾಗಿ ಆ ವಿರೂಪಾಕ್ಷನ ಮರಣಕ್ಕೆ ಕಾರಣ ಕರ್ತರು ನೀವು. ಇಂದು ಈ ರಾಮರಾಯನ ಕಡೆಯ ದಿನವನ್ನು ನೀವು ಕಟ್ಟಿದ್ದಿರಿ. ನಾನು ಪ್ರಮತ್ತನಾಗಿದ್ದಿದ್ದರೆ ನೀವು ಯುವರಾಜನನ್ನು ಯಮಲೋಕಕ್ಕೆ ಕಳುಹಿಸುತ್ತಿದ್ದಿರಿ. ಇಂದು ನಿಮಗೆ ಯಾವ ಅಧಿಕಾರವೂ ಇಲ್ಲ."

ರಾಣಿಯು ನಕ್ಕಳು. "ನೀವು ಹೇಳುವುದೆಲ್ಲಾ ದೋಷಾರೋಪಣೆ. ಮಾತ್ಸರ್ಯದ ಮಾತುಗಳು. ಒಂದು ಮಾತನ್ನು ಮಾತ್ರ ನೀವು ನಿಜವಾಗಿ ಹೇಳಿದಿರಿ. ಭವಾನೀರಾಣಿಯು ನನ್ನ ಸವತಿಯಾರಬೇಕೆಂದು ನನಗೆಷ್ಟೋಬಾರಿ ಶಂಕೆಯುಂಟಾಗಿದೆ ಅದನ್ನು ನೀವು ಇಂದು ಸಾಕ್ಷಿ ಕೊಟ್ಟರಿ. ಭವಾನೀರಾಣಿಯು ಮೊದಲೇ ಇದನ್ನು ನನಗೆ ತಿಳಿಸಿದ್ದರೆ ನಾನು ಭಕ್ತಿಭಾವದಿಂದ ಆ ಮಹಾರಾಣಿಯ ಆಜ್ಞಾಧಾರಕಳಾಗಿರುತ್ತಿದ್ದೆ."

ಮಂತ್ರಿಯು ಪುನಃ "ರಾಣಿಯವರೇ! ವೃಥಾ ಮಾತನಾಡಬೇಡಿರಿ. ನಿಮ್ಮ ವಂಚನೆಯ ಮಾತುಗಳಿಗೆ ಮೋಸಹೋಗುವ ಮೂರ್ಖನು ನಾನಲ್ಲ ನಾನು ಇಂದು ನಿಮ್ಮ ರಾಣಿಗಿರಿಯನ್ನು ಕೊನೆ ಮುಟ್ಟಿಸದೇ ಇರುವುದಿಲ್ಲ. ಇಷ್ಟೆಲ್ಲಾ ಭವಾನೀರಾಣಿಯವರ ವಿಷಯದಲ್ಲಿ ಸವಿ ನುಡಿಗಳನ್ನೇಕೆ ನುಡಿಯುವಿರಿ? ನೀವು ಬಸಪ್ಪನಾಯಕರಿಗೆ ವಿಷಪಾನ ಮಾಡಿಸಿದ ಘೋರ ರಾಕ್ಷಸಿ. ನೋಡಿರಿ! ಈ ಪಾತ್ರೆಯನ್ನು ತೆಗೆದುಕೊಳ್ಳಿರಿ. ಇಂದೂ ಇದರಲ್ಲಿ ಆ ಘೋರ ವಿಷವು ಅಂಟಿಕೊಂಡಿದೆ. ಗಂಗಾಜಲವನ್ನು ಈ ಪಾತ್ರೆಗೆ ಹಾಕಿ ಕದರಿ ಕುಡಿಯಿರಿ. ನಿಮ್ಮ ಪಾಪಕ್ಕೆ ಪ್ರಾಯಶ್ಚಿತ್ತವಾಗುವುದು" ಎಂದು ಕಿಶೆಯಿಂದ ಸ್ವರ್ಣ ಪಾತ್ರೆಯನ್ನು ತೆಗೆದು ರಾಣಿಯ ಮುಂದಿಟ್ಟನು.

ರಾಣಿಯು ಪಾತ್ರೆಯನ್ನು ಕೈಗೆ ತೆಗೆದುಕೊಂಡು ನೋಡಿದಳು. ಅವಳಿಗೆ ಅಂದಿನ ಭಯಾನಕ ದೃಶ್ಯವು ಸ್ಮೃತಿಪಥಕ್ಕೆ ಬಂದಿತು. ಕಣ್ಣು ಕತ್ತಲೆ ಕಟ್ಟಿತು. ತಲೆ ತಿರುಗಲಾರಂಭಿಸಿತು. ರಾಣಿಯು ಒಂದು ವಿಚಿತ್ರವಾದ ಧೈರ್ಯವನ್ನು ತಂದುಕೊಂಡು ಪಿಶಾಚಿಯಂತೆ ಅರಚುತ್ತಾ,

"ಘಾತುಕನೇ! ಪಾಷಂಡನೇ! ನಗರದ ರಾಜ್ಯಕ್ಕೆ ಮೃತ್ಯು ಸ್ವರೂಪನೇ! ನಿನ್ನಿಂದ ಈ ರಾಜ್ಯವು ಹಾಳಾಯಿತು. ನಿನ್ನಿಂದ ಈ ನಗರವು ಸ್ಮಶಾನವಾಯಿತು ಈ ವಿಷಪಾತ್ರೆಯಿಂದ ನಿನಗೆ ನಿನ್ನ ಕೈಯಿಂದಲೇ ವಿಷವನ್ನು ಕುಡಿಸಿ ಕೊಲ್ಲಿಸುತ್ತೇನೆ. ನಾನೇಕೆ ವಿಷವನ್ನು ಕುಡಿಯಬೇಕು ?" ಎಂದು ಘರ್ಜಿಸುತ್ತಾ ಸೊಂಟದಲ್ಲಿದ್ದ ಕಠಾರಿಯನ್ನೆತ್ತಿ ಮಂತ್ರಿಯ ವಕ್ಷಃಸ್ಥಳಕ್ಕೆ ತಿವಿಯುವುದಕ್ಕೆ ಹೋದಳು. ಮಂತ್ರಿಯು ರಾಣಿಯ ಕೈಯನ್ನು ಬಲಾತ್ಕಾರದಿಂದ ಹಿಡಿದುಕೊಂಡು ಕಠಾರಿಯನ್ನು ಕಿತ್ತು ಬಿಸಟ್ಟು, ರಾಣಿಯನ್ನು ನೆಲದಮೇಲೆ ತಳ್ಳಿದನು. ರಾಣಿಯು ಪುನಃ ಎದ್ದು ಆರ್ತನಾದಮಾಡುತ್ತಾ ಅನುಚರರನ್ನು ಕೂಗಿಕೊಂಡಳು. ರಾಜಭಟರು ಬಂದು ಮಂತ್ರಿಯನ್ನು ಬಂಧಿಸಿದರು. ರಾಣಿಯು ಆ ಅರಮನೆಯಲ್ಲಿಯೇ ಮಂತ್ರಿಯನ್ನು ಬಂಧನದಲ್ಲಿಡುವಂತೆ ಆಜ್ಞಾಪಿಸಿದಳು. ರಾಜಭಟರು ರಾಮಕೃಷ್ಣನಿಗೆ ಸರಪಣಿಗಳನ್ನು ಕಟ್ಟಿ ಬಲಾತ್ಕಾರದಿಂದ ಪಂಜರದಲ್ಲಿ ಕೂಡಿದರು. ರಾಣಿಯು ಮೂರ್ಛಿತಳಾಗಿ ಪರ್ಯಂಕದಮೇಲೆ ಬಿದ್ದಳು.

ಆ ರಾತ್ರಿಯೇ ಆನೆಯಮೇಲೆ ಮಂತ್ರಿಯನ್ನು ಬಂಧಿಸಿದ್ದ ಪಂಜರವನ್ನಿಡಿಸಿ ಕಬ್ಬಾಳದುರ್ಗಕ್ಕೆ ರಾಜಭಟರು ಸಾಗಿಸಿದರು. ಅಲ್ಲಿ ಅರಮನೆಯಲ್ಲಿ ಅಂತರ್ಗೃಹದಲ್ಲಿ ಮಂತ್ರಿಯನ್ನು ಬಂಧನದಲ್ಲಿಡಲಾಯಿತು.

ಬಿದನೂರಿನಲ್ಲಿ ಬೆಳಗಾಗುವುದರೊಳಗಾಗಿ ಎಲ್ಲೆಲ್ಲಿಯೂ ಗುಸುಗುಂಪಲು, ಎಲ್ಲೆಲ್ಲಿಯೂ ಗಲಭೆ, ಕೆಲವರು ರಾಣಿಯಕಡೆ ವಾದಿಸುವರು, ಹಲವರು ಮಂತ್ರಿಯ ಕಡೆಗೆ ಮಾತನಾಡುವರು. ಎಲ್ಲೆಲ್ಲಿಯೂ ಇದೇ ವಾದವಿವಾದಗಳು, ಸೇನಾಧಿಪತಿಗಳೆಲ್ಲರೂ ರಾಣಿಗೆ ಅಧೀನರಾಗಿದ್ದರು. ನಗರದ ರಾಜ್ಯದಲ್ಲೆಲ್ಲಾ ಸೇನಾಧಿಪತಿಗಳು ಕಾವಲು ಕಾಯಲು ಆರಂಭಿಸಿದರು. ಎಲ್ಲಿಯೂ ಜನ ದಂಗೆಏಳದಂತೆ ಮಹತ್ಪ್ರಯತ್ನವನ್ನು ಮಾಡಿದರು. ಆದರೂ ಪ್ರಜಾಕ್ಷೋಭೆಯು ನಿಲ್ಲಲೇ ಇಲ್ಲ. ನಗರದಲ್ಲಿ ಅಂದು ಎದ್ದ ಅಶಾಂತಿ, ಕ್ಷೋಭೆಗಳು, ಬಿದನೂರು ನಿರ್ನಾಮವಾಗುವವರೆಗೆ ಶಾಂತವಾಗಲೇ ಇಲ್ಲ. ರಾಣಿಯ ಕ್ರೋಧಾವೇಶವು ಸ್ವಲ್ಪವೂ ಕಡಮೆಯಾಗಲಿಲ್ಲ.

ಸೇನಾಧಿಪತಿಗಳ ಪರಾಕ್ರಮದಿಂದ ರಾಜ್ಯದ ಅಶಾಂತತೆಯು ಅಡಗಿಸಲ್ಪಟ್ಟಿತೆಂದು ರಾಣಿಗೆ ವರದಿಯಾಯಿತು. ರಾಣಿಯು ಸೇನಾಧಿಪತಿಗಳನ್ನು ತನ್ನ ಸಮ್ಮುಖಕ್ಕೆ ಕರೆಸಿ ಅವರ ರಾಜಭಕ್ತಿ ಪರಾಕ್ರಮಗಳನ್ನು ಶ್ಲಾಘಿಸಿ ಹೇರಳವಾದ ಧನಕನಕಗಳನ್ನು ಅವರುಗಳಿಗೆ ಕೊಟ್ಟು ಬಹುಮಾನ ಮಾಡಿದಳು.

ಮಹಾರಾಣಿಯು ಅತ್ಯಂತ ಬುದ್ಧಿಮತಿ. ಮೇಲೆಮೇಲೆ ಎಲ್ಲವೂ ಶಾಂತವಾದಂತೆ ಕಾಣುತ್ತಿದ್ದರೂ ಒಳಗೆ ವಿರೋಧಾನಲವು ಉರಿಯುತ್ತಿರುವುದೆಂದು ಅವಳು ತಿಳಿದವಳಾಗಿದ್ದಳು. ಪಾಳೆಯಗಾರರಿಗೂ, ರಾಜ್ಯದಲ್ಲಿ ಪ್ರಮುಖರಾದ ದೊಡ್ಡ ಮನುಷ್ಯರುಗಳಿಗೂ ರಾಣಿಯು ವೀಳಯವನ್ನಿತ್ತು ಕಳುಹಿಸಿದರೂ ರಾಣಿಯ ಸಮ್ಮುಖಕ್ಕೆ ಅವರು ಬರುತ್ತಿರಲಿಲ್ಲ. ಏನಾದರೂ ನೆಪಗಳನ್ನು ಹೇಳಿ ತಪ್ಪಿಸಿಕೊಳ್ಳುತ್ತಿದ್ದರು. ಮಹಾಪ್ರಭಾವಶಾಲಿಯಾದ ಮಂತ್ರಿಗೆ ಈ ಗತಿಯಾದಮೇಲೆ ನಮ್ಮ ಪಾಡೇನು? ಎಂದು ಎಲ್ಲರೂ ಭಯಗ್ರಸ್ತರಾಗಿದ್ದರು. ಹೀಗೆ ನಗರದ ರಾಜ್ಯವು ಜ್ವಾಲಾಮುಖಿಯ ಮೇಲಿದ್ದ ಭವನದಂತೆ ಭಯ, ನಿರಾಶೆ, ವಿಕ್ಷೇಪಗಳಿಂದ ಅಲ್ಲಕಲ್ಲೋಲವಾಗಿದ್ದಿತು. ಹೈದರನಿಗೆ ಈ ಸಮಾಚಾರಗಳೆಲ್ಲವೂ ಪುಂಖಾನುಪುಂಖವಾಗಿ ಬರತೊಡಗಿದವು. ಅವನು ಮಹಾಮಂತ್ರಿಯು ಬಂಧನವಾಗಿದೆಯೆಂಬುದನ್ನು ಕೇಳಿ ಆಶ್ಚರ್ಯಪಟ್ಟನು. ರಾಜನೀತಿಜ್ಞರಾದ ಗೂಢಚಾರರನ್ನು ನಗರದ ನಿಜವೃತ್ತಾಂತವೇನು? ಪಾಳೇಗಾರರು ಹೇಗಿದ್ದಾರೆ? ಯುವರಾಜರ ಅವಸ್ಥೆಯೇನು? ಸೈನ್ಯದ ಕಟ್ಟು ಹೇಗಿದೆ? ಇತ್ಯಾದಿ ವಿವರಗಳನ್ನು ಶೋಧನೆಮಾಡಿ ತಿಳಿದುಕೊಂಡು ಬರುವಂತೆ ಕಳುಹಿಸಿಕೊಟ್ಟನು.

ನಗರದ ರಾಣಿಯು ಯುವರಾಜನಿಂದಲೂ ಮಹಾಮಂತ್ರಿಯಿಂದಲೂ ಅವಮಾನಿತಳಾಗಿ ಕ್ರೋಧಾವೇಶದಿಂದ ಮಂತ್ರಿಯನ್ನು ಬಂಧಿಸಿದಳು. ಯುವರಾಜನ ಅರಮನೆಯನ್ನು ಸೈನ್ಯದಿಂದ ಸುತ್ತುಗಟ್ಟಿಸಿ ಕಾವಲಿಟ್ಟಳು. ಭವಾನೀರಾಣಿಯ ಪ್ರಭಾವವನ್ನು ಮುರಿಯಲು ಅವಳ ದಾನಧರ್ಮಗಳನ್ನು ನಿಲ್ಲಿಸಿ ತನ್ನ ಹೆಸರಿನಿಂದ ಅತಿಶಯವಾದ ದಾನ

ಧರ್ಮಗಳನ್ನು ನಡೆಸಲು ಏರ್ಪಾಡುಮಾಡಿದಳು. ನಗರದ ರಾಣಿಯು ಈ ಪ್ರೌಢಿಮೆಯನ್ನು ಈ ಪ್ರಭಾವವನ್ನು ರಾಣಿಗಿರಿಯ ಐಶ್ವರ್ಯವನ್ನು ನೋಡಿ ಚೆಲುವಮ್ಮಣ್ಣಿಯ ಪ್ರೇಮಪಾತ್ರರಾದ ಸ್ವಾರ್ಥಿಗಳು ಮೆಚ್ಚಿಗೆಯಿಂದ ಸಂತೋಷಪಟ್ಟರು. ಇನ್ನುಮೇಲೆ ತಮ್ಮ ಐಶ್ವರ್ಯಕ್ಕೆ, ಸುಖಕ್ಕೆ, ಪ್ರಭಾವಕ್ಕೆ ಎದುರಿಲ್ಲವೆಂದು ತಮ್ಮತಮ್ಮಲ್ಲಿಯೇ ಹಿಗ್ಗುತ್ತಿದ್ದರು. ರಾಣಿಯು ಅಂತರಂಗದಲ್ಲಿ ಅವಳ ದರ್ಶನವನ್ನುಮಾಡಿ ಎಷ್ಟೋ ಸ್ತುತಿ ವಚನಗಳನ್ನು ಹೇಳುತ್ತಿದ್ದರು. ಆದರೆ ರಾಣಿಯ ಮನಸ್ಸು ಹಾಗಿರಲಿಲ್ಲ. ಅವಳಿಗೆ ವಿವೇಚನೆಯು ಬರುತ್ತಿತ್ತು. ಮಹಾಮಂತ್ರಿಯದಾಗಲೀ, ಯುವರಾಜನದಾಗಲೀ ಏನೂ ತಪ್ಪಿಲ್ಲವೆಂದು ಭಾವಿಸಿದಳು. ತಾನು ರಾಣಿಯೆಂದು ಕಾಮೋಪಭೋಗಮಗ್ನಳಾಗಿ ವಿಲಾಸಿಗಳೊಡನೆ ವಿಹರಿಸುತ್ತಿದ್ದರೆ ಅವರು ಸುಮ್ಮನಿರುವುದು ಅಸಂಭವವೆಂದು ಬಗೆಯತೊಡಗಿದಳು. ರಾಮರಾಯ, ಮಾಧವರಾಯ, ಮುಂತಾದ ತಮ್ಮ ಆಪ್ತರುಗಳು ಬಹಳ ಸಾಹಸಿಗಳೆಂದೂ ಪರಾಕ್ರಮಿಗಳೆಂದೂ ಅವರೆಲ್ಲಾ ಯಾರೋ ಅನಾಮಧೇಯರಾದ ಹೀನ ಮಾನವರಲ್ಲವೆಂದೂ ಸಮಾಧಾನಮಾಡಿಕೊಳ್ಳುತ್ತಿದ್ದಳು. ಆದರೆ ಇವರಾರೂ ಮಹಾಮಂತ್ರಿಗೆ ಸಮಾನರಲ್ಲವೆಂದು ರಾಣಿಯ ಮನೋದೇವತೆಯು ಪ್ರತಿಕ್ಷಣದಲ್ಲಿಯೂ ಹೇಳುತ್ತಿತ್ತು. ರಾಮಕೃಷ್ಣನೆಂದರೆ ನಗರದ ರಾಜ್ಯದಲ್ಲಿ ಸಮಸ್ತ ಪ್ರಜೆಗಳಿಗೂ ತಂದೆಯಂತೆ, ಗುರುವಿನಂತೆ. ಆರ್ತರಿಗೆ ಆಶ್ರಯದಾತನಂತೆ. ವಿದ್ವಾಂಸರಿಗೆ ಪೂಜ್ಯಸ್ಥಾನದಂತೆ. ಪರದೇಶದಲ್ಲಿ ರಾಮಕೃಷ್ಣನೆಂದರೆ ಚಾಣಕ್ಯನಂತೆ. ಅಂದಿನಕಾಲದ ಮುತ್ಸದ್ದಿಗಳಲ್ಲಿ ನಾನಾಫಡ್ನಾವೀಸನಂತೆ ಮನ್ನಣೆಯಿತ್ತು. ಅದು ರಾಣಿಗೆ ತಿಳಿಯದ ಅಂಶವಾಗಿರಲಿಲ್ಲ. ಮಂತ್ರಿ ರಾಮಕೃಷ್ಣನಿಲ್ಲದೇ ನಗರದ ರಾಜ್ಯಭಾರವನ್ನು ನಡೆಸುವುದೆಂದರೆ ಮಹಾಪ್ರವಾಹದಲ್ಲಿ ಹುಟ್ಟಿಲ್ಲದೇ ದೋಣಿಯನ್ನು ನಡೆಸಿದಂತಾಗುವುದೆಂದು ರಾಣಿಯು ಚಿಂತಿಸುತ್ತಿದ್ದಳು. ಏನೋ ಒಂದು ದುರ್ಘಟನೆಯು ಪ್ರಾಪ್ತವಾಗಿ ತಾನು ಬಹಳ ದುಡುಕಿದೆನೆಂದು ಪರಿತಪಿಸತೊಡಗಿದಳು. ಈಗ ಒಂದು ಹೆಜ್ಜೆ ಹಿಮ್ಮೆಟ್ಟಿದರೆ

ತಾನು ತನ್ನ ಸಹಚರರು ಪಾತಾಳಕ್ಕೆ ಬಿದ್ದು ಮಣ್ಣಾಗಿಹೋಗ ಬೇಕೆಂದು ರಾಣಿಗೆ ತೋರುತ್ತಿತ್ತು. ಆ ಪರಿಣಾಮವನ್ನು ನೆನೆದು ಕೊಂಡರೆ ಅವಳ ಹೃದಯವು ನಡುಗಿ ವಿವೇಚನಾ ಶಕ್ತಿಯು ಹಾರಿ ಹೋಗಿ ಸ್ತ್ರೀಯರಿಗೆ ಸಹಜವಾದ ಹೆಮ್ಮೆಯು ಬಂದು ಅವಳನ್ನು ಕಠೋರಹೃದಯಳನ್ನಾಗಿ ಮಾಡಿಬಿಡುತ್ತಿದ್ದಿತು. ಇಂತಹ ವಿವೇಕ, ಕ್ರೋಧಗಳಿಂದ ರಾಣಿಯು ಉತ್ತೇಜಿತಳಾಗುತ್ತಾ ಖಿನ್ನಳಾಗುತ್ತಾ ಚಡಪಡಿಸುತ್ತಿದ್ದಳು.

---

## ೧೮

## ಭವಾನೀರಾಣಿಯ ಸಂದರ್ಶನ

ಒಂದುದಿನ ಪ್ರಾತಃಕಾಲ ಸುಮಾರು ಹತ್ತು ಘಂಟೆಯ ಸಮಯ ದಲ್ಲಿ ಭವಾನೀರಾಣಿಯು ನಗರದ ಅರಮನೆಗೆ ಬಂದಿದ್ದಾಳೆಂದೂ, ರಾಣಿಯ ಭೇಟಿಯನ್ನು ಬೇಡುತ್ತಾಳೆಂದೂ ಸಖಿಯರು ಬಂದು ಚೆಲುವಮ್ಮಣ್ಣಿಗೆ ತಿಳಿಸಿದರು ರಾಣಿಯು ಆ ಮಾತುಗಳನ್ನು ನಂಬ ಲಿಲ್ಲ "ಅಸಂಭವ, ಅಸಂಭವ" ಎಂದು ನುಡಿಯುತ್ತಾ ಅಧೀರಳಾಗಿ ಆಸನದಿಂದೆದ್ದು ಅವಶಳಾಗಿ ಮಹಾದ್ವಾರದ ಕಡೆಗೆ ಬಂದಳು. ಭವಾನೀರಾಣಿಯು ಪ್ರತ್ಯಕ್ಷವಾಗಿ ಅರಮನೆಯ ಮಹಾದ್ವಾರದಲ್ಲಿ ನಿಂತಿರುವುದನ್ನು ಕಂಡು ಚೆಲುವಮ್ಮಣ್ಣಿಯು ಉತ್ಕಂಪಿತ ಹೃದಯಳಾಗಿ ತನ್ನ ರಾಣಿಗಿರಿಯ ದೊಡ್ಡಸ್ತಿಕೆಯನ್ನು ಮರೆತು ಅಬೋಧಕನ್ಯೆಯಂತೆ ಕಣ್ಣಿನಲ್ಲಿ ನೀರುಸುರಿಸುತ್ತಾ ಆ ಮಹಾದ್ವಾರದಲ್ಲಿ ಆ ರಾಜಾನುಚರರ ಎದುರಿನಲ್ಲಿ ಭವಾನೀರಾಣಿಗೆ ಅಡ್ಡಬಿದ್ದಳು. ಭವಾನೀರಾಣಿಯು ಎರಡು ತೋಳುಗಳನ್ನು ಹಿಡಿದು ಮೇಲಕ್ಕೆತ್ತಿ ಚೆಲುವಮ್ಮಣ್ಣಿಯನ್ನು ಆಲಂಗಿಸಿದಳು ಅವರಿಬ್ಬರೂ ಬಿದನೂರು ಅರಮನೆಯ ಅಂತಃ ಪುರಕ್ಕೆ ಹೋದರು. ಯಾವಮಹಲಿನಲ್ಲಿ ಮಹಾಮಂತ್ರಿಯು ಬಂದು

ರಾಣಿಯು ಭೇಟಿಮಾಡಿ ರಾಣಿಯನ್ನು ತಿರಸ್ಕರಿಸಿ ಅವಳ ಕ್ರೋಧವನ್ನು ಉರಿಯುವಂತೆಮಾಡಿ ತಾನು ಬಂಧಿತನಾದ ದುರ್ಘಟನೆಯು ನಡೆಯಿತೋ ಅದೇ ಮಹಲಿನಲ್ಲಿ ಆಸನಗಳಲ್ಲಿ ಇಬ್ಬರು ರಾಣಿಯರೂ ಕುಳಿತುಕೊಂಡು ಮಾತನಾಡತೊಡಗಿದರು. ನಗರದ ರಾಣಿಯು ಭವಾನೀರಾಣಿಯ ಮೇಲೆ ತಾನು ಅರಿಯದೇ ನಡೆಸಿದ ಅಪಚಾರಕ್ಕಾಗಿ ಕ್ಷಮಾಪ್ರಾರ್ಥನೆ ಮಾಡಿದಳು. ಭವಾನೀರಾಣಿಯು ಚೆಲುವಮ್ಮಣ್ಣಿ ಯನ್ನು ಸಂತೈಸಿ "ತನಗೆ ಏನೂ ಅಪಚಾರ ನಡೆದಿಲ್ಲವೆಂದೂ, ನಗರದ ರಾಜ್ಯವು ಉನ್ನತಸ್ಥಿತಿಯಲ್ಲಿರುವಾಗ, ಅದಕ್ಕೊಬ್ಬ ಧರ್ಮಾತ್ಮಳಾದ ಮಹಾರಾಣಿಯಿರುವಾಗ ತನ್ನ ಹೆಸರಿನಲ್ಲಿ ಈ ರಾಜ್ಯದಲ್ಲಿ ದಾನಧರ್ಮಗಳು ನಡೆಯುವುದು ಸರ್ವಥಾ ಉಚಿತವಲ್ಲವೆಂದೂ, ಆದುದರಿಂದಲೇ ತಾನಾಗಿ ರಾಣಿಯ ಸಮಾಪಕ್ಕೆ ಬಂದು ತನ್ನ ಸರ್ವಸ್ವವನ್ನೂ ಅರ್ಪಣೆ ಮಾಡಿದೆನೆಂದೂ, ದುರ್ವಿಧಿಯ ವಿಲಾಸದಿಂದ ಅದು ಅನ್ಯಥಾ ಪರಿಣಾಮವಾಯಿತೆಂದೂ" ಭವಾನೀರಾಣಿಯು ಹೇಳಿದಳು.

ಚೆಲುವಮ್ಮಣ್ಣಿಯು ಭವಾನೀರಾಣಿಯ ಎರಡು ಕೈಗಳನ್ನೂ ಹಿಡಿದುಕೊಂಡು, "ಅಕ್ಕನವರೇ! ನನ್ನ ಅಪರಾಧವು ಕ್ಷಮಾತೀತ ವಾದುದು. ಮಂತ್ರಿಗಳು ದೊಡ್ಡ ತಪ್ಪುಮಾಡಿದರು. ನಾನು ಬುದ್ಧಿಹೀನ ಳಾಗಿಹೋದೆನು. ಭವಾನೀರಾಣಿಯವರೆಂದರೆ ಈ ರಾಜ್ಯದ ಮಹಾ ರಾಣಿಯವರೆಂದು ನನಗೆ ಅರಿವಾಗದೇಹೋಯಿತು. ಈ ರಾಜ್ಯದಲ್ಲಿ ಆ ರಹಸ್ಯವನ್ನು ಯಾರೂ ಅರಿಯರು. ಮೊದಲೇ ನನಗೆ ಈ ಅಂಶವು ತಿಳಿದಿದ್ದರೆ ಇಷ್ಟು ಅನರ್ಥಗಳಿಗೆ ಕಾರಣವಾಗುತ್ತಿರಲಿಲ್ಲ. ನಾನು ಈ ಮಹಾರಾಣಿಯ ಪದವಿಯನ್ನು ಸ್ವೀಕರಿಸುತ್ತಲೇ ಇರಲಿಲ್ಲ. ಆಗ ನ್ನಾನು ಸುಖಿಯಾಗುತ್ತಿದ್ದೆನು. ಈಗ ನನ್ನ ಮನಸ್ಸಿಗೆ ಶಾಂತಿಯಿಲ್ಲ. ಸುಖವಿಲ್ಲ. ಈಚೆಗೆ ಮಹಾಮಂತ್ರಿಗಳನ್ನು ಬಂಧಿಸಿದಮೇಲಂತೂ ಎಷ್ಟೋಬಾರಿ ತಮ್ಮ ದರ್ಶನವನ್ನುಮಾಡಿ ನನ್ನ ಅಪರಾದಗಳನ್ನು ತೊಳೆದುಹಾಕಬೇಕೆಂದು ಸಂಕಲ್ಪಿಸಿದೆನು. ನನಗೆ ಆ ಸಾಹಸವು ಬರ ಲಿಲ್ಲ. ತಮ್ಮ ಸನ್ನಿಧಾನದಲ್ಲಿ ನಾನು ಪಾಪಿಯೆಂದು ತಿರಸ್ಕೃತಳಾಗ

ಬಹುದೆಂದು ಭಯಪಟ್ಟೆನು. ತಾವು ನನ್ನ ಅಂತಃಪುರಕ್ಕೆ ಬಂದು ನನ್ನನ್ನು ತಮ್ಮ ಗುಣದಾಸಿಯನ್ನಾಗಿ ಮಾಡಿದಿರಿ ಮಹಾಮಂತ್ರಿಗಳನ್ನು ಬಂಧನದಲ್ಲಿಟ್ಟಿರುವ ದುರ್ಗಕ್ಕೆಹೋಗಿ ಅವರ ಕ್ಷಮಾಪ್ರಾರ್ಥನೆ ಮಾಡಬೇಕೆಂದು ನೂರಾರು ಬಾರಿ ಚಿಂತಿಸಿದೆನು. ಧೈರ್ಯಬರಲಿಲ್ಲ. ಮಂತ್ರಿಗಳು ನನ್ನನ್ನು ಕಸಕ್ಕಿಂತಲೂ ಕಡೆಯಾಗಿ ಕಾಲಿನಿಂದ ಒದ್ದು ಹಾಕುವರೆಂದು ಸಂಶಯಪಟ್ಟೆನು. ಮಹಾಮಂತ್ರಿಗಳಮೇಲೆ ನಾನು ಮಾಡಿದ ಮಹಾಪರಾಧಕ್ಕೆ ಪ್ರಾಯಶ್ಚಿತ್ತವೆಂದರೆ ನನ್ನ ಕೈಯಿಂದಲೇ ನನ್ನ ಪ್ರಾಣಗಳನ್ನು ಕಿತ್ತುಹಾಕಿ ಈ ನಗರದ ರಾಜ್ಯವನ್ನು ಅವರ ಪಾದಕ್ಕೊಪ್ಪಿಸುವುದು. ಎಷ್ಟೋ ಸಾರಿ ನಾನು ಆ ಆಲೋಚನೆಯನ್ನು ಮಾಡಿದರೂ ಆ ಧೈರ್ಯವು ನನಗೆ ಬರಲಿಲ್ಲ. ಯುವರಾಜನನ್ನು ಪಟ್ಟ ಕಟ್ಟಿ ನಾನು ಸನ್ಯಾಸಿನಿಯಾಗಿ ದೇಶಾಂತರ ಹೊರಟುಹೋಗಬೇಕೆಂದು ಯೋಚಿಸಿದೆನು. ನಿಜವಾಗಿ ಹೇಳುವುದೆಂದರೆ ಈ ರಾಜ್ಯದ ಮೋಹವು ಇನ್ನೂ ನನ್ನನ್ನು ಬಿಟ್ಟಿಲ್ಲ. ಈ ರಾಜ್ಯಸೂತ್ರಗಳು ಯುವರಾಜನ ಕೈಗೆ ಹೋದರೆ ಒಂದು ಕ್ಷಣದಲ್ಲಿ ಈ ನಗರದ ರಾಜ್ಯವು ಧೂಳೀಪಟವಾಗಿ ಹೋಗುತ್ತದೆಂದು ನನ್ನ ಮನಸ್ಸಿಗೆ ಅಧೈರ್ಯವಾಗಿದೆ. ಹೋದರೆ ಹೋಗಲಿ ಎಂಬ ವೇದಾಂತವು ನನಗೆ ಬರಲೊಲ್ಲದಾಗಿದೆ. ಕಟ್ಟಕಡೆಯ ವರೆಗೆ ಈ ರಾಜ್ಯವನ್ನು ಹೀಗೆಯೇ ಧರ್ಮರಾಜ್ಯವಾಗಿ ಉಳಿಸಬಲ್ಲೆನೆಂಬ ಹೆಮ್ಮೆಯು ನನ್ನ ಹೃದಯಾಂತರಾಳದಲ್ಲಿ ಅಚ್ಚಳಿಯದೇ ಇದೆ. ಅಕ್ಕನವರೇ! ಇಂದು ಹೇಳಿರಿ. ನಾನೇನು ಮಾಡಬೇಕೆಂಬುದನ್ನು ಹೇಳಿರಿ. ಇನ್ನು ಮುಂದೆ ಈ ರಾಜ್ಯದಲ್ಲಿ, ಈ ಅರಮನೆಯಲ್ಲಿ, ಏನಾದರೂ ತಪ್ಪು ನಡೆದರೆ ಅದು ತಮ್ಮದು ನನ್ನದಲ್ಲ. ನಾನು ಅಪರಾಧಿನಿಯೆಂದು ಒಪ್ಪಿಕೊಳ್ಳುತ್ತೇನೆ. ಬಹಿರಂಗವಾಗಿ ಮಹಾಜನ ಮಧ್ಯದಲ್ಲಿ ಈ ಪ್ರಜಾಸ್ತೋಮದ ಸಮ್ಮುಖದಲ್ಲಿ, ರಾಜಸಭೆಯಲ್ಲಿ ತಮ್ಮನ್ನು ಆ ಸಿಂಹಾಸನದ ಮೇಲೆ ಕೂಡಿಸಿ ನನ್ನ ಅಪರಾಧವನ್ನು ನಾನು ಒಪ್ಪಿಕೊಂಡಿದ್ದರೆ ಎಷ್ಟೋ ಚೆನ್ನಾಗಿತ್ತು. ಅಂತಹ ಧೈರ್ಯವು ನನಗಿಲ್ಲ, ಅಂತಹ ಸಾಹಸವು ನನಗಿಲ್ಲ. ತಾವು ವಿರಕ್ತ ಸನ್ಯಾಸಿನಿಯ

ರಾಗಿದ್ದರೂ ತಮ್ಮ ಹೃದಯವು ಸ್ತ್ರೀ ಹೃದಯ. ಅದು ನನ್ನ ಹೃದಯವನ್ನು ಸುಲಭವಾಗಿ ಅರಿಯಬಲ್ಲದು. ನಾನು ಸ್ತ್ರೀಯರಿಗೆ ಸಹಜವಾದ ನಾಚಿಕೆಯನ್ನು ಪರಿತ್ಯಜಿಸಿ ತಮ್ಮ ಮುಂದೆ ಅಪರಾಧಿನಿಯೆಂದು ಒಪ್ಪಿಕೊಳ್ಳಬಲ್ಲೆ. ಈ ಅಂತರಂಗದಲ್ಲಿ ಅದನ್ನೊಪ್ಪಿಕೊಳ್ಳುವ ಧೈರ್ಯವು ನನಗಿದೆ. ತಾವು ಈಗಲೇ ನನಗೆ ಶಿಕ್ಷೆಯನ್ನು ಕೊಡೋಣವಾಗಲಿ. (ಗೋಡೆಯಲ್ಲಿ ನೇತುಹಾಕಿದ್ದ ಕರವಾಳವನ್ನು ತೆಗೆದು ಭವಾನೀರಾಣಿಯ ಕೈಯಲ್ಲಿ ಕೊಟ್ಟು) ಈ ಕರವಾಳದಿಂದ ನನ್ನ ಕಂಠಚ್ಛೇದ ಮಾಡಿಬಿಡಿರಿ. ಆದರಿಂದ ತಮಗೆ ಸ್ತ್ರೀಹತ್ಯಾ ದೋಷವು ಬರುವುದಿಲ್ಲ" ಎಂದು ಹೇಳಿ ದುಃಖೋದ್ವಿಗ್ನಳಾಗಿ ಭೂಮಿಯಲ್ಲಿ ಬಿದ್ದಳು.

ಭವಾನೀರಾಣಿಯು ಚೆಲುವಮ್ಮಣ್ಣಿಯನ್ನು ಎತ್ತಿ ಪರ್ಯಂಕದಮೇಲೆ ಮಲಗಿಸಿ ಗಾಳಿಯನ್ನು ಬೀಸಿ ಶೈತ್ಯೋಪಚಾರ ಮಾಡಿದಳು. ರಾಣಿ ಚೆಲುವಮ್ಮಣ್ಣಿಯು ಆ ಅವಸ್ಥೆಯಲ್ಲಿರುವಾಗ ಭವಾನೀರಾಣಿಯು, ಈ ಚೆಲುವಮ್ಮಣ್ಣಿಯು ಈ ಸಂಸಾರಸಾಗರದಿಂದ ಉತ್ತೀರ್ಣಳಾಗಲಾರದವಳಾಗಿದ್ದಾಳೆ. ಇವಳು ಪರಿತಪಿಸುವುದೆಲ್ಲಾ ನಿಜವಾದುದು. ಸ್ತ್ರೀಜನೋಚಿತವಾದ ಕ್ರೋಧ, ದ್ವೇಷ, ಹೆಮ್ಮೆ ಅವೆಲ್ಲವೂ ಇವಳಲ್ಲಿ ಪರಿಪೂರ್ಣವಾಗಿದೆ. ಇದು ಭವಾನಿಯ ಲೀಲೆ. ಇಂತಹ ವ್ಯಕ್ತಿಗಳನ್ನು ಸೃಜಿಸಿ ಆ ಮಹಾದೇವಿಯು ಈ ಲೋಕದ ಆಟವಾಡಿಸುತ್ತಾಳೆ. ಆಟವಾಡುವಾಗ ಈ ಅಲ್ಪಪ್ರಾಣಿಗಳು, ತಾವೇ ಪರಮೇಶ್ವರಿಯರೆಂದು ಭಾವಿಸಿಕೊಂಡು ಮೆರೆಯುತ್ತಾರೆ. ವಿವೇಕದ ಕನ್ನಡಿಯಲ್ಲಿ ತಮ್ಮ ಸ್ವರೂಪವನ್ನು ದರ್ಶನ ಮಾಡಿದಾಗ ಇಂತಹ ದಾರುಣವಾದ ದೈನ್ಯಾವಸ್ಥೆಗೆ ಬರುತ್ತಾರೆ. ಇರಲಿ! ಇದಕ್ಕೆ ನಾನೇನು ಮಾಡಬಲ್ಲೆ ? ನಾನು ರಾಣಿಗೆ ಹೇಳಿ ಮಂತ್ರಿಯನ್ನು ಬಂಧನದಿಂದ ಬಿಡಿಸಬಲ್ಲೆ. ಆ ಮಂತ್ರಿಯೇನೋ ಮಹಾನುಭಾವನೆಂಬುದು ನಿಜ. ಆದರೆ ಅವನು ಈ ರಾಜ್ಯದ ಅಭಿಮಾನವನ್ನು ತೊರೆದಿಲ್ಲ. ಅವನ ದೇವರು, ದೈವ, ಧರ್ಮ ಎಲ್ಲವೂ ಈ ಸಣ್ಣ ರಾಜ್ಯವಾಗಿಯೇ ಪರಿಣಮಿಸಿದೆ. ಅವನ ಬಿಡುಗಡೆಯಿಂದ ಆಗುವ ಪ್ರಯೋಜನವೇನು? ಈ ನಗರದ ರಾಜ್ಯದಲ್ಲಿ ಮಹಾಕ್ಷೋಭೆ

ಯೇಳುತ್ತದೆ. ಅದಕ್ಕೆ ನಾನೇಕೆ ಕಾರಣಕರ್ತಳಾಗಬೇಕು? ಯುವರಾಜನು ನಿಜವಾಗಿಯೂ ಈ ಪ್ರಪಂಚವನ್ನರಿಯದ ಅಬೋಧಬಾಲಕನಂತಿದ್ದಾನೆ. ಅವನ ವಯಸ್ಸಿಗೆ ತಕ್ಕ ವಿದ್ಯೆ, ಪರಾಕ್ರಮ, ಲೋಕಾನುಭವಗಳು ಬಂದಿಲ್ಲ. ಆದರೆ ಅವನು ನಿರ್ದೋಷಿ. ಅವನೇಕೆ ಈ ಬಂಧನದಲ್ಲಿರಬೇಕು? ಸ್ವತಂತ್ರನಾಗಿರಲಿ. ಅಜ್ಞಾನಿಗಳಿಗೆ ಲೋಕಾನುಭವವಿಲ್ಲದವರಿಗೆ ಸ್ವಾತಂತ್ರ್ಯವೆಂದರೂ ಅದೂ ಒಂದು ವಿಧವಾದ ಬಂಧನದಂತೆಯೇ ಇರುತ್ತದೆ. ಇರಲಿ. ಈ ರಾಜ್ಯಗಳಲ್ಲಿ ಈ ದ್ವೇಷಾಸೂಯೆಗಳಿಂದ ಇನ್ನೂ ಪ್ರಬಲವಾದ ವಿದ್ವೇಷಾನಲವು ಏಳದಂತೆ ತಡೆಯುವುದಕ್ಕೆ ಚೈತನ್ಯವಿದ್ದರೆ ನಾನು ತಡೆಯುತ್ತೇನೆ. ಇಲ್ಲದಿದ್ದರೆ ಭವಾನಿಯ ಇಚ್ಛೆಯಿದ್ದಂತಾಗಲಿ, ಎಂದು ಚಿಂತಿಸುತ್ತಿದ್ದಳು. ಅಷ್ಟರಲ್ಲಿ ಚಿಲುವಮ್ಮಣ್ಣಿಯು ಕಣ್ಣುಬಿಟ್ಟು ನೋಡಿದಳು. ಎದ್ದು ಕುಳಿತಳು.

ಭವಾನೀರಾಣಿಯು ಚಿಲುವಮ್ಮಣ್ಣಿಯನ್ನು ಕುರಿತು, "ರಾಣಿಯೇ, ನಿನ್ನ ಅಪರಾಧಗಳನ್ನು ವಿಚಾರಣೆಮಾಡಿ ಶಿಕ್ಷಿಸುವುದಕ್ಕೆ ನಾನು ಇಲ್ಲಿಗೆ ಬಂದವಳಲ್ಲ. ನೀನು ಅತ್ಯಂತ ದುಃಖಮಗ್ನಳಾಗಿದ್ದೀಯೆಂದೂ, ಕ್ರೋಧದ್ವೇಷಗಳಿಂದ ನಿನ್ನ ಹೃದಯವು ಸುಡುತ್ತಿದೆಯೆಂದೂ ಆದರಿಂದ ಈ ರಾಜ್ಯದಲ್ಲಿ ಇನ್ನೂ ವಿದ್ವೇಷಾನಲವೆದ್ದು ಅನರ್ಥಪರಂಪರೆಗಳು ಸಂಭವಿಸುವುದೆಂದೂ, ನಿನ್ನನ್ನು ಸಂತೈಸಲು ಬಂದಿರುವೆನು ರಾಣಿ, ನಾನು ನಿನ್ನನ್ನು ಅಪರಾಧಿಯೆಂದು ಭಾವಿಸಿ, ನಿನಗೆ ಶಿಕ್ಷಿಸಲು ಹೊರಟರೆ ನೀನುಮಾಡಿದ ತಪ್ಪುಗಳ ಜೊತೆಗೆ ನಾನೂ ಮತ್ತೊಂದು ತಪ್ಪುಮಾಡಿದಂತಾಗಿ ಈ ರಾಜ್ಯದ ನಾಶಕ್ಕೆ ನಾನೂ ಕಾರಣಳಾಗುವೆನು. ಕೇಳು ತಂಗಿ! ನೀನು ಮಾಡಿರುವ ಅಪರಾಧಗಳು ಸಂಪೂರ್ಣವಾಗಿ ನಿನ್ನವುಗಳೇ ಎಂದು ಹೇಳಲಾರೆ. ಅವು ಮನಃಪೂರ್ವಕವಾದವುಗಳೆಂದೂ ಸಮರ್ಥಿಸಲಾರೆ. ಕೋಪದಲ್ಲಿ ಮಿಂಚಿಹೋದ ಕಾರ್ಯಗಳವು. ಇಂದು ಮಹಾಮಂತ್ರಿಯನ್ನು ಕ್ಷಮಾಪ್ರಾರ್ಥನೆ ಮಾಡಿದರೆ ಅವನಿಂದ ಕ್ಷಮೆಯನ್ನು ಹೊಂದಲಾರೆ. ಮಹಾಮಂತ್ರಿಯು ಅಪಮಾನಿತನಾಗಿ ಪದಾಘಾತದಿಂದ ಕೃದ್ಧವಾದ ಘಟಸರ್ಪದಂತಾಗಿ

ದ್ದಾನೆ. ಆದರೆ ಅವನನ್ನು ಬಂಧನದಲ್ಲಿಟ್ಟಿರುವುದು ಈ ರಾಜ್ಯಕ್ಕೆ ಕ್ಷೇಮಕರವಾದುದಲ್ಲ. ಆ ದುರ್ಗದಲ್ಲಿಯೇ ಅವನಿರುವಂತೆ ನಿನ್ನ ರಾಜಾಜ್ಞೆಯನ್ನು ಮಾಡು. ಅವನ ಕುಟುಂಬವನ್ನು ಅವನ ಸಮೀಪ ದಲ್ಲಿರುವಂತೆ ಮಾಡು. ಅವನ ಪೂಜಾದಿ ಕಾರ್ಯಗಳಿಗೆ ಅನುಕೂಲ ವಾಗುವಂತೆ ಏರ್ಪಡಿಸು. ರಾಮಕೃಷ್ಣನು ರಾಜಾಜ್ಞೆಗೆ ಕಟ್ಟುಬೀಳುವ ಮಹಾಪುರುಷನೆಂದು ನಾನು ನಂಬಿದ್ದೇನೆ ಅವನಲ್ಲಿ ದೊರತ ಅವ ಕಾಶವನ್ನು ಕ್ಷುದ್ರಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕವನಲ್ಲವೆಂದು ನನಗೆ ವಿಶ್ವಾಸವಿದೆ ನೀನು ಕ್ರೋಧೋದ್ದೀಪಿತಳಾಗಿ ರಾಮಕೃಷ್ಣ ನನ್ನು ಬಂಧಿಸಿದೆ. ಅವನು ಬಂಧನದಿಂದ ಮುಕ್ತನಾಗಬೇಕೆಂದು ಪ್ರಯತ್ನಮಾಡಿದ್ದರೆ ನಿನ್ನ ಕಾವಲು, ಸೈನ್ಯ, ರಾಜಭಟರು, ಸಂಕೋಲೆ ಗಳು ಇವುಗಳೊಂದೂ ಅವನನ್ನು ತಡೆಯಲಾಗುತ್ತಿರಲಿಲ್ಲ. ಅವನು ಆ ಬಂಧನದಲ್ಲಿದ್ದುಕೊಂಡು ಈ ನಗರದ ರಾಜ್ಯದ ಶಕ್ತಿಯೆಷ್ಟಿದೆಯೆಂಬು ದನ್ನು ಪರೀಕ್ಷೆಮಾಡುತ್ತಿದ್ದಾನೆ. ಅವನು ಆ ದುರ್ಗದಲ್ಲಿ ಬಂಧಿತ ನಾಗಿಯೇ ಇರಲಿ ಯುವರಾಜನನ್ನು ನೀನೇಕೆ ಬಂಧಿಸಿರುವೆ? ಅವನಿಗೆ ಸೈನ್ಯವಿದೆಯೇ? ಕೋಶವಿದೆಯೇ? ಆಪ್ತೇಷ್ಟರುಗಳಿದ್ದಾ ರೆಯೇ? ಅವನ ಬಂಧನವು ಅನ್ಯಾಯವಾದುದು. ಅದರಿಂದ ನೀನು ಲೋಕಾಪವಾದಕ್ಕೆ ಗುರಿಯಾಗುವೆ." ಎಂದಳು.

"ಭವಾನೀರಾಣಿಯವರೇ, ತಮ್ಮ ಆಜ್ಞೆಯನ್ನು ಅಕ್ಷರಶಃ ನಾನು ಪಾಲನೆಮಾಡುವೆನು. ತಾವು ಇಂದು ನನ್ನಮೇಲೆ ಪರಮಾನುಗ್ರಹ ಮಾಡಿದಿರಿ. ಆದರೆ ನಾನು ತಮ್ಮಲ್ಲಿ ಬೇಡುವ ವರ ಒಂದುಂಟು. ಅದನ್ನು ತಾವು ನಡೆಸಿಕೊಡಬೇಕು. ನನ್ನ ಅಪರಾಧವನ್ನು ನೀವು ಕ್ಷಮಿಸುವುದು ನಿಜವಾದರೆ ಮಹಾರಾಜರಿಂದ ತಮಗೆ ದತ್ತವಾದ ಅರಮನೆಯಲ್ಲಿ ತಾವು ಪುನಃ ಹೋಗಿ ವಾಸಿಸಬೇಕು. ಈ ಮಲ್ಲಿಕಾರ್ಜುನನ ಕ್ಷೇತ್ರದಲ್ಲಿ ತಮ್ಮ ಹೆಸರಿನಲ್ಲಿ ನಡೆಯುತ್ತಿದ್ದ ದಾನ ಧರ್ಮಗಳು ಯಥಾಪ್ರಕಾರ ನಡೆಯುವಂತೆ ತಾವು ವ್ಯವಸ್ಥೆಗೊಳಿಸ ಬೇಕು."

"ಇಲ್ಲ ತಂಗಿ! ನಾನು ಆ ಅರಮನೆಯಲ್ಲಿ ಇನ್ನು ಮೇಲೆ ವಾಸ ಮಾಡುವುದಿಲ್ಲ. ನಾನು ಒಂದು ಪರ್ಣಶಾಲೆಯಲ್ಲಿ ವಾಸಮಾಡುತ್ತೇನೆ. ನನ್ನ ಹೆಸರು ಪ್ರತ್ಯೇಕವಾಗಿ ಉಳಿದಿಲ್ಲ. ನಾನೂ ಈ ರಾಜಮನೆತನಕ್ಕೆ ಸೇರಿದವಳೆಂದು ಈಗ ಲೋಕವಿದಿತವಾಗಿ ಹೋಗಿದೆ. ಆದುದರಿಂದ ಈ ರಾಜಗೃಹದಿಂದಲೇ ಎಲ್ಲ ಧರ್ಮಗಳೂ ನಡೆಯಲಿ. ನನಗೆ ಎಷ್ಟೋ ಭಾರವು ಇಳಿದಂತಾಯಿತು. ಆದ್ದರಿಂದ ಭಗವಂತನು ಪ್ರಸನ್ನನಾಗುವನು. ಈ ರಾಜ್ಯದಲ್ಲ ಒಂದೇ ಧರ್ಮವಿರಲಿ. ನಾನೂ ಆ ಧರ್ಮದಲ್ಲಿಯೇ ಗಂಜಿಯನ್ನು ಕುಡಿಯುವೆನು" ಎಂದು ಹೇಳಿ ಚೆಲುವಮ್ಮಣ್ಣಿಯ ಅಪ್ಪಣೆಯನ್ನು ಪಡೆದು ಭವಾನೀರಾಣಿಯು ಅರಮನೆಯಿಂದ ಹೊರಟು ಹೋದಳು.

ಚೆಲುವಮ್ಮಣ್ಣಿಯ ಅಂತಃಕರಣವು ಸಮಾಧಾನಸ್ಥಿತಿಗೆ ಬರುತ್ತಲೇ ಅಂದು ಭವಾನೀರಾಣಿಯ ದರ್ಶನ, ಅವಳ ಕರುಣಾಮಯವಾದ ಸಂದೇಶ ಇವುಗಳೆಲ್ಲವೂ ರಾಣಿಯ ಮನಃಫಲಕದಮೇಲೆ ಜ್ವಲಂತ ಅಕ್ಷರಗಳಿಂದ ಖಚಿತವಾದಂತೆ ಕಂಗೊಳಿಸತೊಡಗಿತು. ರಾಣಿಯ ಅಪ್ಪಣೆಯಂತೆ ಯುವರಾಜನ ಅರಮನೆಯನ್ನು ಕಾವಲು ಕಾಯುತ್ತಿದ್ದ ಸೈನ್ಯವು ಹೊರಟು ಹೋಯಿತು. ಮಂತ್ರಿಯು ಕುಟುಂಬದವರೆಲ್ಲಾ ಕಬ್ಬಾಳದುರ್ಗದ ರಾಜಭವನಕ್ಕೆ ಸಾಗಿಸಲ್ಪಟ್ಟರು.

---

## ೧೯

## ಗುಪ್ತಸಂಧಾನ

ಯುವರಾಜನು ನಗರದ ಅರಮನೆಯಲ್ಲಿರಲು ಒಪ್ಪಲಿಲ್ಲ. ಅವನು ಮಲ್ಲಿಗೆಯ ತಂದೆಯ ಸಣ್ಣಮನೆಗೆ ಹೋಗಿ ಬಿಡಾರಮಾಡಿದನು. ಯುವ ರಾಜನು ಇಂದು ರಾಜವೈಭವಗಳಿಲ್ಲದ ಒಬ್ಬ ರೈತನಂತೆಯಿದ್ದರೂ ತಾನು ಸುಖಿಯಾಗಿದ್ದೇನೆಂದು ಆನಂದಿಸುತ್ತಿದ್ದನು. ಆ ಮನೆಯ

ನ್ನೆಲ್ಲಾ ನಾಲ್ಕಾರುಜನ ರೈತರ ಸಹಾಯದಿಂದ ಅಚ್ಚುಗಟ್ಟುಮಾಡಿ ಕೊಂಡು ಅಲ್ಲಿ ವಾಸಮಾಡತೊಡಗಿದನು. ಅವರನ್ನು ಅನುವರ್ತಿಸಿ ಕೊಂಡಿದ್ದ ನಾಲ್ಕಾರು ಪರಿಜನರು ಆ ರಾಜದಂಪತಿಗಳನ್ನು ಬಿಡ ಲಾರದೇ ಅವರ ಜೊತೆಯಲ್ಲಿಯೇ ಇರುತ್ತಿದ್ದರು. ಹೀಗೆ ರಾಣಿಯು ಕ್ರೋಧಾವೇಶದಿಂದ ಎದ್ದ ಉರಿಯು ಭವಾನೀರಾಣಿಯ ಅಮೃತವರ್ಷ ದಿಂದ ಶಾಂತವಾದಂತಾಯಿತು.

ರಾಮಕೃಷ್ಣನು ಇಂದು ಬಂದಿಯಲ್ಲ, ಸ್ವತಂತ್ರನೂ ಅಲ್ಲ. ಆ ಅರಮನೆಯು ಒಂದು ಬಂದೀಖಾನೆಯಂತೆ ಅವನಿಗೆ ಭಾಸವಾಗುತ್ತಿತ್ತು. ಅವನು ಅಪೇಕ್ಷಿಸಿದ್ದರೆ ಕ್ಷಣದಲ್ಲಿ ಆ ಬಂಧನದಿಂದ ನಿರ್ಮುಕ್ತನಾಗಿ ಸ್ವಚ್ಛಂದವಾಗಿ ಹೊರಟುಹೋಗಬಹುದಾಗಿದ್ದಿತು. ಅವನೇಕೆ ಹೋಗ ಬೇಕು? ರಾಜನೀತಿ ನಿಪುಣರ ಬುದ್ಧಿಯು ಲೋಕವ್ಯಾಪ್ತಿಯಾದುದು. ಅವನು ಇದ್ದ ಸ್ಥಳದಿಂದಲೇ ತನ್ನ ವಾಂಛಿತಗಳನ್ನು ನೆರವೇರಿಸಿಕೊಳ್ಳ ಬಲ್ಲ. ಮಹಾಮಂತ್ರಿಯ ವಾಂಛಿತಗಳೇನು? ಜಹಗೀರುಗಳನ್ನು ಪಡೆಯುವುದೇ? ಅಲ್ಲ! ಧನಕನಕಗಳನ್ನು ಸಂಗ್ರಹಿಸಿ ಕೋಟ್ಯಧೀಶ ನೆಂದು ಹೊಗಳಿಸಿಕೊಳ್ಳುವುದೇ? ಅಲ್ಲ! ತನ್ನ ವಂಶಪಾರಂಪರ್ಯವಾಗಿ ಮಕ್ಕಳು ಮೊಮ್ಮಕ್ಕಳು ಸುಖವಾಗಿರುವಂತೆ ಐಶ್ವರ್ಯವನ್ನು ಗಳಿಸು ವುದೇ? ಅಲ್ಲ! ಉಪಾಯಾಂತರದಿಂದ ರಾಣಿಗೆ ಪ್ರತಿಕ್ರಿಯೆ ಮಾಡು ವುದು, ಯುವರಾಜನನ್ನು ಸಿಂಹಾಸನಕ್ಕೇರಿಸುವುದು ಇದೇ ಅವನ ಸಂಕಲ್ಪ. ಯುವರಾಜನು ಸಿಂಹಾಸನವನ್ನು ಆಳುವಂತಹ ಸಾಮರ್ಥ್ಯ ಶಾಲಿಯಲ್ಲವೆಂಬುದು ಮಂತ್ರಿಗೆ ಗೋಚರವಾಗಿರಲಿಲ್ಲವೇನು? ಆ ಅಂಶವು ಎಲ್ಲರಿಗಿಂತಲೂ ಮಹಾಮಂತ್ರಿಗೆ ಚೆನ್ನಾಗಿ ಗೊತ್ತು. ಆದ ರೇನು? ನಗರದ ರಾಜವಂಶದಲ್ಲಿ ಮಹಾನುಭಾವರಾದ ಬಸಪ್ಪನಾಯಕ ರವರ ಔರಸಪುತ್ರ ಚೆನ್ನಬಸಪ್ಪನಾಯಕ. ಆ ಸಿಂಹಾಸನಕ್ಕೆ ಅವನೇ ಅಧಿಕಾರಿ. ಈ ಕಾಲದಲ್ಲಿ ಮಹಾಪ್ರಭಾವಶಾಲಿಗಳಾದ ಧರ್ಮಾತ್ಮರಾದ ಮಹಾಪುರುಷರೇ ಎಲ್ಲ ರಾಜಕುಲಗಳಲ್ಲಿಯೂ ಜನ್ಮವೆತ್ತುವರೆಂದು ಭಾವಿಸುವುದು ಮಹಾಮೂರ್ಖರ ಲಕ್ಷಣ. ರಾಜ್ಯದಲ್ಲಿ, ಜನಗಳಲ್ಲಿ

ಎಷ್ಟು ಶಕ್ತಿಯಿದೆಯೋ ಆ ರಾಜ್ಯದಲ್ಲಿ ಧರ್ಮವು ಹೇಗೆ ರಕ್ಷಿಸಲ್ಪಡು ತ್ತದೆಯೋ ನ್ಯಾಯವು ಹೇಗೆ ಪ್ರತಿಷ್ಠಾಪಿಸಲ್ಪಡುವುದೋ ಅದರಮೇಲೆ ರಾಜ್ಯದ ಔನ್ನತ್ಯ ಅವನತಿಗಳು ಸಿದ್ಧವಾಗುತ್ತದೆ. ರಾಜರು ಸಿಂಹಾ ಸನಕ್ಕೆ ಭೂಷಣಪ್ರಾಯರಾಗಿದ್ದರೆ ಸಾಕು. ದುಷ್ಟವರ್ಗಗಳು, ದುರಾ ಚಾರಿಗಳು ಆಗಿಲ್ಲದಿದ್ದರೆ ಸಾಕು. ಇದೇ ರಾಮಕೃಷ್ಣನ ಸಿದ್ಧಾಂತ. ತನ್ನ ಕಾರ್ಯಕಲಾಪಗಳನ್ನು ನಡೆಸಲು ಒಬ್ಬ ರಾಜಕಾರಣಪಟುವನ್ನು ಹುಡುಕುತ್ತಿದ್ದನು. ಅವನಿಗೆ ಅಂತಹ ಪ್ರಾಮಾಣಿಕನಾದ ವಿದ್ಯಾ ವಿನಯಸಂಪನ್ನನಾದ ರಾಜಕಾರಣಪಟುವು ಯಾರೂ ಗೋಚರವಾಗ ಲಿಲ್ಲ. ನಗರದ ರಾಜ್ಯದಲ್ಲಿ ಅಂತಹ ಬುದ್ಧಿವಂತರಿಲ್ಲವೇನು? ಇದ್ದರು! ಅನೇಕರಿದ್ದರು! ಆದರೆ ರಾಣಿಯ ಚಾತುರ್ಯವು ಅಸಾಧಾರಣವಾದುದು. ಅಂತಹವರೆಲ್ಲರೂ ರಾಣಿಯ ಪ್ರಲೋಭಕ್ಕೆ ಯಾವುದೋ ಒಂದುರೀತಿ ಯಲ್ಲಿ ಸಿಕ್ಕಿದವರು. ಮತ್ತಾರಾದರೂ ಎಲ್ಲಿಯಾದರೂ ಉಳಿದಿದ್ದರೆ ಅವರ ಮೇಲೆ ಮಂತ್ರಿಯು ಭರವಸೆಯನ್ನಿಡುವಂತಿಲ್ಲ. ಏಕೆಂದರೆ ರಾಣಿಯು ಯಾವುದೋ ತಂತ್ರವನ್ನು ಒಡ್ಡಿ ಯಾವುದೋ ಬಲೆಯನ್ನು ಬೀಸಿ ಬಿಡುವಳು. ಹೀಗೆ ರಾಮಕೃಷ್ಣನು ರಾಜಕೀಯವನ್ನು ಚಿಂತಿಸುತ್ತಿರು ವಾಗ ಭೈರವಿಯು ಆ ಕಬ್ಬಾಳದುರ್ಗದ ಅರಮನೆಯ ಬಾಗಿಲಿಗೆ ಬಂದಳು. ಪಹರೆಯವರು ಅವಳನ್ನು ಒಳಗೆ ಹೋಗಕೂಡದೆಂದು ನಿವಾರಿಸಿದರು.

ಆದರೆ ಪಹರೆಯವರ ಕೊತ್ವಾಲನು ಗೋಪಾಲದಾಸ. ಭೈರವಿಯು ಅವನ ಮನೆಗೆ ಹೋಗಿ ಅವನನ್ನು ಸಂಧಿಸಿದಳು. ಗೋಪಾಲದಾಸನು ಭೈರವಿಯ ಮಾತುಗಳಲ್ಲಿ ಮುಗ್ಧನಾಗಿಹೋದನು. ಅವನು ಅರಮನೆಯ ಮಹಾದ್ವಾರಕ್ಕೆ ಬಂದು ಪಹರೆಯವರಿಗೆ ದಿಟ್ಟತನದಿಂದ ಆಜ್ಞೆಮಾಡಿದನು. ಎಲ್ಲರಿಗೂ ಬಹಳ ಗೋಪ್ಯವಾದ ವಿಚಾರವೆಂದು ಗುಟ್ಟಾಗಿ ಹೇಳಿದನು. "ರಾಣಿಯವರ ಅಪ್ಪಣೆಯಾಗಿದೆ. ರಾಣಿಯವರಿಗೂ ಮಂತ್ರಿಗಳಿಗೂ ಸಂಧಾನವನ್ನು ನಡೆಸುವುದಕ್ಕೆ ಈ ಭೈರವಿಯು ಬಂದಿದ್ದಾಳೆ. ಇವಳನ್ನು ಯಾರೂ ತಡೆಗಟ್ಟಬೇಡಿರಿ"

ಎಂದು ಹೇಳಿದನು. ಭೈರವಿಯು ನಿರರ್ಗಳವಾಗಿ ಅರಮನೆಯನ್ನು ಪ್ರವೇಶಿಸಿ ರಾಮಕೃಷ್ಣನ ಭೇಟಿಮಾಡಿದಳು.

ರಾಮಕೃಷ್ಣನು ಭೈರವಿಯನ್ನು ಆದರಪೂರ್ವಕವಾಗಿ ಕಂಡು "ಭೈರವಿ, ಎಲ್ಲಿ ಬಂದೆ? ಬಂಧನದಲ್ಲಿರುವ ರಾಮಕೃಷ್ಣನು ನಿನಗೇನು ಕೊಡಬಲ್ಲನು. ನೀನು ರಾಣಿಯವರ ಸಮ್ಮುಖದಿಂದ ಬಂದೆಯೋ? ಮಲ್ಲಿಕಾರ್ಜುನಕ್ಷೇತ್ರದಿಂದ ಬಂದೆಯೋ? ನಗರದ ರಾಜ್ಯದಲ್ಲಿ ಏನು ನಡೆಯುತ್ತಿದೆ? ನಿಮ್ಮ ರಾಣಿಯವರ ದರಬಾರು ಹೇಗಿದೆ?" ಎಂದು ವ್ಯಂಗ್ಯದಿಂದ ಕೇಳಿದನು.

ಭೈರವಿಯು ನಗುತ್ತಾ, "ಮಹಾಮಂತ್ರಿಗಳೇ, ದರಬಾರವು ವಿಚಿತ್ರವಾಗಿ ನಡೆಯುತ್ತಿದೆ. ಚೆಲುವಮ್ಮಣ್ಣಿಯು ಮಹಾರಾಣಿ. ಅವಳ ಪ್ರೇಮಪಾತ್ರರಾದ ಪ್ರಣಯಿಗಳು ಮಂತ್ರಿಗಳು, ಸೇನಾ ನಾಯಕರು ಎಲ್ಲವೂ ಅವರೇ. ದುಡ್ಡು! ಬೇಕಾದಷ್ಟು ದುಡ್ಡು ರಾಣಿಯ ಕೈಯಲ್ಲಿದೆ. ಆ ದುಡ್ಡಿನ ಪ್ರಲೋಭವು ಎಲ್ಲರನ್ನೂ ಆವರಿಸಿದೆ. ಈ ನಗರದ ರಾಜ್ಯದಲ್ಲಿ ಧರ್ಮದ ಮಾತನ್ನೆತ್ತುವರೇ ಇಲ್ಲ. ರಾಣಿಯ ಮನೋಭಾವದಂತೆ ನಡೆಯುವುದೇ ಈ ರಾಜ್ಯದ ಧರ್ಮ. ಭವಾನೀ ರಾಣಿಯವರು ಎಲ್ಲ ಧರ್ಮಗಳನ್ನೂ ಪರಿತ್ಯಜಿಸಿ ಪರ್ಣಶಾಲೆಯಲ್ಲಿ ವಾಸಮಾಡುತ್ತಾರೆ. ಸಾಮಾನ್ಯ ಮನುಷ್ಯರಂತೆ ಮಲ್ಲಿಕಾರ್ಜುನನ ಸೇವೆಮಾಡುತ್ತಾರೆ. ಅವರ ಪ್ರೀತಿಯು ಚೆಲುವಮ್ಮಣ್ಣಿಯವರಮೇಲೆ ಅಮೃತವರ್ಷವನ್ನು ಕರೆಯುತ್ತದೆ. ಚೆಲುವಮ್ಮಣ್ಣಿಯ ಮಾಯೆಯು ಪುರುಷರಮೇಲೆ ಮಾತ್ರ ನಡೆಯುವುದೆಂದು ನಂಬಿದ್ದೆ. ಸ್ತ್ರೀಯರೂ ವಿರಕ್ತಳಾದ ಸನ್ಯಾಸಿನಿಯಾದ ಮಹಾನುಭಾವಳಾದ ಭವಾನೀ ರಾಣಿಯೂ ಆ ಮಾಯೆಯಲ್ಲಿ ಸಿಕ್ಕಿದಮೇಲೆ ಪಾಮರರ ಗತಿಯೇನು? ಯುವರಾಜನು ಸಾಮಾನ್ಯರೈತನಂತೆ ಗಂಗವಳ್ಳಿಯಲ್ಲಿ ಮಲ್ಲಪ್ಪನ ಮನೆಯಲ್ಲಿ ಸಂಸಾರಮಾಡುತ್ತಾನೆ. ಇನ್ನು ಉಳಿದವರು ತಾವೊಬ್ಬರು. ತಾವೇನು ಮಾಡುತ್ತಿದ್ದೀರೋ ನೋಡಿ ಹೋಗೋಣವೆಂದು ಬಂದೆ. ತಾವು ಅಜ್ಞಾನಿಗಳಾದ ದಾಂಭಿಕರಾದ ಬ್ರಾಹ್ಮಣರಂತೆ ಪೂಜೆ,

ಪುನಸ್ಕಾರ, ಕುಟುಂಬರಕ್ಷಣೆ, ಈ ಗೃಹಸ್ಥಾಶ್ರಮದಲ್ಲಿದ್ದೀರಿ. ಇನ್ನು ಈ ನಗರದ ರಾಜ್ಯದಲ್ಲಿ ನನಗೇನು ಕೆಲಸ?" ಎಂದಳು.

"ಭೈರವಿ, ನೀನೇನು ಮಾಡಬೇಕೆಂದಿದ್ದೀಯೆ? ನೀನೇನು ಮಾಡುವೆ? ಚಿಕ್ಕವಯಸ್ಸಿನ ತರುಣಿಯು ನೀನು. ಈ ರಾಜಕೀಯ ದಲ್ಲಿ ನೀನೇಕೆ ತೊಳಲುವೆ?"

ಭೈರವಿಯು ನಕ್ಕು, "ಮಂತ್ರಿಗಳೇ, ನೀವೊಬ್ಬರೇ ಈ ರಾಜ್ಯದಲ್ಲಿ ಬುದ್ಧಿವಂತರೆಂದುಕೊಂಡಿದ್ದೀರೇನು? ನಾನು ನನ್ನ ದಾರಿಯನ್ನು ಸುಗಮಮಾಡಿಕೊಂಡಿದ್ದೇನೆ. ನಾನು ಗೃಹಸ್ಥಾಶ್ರಮವನ್ನು ಅವಲಂಬಿ ಸುತ್ತೇನೆ. ಈ ಭೈರವಿಯ ವೇಷವನ್ನು ಕಿತ್ತುಹಾಕಿ ಬ್ರಾಹ್ಮಣಿಯಂತೆ ಗೃಹಿಣಿಯಾಗುತ್ತೇನೆ" ಎಂದಳು.

ಮಂತ್ರಿಯು ಮುಗುಳುನಗೆಯಿಂದ, "ಭೈರವಿ, ಒಳ್ಳೆಯ ಯೋಚನೆ. ನೀನು ಮದುವೆಯಾದರೆ ಒಳ್ಳೆಯ ಗೃಹಿಣಿಯಾಗುವೆ. ನಿನ್ನನ್ನು ಮದುವೆಯಾಗುವ ಆ ಪುಣ್ಯಪುರುಷನಾರು?" ಎಂದು ಕೇಳಿದನು.

"ಗೊತ್ತಾಗಲಿಲ್ಲವೇ? ವಿವಾಹಶುಲ್ಕವನ್ನು ಆಗಲೇ ಕೊಟ್ಟಿದ್ದೇನೆ. ವರನು ಈ ಅರಮನೆಯ ಕಾವಲುಗಾರನಾದ ಗೋಪಾಲದಾಸ. ಅವ ನನ್ನು ವಿವಾಹವಾಗುವುದಾಗಿ ಆಣೆಯಿಟ್ಟು ವಚನಕೊಟ್ಟಿದ್ದೇನೆ. ಮಹಾರಾಣಿಯವರ ಮೇಲಿನ ಆಣೆಯಿಟ್ಟಿದ್ದೇನೆ. ಅದಕ್ಕೆ ರಾಣಿಯ ಒಪ್ಪಿಗೆಯನ್ನು ಪಡೆಯುತ್ತೇನೆಂದು ಧೈರ್ಯ ಹೇಳಿದ್ದೇನೆ. ರಾಣಿಯ ಒಪ್ಪಿಗೆಯನ್ನು ಪಡೆದು ನಾನು ಅವನನ್ನು ಮದುವೆಯಾದರೆ ಅವನು ರಾಣಿಯ ಅನುಗ್ರಹಕ್ಕೆ ಪಾತ್ರನಾಗಿ ಸಾವಿರ ಕುದುರೆ ಸರದಾರನಾಗು ತ್ತಾನೆ. ನನ್ನಂಥಾ ಮೋಹಿನಿ ಯಾರಿಗೆ ಸಿಕ್ಕುತ್ತಾಳೆ! ಮತ್ತೇನು ಬೇಕು ಅವನಿಗೆ?"

ಮಂತ್ರಿಯು ನಗುತ್ತಾ, "ಧನ್ಯ! ಗೃಹಸ್ಥಾಶ್ರಮ ಧನ್ಯ! ಆ ಗೋಪಾಲದಾಸನೂ ಧನ್ಯ! ಮತ್ತೇನು ಬೇಕು? ಅದಕ್ಕೆ ನನ್ನಿಂದ ಏನಾಗಬೇಕು?" ಎಂದನು.

"ಏನೂ ಇಲ್ಲ. ತಮ್ಮ ಆಶೀರ್ವಾದವು ಬೇಕು."

"ಒಳ್ಳೆಯದು ಭೈರವಿ ಹೋಗಿ ಬಾ. ನಿನ್ನಮೇಲೆ ಮಲ್ಲಿಕಾರ್ಜುನನ ಕೃಪೆಯಿರಲಿ."

ಭೈರವಿಯು ನಗುತ್ತಾ ಮಂತ್ರಿಗಳ ಅಪ್ಪಣೆಯನ್ನು ಪಡೆದು ಹೊರಟುಹೋದಳು.

ಗೋಪಾಲದಾಸನು ಈ ತನ್ನ ವೃತ್ತಾಂತವನ್ನೂ ಭೈರವಿಯೂ ಮಂತ್ರಿಯೂ ಆಡಿದ ಮಾತುಗಳನ್ನೂ ಕೇಳಿ ಆನಂದದಲ್ಲಿ ಮುಳುಗಿಹೋದನು. ತನ್ನ ಸ್ವರ್ಗಕ್ಕೆ ಇನ್ನು ಎರಡೇ ಮೆಟ್ಟಲು ಬಿಟ್ಟಿದೆಯೆಂದು ಭಾವಿಸಿಕೊಂಡನು. ತನಗಿಂತಲೂ ಭೈರವಿಗೆ ತಕ್ಕ ಪುರುಷನಾರು ಸಿಕ್ಕುತ್ತಾನೆಂದು ಹೆಮ್ಮೆಪಟ್ಟುಕೊಂಡನು. 'ನಾನು ಪರಾಕ್ರಮಶಾಲಿಯಾದ ಪುರುಷ. ರೂಪಿನಲ್ಲಿ ಭೈರವಿಯ ರೂಪಿಗೆ ಅನುಗುಣನಾದವನು. ಭೈರವಿಯು ಬಾಲ್ಯದಿಂದಲೂ ಮಹಾರಾಣಿಯ ಸಖಿ. ಅವಳಾಗಿ ಒಲಿದುಬಂದಿರುವುದು ನನ್ನ ಪುಣ್ಯ. ಅವಳಿಗೆ ನನ್ನಂಥಾ ಪತಿಯು ದೊರೆತುದು ಅವಳ ಪುಣ್ಯ ರಾಣಿಯ ಆಜ್ಞೆಯಾಗಬೇಕು, ವಿವಾಹವಾಗಬೇಕು. ಇವೆರಡೇ ಮೆಟ್ಟಲುಗಳು ನನ್ನ ಸ್ವರ್ಗಕ್ಕೆ ಉಳಿದಿದೆ' ಎಂದುಕೊಂಡನು. ಭೈರವಿಯು ರಾಜಧಾನಿಗೆ ಹೋಗಿ ರಾಣಿಯನ್ನೊಪ್ಪಿಸಿ ವಿವಾಹಸನ್ನಾಹಗಳನ್ನು ಮಾಡುವುದಾಗಿ ಕೊತ್ವಾಲನಿಗೆ ತಿಳಿಸಿದಳು. ಅಂದಿನಿಂದ ಯಾವ ಆತಂಕವೂ ಇಲ್ಲದೆ ಮಂತ್ರಿಯ ಸನ್ನಿಧಾನಕ್ಕೆ ಭೈರವಿಯು ಹೋಗಿಬರಬಹುದು. ಈಗ ಆ ಕಾವಲುಗಾರರ ದಳಕ್ಕೆ ಅವಳೇ ರಾಣಿ. ಬರೀ ಕೊತ್ವಾಲನ ಹುಕುಂ ಮಾತ್ರವಲ್ಲ. ಕಾವಲುಗಾರರೆಲ್ಲರಿಗೂ ಚಿನ್ನದ ವರಹಗಳನ್ನು ಕೊಟ್ಟು ಸಂತಸಪಡಿಸಿದ್ದಳು. ಭೈರವಿಗೆ ಗೊತ್ತು—ಈ ನಗರದಲ್ಲಿ ಎರಡೇ ಎರಡು ವಸ್ತುಗಳಿಗೆ ವಿಜಯ. ಅವು ಕಾಮಿನೀ, ಕಾಂಚನ. ಮಹಾರಾಣಿಯ ಮಹಾಮಂತ್ರಗಳೂ ಅವೆ. ಅದೇ ಮಂತ್ರವನ್ನು ಭೈರವಿಯೂ ಸರ್ವತ್ರ ಪ್ರಯೋಗಿಸಿ ವಿಜಯಿಯಾಗುತ್ತೇನೆಂದು ದೃಢಮಾಡಿದಳು. ಆದರೆ ಭೈರವಿಯು ಸತಿತ್ವವನ್ನು ಸೂರೆಗೊಡಲಿಲ್ಲ.

ಭೈರವಿಯು ಮಂತ್ರಿಯನ್ನೊಪ್ಪಿಸಿ ಸಂಧಾನಕ್ಕೆ ಆರಂಭ ಮಾಡಿದಳು. ದೊಡ್ಡದೊಡ್ಡ ಪಾಳೇಗಾರರನ್ನು ಹೋಗಿ ಭೇಟಿಮಾಡಿ ಬರುತ್ತಿದ್ದಳು. ಮಲ್ಲಿಕಾರ್ಜುನಕ್ಷೇತ್ರದಲ್ಲಿ ಮೊದಲಿಗಿಂತಲೂ ಅತಿಶಯ ವಾಗಿ ವಿರಕ್ತಳಂತೆ ತೋರ್ಪಡಿಸಿಕೊಳ್ಳುತ್ತಿದ್ದಳು. ಒಂದೊಂದುಬಾರಿ ಹುಚ್ಚಳಂತೆ ಕುಣಿಯುತ್ತಾ ಹರನಾಮಗಳನ್ನು ಹಾಡಿ ಆನಂದಪಟ್ಟು ಕೊಳ್ಳುತ್ತಿದ್ದಳು. ಮಹಾರಾಣಿಯು ಒಂದೆರಡುಬಾರಿ ಆ ಭೈರವಿಯನ್ನು ಆ ಅವಸ್ಥೆಯಲ್ಲಿ ನೋಡಿದ್ದಳು. ಭೈರವಿಗೆ ಹುಚ್ಚು ಹಿಡಿಯುತ್ತಿದೆ, ಅವಳ ಕರ್ಮಫಲ ಎಂದುಕೊಳ್ಳುತ್ತಿದ್ದಳು. ಭೈರವಿಗೆ ಸಹಾಯಕ ಳೆಂದರೆ ಬೃಂದೆಯೊಬ್ಬಳೇ. ಬುದ್ಧಿವಂತಿಕೆಯಿಂದ, ಚಾತುರ್ಯದಿಂದ ಮಾಡಿಸುವ ಕಾರ್ಯಗಳನ್ನು ಭೈರವಿಯು ಬೃಂದೆಯಿಂದ ಮಾಡಿಸು ತ್ತಿದ್ದಳು. ಹುಚ್ಚುಹುಚ್ಚಾಗಿ ಮಾತನಾಡುತ್ತಾ ಮಹಾರಾಣಿಯ ಕೆಲಸಗಳನ್ನು ಮುರಿದುಹಾಕುವ ಕಾರ್ಯಗಳನ್ನು ತಾನು ಮಾಡು ತ್ತಿದ್ದಳು. ಮಹಾರಾಣಿಯಾಗಲೀ ಅವಳ ಪ್ರೇಮಸಚಿವರುಗಳಾಗಲೀ, ಯಾರೂ ಭೈರವಿಯನ್ನು ಶಂಕಿಸುತ್ತಿರಲಿಲ್ಲ. ಬೃಂದೆಯಮೇಲಂತೂ ಸಂದೇಹಕ್ಕೆ ಆಸ್ಪದವೇ ಇಲ್ಲ. ರಾಮ-ಕೃಷ್ಣನ ಪ್ರಚೋದನೆಯಂತೆ ಚಾಚೂ ತಪ್ಪದೇ ಸಂದೇಹಕ್ಕಾಸ್ಪದ ಕೊಡದೆ ರಾಜಕೀಯವನ್ನು ನಡೆಸುತ್ತಿದ್ದ ಭೈರವಿಯ ಚಾತುರ್ಯವನ್ನು ಎಷ್ಟು ಕೊಂಡಾಡಿದರೂ ತೀರದು. ಒಬ್ಬೊಬ್ಬರಾಗಿ ಪಾಳೆಯಗಾರರೆಲ್ಲರೂ ರಾಮಕೃಷ್ಣನ ಭಕ್ತ ರಾದರು. ಎಲ್ಲರಿಗಿಂತಲೂ ವೀರನೂ, ಪರಾಕ್ರಮಶಾಲಿಯೂ, ಧರ್ಮಾಭಿ ಮಾನಿಯೂ ಆಗಿದ್ದ ಗೋಪಾಲನಾಯಕನು ಮುಖ್ಯವಾಗಿ ರಾಮಕೃಷ್ಣನ ಭಕ್ತನಾದನು. ಇದಕ್ಕೆ ಭೈರವಿಯ ಸಂಧಾನವೇ ಕಾರಣ. ಈ ಪಾಳೆಯಗಾರರು ಕಾರ್ಯಕ್ಕೆ ಆರಂಭಿಸಿದರು. ಇವರೆಲ್ಲರೂ ಗುಪ್ತವಾಗಿ ಒಂದು ಕಡೆ ಸೇರಿ ಮಂತ್ರಾಲೋಚನೆಗೆ ಆರಂಭಮಾಡಿದರು. ಮಹಾ ಮಂತ್ರಿ ರಾಮಕೃಷ್ಣನ ಸೂಚನೆಯಂತೆ ಯುವರಾಜ ಚೆನ್ನಬಸಪ್ಪ ನಾಯಕನಿಗೆ ಪಟ್ಟಗಟ್ಟಬೇಕೆಂದು ಎಲ್ಲರೂ ಸ್ಥಿರಸಂಕಲ್ಪಮಾಡಿದರು. ಮಹಾರಾಣಿಯ ಪ್ರಣಯಸಚಿವರನ್ನೆಲ್ಲಾ ತಲೆ ಕತ್ತರಿಸಿಹಾಕಬೇಕೆಂದು

ನಿರ್ಧಾರವಮಾಡಿಕೊಂಡರು. ತಮ್ಮ ತಮ್ಮ ಸೈನ್ಯಗಳನ್ನೆಲ್ಲಾ ಸಿದ್ಧಪಡಿಸಿಕೊಂಡರು. ಅರಮನೆಯಲ್ಲಿ ರಾಣಿಯನ್ನು ಬಂಧನದಲ್ಲಿಡಬೇಕೆಂದೂ, ರಾಜಕರ್ಮಚಾರಿಗಳೊಬ್ಬರೂ ಅವರ ಆಜ್ಞಾಪಾಲನೆಯನ್ನು ಮಾಡದಂತೆ ಮಾಡತಕ್ಕದ್ದೆಂದೂ ಸ್ಥಿರಸಂಕಲ್ಪ ಮಾಡಿದರು. ಈ ವಿಷಯಗಳನ್ನೆಲ್ಲಾ ಯುವರಾಜನಿಗೆ ತಿಳಿಯಪಡಿಸಿ ಎಲ್ಲ ಕಾರ್ಯಗಳೂ ಕೈಗೂಡುವವರೆಗೆ ಅವನನ್ನು ಗೋಪ್ಯವಾಗಿಡಬೇಕೆಂದು ಗೊತ್ತುಮಾಡಿದರು. ಇಷ್ಟು ಸನ್ನಾಹಗಳು ನಗರದ ರಾಜ್ಯದಲ್ಲಿ ಒಂದುಕಡೆಯಿಂದ ಸಿದ್ಧವಾಗುತ್ತಿದ್ದುವು. ರಾಜ್ಯದಲ್ಲಿ ಜನಗಳ ಮನಸ್ಸಿನಲ್ಲಿ ಯಾವುದೋ ಒಂದು ವಿಧವಾದ ಕ್ಷೋಭೆ, ಭಯ, ಆತಂಕಗಳು ಉದಯವಾಗಲಾರಂಭಿಸಿದವು.

---

## ೨೦

## ನಗರದ ವಂಶ ನಿರ್ಮೂಲವಾಯಿತೇ!

ಈ ಸಮಾಚಾರಗಳೆಲ್ಲಾ ರಾಮರಾಯನೇ ಮುಂತಾದ ನಗರದ ಸೇನಾನಾಯಕರುಗಳಿಗೆ ಪುಂಖಾನುಪುಂಖವಾಗಿ ತಿಳಿಯಬಂದವು. ನಾಲ್ಕಾರು ಮುಖ್ಯ ಸೇನಾನಾಯಕರಾದ ರಾಮರಾಯ, ವೀರಬಸವಯ್ಯ, ಪಠಾನ್ ಗಫಾರ್‌ಖಾನ್, ಚೆಲುವಯ್ಯ ಈ ನಾಲ್ವರು ಒಂದು ಕಡೆ ಸೇರಿ ಏನುಮಾಡಬೇಕೆಂದು ಸಮಾಲೋಚನೆಮಾಡಿದರು. ಇದುವರೆಗೆ ನಗರದ ರಾಜ್ಯದಲ್ಲಿ ಪಾಳೆಯಗಾರರಿಗೂ ನಗರದ ಸೈನ್ಯಕ್ಕೂ ಯುದ್ಧವಾದುದಿಲ್ಲ. ಈಗ ಯುದ್ಧವು ಪ್ರಾಪ್ತವಾದರೆ ಜಯಾಪಜಯಗಳು ಹೇಗಿರುವುವೋ? ಯುದ್ಧವಿಲ್ಲದೆ, ಗದ್ದಲವಿಲ್ಲದೆ ಹೇಗಾದರೂ ಇದನ್ನು ಶಮನಪಡಿಸಿಬಿಡಬೇಕೆಂದು ಅವರವರೊಳಗೆ ಸಿದ್ಧಾಂತವಾಯಿತು. ಅದಕ್ಕಾಗಿ ಪ್ರಾಣವನ್ನು ಬೇಕಾದರೂ ಅರ್ಪಣೆಮಾಡುತ್ತೇವೆಂದೂ ಶಪಥತೊಟ್ಟರು. ಈ ಸಮಾಚಾರವನ್ನೆಲ್ಲಾ ರಾಮರಾಯನು ರಾಣಿಯವರಲ್ಲಿ ತಿಳಿಸಿ ಮಂತ್ರಾಲೋಚನೆ ನಡೆಸತಕ್ಕದ್ದೆಂದೂ ಅವರು

ಹೇಗೆ ಅಪ್ಪಣೆ ಕೊಡಿಸಿದರೆ ಹಾಗೆ ತಾವು ನಡೆದುಕೊಳ್ಳುವುದಾಗಿಯೂ ಉಳಿದವರೂವರೂ ಪ್ರಮಾಣಮಾಡಿಕೊಟ್ಟರು. ರಾಮರಾಯನು ಮಹಾರಾಣಿಯವರ ಭೇಟಿಮಾಡಲು ಅರಮನೆಗೆ ಹೋದನು.

ಮಹಾರಾಣಿಯು ಮಧ್ಯಾಹ್ನ ಮೂರುಝಾವದ ಹೊತ್ತಿನಲ್ಲಿ ತನ್ನ ವಿಶ್ರಾಂತಿಗೃಹದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಳು. ಸಖಿಯು ಹೋಗಿ "ಸೇನಾಧಿಪತಿಗಳು ಅವಸರದ ರಾಜಕಾರ್ಯಾರ್ಥವಾಗಿ ಬಂದಿದ್ದಾರೆ" ಎಂದು ತಿಳಿಸಿದಳು. ರಾಣಿಯವರು ಸೇನಾಧಿಪತಿಯನ್ನು ತನ್ನ ಸಮ್ಮುಖಕ್ಕೆ ಬರುವಂತೆ ಅಪ್ಪಣೆಮಾಡಿದರು.

ಮಹಾರಾಣಿಯವರು ಪರ್ಯಂಕದಮೇಲೆ ಕುಳಿತು ಸಮೀಪದಲ್ಲಿದ್ದ ಆಸನದಮೇಲೆ ಕುಳಿತುಕೊಳ್ಳುವಂತೆ ರಾಮರಾಯನಿಗೆ ಅಪ್ಪಣೆಮಾಡಿದರು. ರಾಮರಾಯನು ಆಸನದಲ್ಲಿ ಕುಳಿತು ಮಾತಿಗೆ ಮೊದಲಿಟ್ಟನು. ರಾಣಿಯು ಸೇನಾಧಿಪತಿಯೊಡನೆ ಯಾವುದೋ ಗಹನವಾದ ಮಂತ್ರಾಲೋಚನೆಯಲ್ಲಿ ಮಗ್ನಳಾಗಿದ್ದಾಳೆಂದು ಬಗೆದು ಸಖಿಯು ಹಿಂದು ಹಿಂದಕ್ಕೆ ಸರಿದುಹೋದಳು. ರಾಣಿಯು ಮುಗುಳು ನಗುವನ್ನು ನಕ್ಕು ಕಣ್ಣು ಸನ್ನೆಯಿಂದ ಸಖಿಯನ್ನು ಹೊರಟುಹೋಗುವಂತೆ ಅಪ್ಪಣೆ ಮಾಡಿದಳು. ಈಗ ಆ ಮನೋಹರವಾದ ಅಂತಃಪುರದಲ್ಲಿ ರಾಣಿ ಚೆಲುವಮ್ಮಣ್ಣಿಯೂ, ರಾಮರಾಯನೂ ಏಕಾಂತದಲ್ಲಿದ್ದಾರೆ.

ರಾಣಿಯು ಎಣ್ಣೆಗೆಂಪಿನ ಸೀರೆಯನ್ನುಟ್ಟದ್ದಾಳೆ. ಕೃಷ್ಣವರ್ಣದ ಕಂಚುಕವು ಸ್ತನಯುಗ್ಮವನ್ನು ಬಿಗಿದು ಕಂಗೊಳಿಸುತ್ತಿದೆ. ಅಸ್ತವ್ಯಸ್ತವಾಗಿ ಬಿಚ್ಚಿಹೋಗಿದ್ದ ಕೇಶದಾಮವು ರಾಣಿಯ ಭುಜಗಳಮೇಲೆಯೂ ಹಂಸತೂಲಿಕಾ ತಲ್ಪದಮೇಲೂ ಹಾರುತ್ತಿದೆ. ರಾಣಿಯು ಕಾಲುಗಳನ್ನು ಪರ್ಯಂಕದ ಕೆಳಗೆ ಬಿಟ್ಟುಕೊಂಡಿದ್ದಾಳೆ. ಆ ಪದ್ಮದಂತಹ ಪಾದಯುಗ್ಮವನ್ನು ಅಲ್ಲಾಡಿಸುತ್ತಾ ಕೆಳಗೆ ಬಿದ್ದಿರುವ ಪುಷ್ಪಗಳನ್ನು ಬೆಟ್ಟುಗಳಿಂದ ತುಳಿಯುತ್ತಾ ರಾಣಿಯು ಅಧೋಮುಖಿಯಾಗಿ, "ಸೇನಾಧಿಪತಿಗಳೇ, ಯಾವ ರಾಜ್ಯಕಾರ್ಯವನ್ನು ತಂದಿದ್ದೀರಿ?" ಎಂದು ನಗುಮುಖದಿಂದ ಕೇಳಿದಳು.

ರಾಮರಾಯನು ಕೈಮುಗಿದು "ಮಹಾರಾಣಿಯವರೇ! ಗಹನವಾದ ರಾಜಕಾರ್ಯವು ಪ್ರಾಪ್ತವಾಗಿದೆ. ನಗರದ ರಾಜ್ಯದ ಪಾಳೆಯಗಾರರೆಲ್ಲರೂ ಒಗ್ಗಟ್ಟು ಸೇರಿದ್ದಾರೆ. ಯುವರಾಜನನ್ನು ಸಿಂಹಾಸನಕ್ಕೇರಿಸಿ ತಮ್ಮನ್ನು ಬಂಧನದಲ್ಲಿಟ್ಟು ನಗರದ ರಾಜ್ಯವನ್ನು ವಶಪಡಿಸಿಕೊಳ್ಳುವ ಹೋಚನೆ ಮಾಡಿದ್ದಾರೆ." ಎಂದನು

ರಾಣಿಯು ನಗುತ್ತಾ "ಒಳ್ಳೆಯದೇ ಆಯಿತು. ಶಕ್ತಿಯಿದ್ದರೆ ಮಾಡಲಿ. ಅದಕ್ಕೆ ನೀವೇಕೆ ಇಷ್ಟು ಉದ್ವಿಗ್ನರಾಗಿದ್ದೀರಿ?" ಎಂದಳು.

"ರಾಣಿಯವರೇ! ನಮ್ಮಗಳ ತಲೆಹೋಗುವ ಕಾಲವು ಬಂದಿದೆ. ನಿಮ್ಮ ಪರಿಹಾಸ್ಯವು ನನಗೆ ಅರ್ಥವಾಗುವುದಿಲ್ಲ. ನಿಮಗೆ ಈ ರಾಜ್ಯವು ಬೇಡವಾಗಿದ್ದರೆ ನಮಗೂ ಬೇಡ. ಇಂದೇ ತಮ್ಮ ಸವಾರಿಯು ಹೊರಡಲಿ. ನಾನು ಕರೆದುಕೊಂಡು ಹೋಗುತ್ತೇನೆ. ಎಲ್ಲಿಯಾದರೂ ಹೋಗಿ ಸುಖವಾಗಿ ಜೀವನ ಮಾಡೋಣ. ಈ ರಾಜ್ಯದ ಆಸೆಯು ಇನ್ನು ಉಳಿಯುವಂತಿಲ್ಲ."

ರಾಣಿಯು ನಗುತ್ತಾ, "ಒಳ್ಳೆಯ ಹಂಚಿಕೆ. ರಾಜ್ಯವನ್ನು ಪಾಳೆಯಗಾರರು ತೆಗೆದುಕೊಳ್ಳುತ್ತಾರೆ. ರಾಣಿಯನ್ನು ಸೇನಾಧಿಪತಿಗಳು ಕದ್ದುಕೊಂಡು ಹೋಗುತ್ತಾರೆ. ಇನ್ನೇನಾಗಬೇಕು?" ಎಂದಳು

ರಾಮರಾಯನು ಕೋಪಾವೇಶದಿಂದ ಎದ್ದು, "ಅತ್ಯಂತ ಭಯಪ್ರದವಾದ ವಿಚಾರದಲ್ಲಿ ಸುಲಭವಾಗಿ ಪರಿಹಾಸ್ಯ ವಚನಗಳನ್ನಾಡುತ್ತಿರುವಿರಿ. ನಾನು ಇದನ್ನು ಸಹಿಸಲಾರೆ. ನಾನು ಹೊರಟು ಹೋಗುತ್ತೇನೆ. ಪುನಃ ಎಂದೆಂದಿಗೂ ನೀವು ನನ್ನನ್ನು ನೋಡಲಾರಿರಿ" ಎಂದು ಆಸನದಿಂದೆದ್ದನು.

ರಾಮರಾಯನು ಬಾಗಿಲು ಕಡೆಗೆ ಒಂದೆರಡು ಹೆಜ್ಜೆಗಳನ್ನು ಇಡುವಷ್ಟರಲ್ಲಿ ರಾಣಿಯು ಜಗ್ಗನೆದ್ದು ಅವನ ತೋಳುಗಳನ್ನು ಹಿಡಿದು ಹಿಂದಕ್ಕೆಳೆದು ಪರ್ಯಂಕದ ಮೇಲೆ ಕುಳ್ಳಿರಿಸಿ "ರಾಮರಾಯ, ಎಲ್ಲಿಗೆ ಹೋಗುವೆ? ನೀನೇಕೆ ಇಷ್ಟು ಕಠಿಣವಾಗಿ ಹೋಗಿರುವೆ? ಕುಳಿತುಕೋ. ಹೇಳು, ಏನು ಹೇಳುವೆಯೋ ಕೇಳುವೆನು. ಏನು ಮಾಡಬೇಕೆನ್ನು

ವಿಯೋ ಮಾಡಿ ತೋರಿಸುವೆನು.” ಎಂದು ಹೇಳುತ್ತಾ ಅವನ ಭುಜಗಳನ್ನು ಹಿಡಿದು ಆಲಿಂಗಿಸಿ ಮುಖವನ್ನು ಚುಂಬಿಸಿದಳು.

ರಾಮರಾಯನು ವಿಷಣ್ಣವದನನಾಗಿ “ರಾಣಿಯವರೇ, ತಮ್ಮ ರಾಣಿಗಿರಿಯು ಹಾರಿಹೋಗುವ ಕಾಲವು ಬಂದಿದೆ. ನಾನು ಇದನ್ನು ಸಹಿಸಲಾರೆ.”ಎಂದನು.

“ರಾಮರಾಯ, ಈ ಪಿತೂರಿಗೆ ಕಾರಣಕರ್ತರಾರು ?”

“ಸ್ವಯಂ ಯುವರಾಜನೇ ಕಾರಣಕರ್ತನು.”

ರಾಣಿಯು ತಿರಸ್ಕಾರಪೂರ್ಣವಾದ ನಗುವನ್ನು ನಕ್ಕು “ಯುವರಾಜ! ಅವನೊಬ್ಬ ಮುಠ್ಠಾಳ. ಅವನೇನುಮಾಡಬಲ್ಲ? ಆಗಾಗ ಅಸೂಯಾಪರರ ಮಾತುಗಳನ್ನು ಕೇಳಿ ಉದ್ವೇಜಿತನಾಗಿ ಈ ಸಿಂಹಾಸನದ ಮೇಲೆ ಹಾರಿ ಕುಳಿತುಕೊಳ್ಳುವೆನೆಂದು ಆಶಾಕಲ್ಪನೆಗಳನ್ನು ಮಾಡಿಕೊಳ್ಳುತ್ತಾನೆ. ಇದೂ ಅಂತಹುದೇ ಒಂದು ಪ್ರಮೇಯವಿರಬಹುದು.”ಎಂದಳು.

“ರಾಣಿಯವರೇ! ಹಾಗಲ್ಲ. ಈ ವಿಚಾರದಲ್ಲಿ ತಮ್ಮದು ಸ್ತ್ರೀಬುದ್ಧಿ. ಯುವರಾಜನ ಜೊತೆಯಲ್ಲಿ, ಪಾಳೆಯಗಾರರೆಲ್ಲಾ ಸೇರಿಕೊಂಡಿದ್ದಾರೆ.”

“ಅದರಿಂದೇನಾಗುವುದು.”

“ನಗರದ ಸೈನ್ಯವೆಲ್ಲವೂ ಪಾಳೆಯಗಾರರೊಡನೆ ಯುದ್ಧಮಾಡಬೇಕಾಗುವುದು.”

“ಅಂತಹ ಯುದ್ಧವು ಸಂಭವಿಸಿದರೆ ನೀವೇನು ಮಾಡುವಿರಿ ?”

“ನಾವು ಯುದ್ಧ ಮಾಡುವೆವು. ಆ ಯುದ್ಧದಲ್ಲಿ ಯುವರಾಜನನ್ನು ಕತ್ತರಿಸಿ ಎಸೆಯುವೆವು.”

“ಆಗ ಎಲ್ಲವೂ ಸರಿಹೋದಂತಾಗುವುದು. ನಮ್ಮ ಸುಖ ಸಂಪತ್ತುಗಳು ನಿಷ್ಕಂಟಕವಾಗುವುದು. ಅದು ಸರಿಯಾದ ಮಾರ್ಗ.”

“ರಾಣಿಯವರೇ, ಹಾಗಲ್ಲ. ಯುದ್ಧಕ್ಕೆ ನಾನು ಅಂಜುವುದಿಲ್ಲ. ಈ ನಗರದಲ್ಲಿ ನಗರದ ಅರಸರಿಗೂ ಪಾಳೆಯಗಾರರಿಗೂ ಎಂದೂ

ಯುದ್ಧವಾಗುವುದಿಲ್ಲ. ಜಯಾಪಜಯಗಳು ಯಾರಿಗೂ ನಿಶ್ಚಯವಲ್ಲ. ಈಗ ಯುದ್ಧಮಾಡುವುದಕ್ಕೆ ಕಾರಣವೂ ಇಲ್ಲ."

"ಹಾಗಾದರೆ ನೀವು ಏನು ಆಲೋಚನೆ ಮಾಡಿರುವಿರಿ."

"ಯುವರಾಜನನ್ನು ಉಪಾಯಾಂತಾರದಿಂದ ಕೊಲ್ಲಿಸಿಬಿಡಬೇಕು. ಅದೇ ಕಡೆಯ ಉಪಾಯ."

ರಾಣಿಯು ಬೆಚ್ಚಿಬಿದ್ದು "ಯುವರಾಜನಮೇಲೆ ನನಗೆ ಯಾವ ಅಭಿಮಾನವೂ ಇಲ್ಲ. ಆದರೆ ನಾವು ಅವನ ಪ್ರಾಣಾಪಹಾರ ಮಾಡಿದರೆ ಪ್ರಜಾಕ್ಷೋಭೆಯಾಗುವುದೆಂದು ನನಗೆ ಭಯವಾಗುತ್ತದೆ" ಎಂದಳು.

ರಾಮರಾಯನು ಲಾಘವವಾದ ನಗುವನ್ನು ನಕ್ಕು "ಚೆಲುವಮ್ಮಣಿಯವರೇ, ನಿಮ್ಮ ಆಲೋಚನೆಯು ಎಂತಹ ಹುರುಳಿಲ್ಲದ್ದು? ಯುವರಾಜನು ನಿಮ್ಮಮೇಲೆ ದೋಷಾರೋಪಣೆಗಳನ್ನು ಮಾಡುತ್ತಾ ಸರ್ವದಾ ಶತೃತ್ವವನ್ನೇ ಬೆಳೆಸುತ್ತಿದ್ದಾನೆ. ನೀವು ಮಹಾರಾಜರವರಿಗೆ ಕೈಯಾರ ವಿಷಕೊಟ್ಟು ಕೊಂದಿರೆಂದು ನಿಶ್ಯಂಕನಾಗಿ ಹೇಳುತ್ತಿದ್ದಾನೆ. ನೀವು ವಿರೂಪಾಕ್ಷನನ್ನು ಕೊಲ್ಲಿಸಿದರೆಂದು ನಿರ್ಲಜ್ಜನಾಗಿ ಎಲ್ಲರೊಡನೆಯೂ ಹೇಳಿಕೊಳ್ಳುತ್ತಾನೆ. ನಮ್ಮಗಳಮೇಲೆ ಅವನು ಮಾಡುತ್ತಿರುವ ದೂಷಣೆಯು ಅಸಹನೀಯವಾದುದು. ನೀವು ಎಂದೋ ಅವನನ್ನು ಕೊಲ್ಲಿಸಬೇಕಾಗಿತ್ತು. ಅಂದು ಈ ಅಂತಃಪುರದಲ್ಲಿ ಮಾತನಾಡಿದಾಗ ನಾನು ನಿಮ್ಮ ಸನ್ನಿಧಾನದಲ್ಲಿದ್ದಿದ್ದರೆ ಅಂದೇ ಅವನ ತಲೆಯನ್ನು ಹಾರಿಸುತ್ತಿದ್ದೆ. ಅಂದು ಅವನನ್ನು ನೀವು ಬಂಧನದಲ್ಲಿಟ್ಟದ್ದಾಗ ಆ ಭೈರವಿಯು ಬಿಡಿಸಿಕೊಂಡು ಹೊರಟುಹೋದಳು. ಅವಳನ್ನು ಶಿಕ್ಷಿಸದೆ ಬಿಟ್ಟುಬಿಟ್ಟರಿ. ಅಂದೇ ಎಣ್ಣೆಯ ಗುಡಾಣದಲ್ಲಿ ಹಾಕಿ ಬೇಯಿಸಿ ಅವಳನ್ನು ಕೊಲ್ಲಬೇಕಾಗಿತ್ತು. ಇನ್ನು ಒಂದೇ ಒಂದು ಕ್ಷಣ ಆ ಯುವರಾಜನು ಈ ಭೂಮಿಯಮೇಲಿರಕೂಡದು. ಅವನನ್ನು ನೀವು ಉಪೇಕ್ಷಿಸಿದರೆ ನಗರದ ರಾಜ್ಯದಲ್ಲಿ ಅಪಮಾನ ಸಹಸ್ರಗಳಿಗೆ ನೀವು ಈಡಾಗಿ ಬೀದಿಯಲ್ಲಿ ಭಿಕಾರಿಣಿಯಾಗಿ ಅಲೆದು ಸಾಯಬೇಕಾದೀತು. ನಿಮ್ಮಲ್ಲಿರುವ ಪ್ರೀತಿ ನೀವು ನನ್ನಲ್ಲಿಟ್ಟಿರುವ ಅಗಾಧಪ್ರೇಮ ಇವುಗಳಿಂದ

ನಾನು ನಿಮಗೆ ಹೇಳುತ್ತಿದ್ದೇನೆ. ನಾನಾಗಿಯೇ ಒಂದು ತಂತ್ರವನ್ನು ಹೂಡಿ ಯುವರಾಜನನ್ನು ನಿರ್ನಾಮ ಮಾಡಿಬಿಟ್ಟಿದ್ದರೆ ನೀವೇನು ಮಾಡುತ್ತಿದ್ದಿರಿ? ನಾನು ಇಂದು ಕಟ್ಟಕಡೆಯ ಪ್ರಮೇಯವು ಬಂದುದರಿಂದ ಯುವರಾಜನನ್ನು ಕೊಲ್ಲಿಸಬೇಕೆಂದು ಹೇಳುತ್ತಿದ್ದೇನೆ. ಅವನನ್ನು ಕೊಲ್ಲಿಸಿದರೆ ಪ್ರಜಾಕ್ಷೋಭೆಯಾಗುತ್ತದೆಂದು ನೀವು ಹೇಳುತ್ತೀರಿ ಮಹಾಮಂತ್ರಿಯನ್ನು ಬಂಧನದಲ್ಲಿಡಿಸಿದ್ದುದಕ್ಕಿಂತಲೂ ಇದು ಮಹತ್ತರವಾದ ವಿಷಯವೇನು? ರಾಜ್ಯದ ಕ್ಷೇಮಾರ್ಥವಾಗಿ ಯಾರನ್ನು ವಧೆ ಮಾಡುವುದಕ್ಕೂ ಹಿಂಜರಿಯಬಾರದು. ಯುವರಾಜನನ್ನು ಯಮಲೋಕಕ್ಕೆ ಕಳುಹಿಸಿಬಿಟ್ಟರೆ ಆಮೇಲೆ ಆ ಪಾಳೆಯಗಾರರು ಏನುಮಾಡಬಲ್ಲರು? ಮಹಾಮಂತ್ರಿಯು ತಾನೇ ಏನುಮಾಡಬಲ್ಲನು? ಯುವರಾಜನನ್ನು ನೆಪವಾಗಿಟ್ಟುಕೊಂಡು ಅವನಿಗೆ ಪಟ್ಟಕಟ್ಟುವ ಹುಚ್ಚನ್ನು ತಲೆಗೆ ಹಚ್ಚಿಕೊಂಡು ಈ ಮೂರ್ಖರು ನಮ್ಮಮೇಲೆ ಕಾರ್ಯಭಾರವನ್ನು ನಡೆಸುತ್ತಿರುವರು. ಇದನ್ನು ನಾನು ಸಹಿಸಲಾರೆ. ತಮ್ಮ ಕೂದಲೆಳೆಗೆ ಕಷ್ಟವಾಗಲೀ, ಅಪಮಾನವಾಗಲೀ, ಉಂಟಾಗುವುದೆಂದರೆ ನನ್ನ ಹೃದಯವು ಪರಿತಪಿಸುತ್ತದೆ. ನಾವೆಲ್ಲರೂ ಬಹಳ ಯೋಚನೆಮಾಡಿದ್ದೇವೆ. ನೀವು ಯುವರಾಜನ ವಧೆಮಾಡದಿದ್ದರೆ ಅವರು ನಿಮ್ಮನ್ನೂ ನಮ್ಮನ್ನೂ ವಧೆಮಾಡುವುದು ಖಂಡಿತ. ಈಗ ಹೇಳಿರಿ, ಏನುಮಾಡಬೇಕೆಂಬುದನ್ನು?" ಎಂದನು.

ರಾಮರಾಯನು ವಜ್ರಾಘಾತದಂತೆ ಈ ಮಾತುಗಳನ್ನು ಆಡುತ್ತಿರುವಾಗ ರಾಣಿಯ ಹೃದಯವು ಡವಡವನೆ ಬಡಿದುಕೊಳ್ಳುತ್ತಿತ್ತು. ತಲೆಯು ಕಂಪಿಸುತ್ತಿತ್ತು. ಸರ್ವಾಂಗವೂ ನಡುಗುತ್ತಿತ್ತು. ರಾಣಿ ಚೆಲುವಮ್ಮಣ್ಣಿಯು ಅಧೀರಳಾಗಿ ರಾಮರಾಯನ ವಿಶಾಲವಾದ ವಕ್ಷಸ್ಥಲದಮೇಲೆ ಮುಖವನ್ನಿಟ್ಟು ಎರಡು ಕೈಗಳಿಂದಲೂ ಅವನನ್ನು ಬಲವಾಗಿ ತಬ್ಬಿಕೊಂಡು ರೋದಿಸತೊಡಗಿದಳು. ರಾಮರಾಯನು ರಾಣಿಯ ಅಂತಃಪುರವನ್ನು ಉತ್ತೇಜಿತನಾಗಿ ಬಿಟ್ಟುಹೊರಡುವಹೊತ್ತಿಗೆ ರಾತ್ರಿ ಒಂಭತ್ತು ಘಂಟೆಯಾಗಿತ್ತು.

ರಾಮರಾಯನು ಉತ್ತೇಜಿತನಾಗಿ ಅರಮನೆಯಿಂದ ಹೊರಟು ಕುದುರೆಯನ್ನೇರಿ ಜೊತೆಯಲ್ಲಿ ಸಣ್ಣ ಅಶ್ವಾರೋಹಿಗಳ ದಳವೊಂದನ್ನು ತೆಗೆದುಕೊಂಡು ಗಂಗಹಳ್ಳಿಗೆ ಆ ರಾತ್ರಿಯೇ ಪ್ರಯಾಣಮಾಡಿದನು. ರಾಮರಾಯನೂ, ಅವನ ದಳದವರೂ ಗಂಗಹಳ್ಳಿಗೆ ಹೋಗಿ ಯುವ ರಾಜನು ವಾಸಮಾಡುತ್ತಿದ್ದ ಮನೆಯನ್ನು ಸುತ್ತುಗಟ್ಟಿ ಅಲ್ಲಿ ಕಾವಲು ಗಾರರಾಗಿದ್ದ ನಾಲ್ಕಾರು ಮಂದಿ ಸೇವಕರನ್ನು ಒಂದೇ ಏಟಿಗೆ ತರಿದು ಹಾಕಿದರು. ಬಾಗಿಲುಗಳನ್ನು ಒಡೆದು ಒಳಗೆ ಪ್ರವೇಶಮಾಡಿದರು. ಅಷ್ಟರಲ್ಲಿ ಯುವರಾಜನು ಕತ್ತಿಯನ್ನು ಹಿರಿದು ಹೊರಗಿನ ಹಜಾರಕ್ಕೆ ಬಂದನು. ಮಲ್ಲಿಗಮ್ಮನು ನಡುಗುತ್ತಾ ಒಳಗೆ ಬಾಗಿಲಿನ ಸಂದಿಯಲ್ಲಿ ಹೊರಗಿನ ದೃಶ್ಯವನ್ನು ನೋಡುತ್ತಿದ್ದಳು. ಯುವರಾಜನು ತನ್ನನ್ನು ಆಕ್ರಮಿಸಲು ಬರುತ್ತಿದ್ದ ಸೈನಿಕರ ಗುಂಪಿನಮೇಲೆ ಕತ್ತಿಯನ್ನು ಬೀಸಿ ಪರಾಕ್ರಮದಿಂದ ಯುದ್ಧಮಾಡಿದನು. ಅನೇಕರನ್ನು ತನ್ನ ಕತ್ತಿಯ ಪೆಟ್ಟಿಗೆ ಆಹುತಿ ತೆಗೆದುಕೊಂಡನು. ಆದರೆ ಬಹಳಹೊತ್ತು ಅಷ್ಟೊಂದು ಜನ ಯೋಧರೊಡನೆ ಒಬ್ಬಂಟಿಗನಾಗಿ ಹೋರಾಡುವ ಪರಾಕ್ರಮವು ಸಫಲವಾಗದೇಹೋಯಿತು. ಕೊನೆಗೆ ವೀರಪುರುಷನಂತೆ ಕಡೆಯ ಪೆಟ್ಟನ್ನು ರಾಮರಾಯನಿಗೆ ಹೊಡೆಯಲು ಕೈಯೆತ್ತಿದನು. ಹಿಂದುಗಡೆ ಯಿಂದ ಅವನ ಭುಜಕ್ಕೆ ಒಂದು ಕತ್ತಿಯ ಪೆಟ್ಟು ಬಿದ್ದಿತು. ತೋಳು ಕಳಚಿ ಕೆಳಗೆ ಬಿದ್ದಿತು. ಎದುರಿಗೆ ಕತ್ತಿಯನ್ನು ಹಿರಿದು ನಿಂತಿದ್ದ ರಾಮರಾಯನು ತನ್ನ ಕರವಾಳವನ್ನು ಎತ್ತಿ ಯುವರಾಜನ ಕೊರಳಿನ ಮೇಲೆ ಹೊಡೆದನು. ಯುವರಾಜನು 'ಮಹಾದೇವಾ' ಎಂದು ಕೂಗುತ್ತಾ ನೆಲದಮೇಲೆ ಬಿದ್ದನು. ಮಲ್ಲಿಗೆಯು ಚೀತ್ಕರಿಸುತ್ತಾ ಮೂರ್ಛಿತಳಾಗಿ ಭೂಮಿಯಮೇಲೆ ಬಿದ್ದಳು. ರಾಮರಾಯನು ಮಲ್ಲಿಗೆ ಯನ್ನು ಮ್ಯಾನಾದಲ್ಲಿ ಕಟ್ಟಿಹಾಕಿ ಸೂರ್ಯೋದಯವಾಗುವುದರೊಳಗಾಗಿ ಬಿದನೂರಿನ ಅಂತಃಪುರಕ್ಕೆ ತೆಗೆದುಕೊಂಡು ಬರಬೇಕೆಂದು ಅಪ್ಪಣೆ ಮಾಡಿ ಯುವರಾಜನ ಮೃತಶರೀರವನ್ನು ತನ್ನ ಜೊತೆಯಲ್ಲಿಯೇ ತೆಗೆಸಿ ಕೊಂಡು ಮುಂದೆ ಮುಂದೆ ಬಿದನೂರಿಗೆ ಹೊರಟುಹೋದನು.

ಬಿದನೂರಿನ ಕೋಟೆಯ ಒಂದು ಗುಪ್ತಸ್ಥಾನದಲ್ಲಿ ಯುವರಾಜನ ಶರೀರವನ್ನು ಸಮಾಧಿಮಾಡಿಸಿ ರಾಣಿಯ ಅಂತಃಪುರಕ್ಕೆ ಹೋದನು. ಆಗ ಇನ್ನೂ ಸೂರ್ಯೋದಯವಾಗಿರಲಿಲ್ಲ. ರಾಣಿಯು ರಾತ್ರಿಯೆಲ್ಲಾ ನಿದ್ದೆ ಮಾಡಿರಲಿಲ್ಲ. ಹಾಸಿಗೆಯಮೇಲೆ ಬಿದ್ದು ಅಸ್ಥಿರಮನಸ್ಕಳಾಗಿ ಹೊರಳುತ್ತಿದ್ದಳು. ಬಸಪ್ಪನಾಯಕನಿಗೆ ತನ್ನನ್ನು ಕೊಟ್ಟು ವಿವಾಹ ವಾದಂದಿನಿಂದ ನಡೆದ ದುರ್ಘಟನೆಗಳನ್ನೆಲ್ಲಾ ಸ್ಮರಿಸಿಕೊಂಡು ದುಃಖಿ ಸುತ್ತಿದ್ದಳು. ರಾಮರಾಯನು ಚೆಲುವಮ್ಮಣ್ಣಿಯ ಶಯನಾಗಾರಕ್ಕೆ ಹೋಗಿ ಅವಳನ್ನು ಎಬ್ಬಿಸಿದನು. ರಾಣಿಯು ಗಾಬರಿಯಿಂದ ಕಣ್ಣು ಬಿಟ್ಟು ಎದ್ದು ನಿಂತಳು. ಅವಳ ಕಣ್ಣುಗಳು ಕೆಂಡದಹಾಗೆ ಕೆಂಪಾ ಗಿದ್ದವು. ರಕ್ತಸಿಕ್ತವಾದ ರಾಮರಾಯನ ದಿರಸುಗಳನ್ನು ನೋಡಿ ರಾಣಿಯು:—"ಏನು ಮಾಡಿದೆ ? ಯಾವ ಘೋರಕೃತ್ಯವನ್ನೆಸಗಿದೆ ?" ಎಂದು ಘರ್ಜಿಸಿದಳು.

ರಾಮರಾಯನು ವಿಕಟವಾದ ನಗುವನ್ನು ನಕ್ಕು "ಮಹಾರಾಣಿ, ನಿನ್ನ ರಾಜ್ಯವು ನಿಷ್ಕಂಟಕವಾಯಿತು. ನಿನ್ನ ಸುಖವು ಕೊನೆಯಿಲ್ಲ ದ್ದಾಯಿತು. ಎಷ್ಟೋ ದಿವಸಗಳಿಂದ ಹಿಂದುಮುಂದೆ ನೋಡುತ್ತಿದ್ದ ಯುವರಾಜನ ವಧೆಯನ್ನು ಇಂದು ನೆರವೇರಿಸಿದೆನು. ನಿನಗಾಗಿ! ನಿನ್ನ ಸುಖಕ್ಕಾಗಿ! ನಿನ್ನ ಆನಂದಕ್ಕಾಗಿ! ಈ ವಧೆಯನ್ನು ನಾನೇ ಸಂತೋಷ ದಿಂದ ಮಾಡಿದೆನು."ಎಂದನು.

ರಾಣಿಯು ನಿದ್ರೆಯಿಂದೆಚ್ಚತ್ತವಳಂತೆ ವಿಸ್ಫಾರಿತ ನಯನಗಳಿಂದ ನೋಡುತ್ತಾ, "ನೀನು? ಯುವರಾಜನ ವಧೆ? ಯುವರಾಜನ ವಧೆ ಯನ್ನು ಮಾಡಿದೆಯಾ ?"ಎಂದಳು.

"ಹೌದು! ಚೆಲುವಮ್ಮಣ್ಣಿ! ನೋಡು! ರಕ್ತಸಿಕ್ತವಾದ ನನ್ನ ಹಸ್ತಗಳನ್ನು ನೋಡು!" ಎಂದು ಎರಡು ಕೈಗಳನ್ನೂ ರಾಣಿಯ ಮುಖದ ಮುಂದೆ ಚಾಚಿದನು.

ರಾಣಿಯು "ಹಾ, ಈ ನಗರದ ರಾಜವಂಶವು ನಿರ್ಮೂಲ ವಾಯಿತೇ ?" ಎಂದು ಅರಚುತ್ತಾ ಮೂರ್ಛಿತಳಾಗಿ ಭೂಮಿಯಮೇಲೆ

ಬಿದ್ದಳು. ರಾಮರಾಯನು ಹೊರಗೆ ಬಂದು ಸಖಿಯರನ್ನು ರಾಣಿಯನ್ನು ಉಪಚರಿಸುವಂತೆ ನೇಮಿಸಿ ಮಲ್ಲಿಗೆಯನ್ನು ಅದೇ ಅರಮನೆಯಲ್ಲಿಯೇ ಬಂಧನಾಗಾರದಲ್ಲಿ ಭದ್ರಪಡಿಸಿರಿಸಿ ತಾನು ತನ್ನವಾಸಸ್ಥಾನಕ್ಕೆ ತೆರಳಿದನು.

ಪ್ರಾತಃಕಾಲವಾಗುತ್ತಲೇ ಸ್ನಾನಾದಿಗನ್ನಾಚರಿಸಿ ಶುಭ್ರ ವಸನಗಳನ್ನು ಧರಿಸಿ ತನ್ನ ದಿವಾನ್ ಖಾನೆಯಲ್ಲಿ ಕುಳಿತು ತನ್ನ ಸಹೋದ್ಯೋಗಿಗಳನ್ನು ಕರೆತರಿಸಿ ರಾತ್ರಿಯ ವೃತಾಂತವೆಲ್ಲವನ್ನೂ ಅವರುಗಳಿಗೆ ತಿಳಿಸಿದನು. ಆ ರಾತ್ರಿ ರಾಮರಾಯನ ಜೊತೆಯಲ್ಲಿ ಹೋಗಿದ್ದ ಅಳಿದುಳಿದ ಸೈನಿಕರಿಗೆ ವಿಶೇಷ ಪಾರಿತೋಷಕಗಳನ್ನು ಕೊಟ್ಟು ಈ ಸಮಾಚಾರಗಳು ಎಲ್ಲಿಯೂ ಹೊರಗೆ ತಿಳಿಯ ಕೂಡದೆಂದೂ, ಯಾರಾದರೂ ಹೊರಗೆ ಉಸುರಿದರೆ ಅವರ ಶಿರಚ್ಛೇದವನ್ನು ಮಾಡಿಸುತ್ತೇನೆಂದೂ ಕಟ್ಟಪ್ಪಣೆಮಾಡಿದನು. ಅನಂತರ ಮುಖ್ಯಮುಖ್ಯವಾದ ಸ್ಥಳಗಳಲ್ಲೆಲ್ಲಾ ಬಹಳ ಜಾಗರೂಕರಾಗಿರುವಂತೆ ಸೈನ್ಯಗಳನ್ನು ಹುಷಾರಾಗಿ ಕಾವಲಿಟ್ಟರು.

---

## ೨೧

## ಕಾರ್ಯೋನ್ಮುಖಳಾದ ಭೈರವಿ

ಪ್ರಾತಃಕಾಲ ಭೈರವಿಯು ಮಲ್ಲಿಕಾರ್ಜುನಕ್ಷೇತ್ರದಲ್ಲಿ ಶಿವದರ್ಶನ ಮಾಡಿಕೊಂಡು ಯುವರಾಜನ ಭೇಟಿಗಾಗಿ ಗಂಗಹಳ್ಳಿಗೆ ಹೋಗಿ ನೋಡಿದಳು. ಮಧ್ಯಾಹ್ನದ ಹೊತ್ತಾಗಿತ್ತು. ಆ ವನಮಧ್ಯದಲ್ಲಿ ಆ ವಿಶಾಲವಾದ ಗೃಹವು ಬೆಂಕಿ ಹತ್ತಿ ನಾಲ್ಕುಕಡೆಗಳಲ್ಲಿಯೂ ಉರಿಯುತ್ತಿತ್ತು. ಭೈರವಿಯು ನೋಡುವಹೊತ್ತಿಗೆ ಪೂರ್ಣಾಹುತಿಯಾಗಿಹೋಗಿತ್ತು. ಆ ಮನೆಯಲ್ಲಿದ್ದ ಒಂದು ಪಿಳ್ಳೆಯೂ ಉಳಿದಿರಲಿಲ್ಲ. ಒಂದು ಗುರುತೂ ಸಿಕ್ಕುವಂತಿರಲಿಲ್ಲ. ಭೈರವಿಯು ಅಧೀರ

ಳಾಗಲಿಲ್ಲ. ಅವಳಿಗೆ ಯುವರಾಜನೆಲ್ಲಿದ್ದಾನೆಂದು ಪತ್ತೆ ಹಚ್ಚುವವರೆಗೆ ಬೇರಾವ ವಿಷಯವನ್ನೂ ಮಾತನಾಡಲು ಇಷ್ಟವಿರಲಿಲ್ಲ. ಪುನಃ ಭೈರವಿಯು ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಬಂದು ಸೇರಿದಳು. ಎಲ್ಲೆಲ್ಲಿಯೋ ತಿರುಗಿದಳು. ಏನೂ ಫಲವಾಗಲಿಲ್ಲ. ರಾತ್ರಿ ಬೃಂದೆಯ ಮನೆಗೆ ಹೋಗಿ ಸೇರಿದಳು. ಬೃಂದೆಯಿಂದ ಒಂದು ಸಣ್ಣ ವಿಚಾರವು ಗೋಚರವಾಯಿತು ಅರಮನೆಯ ಬಂಧನಾಗಾರದಲ್ಲಿ ಯಾವಳೋ ರೂಪದ ಖನಿಯಂತಿರುವ ಒಬ್ಬ ತರುಣಿಯು ಬಂಧಿತಳಾಗಿದ್ದಾಳೆಂದೂ, ಯಾವಾಗಲೂ ಅಳುತ್ತಿದ್ದಾಳೆಂದೂ ಅನ್ನಾಹಾರಗಳನ್ನು ಮುಟ್ಟುತ್ತಿಲ್ಲವೆಂದೂ ತಿಳಿಯಿತು. ಬೃಂದೆಯೂ ಭೈರವಿಯೂ ಬಹಳವಾಗಿ ಆಲೋಚನೆ ಮಾಡಿದರು. ಈ ನಗರದ ರಾಜ್ಯದಲ್ಲಿ ಅಂತಹ ದುಃಖಭಾಜನಳಾದ ಅಭಾಗಿನಿಯು ಯಾರಿರಬಹುದೆಂದು ಸಂದೇಹಪಟ್ಟರು. ಭೈರವಿಯು ಅದನ್ನು ಸ್ವತಃ ಪರಿಶೋಧಿಸುತ್ತೇನೆಂದು ಸಂಕಲ್ಪಮಾಡಿದಳು. ನೇರವಾಗಿ ಬೃಂದೆಯನ್ನು ಜೊತೆಯಲ್ಲಿ ಕರೆದುಕೊಂಡು ಅರಮನೆಗೆ ಹೊರಟಳು.

ಭೈರವಿಯು ಈಗ ಮೊದಲಿನಂತಿಲ್ಲ. ಸ್ವಲ್ಪ ಅವಳ ರೂಪವು ಮಾಲಿನ್ಯವನ್ನು ಹೊಂದಿದೆ. ಅಂಗಾಂಗಗಳು ಕರ್ಕಶವಾಗಿದೆ ಕಪೋಲಗಳು ಬಾಡಿವೆ. ಅಧರವು ಬತ್ತಿಹೋಗಿದೆ. ಕಣ್ಣುಗಳು ರೋಷಾಯಿತ ನೇತ್ರಗಳಾಗಿ ಪರಿಣಮಿಸಿವೆ. ರಾತ್ರಿಯ ಹೊತ್ತು ಯಾರಾದರೂ ಭೈರವಿಯನ್ನು ಕಂಡರೆ ಯಾರೋ ಪುರುಷನೆಂದೇ ಭಾವಿಸುತ್ತಾರೆ. ಭೈರವಿಯು ಅಂತಃಪುರದ ಬಾಗಿಲಿಗೆ ಹೋಗಿ ಅಲ್ಲಿದ್ದ ದಾಸಿಯರನ್ನು ಕುರಿತು "ರಾಣಿಯವರ ಭೇಟಿ ಮಾಡಿಸು" ಎಂದು ಹೇಳಿದಳು. ಭೈರವಿಯನ್ನು ಆ ದಾಸಿಯು ವೇಷದಿಂದ ಗುರುತಿಸಿದಳು. ಆದಾಗ್ಯೂ ರಾಣಿಯ ಭೇಟಿಯನ್ನು ಮಾಡಿಸುವುದಕ್ಕಾಗುವುದಿಲ್ಲವೆಂದು ತಿರಸ್ಕರಿಸಿದಳು. ಭೈರವಿಗೂ ಆ ದಾಸಿಗೂ ಘರ್ಷಣೆಯಾಯಿತು. ಅಷ್ಟರಲ್ಲಿ ಒಳಗಿನಿಂದ ರಾಣಿಯವರ ಗಂಭೀರ ಧ್ವನಿಯಾಯಿತು. "ಭೈರವಿ ಒಳಗೆ ಬಾ". ಭೈರವಿಯು ಒಳಹೊಕ್ಕಳು.

"ಏಕೆ ಹುಚ್ಚಳಂತೆ ಅರಚುವಿ ? ನನ್ನಿಂದ ನಿನಗೇನಾಗಬೇಕು ? ಕುಳಿತುಕೋ. ಸಮಾಚಾರವೇನು ? ಹೇಳು."

"ಚೆಲುವಮ್ಮಣ್ಣಿಯವರೇ, ನನ್ನ ಸಮಾಚಾರದಿಂದ ನಿಮಗೇನು ಲಾಭ? ನಗರದ ರಾಜ್ಯವು ಅಲ್ಲಕಲ್ಲೋಲವಾಗಿದೆ. ಪಾಳೆಯಗಾರರೆಲ್ಲರೂ ನಗರದಮೇಲೆ ಯುದ್ಧಸನ್ನಾಹಗಳನ್ನು ಮಾಡುತ್ತಿದ್ದಾರೆ."

"ಭೈರವಿ, ಏಕೆ ಯುದ್ಧ? ಯಾರಮೇಲೆ ಯುದ್ಧಮಾಡುತ್ತಾರೆ?"

"ನಿಮ್ಮಮೇಲೆ ಯುದ್ಧಮಾಡುತ್ತಾರೆ. ನೀವೇನು ಮಾಡುವಿರಿ?"

"ನಾನೇನು ಮಾಡುವುದೂ ಇಲ್ಲ. ಈ ಅರಮನೆಯಲ್ಲಿ ದೊಡ್ಡ ಚಿತೆಯನ್ನು ನಿರ್ಮಿಸಿ, ನಾನೂ ಅದರಲ್ಲಿ ಹಾರಿ ಪ್ರಾಣಬಿಡುವೆನು."

"ಅದಕ್ಕಾಗಿಯೇ ನಾನು ಬಂದಿದ್ದೇನೆ. ನಾನು ನಿಮಗೆ ಬಾಲ್ಯದ ಗೆಳತಿ. ನೀವು ಪಟ್ಟದರಸಿಯಾದಾಗ ಸಂತೋಷದಿಂದ ಅಂತಃಪುರಕ್ಕೆ ಬಂದ ಸಖಿ. ಮಹಾರಾಜರು ಮರಣಹೊಂದಿದಾಗ ಎದುರಿಗಿದ್ದು ಆ ಘೋರದೃಶ್ಯವನ್ನು ನೋಡುತ್ತಿದ್ದ ಮಹಾಪಾಪಿ. ಅಂದು ಆ ಹಾಳು ವಿರೂಪಾಕ್ಷನು ಮರಣೋನ್ಮುಖನಾಗಿದ್ದಾಗ ಅವನ ವಿಶಾಲ ನೇತ್ರಗಳನ್ನು ಕುಕ್ಕುವಂತೆ ಎದುರಿಗೆ ನಿಂತಿದ್ದ ಪಿಶಾಚಿ. ಈಗ ತಮಗೆ ಆಸನ್ನ ಕಾಲವು ಸಮೀಪಿಸುತ್ತಿರುವಾಗ ಕಡೆಯ ದಿವಸಗಳಲ್ಲಿ ನಿಮ್ಮೊಡನೆ ಸಂತೋಷದಿಂದ ನಿಮ್ಮನ್ನು ಅಲಂಗಿಸಿಕೊಂಡು ಆ ಮಹಾ ಚಿತೆಯಲ್ಲಿ ಹಾರಲು ಬಂದಿರುವ ಸಹಜಾತೆ. ನಾನು ಒಳ್ಳೆಯ ಸಮಯಕ್ಕೆ ಬಂದಂತಾಯಿತು"

ರಾಣಿಯು ಭೈರವಿಯ ಕೈಹಿಡಿದು ಆಸನದಲ್ಲಿ ಕುಳ್ಳಿರಿಸಲು ಪ್ರಯತ್ನಿಸಿದಳು. ಭೈರವಿಯು "ಮುಟ್ಟಬೇಡ ರಾಣಿ! ನನ್ನನ್ನು ಮುಟ್ಟಬೇಡ! ನಾನು ಈಗ ಅಶುದ್ಧಳಾಗಿದ್ದೇನೆ" ಎಂದಳು.

"ಭೈರವಿ, ನಿನಗೇಕೆ ಅಶುದ್ಧಿ?"

ಭೈರವಿಯು ನಗುತ್ತಾ, "ರಾಣಿಯೇ ಕೇಳು. ಯುವರಾಜನು ವಾಸವಾಗಿದ್ದ ಮನೆಯಲ್ಲಿ ರಾತ್ರಿ ಮಲಗಿದ್ದಂತೆಯೇ ಸಪತ್ನೀಕನಾಗಿ ಸುಟ್ಟು ಬೂದಿಯಾಗಿ ಹೋಗಿದ್ದಾನೆ" ಎಂದಳು.

"ಹಾ! ಯುವರಾಜನೇ? ಸುಟ್ಟುಹೋದನೇ? ಭೈರವಿ, ಇದು

ನಿನ್ನ ಹುಚ್ಚೋ? ನಿಜವೋ?" ಎಂದು ಭೈರವಿಯ ಎರಡು ಕೈಗಳನ್ನೂ ಹಿಡಿದುಕೊಂಡಳು.

"ನಿಜ. ಯಥಾರ್ಥ. ಅಲ್ಲಿ ಹಳ್ಳಿಯ ಜನರು ಹಾಗೆ ಮಾತನಾಡಿ ಕೊಳ್ಳುತ್ತಿದ್ದರು. ಧಗಧಗನೆ ಸರ್ವತೋಮುಖವಾಗಿ ಉರಿಯುತ್ತಿದ್ದ ಮನೆಯನ್ನು ನಾನು ಕಣ್ಣಾರಕಂಡು ಬಂದಿರುವೆನು."

"ಭೈರವಿ, ಇದನ್ನು ನಾನು ನಂಬುವುದಿಲ್ಲ. ಯುವರಾಜನು ಸತ್ತಿಲ್ಲ. ಅವನು ತನ್ನ ವಾಸಸ್ಥಾನಕ್ಕೆ ತಾನೇ ಬೆಂಕಿಯನ್ನು ಹಚ್ಚಿಸಿ ಯಾರೋ ನಮ್ಮ ವಿದ್ವೇಷಿಗಳಾದ ಪಾಳೆಯಗಾರರ ಆಶ್ರಯವನ್ನು ಹೊಂದಿ ಅಜ್ಞಾತಸ್ಥಾನದಲ್ಲಿರಬಹುದು. ಈ ಮನೆಯನ್ನು ಉರಿಸಿರುವುದು ವಿಡಂಬನವಾಗಿರಬಹುದು"

"ರಾಣಿ! ನಿನ್ನ ಮಾತು ನಿಜವಾಗಲಿ. ಯುವರಾಜನು ಚಿರಂಜೀವಿಯಾಗಿರಲಿ. ನಾನು ಹೋಗಿಬರುವೆನು."

"ಭೈರವಿ, ಇಷ್ಟುಹೊತ್ತು ರಾತ್ರಿಯಲ್ಲಿ ಎಲ್ಲಿಗೆ ಹೋಗುವೆ? ಇಲ್ಲಿಯೇ ಇರು. ಆಹಾರಗಳನ್ನು ತರಿಸಿಕೊಡುವೆನು. ಫಲಹಾರ ಮಾಡು. ಈರಾತ್ರಿ ಇಲ್ಲಿರು."

"ರಾಣಿ! ನನಗೆ ಹಗಲೇನು ರಾತ್ರಿಯೇನು? ಈ ನಗರದ ರಾಜ್ಯ ದಲ್ಲಿ ಹಗಲುರಾತ್ರಿಗಳೆನ್ನದೇ ಅಲೆದಿರುವೆನು. ನಾನು ಈ ಅರಮನೆ ಯಲ್ಲಿರುವುದಿಲ್ಲ. ಯುವರಾಜನಂತೆ ನೀನೂ ಈ ಅರಮನೆಯನ್ನು ಯಜ್ಞೇಶ್ವರನಲ್ಲಿ ಪೂರ್ಣಾಹುತಿ ಮಾಡಿದರೆ ನಾನು ಗೂಡಿನಲ್ಲಿಟ್ಟ ಗುಬ್ಬಚ್ಚಿಯಂತೆ ಸುಟ್ಟುಹೋಗಬೇಕಾದೀತು. ನನ್ನ ಜೀವಿತದಲ್ಲಿ ಇನ್ನೂ ಘಟನಾವಳಿಗಳು ಬರೆದಿವೆ."

ರಾಣಿಯು ನಗುತ್ತಾ "ಭೈರವಿ, ಹೋಗು. ನಿನಗೆ ಹುಚ್ಚು ಹಿಡಿದಿದೆ ಹೋಗು. ನಿನ್ನನ್ನು ಕಂಡಾಗಲ್ಲೆಲ್ಲಾ ಪ್ರೇಮವು ಉಕ್ಕಿಬರು ತ್ತದೆ. ನೀನು ಮತ್ತೆ ಯಾವಾಗ ಬರುವಿ?" ಎಂದಳು.

"ರಾಣಿ! ಚೆಲುವೆ! ನೀನು ಪ್ರೇಮಮಯಿ. ನಿನ್ನ ಪ್ರೇಮವು ಉಕ್ಕಿಬರುತ್ತದೆ. ಅದರೆ ನಿನಗೆ ಇದೇ ನನ್ನಕಡೆಯ ದರ್ಶನ. ಇಲ್ಲ

ದಿದ್ದರೆ ಭಗವಂತನ ಇಚ್ಛೆಯಿದ್ದರೆ ನೀನು ಸಾಯುವಾಗ ಉರಿಯುವ ಯಜ್ಞೇಶ್ವರನಲ್ಲಿ ಆಹುತಿಯಾಗುವಾಗ ಬಂದು ನಿನ್ನ ದರ್ಶನಮಾಡುವೆನು. ನಿನ್ನೊಡನೆ ಲೋಕಾಂತರಕ್ಕೆ ಆನಂದದಿಂದ ತೆರಳುವೆನು" ಎಂದು ಹೇಳಿ ಹೊರಟುಹೋದಳು.

ರಾತ್ರಿ ಹನ್ನೆರಡು ಘಂಟೆಯು ಹೊತ್ತಾಗಿತ್ತು. ಭೈರವಿಯು ಅಂತಃಪುರವನ್ನು ಬಿಟ್ಟು ಹೊರಡುತ್ತಲೇ ಬೃಂದೆಯು ಹಿಂದೆ ಹಿಂದೆ ಹೋದಳು. ಇಬ್ಬರೂ ಮಲ್ಲಿಕಾರ್ಜುನಕ್ಷೇತ್ರಕ್ಕೆ ಹೋದರು. ಅವರು ಮಲ್ಲಿಕಾರ್ಜುನಕ್ಷೇತ್ರವನ್ನು ಸಮೀಪಿಸುತ್ತಿರುವ ಹೊತ್ತಿಗೆ ಒಬ್ಬ ಯೋಧಾಗ್ರೇಸರನು ಅವರ ಹಿಂದೆ ಹಿಂದೆ ಬಂದನು. ಬೃಂದೆಯು ಸ್ವಲ್ಪ ಹೆದರಿ ಭೈರವಿಯ ಕೈಚಿವುಟ "ಭೈರವಿ, ಯಾರೋ ಶಸ್ತ್ರಪಾಣಿಯಾದ ಯೋಧನು ನಮ್ಮನ್ನನುಸರಿಸಿ ಬರುತ್ತಿದ್ದಾನೆ" ಎಂದು ಹೇಳಿದಳು. ಭೈರವಿಯು "ಬೃಂದೇ, ಹೆಂಗಸಾಗಿ ಹುಟ್ಟಿ ಯೋಧನಿಗೆ ಭಯಪಡುವೆಯಾ? ನನ್ನೊಡನೆ ಬರುವಾಗ ಭಯವಿಲ್ಲ ಬಾ" ಎಂದು ಹೇಳಿ ಬೃಂದೆಯನ್ನು ಕರೆದುಕೊಂಡು ಒಂದು ಕಲ್ಲುಮಂಟಪಕ್ಕೆ ಹೋಗಿ ಕುಳಿತಳು. ಬೆಳದಿಂಗಳಿನ ಬೆಳಕು ಹಾಲು ಚೆಲ್ಲಿದಂತೆ ಆ ವಿಶಾಲವಾದ ವನಪ್ರದೇಶದಲ್ಲಿ ಚೆಲ್ಲುತ್ತಿತ್ತು. ಆ ರಮಣಿಯರಿಬ್ಬರೂ ಕುಳಿತುಕೊಳ್ಳುತ್ತಲೇ ಹಿಂಬಾಲಿಸಿ ಬರುತ್ತಿದ್ದ ಯೋಧನು ಸಮೀಪಗತನಾದನು. ಬೃಂದೆಯು ಭಯದಿಂದ "ಭೈರವಿ, ನಾವಿಬ್ಬರೂ ಸಿಕ್ಕಿಬಿದ್ದೆವು ಆ ಯೋಧನು ನಮ್ಮನ್ನು ಹಿಡಿದುಕೊಂಡು ಹೋಗಲು ಅನುಸರಿಸಿ ಬರುತ್ತಿದ್ದಾನೆ. ಸಮೀಪಗತನಾಗುತ್ತಿದ್ದಾನೆ" ಎಂದಳು. ಅಷ್ಟರಲ್ಲಿ ಯೋಧಾಗ್ರೇಸರನು ಮಂಟಪದ ಮೆಟ್ಟಲುಗಳನ್ನು ಹತ್ತಿದನು. ಭೈರವಿಯು ನಗುತ್ತಾ "ಬೃಂದೆ, ನಾನು ಈಗ ನಿನ್ನಂತೆ ಬ್ರಹ್ಮಚಾರಿಣಿಯಲ್ಲ. ಗಾಂಧರ್ವವಿವಾಹದಿಂದ ವಿವಾಹಿತಳಾಗಿರುವ ಕುಟುಂಬಿನಿ. ಇವನು ನನ್ನ ಪ್ರಾಣಾಧಿಕ" ಎಂದು ಹೇಳಿ "ನಾಯಕರೇ, ಬನ್ನಿರಿ, ಕುಳಿತುಕೊಳ್ಳಿರಿ" ಎಂದು ಪಕ್ಕದಲ್ಲಿ ಕುಳ್ಳಿರಿಸಿಕೊಂಡಳು.

"ಹೇಳು, ಗೋಪಾಲದಾಸ, ಏನು ಸಮಾಚಾರ? ಖಚಿತವಾಗಿ ಹೇಳು."

"ಭೈರವಿ, ಆ ಕನ್ನಿಕೆಯು ಯುವರಾಜರ ಧರ್ಮಪತ್ನಿ. ಆವಳ ಹೆಸರು ಮಲ್ಲಿಗೆ. ಮತ್ತಾವ ಸಮಾಚಾರವೂ ನನಗೆ ತಿಳಿಯಲಿಲ್ಲ. ಆವಳು ಯಾರೊಡನೆಯೂ ಮಾತನಾಡುವುದಿಲ್ಲ. ಅನ್ನಾಹಾರಗಳನ್ನು ಸ್ವೀಕರಸುವುದಿಲ್ಲ. ಸದಾ ಅಳುತ್ತಾಳೆ."

"ಅರಮನೆಯಲ್ಲಿ ಬಂಧನಾಗಾರದ ಕಾವಲುಗಾರರಿಗೆಲ್ಲಾ ನೀನು ಯಜಮಾನ. ಜೋಕೆ! ಸೇನಾಧಿಪತಿಯು ನಿನ್ನಲ್ಲಿ ಬಹಳ ನಂಬಿಕೆ ಯಿಂದ ಕಬ್ಬಾಳದುರ್ಗದಿಂದ ಕರೆಸಿ ಇಲ್ಲಿ ನೇಮಿಸಿರುವನು. ಆ ನಂಬಿಕೆಯನ್ನು ನೀನು ಉಳಿಸಿಕೊಳ್ಳಬೇಕು. ನಾನು ಈ ಪತ್ರವನ್ನು ಕೊಡುತ್ತೇನೆ. ಇದನ್ನು ಕೊಂಡುಹೋಗಿ ಆ ಬಾಲಿಕೆಗೆ ಕೊಡು. ಎಲ್ಲಾದರೂ ಸಿಕ್ಕಿಬಿದ್ದೀಯೆ? ಒಂದು ಪಕ್ಷ ಈ ಪತ್ರವು ಯಾರಿ ಗಾದರೂ ಸಿಕ್ಕಿಬೀಳುವ ಸಂಭವ ಬಂದರೆ ಇದನ್ನು ಬಾಯಿಯಲ್ಲಿ ಅಗಿದು ನುಂಗಿಬಿಡು. ಅವಳಿಗೆ ಮಾತುಗಳಲ್ಲೇ ಸಮಾಚಾರವನ್ನು ತಿಳಿಸು." 'ಯುವರಾಜನು ಬದುಕಿದ್ದಾನೆ. ಅವನಿಗೆ ಈ ರಾಜ್ಯದ ಮಹಾ ರಾಜಾಧಿಪತ್ಯವು ಕ್ಷಿಪ್ರದಲ್ಲಿಯೇ ಬರುತ್ತದೆ'. ಅವಳನ್ನು ಅನ್ನಾಹಾರಾದಿ ಗಳನ್ನು ಸ್ವೀಕರಿಸುವಂತೆ ಹೇಳು. ಮೂರೇ ಮಾತು. ತಿಳಿಯಿತೇ? ಹೋಗು. ಇವಳು ನನ್ನ ಪ್ರಾಣಸಖಿ. ಇವಳ ಹೆಸರು ಬೃಂದೆ. ನನಗಿಂತಲೂ ರೂಪವತಿ. ಹೂವು ಮಾರುವ ಹೂವಾಡಗಿತ್ತಿ. ಆ ಹೂವುಗಳ ವಾಸನೆಯಿಂದ ಇವಳ ಶರೀರವೆಲ್ಲವೂ ಸುಗಂಧಮಯವಾಗಿದೆ. ನಾವಿಬ್ಬರೂ ಮಲ್ಲಿಕಾರ್ಜುನ ದೇವರ ಮುಂದೆ ಪ್ರಮಾಣ ಮಾಡಿದ್ದೇವೆ. ನಮಗಿಬ್ಬರಿಗೂ ಒಬ್ಬನೇ ಪತಿಯಾಗಬೇಕು. ತಿಳಿಯಿತೇ? ಇವಳು ಅಪರಿಚಿತಳೆಂದು ಭಾವಿಸಬೇಡ. ಮಲ್ಲಿಕಾರ್ಜುನಕ್ಷೇತ್ರಕ್ಕೆ ಬಂದರೆ ಇವಳ ದರ್ಶನವಾಗುತ್ತದೆ. ಏನಾದರೂ ವಿಶೇಷ ಸಂಗತಿಗಳಿದ್ದರೆ ಇವಳಿಗೆ ಬಂದು ತಿಳಿಸು. ಏನಾದರೂ ವಿಪತ್ಕಾಲವು ಪ್ರಾಪ್ತವಾಗಿ ಆ ಕನ್ಯೆಗೆ ಪ್ರಾಣಾಪಾಯವು ಸಂಭವಿಸುವುದಾದರೆ ನೀನು ಕಾಪಾಡಬೇಕು. ಅದಕ್ಕೆ ನಿನ್ನ ಪ್ರಾಣವನ್ನಾದರೂ ಪಣವಾಗಿ ಕೊಡಬೇಕು. ಪುರಸ್ಕಾರ ಈ ಬೃಂದೇ. ತಿಳಿಯಿತೇ ಪ್ರಾಣನಾಥ?"

"ಭೈರವಿ, ಅಕ್ಷರಶಃ ನಿನ್ನ ಆಜ್ಞೆಯನ್ನು ಪಾಲಿಸುವೆನು. ಈ ಬೃಂದೆ ನನಗೆ ಸಹೋದರಿಯ ಸಮಾನ. ನಾನು ಎಲ್ಲ ಹೆಂಗಸರನ್ನೂ ಬಯಸುವ ಕಾಮುಕನೆಂದು ತಿಳಿಯಬೇಡ. ನೀನು ನನ್ನ ಮನಸ್ಸಾರ ಒಲಿದಿದ್ದೀಯೆಂದು ನಂಬಿದ್ದೇನೆ. ನಿನ್ನ ಹೊರತು ಬೇರೊಬ್ಬ ರಮಣಿಯ ಕರಸ್ಪರ್ಶಮಾಡುವ ಪಾಷಂಡಿಯು ನಾನಲ್ಲ. ಭೈರವಿ, ನಿನ್ನ ಮಾತುಗಳನ್ನೆಲ್ಲಾ ನಡೆಯಿಸುವೆನು. ನೀನು ಈ ವೇಷವನ್ನು ಯಾವಾಗ ಬದಲಾಯಿಸುವಿ? ಈ ವನಗಳಲ್ಲಿ, ಕ್ಷೇತ್ರಗಳಲ್ಲಿ, ಸ್ಮಶಾನದಲ್ಲಿ ಅಲೆಯುವುದನ್ನು ಬಿಟ್ಟು ಯಾವಾಗ ಗೃಹಣಿಯಾಗುವೆ? ಹೇಳು."

"ಕ್ಷಿಪ್ರದಲ್ಲಿಯೇ ಆಗುವುದು ಗೋಪಾಲದಾಸ. ನಾನು ಸ್ವರ್ಣಾಭರಣಭೂಷಿತೆಯಾದ ಸುಂದರಿಯಾದರೂ, ವಿಭೂತಿಕಾಷಾಯಾಲಂಕೃತಳಾದ ಭೈರಾಗಿಣಿಯಾದರೂ ನಿನ್ನ ಪತ್ನಿ. ನಾನು ನಿನ್ನವಳು. ಹೋಗು. ಹೊರಟುಹೋಗು" ಎಂದು ಅವನನ್ನು ಬೆನ್ನು ತಟ್ಟಿ ಕಳುಹಿಸಿದಳು. ಅವನು ಸಂತೋಷದಿಂದ ರಾಜಮಂದಿರದ ಕಡೆಗೆ ಹೊರಟು ಹೋದನು.

ಮಾರನೆಯದಿನ ಮಧ್ಯಾನ್ಹದ ಹೊತ್ತಿಗೆ ಸರಿಯಾಗಿ ಮಲ್ಲಿಗೆಮ್ಮನಿಗೆ ಭೋಜನಕ್ಕೆ ತಂದುಕೊಡುವಾಗ ಗೋಪಾಲದಾಸನು ಬಹಳ ಚಾಕಚಕ್ಯತೆಯಿಂದ ಭೈರವಿಯು ಮಲ್ಲಿಗಮ್ಮನಿಗೆ ಬರೆದಿದ್ದ ಪತ್ರವನ್ನು ಅವಳಿಗೆ ತಲುಪಿಸಿದನು. ಮಲ್ಲಿಗಮ್ಮನು ಆ ಕಾಗದವನ್ನು ಓದಿಕೊಂಡು "ಭೈರವಿಯು ಈ ಕಾಗದವನ್ನು ಬರೆದಿದ್ದಾಳೆ. ಅವಳಿಗೆ ಯುವರಾಜನ ಸಮಾಚಾರವೇ ತಿಳಿಯಲಿಲ್ಲ" ಎಂದುಕೊಂಡಳು. ಮಲ್ಲಿಗಮ್ಮನಿಗೆ ಮೂರು ನಾಲ್ಕು ದಿವಸಗಳಿಂದ ಅತ್ತು ಅತ್ತು ದುಃಖವು ಒಂದು ವಿಧವಾಗಿ ಬತ್ತಿಹೋಗಿ ಪ್ರತೀಕಾರ ಮಾಡಬೇಕೆಂಬ ಕ್ರೋಧವು ಉರಿಯಲಾರಂಭಿಸಿತು. ಆ ಸಮಯಕ್ಕೆ ಸರಿಯಾಗಿ ಭೈರವಿಯ ಕಾಗದವೂ ಬಂತು. ಗೋಪಾಲದಾಸನು ಸಹಾಯಕನೆಂದು ಅವಳಿಗೆ ಅರ್ಥವಾಯಿತು. ಅವಳು ಕೈಯ್ಯಲ್ಲಿದ್ದ ಬಳೆಯನ್ನು ನೆಲಕ್ಕೆ ಚಚ್ಚಿ ಬಡಿದು ಹಾಕಿದಳು. ಅನಂತರ ಆ ಬಳೆಯ ಚೂರನ್ನು ತೆಗೆದು ಮುಂಗೈ

ಮೇಲೆ ಶೀಳಿ ಘಾಯ ಮಾಡಿದಳು. ಆದರಿಂದ ರಕ್ತವು ಚಿಮ್ಮಿ ಬರುತ್ತಿದ್ದಿತು. ಅದೇ ಬಳೆಯ ಚೂರಿನಿಂದ ರಕ್ತದಲ್ಲಿ ಅದ್ದಿಕೊಂಡು ಆ ಪತ್ರದ ಹಿಂದುಗಡೆಯೇ ಉತ್ತರವನ್ನು ಬರೆದಳು. ಯುವರಾಜರು ನನ್ನ ಕಣ್ಣೆದುರಿನಲ್ಲಿಯೇ ವೀರಸ್ವರ್ಗವನ್ನೇರಿದರು. ರಾಣಿಯೇ ನನ್ನ ಪತಿಯನ್ನು ಕೊಲ್ಲಿಸಿದಳು. ನಾವು ಪ್ರತೀಕಾರವನ್ನು ಮಾಡಲೇಬೇಕು.

ಆಪತ್ತಿನಲ್ಲಿರುವ ನಿನ್ನ ಸೋದರಿ

**ಮಲ್ಲಿಕಾ**

ಎಂದು ಬರೆದಳು. ಆ ಕಾಗದವನ್ನು ಉಪಾಯಾಂತರದಿಂದ ಗೋಪಾಲ ದಾಸನ ಕೈಗೆ ಸೇರಿಸಿದಳು.

ಸಂಧ್ಯಾಕಾಲವಾಗುತ್ತಲೇ ಯಥಾಪ್ರಕಾರ ಗೋಪಾಲದಾಸನು ಮಲ್ಲಿಕಾರ್ಜುನಕ್ಷೇತ್ರದ ಕಡೆಗೆ ಹೊರಟನು. ಇಂದು ಅವನು ಯೋಧರ ಉಡುಪಿನಲ್ಲಿರಲಿಲ್ಲ. ಭೈರವಿಯು ಹೇಳಿಕೊಟ್ಟದ್ದಂತೆ ಜಂಗಮನ ವೇಷವನ್ನು ಧರಿಸಿದ್ದನು. ಆ ಕಾಲದಲ್ಲಿ ಆ ವೇಷಕ್ಕೆ ಬಹಳ ಪೂಜ್ಯತೆ ಯಿತ್ತು. ಎಂತಹ ಕಾರ್ಯಗಳನ್ನಾದರೂ ಆ ವೇಷದಿಂದ ಸಾಧಿಸಬಹು ದಾಗಿತ್ತು. ಯಾರೂ ಜಂಗಮರಮೇಲೆ ಕೈಮಾಡುತ್ತಿರಲಿಲ್ಲ. ಗೋಪಾಲ ದಾಸನು ಭೈರವಿಯನ್ನು ಹುಡುಕಿಕೊಂಡು ಹೋಗಿ ಮಲ್ಲಿಕಾರ್ಜುನ ಕ್ಷೇತ್ರದಲ್ಲೆಲ್ಲಾ ಅಲೆದಲೆದು ದಣಿದನು. ಎಲ್ಲಿಯೂ ಭೈರವಿಯು ಅವನಿಗೆ ಸಿಕ್ಕಲಿಲ್ಲ. ಅವನು ವಿಷಣ್ಣನಾಗಿ ಹಿಂದಿನ ರಾತ್ರಿ ಭೈರವಿಯು ಹೋಗಿ ವಿಶ್ರಮಿಸಿಕೊಂಡ ಕಲ್ಲುಮಂಟಪದೆಡೆಗೆ ಹೋಗಿ ಅಲ್ಲೆಲ್ಲಾ ಹುಡುಕಿ ನೋಡಿದನು. ಭೈರವಿಯು ಇರಲಿಲ್ಲ. ಆ ವೇಷಧಾರಿಯಾದ ಜಂಗಮನಿಗೆ ಬೇಸರವಾಯಿತು. ಕೋಪಬಂದಿತು. ಹೊಟ್ಟೆಯಲ್ಲಿ ಹಸಿ ವಾಗಿ ತಾಳಹಾಕುತ್ತಿತ್ತು. ಹಾಗೆಯೇ ಸೊರಗಿ ಮಂಟಪದಲ್ಲಿ ಮಲಗಿ ನಿದ್ರಿಸಿದನು. ಭೈರವಿಯು ಅರ್ಧರಾತ್ರಿಯ ಹೊತ್ತಿಗೆ ಅಲ್ಲಿಗೆ ಬಂದಳು. ತಾನು ಮಲಗುವ ಸ್ಥಳದಲ್ಲಿ ಬೇರೊಬ್ಬ ಜಂಗಮನು ಮಲಗಿರುವುದನ್ನು ಕಂಡು ಭೈರವಿಗೆ ಸ್ವಲ್ಪ ಕೋಪಬಂದಿತು. ಸಮೀಪಕ್ಕೆ ಹೋಗಿ ತ್ರಿಶೂಲದಿಂದ ಸ್ವಲ್ಪ ತಿವಿದು, ಜಂಗಮನನ್ನು ಎಬ್ಬಿಸಿದಳು. ಅವನು

ಗೋಪಾಲದಾಸನಾಗಿದ್ದನು. ಅವಳಿಗೆ ಆಶ್ಚರ್ಯವಾಯಿತು. ಭೈರವಿಯು, "ಸರದಾರರೇ, ಇಂದು ನೀವು ಬರುವಿರೆಂದು ನಾನು ಕನಸುಮನಸಿನಲ್ಲಿಯೂ ಭಾವಿಸಿರಲಿಲ್ಲ. ನೀವು ಹೀಗೆ ದಿನ ದಿನವೂ ನನ್ನನ್ನು ಹುಡುಕಿಕೊಂಡು ಅಲೆಯಬೇಡಿರಿ. ಸಂದೇಹದಿಂದ ಯಾರಾದರೂ ರಾಜಕರ್ಮಚಾರಿಗಳು ನಿಮ್ಮ ಚಲನವಲನಗಳನ್ನು ಕಾದು ನೋಡಿದರೆ ಸಿಕ್ಕಿಬೀಳುತ್ತೀರಿ, ಜೋಕೆ" ಎಂದು ಹೇಳಿದಳು.

"ನಾನೇನುಮಾಡಲಿ? ನಿನ್ನ ಚಾಕರಿಯು ನನಗೆ ಸಾಕಾಗಿ ಹೋಗಿದೆ. ನೋಡು. ತೆಗೆದುಕೋ. ಆ ಹುಡುಗಿಯು ನಿನಗೆ ಪುನಃ ಕಾಗದವನ್ನು ಬರೆದು ಕಳುಹಿಸಿದ್ದಾಳೆ. ಪುನಃ ನೀನು ಕಾಗದವನ್ನು ಕೊಟ್ಟರೆ ನಾನು ತೆಗೆದುಕೊಂಡು ಹೋಗುವುದಿಲ್ಲ. ಇಂಥಾ ಕೆಲಸಕ್ಕೆ ನಾನು ಒಪ್ಪಿಕೊಂಡಿರಲಿಲ್ಲ" ಎಂದು ಧೂರ್ತನಂತೆ ಭೈರವಿಗೆ ಹೇಳಿದನು.

ಭೈರವಿಯು ಆತುರದಿಂದ ಆ ಪತ್ರವನ್ನು ಕೈಗೆ ತೆಗೆದುಕೊಂಡು "ವೀರಾಗ್ರಣಿಗಳೇ, ಇನ್ನು ನಾನು ಕಾಗದವನ್ನು ಕೊಡುವುದೂ ಇಲ್ಲ. ನೀವು ಉತ್ತರವನ್ನು ತರಲೂ ಬೇಡಿರಿ. ನಾವಿಬ್ಬರೂ ವಿವಾಹವಾಗುವವರೆಗೆ ನಾನು ಹೇಳಿದ ಕಾರ್ಯಗಳನ್ನೆಲ್ಲಾ ನೀವು ಮಾಡಲೇಬೇಕು" ಎಂದಳು.

"ಭೈರವಿ, ನಿನ್ನ ಮಾತು ನನಗೆ ಚೆನ್ನಾಗಿ ಕಾಣುವುದಿಲ್ಲ. ವಿವಾಹವು ಮೊದಲು ಆಗಿ ಹೋಗಲಿ. ಆಮೇಲೆ ನೀನು ಹೇಳಿದ ಹಾಗೆ ನಾನು ಕೇಳುತ್ತೇನೆ. ತಲೆಯನ್ನು ಕತ್ತರಿಸಿ ಕೊಡೆಂದರೆ ನಿನ್ನ ಪಾದಾರವಿಂದದಲ್ಲಿ ಒಪ್ಪಿಸುತ್ತೇನೆ. ಎಷ್ಟು ದಿವಸಗಳು ಹೀಗೆ ಕಾದಿರಲಿ. ಇದೆಲ್ಲಾ ನನಗೆ ಸರಿಬೀಳುವುದಿಲ್ಲ."

"ಪ್ರಾಣೇಶ್ವರ, ವಿವಾಹಕ್ಕೆ ಸಿದ್ಧಪಡಿಸುತ್ತಿದ್ದೇನೆ. ವಿವಾಹವೆಂದರೆ ಸಾಮಾನ್ಯವೆಂದು ಬಗೆದೆಯಾ? ಒಂದು ಮನೆ ಬೇಕು. ಮನೆಯೆಂದರೆ ಒಂದು ಮಹಲೇ ಬೇಕು. ಒಂದು ಚಾಕರಿಯಿರಬೇಕು. ಚಾಕರಿಯೆಂದರೆ ಸೈನ್ಯಾಧಿಪತ್ಯವೇ ಆಗಬೇಕು. ಐಶ್ವರ್ಯವು ಬೇಕು.

ಐಶ್ವರ್ಯವೆಂದರೆ ನೂರಾರು ಜನರನ್ನು ಕಾಪಾಡುವಷ್ಟು ಧನಕನಕವಿರ ಬೇಕು. ಒಳ್ಳೆಯ ಮಾತು. ಎಲ್ಲಿಯೋ ಭಿಕಾರಿಗಳಂತೆ ಗಂಡಹೆಂಡ ರೆಂದುಕೊಂಡು ಮುರುಕು ಗುಡಿಸಿಲಿನಲ್ಲಿದ್ದು ಕೊತ್ವಾಲನ ಹೆಂಡತಿ ಯೆನಿಸಿಕೊಂಡು ಮಹಾರಾಣಿಯ ಸರಿಸಮಕ್ಕೆ ಹೋಗಿ ಕುಳಿತರೆ ನನ್ನನ್ನು ಎಡಗಾಲಿನಿಂದ ಒದ್ದು ಓಡಿಸಿಯಾರು. ಗಂಡಸರಿಗೆ ಬುದ್ಧಿ ಯಿಲ್ಲ. ಹೆಣ್ಣಿನ ಮುಖವನ್ನು ನೋಡಿದರೆ ಮದುವೆ, ಮದುವೆ?"

ಗೋಪಾಲದಾಸನು ಆನಂದಸಾಗರದಲ್ಲಿ ಮುಳುಗಿ ಹಲ್ಲು ಕಿರಿಯಲಾರಂಭಿಸಿದನು.

"ಒಳ್ಳೆಯದು, ಸ್ವಲ್ಪ ಕುಳಿತುಕೋ. ಈ ಕಾಗದದಲ್ಲಿ ಏನಿದೆಯೋ ನೋಡುತ್ತೇನೆ" ಎಂದು ಹೇಳಿ ಮಂಟಪದಲ್ಲಿದ್ದ ಬೆಂಕಿಯ ಸಣ್ಣ ಉರಿಯನ್ನು ಊದಿ ದೊಡ್ಡದಾಗಿಮಾಡಿ ಆ ಬೆಳಕಿನಲ್ಲಿ ಆ ಪತ್ರವನ್ನು ಓದಿಕೊಂಡಳು. ಭೈರವಿಯ ಎದೆಯು ಒಡೆದು ಹೋಯಿತು. ಕಟಕಟನೆ ಹಲ್ಲುಕಡಿದಳು. ಆ ಕಾಗದವನ್ನು ಆ ಬೆಂಕಿಯಲ್ಲಿ ಹಾಕಿ ಸುಟ್ಟಳು. "ಪ್ರತೀಕಾರ, ಪ್ರತೀಕಾರ, ದೇವರಿಲ್ಲ, ಧರ್ಮವಿಲ್ಲ. ಇನ್ನು ಒಂದು ಕ್ಷಣಹೊತ್ತು ನಾನು ಸಹಿಸಲಾರೆ. ಈ ಕ್ಷಣದಿಂದಲೇ ಪ್ರತೀಕಾರ ಮಾಡುತ್ತೇನೆ. ಆ ಪ್ರತೀಕಾರ ಯಜ್ಞದಲ್ಲಿ ರಾಣಿ, ಅವಳ ಪ್ರೇಮೋ ಪಾಸಕರು, ಎಲ್ಲರೂ ಪಶುಗಳಂತೆ ಬಂದು ಬೀಳಲಿ. ಈ ನಗರದ ಅಭಿಮಾನವು ನನಗೇಕೆ? ನಗರವು ಸ್ಮಶಾನವಾಗಿ ಹೋಗಲಿ! ಬಿದನೂರು ಬೆಂಕಿಯಲ್ಲಿ ಉರಿದು ಭಸ್ಮರಾಶಿಯಾಗಲಿ! ನನ್ನ ಪ್ರತೀಕಾರವನ್ನು ತೋರಿಸುತ್ತೇನೆ" ಎಂದಳು.

ಗೋಪಾಲದಾಸನು ಆ ಭೈರವಿಯ ಕೋಪ, ದುಃಖ, ಉದ್ವೇಗ ಗಳನ್ನು ನೋಡಿ ಭಯಚಕಿತನಾದನು. ಭೈರವಿಯು ಪುನಃ ಗೋಪಾಲದಾಸನ ಸಮೀಪಕ್ಕೆ ಬಂದು "ಗೋಪಾಲದಾಸ, ನೀನು ಹೋಗು. ಇನ್ನು ಪುನಃ ನನ್ನನ್ನು ಹುಡುಕಿಕೊಂಡು ಅಲೆಯಬೇಡ. ನಾನೇ ಬಂದು ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುತ್ತೇನೆ. ಸಮಯವರಿತು ಆ ಹುಡುಗಿಗೆ ನಾನು ಶತೃಗಳಿಗೆ ಪ್ರತೀಕಾರ

ಮಾಡುವೆನೆಂದು ಹೇಳು. ಹೋಗು. ಇಲ್ಲಿಂದ ಹೊರಡು. ನಾನು ಈ ರಾತ್ರಿ ಇಲ್ಲಿರುವುದಿಲ್ಲ" ಎಂದು ಹೇಳಿ ಹುಚ್ಚಳಂತೆ ಮಲ್ಲಿಕಾರ್ಜುನ ಕ್ಷೇತ್ರದ ಕಡೆಗೆ ಹೊರಟು ಹೋದಳು.

---

## ೨೨
## ಭೈರವಿಯ ರಾಜಕಾರಣ

ಉಷಃಕಾಲದ ಹೊತ್ತಿಗೆ ಮಲ್ಲಿಕಾರ್ಜುನಕ್ಷೇತ್ರವು ಭಕ್ತವೃಂದ ದಿಂದ ನಿಬಿಡವಾಗಿಹೋಯಿತು. ಎಲ್ಲೆಲ್ಲಿಯೂ ಭಕ್ತರ ಸಡಗರ. ಎಲ್ಲರೂ ದೇವರಿಗೆ ಪೂಜೆಯನ್ನು ಸಲ್ಲಿಸುವರು. ಭಜನೆಮಾಡುವವರು. ಆ ಮಧ್ಯ ದಲ್ಲಿ ಭೈರವಿಯು ಸುಳಿದಾಡಲಾರಂಭಿಸಿದಳು. ಅವಳು ಯಾರನ್ನೋ ಹುಡುಕುತ್ತಿದ್ದಾಳೆಂದು ಸುಲಭವಾಗಿ ತಿಳಿಯಬಹುದಾಗಿದ್ದಿತು. ಅವನು ಅವಳ ಕಣ್ಣಿಗೆ ಬೀಳಲಿಲ್ಲ. ಸಂಧ್ಯಾಕಾಲದವರೆಗೂ ಭೈರವಿಯು ಎಲ್ಲೆಲ್ಲಿಯೋ ಅಲೆದಳು. ಅವಳು ಅಂದು ಊಟಮಾಡಿರಲಿಲ್ಲ. ಅವಳು ಯಾವ ಮನುಷ್ಯನನ್ನು ಹುಡುಕುತ್ತಿದ್ದಳೋ ಅವನು ಎಲ್ಲಿಯೂ ಅವಳ ಕಣ್ಣಿಗೆ ಗೋಚರವಾಗಲೇ ಇಲ್ಲ. ಸಂಧ್ಯಾಕಾಲದಲ್ಲಿ ಯೋಗೀಶ್ವರನಂತೆ ವೇಷವನ್ನು ಧರಿಸಿ ಯೋಗದಂಡವನ್ನು ಇಟ್ಟು ಕೊಂಡು ಮುಂದುಗಡೆ ಯಜ್ಞೇಶ್ವರನನ್ನು ಪ್ರಜ್ವಲಿಸಿ ಧ್ಯಾನಾಸಕ್ತ ನಾಗಿದ್ದ ಒಬ್ಬ ತರುಣನನ್ನು ಕಂಡಳು. ಬಹಳಹೊತ್ತು ಸ್ವಲ್ಪ ದೂರ ದಲ್ಲಿ ಕುಳಿತು ಅವನ ಕಾರ್ಯಕಲಾಪಗಳನ್ನು ನಿರೀಕ್ಷಿಸುತ್ತಿದ್ದಳು. ಆ ಯುವಕನು ಧ್ಯಾನವನ್ನು ಪೂರೈಸಿ ಆ ಸ್ಥಳದಿಂದ ಎದ್ದು ಹೊರಡುವ ಹೊತ್ತಿಗೆ ಭೈರವಿಯು ಎದುರಾಗಿ ಹೋಗಿ ಅವನಿಗೆ ನಮಸ್ಕಾರ ಮಾಡಿದಳು. ಯೋಗೀಶ್ವರನು "ಭೈರವಿ, ಇದೇನು ಆಶ್ಚರ್ಯ? ಇಂದು ನೀನಾಗಿ ನನಗೆ ದರ್ಶನವಿತ್ತಿರುವಿ?" ಎಂದು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು.

"ಶಿವಾಚಾರ್ಯ, ಇಂದು ನನ್ನ ವ್ರತವೂ ಪೂರೈಸಿದೆ. ನಿನ್ನ ತಪಸ್ಸು ಸಿದ್ಧಿಯಾಗುವ ಕಾಲವೂ ಬಂದಿದೆ. ಅದಕ್ಕಾಗಿ ಮಲ್ಲಿಕಾರ್ಜುನನು ನನ್ನನ್ನು ಇಲ್ಲಿಗೆ ಕರೆತಂದಿದ್ದಾನೆ." ಎಂದಳು.

"ಏನು ಸಮಾಚಾರ? ಇಂದಿನ ವಿಶೇಷವೇನು?"

"ಏನೂ ಇಲ್ಲ. ನೀನು ನನ್ನ ಜೊತೆಯಲ್ಲಿ ಹೊರಡು. ನಾನು ಎಲ್ಲವನ್ನೂ ಹೇಳುತ್ತೇನೆ." ಎಂದು ಹೇಳಿ ಅವನನ್ನು ಕರೆದುಕೊಂಡು ವನಾಂತರಾಳಕ್ಕೆ ಹೋದಳು. ಅಲ್ಲಿ ಅವರಿಬ್ಬರೂ ಬಹಳಹೊತ್ತು ಮಾತನಾಡಿದರು.

ಆ ಯೋಗೀಶ್ವರನನ್ನು ಕರೆದುಕೊಂಡು ಆ ರಾತ್ರಿಯೇ ಭವಾನೀ ರಾಣಿಯ ಪರ್ಣಶಾಲೆಗೆ ಹೋಗಿ ಸೇರಿದಳು. ಅಲ್ಲಿ ಭವಾನೀರಾಣಿಗೆ ಅಭಿವಂದಿಸಿ "ರಾಣಿಯವರೇ, ಈ ಯೋಗಿಯು ಬಾಲ್ಯದಿಂದಲೂ ನನ್ನ ಸ್ನೇಹಿತ. ಯಾವುದೋ ವಿಧಿವಿಲಾಸದಿಂದ ಇವನು ಯೋಗೀಶ್ವರನಾಗಿ ಅಲೆಯುತ್ತಿದ್ದನು. ನಾನು ಭೈರವಿಯಾಗಿರುವುದಂತೂ ತಮಗೆ ಗೊತ್ತೇ ಇದೆ. ನಾವಿಬ್ಬರೂ ಸತಿಪತಿಗಳಾಗಬೇಕೆಂದು ಮಲ್ಲಿಕಾರ್ಜುನನ ಸಾಕ್ಷಿಯಾಗಿ ಒಬ್ಬರಿಗೊಬ್ಬರು ಪ್ರಮಾಣಮಾಡಿಕೊಟ್ಟದ್ದೇವೆ. ಇಂದಿನಿಂದ ನಾನೂ ಇವನೂ, ಈ ಜೋಗಿಗಳ ವೃತ್ತಿಯನ್ನು ತೊರೆದು ಗೃಹಸ್ಥ ಧರ್ಮವನ್ನು ಸ್ವೀಕರಿಸುತ್ತೇವೆ. ಇದಕ್ಕೆ ತಮ್ಮ ಆಶೀರ್ವಾದವು ಬೇಕು. ನಾವಿಬ್ಬರೂ ಇಂದೇ ಈ ನಗರದ ರಾಜ್ಯವನ್ನು ಬಿಟ್ಟು ಹೊರಟು ಹೋಗುತ್ತೇವೆ."

"ಮಗಳೇ, ನಾನು ನಿನ್ನನ್ನು ನೋಡಿದಂದಿನಿಂದಲೂ ನೀನು ವಿರಕ್ತಳಲ್ಲವೆಂದು ಎಷ್ಟೋಸಾರಿ ಶಂಕಿಸುತ್ತಿದ್ದೆನು. ಈಗ ನನಗೆ ಆ ಶಂಕೆಯು ಪರಿಹಾರವಾಯಿತು. ಸಂತೋಷವಾಯಿತು. ಈ ಯುವಕನು ರೂಪಯೌವನ ಸಂಪನ್ನನಾಗಿದ್ದಾನೆ. ನಿನಗೆ ಅನುರೂಪನಾದ ಪತಿಯಾಗಬಹುದು. ನಿಮ್ಮ ವಿವಾಹದಿಂದ ನೀವು ಸಂತೋಷಪಡುವುದಾದರೆ ನನಗೆಷ್ಟೋ ಆನಂದ. ಈ ರಾಜ್ಯವನ್ನೇಕೆ ಬಿಟ್ಟು ಹೋಗಬೇಕು?"

"ತಾಯೇ, ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ತಮ್ಮ ಸಾನ್ನಿಧ್ಯ ದಲ್ಲಿರುವಂತಿಲ್ಲ. ರಾಣಿ ಚೆಲುವಮ್ಮಣ್ಣಿಯು ನನ್ನನ್ನು ಬಿಟ್ಟಿರುವುದಿಲ್ಲ. ಹೇಗಾದರೂ ಹಿಡಿದು ಪಂಜರದಲ್ಲಿ ಕೂಡಿಹಾಕುತ್ತಾಳೆ. ಅವಳ ನೆರಳಿನಲ್ಲಿ ನನಗಿರಲು ಮನವಿಲ್ಲ. ಈ ನಗರದಮೇಲೆ ಕಾರ್ಮೋಡಗಳು ಮುಚ್ಚಿಕೊಂಡಿವೆ. ಎಂದು ಸಿಡಿಲು-ಗುಡುಗುಗಳು ಬಂದು ರಕ್ತದ ಮಳೆಯು ಸುರಿಯುವುದೋ ಎಂಬುದಾಗಿ ನನ್ನ ಮನವು ತಲ್ಲಣಿಸುತ್ತಿದೆ. ಆದುದರಿಂದ ಯಾವುದಾದರೂ ಪರರಾಜ್ಯಕ್ಕೆ ಹೊರಟು ಹೋಗುವೆನು."

"ಒಳ್ಳೆಯದು ಮಗಳೇ! ಹೋಗು. ಯಾವ ರಾಜ್ಯದಲ್ಲಿದ್ದರೇನು? ಎಲ್ಲವೂ ಭಗವಂತನ ರಾಜ್ಯ. ನೀವು ಸುಖದಿಂದ ಬಾಳಿರಿ. ನಾನು ಮುನೀಬ ಬಸವಯ್ಯನಿಗೆ ಒಂದು ಪತ್ರವನ್ನು ಕೊಡುವೆನು. ಅದನ್ನು ತೆಗೆದುಕೊಂಡು ಹೋಗಿ ಅವನಿಗೆ ಕೊಡು. ಅವನು ಸಹಸ್ರಚಿನ್ನದ ವರಹಗಳನ್ನು ನಿನಗೆ ಕೊಡುವನು. ಅದರಿಂದ ಯಾವ ದೇಶದಲ್ಲಾದರೂ ನೀವುಗಳು ಸುಖದಿಂದ ಬಾಳಿರಿ."

ಭೈರವಿಯು ಭವಾನೀರಾಣಿಯುನ್ನು ವಂದಿಸಿ ಅವಳ ಅನುಮತಿ ಯನ್ನು ಪಡೆದು ಸಹಚರನನ್ನು ಕರೆದುಕೊಂಡು ಹೊರಟು ಹೋದಳು. ಪುನಃ ಬೆಳಗಾಗುವ ಹೊತ್ತಿಗೆ ಭೈರವಿಯನ್ನು ನಗರದ ರಾಜ್ಯದಲ್ಲಿ ಯಾರೂ ಕಾಣಲಿಲ್ಲ.

ಒಂದು ತಿಂಗಳ ತರುವಾಯ ಭೈರವಿಯು ತನ್ನ ಜೊತೆಗಾರ ನಾದ ಯೋಗೀಶ್ವರನೊಡನೆ, ಶ್ರೀರಂಗಪಟ್ಟಣದ ಕಾವೇರಿಯ ದಂಡೆ ಯಲ್ಲಿರುವ ಮಂಟಪದಲ್ಲಿ ಕುಳಿತು ಮುಂದಿನ ಕಾರ್ಯಗಳನ್ನು ಕುರಿತು ಆಲೋಚನೆ ಮಾಡತೊಡಗಿದಳು. ಅವಳು ರಾಜಾಸ್ಥಾನಕ್ಕೆ ಹೋಗಿ ಉಗ್ರಾಣದ ಬಾಗಿಲಿನಲ್ಲಿ ಭಿಕ್ಷೆ ಬೇಡಿದಳು. ಶ್ರೀರಂಗಪಟ್ಟಣದ ನವಾಬ್ ಹೈದರಲ್ಲೀಖಾನರ ವಾಸಭವನವು ಅರಮನೆಗಿಂತಲೂ ವೈಭವೋಪೇತವಾಗಿದೆ. ಹೈದರಲ್ಲೀಖಾನನು ಮೈಸೂರಿನ ರಾಜನೆಂದು ಕೊಳ್ಳದಿದ್ದರೂ ಅವನ ಅಧಿಕಾರವು ಅಪ್ರತಿಹತವಾಗಿ ರಾಜ್ಯಾಧಿಕಾರ ಕ್ಕಿಂತಲೂ ಮಿಗಿಲಾಗಿದೆ. ಹಿಂದೂಸ್ಥಾನದಲ್ಲಿ ಅಂದು ಅವನಿಗಿಂತಲೂ

ಶೂರಾಗ್ರೇಸರನಾದ ಸೇನಾಧಿಪತಿಯು ಒಬ್ಬನೂ ಇರಲಿಲ್ಲ. ಅವನ ವಾಸಸ್ಥಾನವು ಅರಮನೆಗಿಂತಲೂ ಅತಿಶಯವಾಗಿ ವೈಭವೋಪೇತ ವಾಗಿದ್ದಿತು. ಮಹಾದ್ವಾರದ ಎರಡು ಪಾರ್ಶ್ವಗಳಲ್ಲಿಯೂ ವಿಶಾಲವಾದ ಚಾವಡಿಗಳು. ಆ ಚಾವಡಿಗಳಲ್ಲಿ ಬಲಪಾರ್ಶ್ವದಲ್ಲಿ ಪ್ರಶಸ್ತವಾದ ಲೋಡುದಿಂಬುಗಳಿಂದ ಅಲಂಕೃತವಾದ ದಿವಾನ್ ಖಾನೆ. ಹೈದರಲ್ಲೀ ಖಾನನು ಆ ದಿವಾನ್ ಖಾನೆಗೆ ಬಂದರೆ ಅವನು ಕುಳಿತುಕೊಳ್ಳುವುದಕ್ಕೆ ಪ್ರಶಸ್ತವಾದ ಬೆಳ್ಳಿಯ ಭದ್ರಾಸನ. ಗೋಡೆಗಳಿಗೆ ಚಿತ್ರಪಟಗಳಿಲ್ಲ ದಿದ್ದರೂ ಪ್ರತಿಯೊಂದು ಅಂಕಣದಲ್ಲಿಯೂ ಬಿಚ್ಚುಕತ್ತಿಗಳನ್ನೂ ಗುರಾಣಿಗಳನ್ನೂ ಇಟ್ಟು ಅಲಂಕರಿಸಿದ್ದರು. ಆ ಪಡಸಾಲೆಯಲ್ಲಿ ಮೂವತ್ತೆರಡು ಕಂಬಗಳಿದ್ದವು. ಆ ಕಂಬಗಳಿಗೆಲ್ಲಾ ಧೀರ್ಘವಾದ ಎರಡೆರಡು ಆನೆಯ ದಂತಗಳು ಖಚಿತವಾಗಿದ್ದವು. ಆ ದರಬಾರಿನ ಚೌಕಿಗೆ ಪ್ರವೇಶಮಾಡಲು ಸಾಮಾನ್ಯ ಜನರು ಎದೆಯೊಡೆದು ನಡಗುತ್ತಿದ್ದರು. ಎದುರುಗಡೆ ವಿಶಾಲವಾದ ಚೌಕಿ. ಮುತ್ಸದ್ದಿಗಳೂ, ರಾಜಕರ್ಮಚಾರಿಗಳೂ, ರಾಯಸದವರೂ, ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡು, ದಳವಾಯಿಯವರ ಅಪ್ಪಣೆಯನ್ನು ಜಾರೀಮಾಡಿ ಸುತ್ತಿದ್ದರು. ಮಹಾದ್ವಾರವನ್ನು ಪ್ರವೇಶಿಸಿ ಒಳಗಡೆ ಹೋದರೆ ದೊಡ್ಡ ಚೌಕಿ. ಆ ಚೌಕಿಯಲ್ಲಿ ಎಡಗಡೆ ಖಜಾನೆ. ಬಲಗಡೆ ಉಗ್ರಾಣ. ಆ ತೊಟ್ಟಿಯ ಮಧ್ಯದಲ್ಲಿ ಉಪ್ಪರಿಗೆಗೆ ಹತ್ತುವ ಮೆಟ್ಟಲುಗಳು. ಉಪ್ಪರಿಗೆಯ ಮೇಲೆ ಮೂವತ್ತೆರಡು ಕಮಾನುಗಳಿಂದ ರಚಿತವಾದ ಎರಡು ಎದುರುಬದರಾದ ಮಹಲುಗಳು. ಒಂದು ಹೈದರನ ರಾಣೀ ವಾಸದವರು ವಾಸಮಾಡುವ ಮಹಲು. ಮತ್ತೊಂದು ಹೈದರನು ವಾಸಮಾಡುವ ಮಹಲು. ಇಂಥಾ ಅರಮನೆಗಿಂತಲೂ ಮಿಗಿಲಾದ ಈ ದಳವಾಯಿಯ ಮನೆಯಲ್ಲಿ ಒಂದು ಅತಿಶಯವಾದ ವಿಶೇಷವು ಗೋಚರ ವಾಗುತ್ತಿದ್ದಿತು. ಆ ಮನೆಯು ಸುಖಭೋಗಗಳ ಆವಾಸಸ್ಥಾನದಂತೆ ಗೋಚರವಾಗುತ್ತಿರಲಿಲ್ಲ. ಸಿಂಹಗಳ ವಾಸಸ್ಥಾನವಾದ ಗಿರಿಗುಹೆಯಂತೆ ಸರ್ವದಾ ಜಾಗರೂಕಸ್ಥಾನದಂತೆ ಪರಿಶೋಭಿಸುತ್ತಿದ್ದಿತು. ಆದರೆ

ವೈಭವ, ಐಶ್ವರ್ಯ, ದಾನಧರ್ಮಗಳು ಇವುಗಳಾವುದಕ್ಕೂ ಕೊರತೆ ಯಿರಲಿಲ್ಲ. ಹೈದರಲ್ಲೀಖಾನನು ಶುದ್ಧ ಮುಸಲ್ಮಾನನಾದರೂ ಅವನ ರಾಜ್ಯಭಾರ ಕ್ರಮವು ಹಿಂದುಗಳ ರಾಜ್ಯಭಾರ ಕ್ರಮದಂತೆಯೇ ಇದ್ದಿತು. ದಾನಧರ್ಮಗಳಲ್ಲಿ ಹಿಂದೂ ಸನ್ಯಾಸಿಗಳೂ, ಫಕೀರರೂ ಇವರುಗಳಲ್ಲಿ ಯಾವ ವ್ಯತ್ಯಾಸವೂ ಕಂಡುಬರುತ್ತಿರಲಿಲ್ಲ. ಹೈದರನು ಸ್ವತಃ ಹೆಚ್ಚು ಮಾತನಾಡುವವನಲ್ಲ. ಆದರೆ ಅವನ ಕಣ್ಣುಗಳು ಸಹಸ್ರ ನಾಲಿಗೆ ಗಳಿಗಿಂತಲೂ ಚಟುವಟಿಕೆಯುಳ್ಳವುಗಳಾಗಿದ್ದವು. ಆ ಕಣ್ಣುಗಳೇ ಮಾತನಾಡುತ್ತಿದ್ದವು. ಆ ಕಣ್ಣುಗಳು ಆ ಭೂಮಂಡಲವನ್ನು ಆಳುವ ಮಹಾತೇಜಸ್ಸನ್ನು ಬೀರುತ್ತಿದ್ದವು. ಶ್ರೀರಂಗಪಟ್ಟಣದಲ್ಲಿ ಹೈದರ ನೊಡನೆ ಮಾತನಾಡುವುದೆಂದರೆ ಅದೊಂದು ಸಾಹಸದ ಮಾತೇ ಸರಿ.

ಆ ದಳವಾಯಿಯ ಅರಮನೆಯಲ್ಲಿ ಬೀದಿಯ ಪಡಸಾಲೆಯಮೇಲೆ ಉಗ್ರಾಣಿಯು ಆಢ್ಯತೆಯಿಂದ ಕುಳಿತು ಭಿಕ್ಷೆ ನೀಡುತ್ತಿದ್ದನು. ಭೈರವಿಯು ಹೋಗಿ ಧಾರಾಳವಾಗಿ ಕಛೇರಿಯ ಪಡಸಾಲೆಯ ಮೇಲೆ ಕುಳಿತುಕೊಂಡಳು. ರಾಜಾನುಚರರು ಅವಳ ಸಮೀಪಕ್ಕೆ ಬಂದು ಗಂಭೀರಧ್ವನಿಯಿಂದ "ಸನ್ಯಾಸಿನಿಯೇ, ಇದು ನಿನ್ನಂತಹವರು ಕುಳಿತು ಕೊಳ್ಳುವ ಸ್ಥಳವಲ್ಲ. ಉಗ್ರಾಣಿಯ ಸಮೀಪಕ್ಕೆ ಹೋಗಿ ಸದಾಬರ್ತು ತೆಗೆದುಕೋ." ಎಂದರು.

ಭೈರವಿಯು ನಗುತ್ತಾ "ಮಹಾಶಯರೇ, ನಾನು ಈ ದಳವಾಯಿ ಯವರ ಅರಮನೆಗೆ ಸದಾಬರ್ತು ಕೇಳಲು ಬಂದಿಲ್ಲ. ಶ್ರೀರಂಗಪಟ್ಟಣ ದಲ್ಲಿ ಭಿಕ್ಷವನ್ನು ಬೇಡಿದರೆ ಬೇಕಾದಷ್ಟು ದೊರೆಯುತ್ತದೆ. ಭಿಕ್ಷಕ್ಕೆ ಇಲ್ಲಿಗೇಕೆ ಬರಬೇಕು ?" ಎಂದಳು.

"ಸನ್ಯಾಸಿನಿಯೇ, ಅಲ್ಲಿ ಅಷ್ಟೊಂದು ಜನ ಗೋಸಾಯಿಗಳೂ, ಫಕೀರರೂ ಸದಾಬರ್ತು ತೆಗೆದುಕೊಳ್ಳುತ್ತಿದ್ದಾರೆ. ನೋಡು ! ಅವರೆಲ್ಲಾ ಏಕೆ ಬಂದಿದ್ದಾರೆ?"

"ಮಹಾಶಯರೇ, ಅವರುಗಳು ಅರಿಯದೆ ಇಲ್ಲಿಗೆ ಬಂದಿದ್ದಾರೆ. ದಳವಾಯಿಯವರು ತಮ್ಮ ಡಂಭಾಚಾರವನ್ನು ಪ್ರಕಟಗೊಳಿಸಲು ಈ

ದಾನಧರ್ಮಗಳ ಪರಠವಣೆಯನ್ನು ಇಲ್ಲಿಟ್ಟಿದ್ದಾರೆ. ನನಗೆ ಆ ಭಿಕ್ಷವು ಬೇಕಾಗಿಲ್ಲ."

"ಸನ್ಯಾಸಿನಿ, ಭಿಕ್ಷುಕಿಯ ವೇಷದಲ್ಲಿ ಬಂದಿರುವೆ. ಭಿಕ್ಷವನ್ನು ಬೇಡವೆನ್ನುವೆ! ಹೋಗಲಿ! ಅದರಿಂದ ನನಗೇನು? ನೀನು ಈ ಕಛೇರಿಯ ಚಾವಡಿಯಲ್ಲಿ ಕುಳಿತುಕೊಳ್ಳಕೂಡದು ಹೊರಡು."

"ಏಕೆ ಕುಳಿತುಕೊಳ್ಳಕೂಡದು? ಇಲ್ಲಿ ಯಾರು ಕುಳಿತುಕೊಳ್ಳತಕ್ಕವರು?"

"ಇಲ್ಲಿ ರಾಜ್ಯದ ಸರದಾರರು, ಮಂತ್ರಿಗಳು, ರಾಯಭಾರಿಗಳು."

ಭೈರವಿಯು ನಕ್ಕು, "ಮಹಾಪುರುಷನೇ, ನಾನು ರಾಯಭಾರಿ. ಗೊತ್ತಾಯಿತೇ? ದಳವಾಯಿಯವರ ಭೇಟಿಗೆ ಬಂದಿದ್ದೇನೆ. ಈ ಚಾವಡಿಯ ಅಧಿಕಾರಿಗಳನ್ನು ಬರಮಾಡು. ನನ್ನ ರಾಯಭಾರವನ್ನು ತಿಳಿಸುವೆನು." ಎಂದಳು.

ಚಾವಡಿಯ ಅಧಿಕಾರಿಯಾದ ನಾರಣಪ್ಪನು ಒಳಗಿನ ಚಾಕಿಯಿಂದ ಬಂದು ಚಾವಡಿಯಲ್ಲಿ ಕುಳಿತಿದ್ದ ಭೈರವಿಯನ್ನು ಕಂಡು ಆಶ್ಚರ್ಯಚಕಿತನಾದನು. ಅವನು ಭೈರವಿಯನ್ನು ಕುರಿತು— "ಸನ್ಯಾಸಿನಿ, ನೀನು ರಾಯಭಾರಿಯೆಂದರೇನು? ಹೆಂಗಸು, ಸನ್ಯಾಸಿನಿ, ರಾಯಭಾರಿಯಾಗಿ ಬರುವಳೇ? ನೀನಾವ ದೇಶದ ರಾಯಭಾರಿ?"

"ಮುತ್ಸದ್ದಿಗಳೇ, ನಾನು ನಗರದಿಂದ ಬಂದಿರುವ ರಾಯಭಾರಿ. ಭವಾನೀರಾಣಿಯವರ ಸಂದೇಶವನ್ನು ತಂದಿರುವ ರಾಜಕರ್ಮಚಾರಿಣಿ. ನವಾಬ್ ಹೈದರಲ್ಲೀಖಾನರನ್ನು ಭೇಟಿಮಾಡಲು ಬಂದಿದ್ದೇನೆ. ರಾಜರ ರಾಯಭಾರಿಗಳಾಗಿ ಪುರುಷರು ಬಂದರೆ, ರಾಣಿಯ ರಾಯಭಾರಿಯಾಗಿ ಹೆಂಗಸು ಬರುವುದು ಸಹಜವಾಗಿಯೇ ಇದೆ. ರಾಯಭಾರಿಯು ಹೆಂಗಸಾದರೇನು? ಪುರುಷಶ್ರೇಷ್ಠರಾದರೇನು? ನವಾಬ್ ಹೈದರಲ್ಲೀಖಾನರ ಭೇಟಿಯನ್ನು ನನಗೆ ಮಾಡಿಸಿರಿ."

ನಾರಣಪ್ಪನು ಅತ್ಯಂತ ಆಶ್ಚರ್ಯಭರಿತನಾಗಿ "ಸನ್ಯಾಸಿನಿಯೇ, ಇಲ್ಲಿಯೇ ಕುಳಿತಿರು. ನವಾಬರ ಆಜ್ಞೆಯನ್ನು ತಿಳಿಸುವೆನು." ಎಂದು

ಹೇಳಿ ನವಾಬರ ಸಮ್ಮುಖದಲ್ಲಿ ಈ ಸನ್ಯಾಸಿನಿಯ ವಿಷಯವನ್ನು ಅರಿಕೆ ಮಾಡಿದನು. ಈ ಸಮಾಚಾರವನ್ನು ಕೇಳಿ ಹೈದರಲ್ಲೀಖಾನನು ಆಶ್ಚರ್ಯ ಮಗ್ನನಾದನು. ತನ್ನಷ್ಟಕ್ಕೆ ತಾನೇ 'ನಗರದ ರಾಯಭಾರಿಯು! ಹೆಂಗಸು! ಸನ್ಯಾಸಿನಿ! ವಿಚಿತ್ರವಾಗಿದೆ. ಹಿಂದೆ ವಾಕ್ಪಟುವಾದ ತರುಣನೊಬ್ಬನು ರಾಯಭಾರಿಯಾಗಿ ಬಂದಿದ್ದನು. ಇಂದು ಸನ್ಯಾಸಿನಿಯೊಬ್ಬಳು ಬಂದಿದ್ದಾಳೆ. ಇದೇನೋ ವಿಚಿತ್ರವಾಗಿರಬೇಕು. ಈ ರಾಯಭಾರವು ಗುಪ್ತರಾಯಭಾರವಾಗಿರಬೇಕು,' ಎಂದು ಚಿಂತಿಸಿ ಹಯಾತ್‌ಖಾನನೆಂಬ ತನ್ನ ದ್ವಾರಪಾಲಕನನ್ನು ಕರೆದು "ಚಾವಡಿಯಲ್ಲಿ ಕುಳಿತಿರುವ ಹಿಂದೂ ಸನ್ಯಾಸಿನಿಯನ್ನು ನಮ್ಮ ಮಹಲಿಗೆ ಕರೆದು ಕೊಂಡು ಬಾ." ಎಂದು ಹೇಳಿ ಕಳುಹಿಸಿದನು.

ಹಯಾತನು ಲಗುಬಗೆಯಿಂದ ಚಾವಡಿಗೆ ಬಂದು ಭೈರವಿಯನ್ನು ನವಾಬರ ಸಮ್ಮುಖಕ್ಕೆ ಬರಬೇಕೆಂದು ಕರೆದುಕೊಂಡು ಹೋದನು. ಭೈರವಿಯು ಒಳಹಜಾರದ ಮಧ್ಯಭಾಗದಲ್ಲಿರುವ ಮೆಟ್ಟಲುಗಳನ್ನು ಹತ್ತಿ ಮಹಡಿಯ ಮೇಲಿನ ಬಿಸುಲು ಮಹಡಿಗೆ ತಲುಪಿ ಅಲ್ಲಿಂದ ಬಲಗಡೆಯಿರುವ ವಿಶಾಲವಾದ ಮಹಲಿನೊಳಗೆ ಹಯಾತ್ ಖಾನನನ್ನನುಸರಿಸಿ ಪ್ರವೇಶ ಮಾಡಿದಳು.

ಹೈದರನ ಅಂತಃಗೃಹವು ವಿಚಿತ್ರವಾಗಿತ್ತು. ನೆಲಕ್ಕೆ ಅನರ್ಘ್ಯವಾದ ಪಾರಸೀದೇಶದ ರತ್ನಕಂಬಳಿಯು ಹಾಸಲ್ಪಟ್ಟಿತ್ತು. ಅದನ್ನು ನೋಡಿದರೆ ದಟ್ಟವಾಗಿ ಬೆಳೆದ ಶಾದ್ವಲದಂತೆ ಶೋಭಾಯಮಾನವಾಗಿತ್ತು. ಗೋಡೆಗಳಿಗೆ ಎಳೆಗೆಂಪು ಬಣ್ಣವು ಹಾಕಲ್ಪಟ್ಟಿತ್ತು. ಕಿಟಕಿಗಳಿಗೆ ರೇಶಿಮೆಯ ಪರದೆಗಳು ಕಟ್ಟಲ್ಪಟ್ಟಿತ್ತು. ಬೆಳ್ಳಿಯ ಸರಪಣಿಗಳಿಂದ ಕಟ್ಟಲ್ಪಟ್ಟ ವಿಶಾಲವಾದ ದಂತದ ನಕಾಶೆ ಕೆಲಸ ಮಾಡಿದ ಉಯ್ಯಾಲೆಯು ಶೋಭಿಸುತ್ತಿದ್ದಿತು. ಸಮೀಪದಲ್ಲಿ ಒಂದು ಕುರ್ಚಿಯು ಇಡಲ್ಪಟ್ಟಿದ್ದಿತು. ಉಯ್ಯಾಲೆಯ ಪಕ್ಕದಲ್ಲಿ ಚಿನ್ನದ ನಲಿಕೆಯಿಂದ ಶೋಭಿಸುವ ಹುಕ್ಕಾ ಇಡಲ್ಪಟ್ಟಿತ್ತು. ಚಿಕ್ಕ ಕಾಲುಮಣೆಯ ಮೇಲೆ ದಂತದಿಂದ ಮಾಡಲ್ಪಟ್ಟ ತಾಂಬೂಲದಾನಿಯು ಇಡಲ್ಪಟ್ಟಿತ್ತು. ಉಯ್ಯಾಲೆಯ

ಹಿಂದುಗಡೆ ಎರಡು ದೀರ್ಘವಾದ ಕತ್ತಿಗಳು ಕಟ್ಟಲ್ಪಟ್ಟು, ಅವೆರಡರ ಮಧ್ಯದಲ್ಲಿ ಸಿಂಹದ ಮುಖವು ಇಡಲ್ಪಟ್ಟಿತ್ತು. ಆ ಉಯ್ಯಾಲೆಯ ಮೇಲೆ ಬಿಳಿಯ ಅಂಗರೇಕುಗಳನ್ನು ಧರಿಸಿಕೊಂಡು ಹೈದರಲ್ಲೀಖಾನನು ಕುಳಿತಿದ್ದನು. ಹಯಾತನು ಆ ಭವನದೊಳಗೆ ಪ್ರವೇಶಮಾಡಿ ಭೈರವಿಯನ್ನು ಒಳಗೆ ಬರುವಂತೆ ಸನ್ನೆಮಾಡಿದನು. ಭೈರವಿಯು ದಿಟ್ಟತನದಿಂದ ಕೈಯಲ್ಲಿ ತ್ರಿಶೂಲವನ್ನೂ, ಕಪಾಲವನ್ನೂ ಧರಿಸಿ ಹೈದರನ ವಿಶ್ರಾಂತಿಭವನದೊಳಗೆ ಪ್ರವೇಶಿಸಿ ದೂರದಲ್ಲಿ ನಿಂತುಕೊಂಡಳು. ಹಯಾತನು ಆ ತ್ರಿಶೂಲವನ್ನು ತನ್ನ ಕೈಗೆ ತೆಗೆದುಕೊಳ್ಳುವುದಕ್ಕೆ ಹೋದನು. ಭೈರವಿಯು ಎರಡು ಹೆಜ್ಜೆ ಹಿಂದಕ್ಕೆ ಸರಿದು "ಮುಟ್ಟಬೇಡ, ದೂರ ನಿಲ್ಲು" ಎಂದು ಗಂಭೀರಧ್ವನಿಯಿಂದ ಹೇಳಿದಳು.

ಹಯಾತನು "ಸನ್ಯಾಸಿನಿ, ಈ ಮಹಲಿನೊಳಗೆ ಯಾರೂ ಆಯುಧಗಳನ್ನು ತೆಗೆದುಕೊಂಡು ಬರಕೂಡದು" ಎಂದು ಅದಬ್ಬಿನಿಂದ ನುಡಿದನು.

ಹೈದರನು ಹಯಾತನ ಕಡೆಗೆ ತಿರುಗಿ "ಅದು ಆಯುಧವಲ್ಲ. ಆ ಸನ್ಯಾಸಿನಿಯ ಪೂಜಾಸಾಮಗ್ರಿ. ಅಥವಾ ಆ ವೇಷಕ್ಕೆ ಅಲಂಕಾರ. ನೀನು ಹೊರಗೆ ಹೋಗು" ಎಂದು ಹೇಳಿದನು.

ಹಯಾತನು ತಲೆಬಾಗಿಸಿ ಹೊರಗೆ ಹೊರಟುಹೋದನು.

ಹೈದರನು "ಸನ್ಯಾಸಿನಿ, ಆ ಆಸನದಲ್ಲಿ ಕುಳಿತುಕೋ" ಎಂದು ಹೇಳಿ ಆ ಆಸನದಕಡೆ ಕಣ್ಣು ಸೂಚಿಸಿದನು. ಭೈರವಿಯು ಆಸನದಲ್ಲಿ ಕುಳಿತಳು.

"ಸನ್ಯಾಸಿನಿ ಎಲ್ಲಿಂದ ಬಂದಿರುವೆ ? ನಿನ್ನ ಹೆಸರೇನು ? ನೀನು ಬಂದ ಕಾರ್ಯವಾವುದು ?"

"ನವಾಬರವರೇ, ನನ್ನ ಹೆಸರು ಆನಂದಭೈರವಿ. ನಾನು ನಗರದ ರಾಜಕಾರ್ಯಾರ್ಥವಾಗಿ ಬಂದಿದ್ದೇನೆ."

ಹೈದರನು ಗಂಭೀರಭಾವದಿಂದ, "ಭೈರವಿ, ನಿನ್ನ ರಾಜಕಾರ್ಯವಾವುದು ?" ಎಂದ ಕೇಳಿದನು.

ಭೈರವಿಯು ಗಾಂಭೀರ್ಯದಿಂದ, "ನಗರದ ರಾಜ್ಯವನ್ನು ತಮ್ಮ ಸೆರಗಿನಲ್ಲಿ ತಂದು ಹಾಕಲು ಬಂದಿದ್ದೇನೆ. ನಾನು ನಗರದ ಯುವರಾಜ ಚೆನ್ನಬಸಪ್ಪನಾಯಕರನ್ನು ವೇಷಾಂತರದಲ್ಲಿ ತಮ್ಮ ಸನ್ನಿಧಾನಕ್ಕೆ ಕರೆತಂದಿದ್ದೇನೆ. ಅವರು ಶರಣಾಗತರಾಗಿ ತಮ್ಮಲ್ಲಿಗೆ ಬಂದಿದ್ದಾರೆ. ತಾವು ನಗರದ ರಾಜ್ಯವನ್ನು ಗೆದ್ದು ಅವರಿಗೆ ಸಿಂಹಾಸನವನ್ನು ಕೊಡಿಸಿ ಕೊಡಬೇಕು. ಅವರು ಮೈಸೂರಿಗೆ ಅಧೀನರಾಗಿ ತಮ್ಮ ಆಜ್ಞೆಯಂತೆ ನಡೆದುಕೊಳ್ಳುತ್ತಾರೆ." ಎಂದಳು.

ಹೈದರನಿಗೆ ಆಶ್ಚರ್ಯವಾಯಿತು. ಅವನು ಸ್ವಲ್ಪಹೊತ್ತು ಆಕಾಶದ ಕಡೆಗೆ ನೋಡುತ್ತಿದ್ದನು. ಪುನಃ ದೃಷ್ಟಿಯನ್ನು ಕೆಳಗಿಳಿಸಿ "ಭೈರವಿ, ನೀನು ಹೇಳುವ ಮಾತುಗಳು ನನಗೆ ಆಶ್ಚರ್ಯವನ್ನುಂಟು ಮಾಡುತ್ತಿವೆ. ಇದಕ್ಕೆ ನಿನ್ನಲ್ಲಿ ಏನು ಆಧಾರವಿರುವುದು?" ಎಂದನು.

"ಆಧಾರವಿಲ್ಲದೇ ತಮ್ಮ ಸನ್ನಿಧಾನಕ್ಕೆ ಬರುವುದಕ್ಕೆ ನಾನೇನು ಹುಚ್ಚಳೇ ? ಯುವರಾಜನನ್ನು ತಮ್ಮಲ್ಲಿ ಕರೆತರುವುದೆಂದರೆ ಸಾಮಾನ್ಯದ ಮಾತೇ ?"

"ಅಲ್ಲ. ಅದು ಸಾಧಾರಣ ಮಾತಲ್ಲ. ನೀನು ಯುವರಾಜರನ್ನು ಕರೆತಂದಿದ್ದರೆ ಮಹದ್ವಿಷಯವೇ ಸರಿ. ನಿನ್ನ ರಾಯಭಾರಕ್ಕೆ ನಿನ್ನಲ್ಲಿ ಆಧಾರವಿದ್ದರೆ ಅದು ಮಹತ್ತರವಾದುದೇ ಹೌದು. ಭೈರವಿ, ನೀನು ಹೈದರನ ಮುಂದೆ ನಿಂತಿರುವೆಯೆಂಬುದನ್ನು ಅರಿತಿರುವೆಯಾ? ನನ್ನ ಎದುರಿನಲ್ಲಿ ಸುಳ್ಳಾಡಿದರೆ ನಿನ್ನನ್ನು ಹೆಂಗಸೆಂದು, ಸನ್ಯಾಸಿನಿಯೆಂದು ಉಪೇಕ್ಷೆಯಿಂದ ಕ್ಷಮಿಸುವುದಿಲ್ಲ. ಒಂದೇ ಏಟಿಗೆ ಕತ್ತರಿಸಿ ತುಂಡು ಮಾಡಿ ಎಸೆಯುವೆನು."

ಭೈರವಿಯು ನಕ್ಕು, "ಇಡೀ ದಕ್ಷಿಣಾವರ್ತದಲ್ಲಿ ಎಷ್ಟೋ ಮಹಾ ವೀರಾಗ್ರೇಸರರನ್ನು ಕತ್ತರಿಸಿಹಾಕಿರುವ ತಮ್ಮ ಕತ್ತಿಗೆ ನಾನು ಎದುರೇ? ನಾನು ಎಷ್ಟರವಳು? ಇದು ಯಥಾರ್ಥ. ನವಾಬ್ ಹೈದರಲ್ಲೀಖಾನರು ಮೈಸೂರಿನ ದಳವಾಯಿಯೆಂಬುದು ಎಷ್ಟು ಯಥಾರ್ಥವೋ ಭೈರವಿಯು

ಯುವರಾಜ ಚೆನ್ನಬಸಪ್ಪನಾಯಕನನ್ನು ಶರಣಾಗತರಾಗಿ ತಮ್ಮಲ್ಲಿ ಕರೆತಂದಿರುವುದು ಅಷ್ಟು ಯಥಾರ್ಥ." ಎಂದಳು.

ಹೈದರನು ಸಣ್ಣ ನಗುವನ್ನು ನಕ್ಕು, "ಹೇಳು, ನೀನು ಬಂದ ಕಥೆಯನ್ನು ಹೇಳು. ಯುವರಾಜರನ್ನೇಕೆ ಕರತಂದೆಯೆಂಬುದನ್ನು ಹೇಳು. ಯಾರು ನಿನಗೆ ಈ ಮಾರ್ಗವನ್ನು ತೋರಿಸಿಕೊಟ್ಟರೆಂಬುದನ್ನು ಹೇಳು" ಎಂದು ಹೇಳುತ್ತಾ ಹುಕ್ಕಾದ ನಳಿಕೆಯನ್ನು ಕೈಗೆ ತೆಗೆದುಕೊಳ್ಳುವುದಕ್ಕೆ ಹೋದನು.

ಭೈರವಿಯು ಛಟ್ಟನೆ ಆಸನದಿಂದೆದ್ದು ಹುಕ್ಕಾದ ಕೆಂಡವನ್ನು ಊದಿ ಅಲ್ಲಿದ್ದ ಗುಳಿಗೆಯನ್ನು ಹುಕ್ಕಾದಲ್ಲಿ ಹಾಕಿ ನಳಿಕೆಯನ್ನು ಹೈದರನ ಕೈಗೆ ತೆಗೆದುಕೊಟ್ಟಳು. ಹೈದರನು ಸಂಕೋಚವನ್ನು ತೋರಿ ನಳಿಕೆಯನ್ನು ಕೈಗೆ ತೆಗೆದುಕೊಂಡು, "ಭೈರವಿ, ನೀನೇಕೆ ನನ್ನ ಸೇವೆಯನ್ನು ಮಾಡುವೆ? ಸೇವಕರು ಬಂದು ಆ ಕಾರ್ಯವನ್ನು ಮಾಡುವರು." ಎಂದನು.

"ನವಾಬರೇ! ನಾನು ತಮ್ಮ ಸೇವೆಗಾಗಿಯೇ ಬಂದಿದ್ದೇನೆ. ಅದರಲ್ಲಿ ಆಶ್ಚರ್ಯವೇನಿದೆ?"

ಹೈದರನು ಆ ರಮಣಿಯ ಚಮತ್ಕಾರವನ್ನು ನೋಡಿ ಸ್ವಲ್ಪ ಬೆರಗಾಗಿ "ಒಳ್ಳೆಯದು, ಕುಳಿತುಕೋ, ಭೈರವಿ. ನೀನು ಒಳ್ಳೆಯ ಚತುರೆಯಾದ ಹೆಂಗಸು. ಹೇಳು ನಿನ್ನ ವೃತ್ತಾಂತವೇನು? ಯುವರಾಜರ ವೃತ್ತಾಂತವೇನು?" ಎಂದನು.

"ನವಾಬರವರೇ! ರಾಣಿ ಚೆಲುವಮ್ಮಣ್ಣಿಯವರನ್ನು ತಾವು ಕೇಳಿ ಬಲ್ಲಿರಷ್ಟೆ?"

ಹೈದರನು ತಲೆಯಾಡಿಸಿದನು.

"ಆ ರಾಣಿಯ ದುಷ್ಕೃತ್ಯಗಳು ದಿನದಿನಕ್ಕೆ ಅಸಹನೀಯವಾಗಿವೆ. ಆ ರಾಣಿಯು ಯುವರಾಜರವರನ್ನು ಕೊಲ್ಲಿಸಿ ತನ್ನ ಆಧಿಪತ್ಯವನ್ನು ನಿಷ್ಕಂಟಕ ಮಾಡಿಕೊಳ್ಳಬೇಕೆಂದು ಯತ್ನಮಾಡಿದಳು. ಆ ಯತ್ನವನ್ನು ಮುಂಚಿತವಾಗಿಯೇ ನಾನು ತಿಳಿದು ಯುವರಾಜನನ್ನು ವೇಷಾಂತರದಿಂದ ಪಲಾಯನ ಮಾಡಿಸಿಕೊಂಡು ಇಲ್ಲಿಗೆ ಕರೆದುಕೊಂಡು ಬಂದೆನು."

"ಸನ್ಯಾಸಿನಿ, ಮಹಾಮಂತ್ರಿ ರಾಮಕೃಷ್ಣನು ಏನು ಮಾಡು ತ್ತಿರುವನು."

"ರಾಣಿಯು ಮಹಾಮಂತ್ರಿಯನ್ನು ಕಬ್ಬಾಳದುರ್ಗದಲ್ಲಿ ಸೆರೆಯಲ್ಲಿಟ್ಟಿದ್ದಾಳೆಂದು ತಮಗೆ ಗೊತ್ತೇ ಇದೆ."

"ಹೌದು, ಕೇಳಿದ್ದೇವೆ. ಮಂತ್ರಿ ರಾಮಕೃಷ್ಣನು ಯುವರಾಜನಿಗೆ ಬೆಂಬಲವಾಗಿದ್ದಾನೆಯೇ?"

"ಹುಜೂರು, ಮಹಾಮಂತ್ರಿಯ ಬೆಂಬಲವು ಯುವರಾಜರಿಗೆ ಪೂರ್ಣವಾಗಿದೆ."

"ಪಾಳೇಯಗಾರರ ಅಭಿಮತವು ಹೇಗಿದೆ?"

"ಪಾಳೆಯಗಾರರೆಲ್ಲರೂ ಯುವರಾಜರ ಮೇಲೆ ಅಭಿಮಾನ ಶಾಲಿಗಳಾಗಿಯೇ ಇದ್ದಾರೆ."

"ಹಾಗಾದರೆ ರಾಣಿ ಚೆಲುವಮ್ಮಣ್ಣಿಯ ರಾಜ್ಯಭಾರಕ್ಕೆ ಬಲ ವೇನಿದೆ?"

"ಮಹತ್ತರವಾದ ನಗರದ ಸೈನ್ಯ, ಅತ್ಯಂತ ಪರಾಕ್ರಮಿಗಳಾದ ನಾಲ್ವರು ಮಹಾಸೇನಾನಿಗಳು, ಧನವಾರಿಧಾರೆಯಿಂದ ಸಂತುಷ್ಟರಾದ ಸೈನಿಕವರ್ಗ. ಇವುಗಳೆಲ್ಲವೂ ನಗರದ ಆಧಾರಸ್ತಂಭಗಳಂತಿವೆ."

"ರಾಮಕೃಷ್ಣನ ತಂತ್ರವೇನೂ ರಾಣಿಯಲ್ಲಿ ನಡೆಯಲಿಲ್ಲವೇ?"

"ನಡೆಯುತ್ತಿದೆ. ಆದರೆ ಅದು ಸಫಲವಾಗುವುದೆಂಬ ನಂಬಿಕೆಯು ನನಗಿಲ್ಲ. ಆದುದರಿಂದಲೇ ತಮ್ಮ ಸನ್ನಿಧಾನಕ್ಕೆ ಯುವರಾಜರನ್ನು ಕರತಂದಿದ್ದೇನೆ."

"ನಾವು ಯುವರಾಜ ಚೆನ್ನಬಸಪ್ಪನಾಯಕರನ್ನು ವಹಿಸಿಕೊಂಡು ನಗರದಮೇಲೆ ಯುದ್ಧಕ್ಕೆ ಹೊರಟರೆ ಮಹಾಮಂತ್ರಿ ರಾಮಕೃಷ್ಣನೂ ಪಾಳೆಯಗಾರರೂ ರಾಣಿ ಚೆಲುವಮ್ಮಣ್ಣಿಯ ಕಡೆಗೆ ಸೇರಿಕೊಂಡು ರಣ ಕ್ಷೇತ್ರದಲ್ಲಿ ನಮ್ಮನ್ನು ಎದುರಿಸುವುದಿಲ್ಲವೆಂದು ಬಗೆದಿರುವೆಯಾ?"

ಭೈರವಿಯು ಗಾಂಭೀರ್ಯದಿಂದ "ಹಾಗೆ ನಗರದ ಸೈನ್ಯಕ್ಕೂ, ಪಾಳೆಯಗಾರರಿಗೂ, ಎದುರಾಗಿ ನಿಂತು ಯುದ್ಧಮಾಡಲು ಹಿಂಜರಿಯದ

ಮಹಾಪರಾಕ್ರಮಿಗಳೆಂದೇ ನಾವು ತಮ್ಮ ಕಡೆಗೆ ಬಂದಿರುವುದು."
ಎಂದಳು.

"ಒಳ್ಳೆಯಮಾತು. ನಾವೇಕೆ ನಗರದಮೇಲೆ ಯುದ್ಧ ಮಾಡ ಬೇಕು ? ನಮಗೇನು ಲಾಭ ?"

ಭೈರವಿಯು ನಕ್ಕು, "ನವಾಬರವರೇ! ತಿರುಚನಾಪಳ್ಳಿಯವರೆಗೆ ದಂಡೆತ್ತಿಹೋಗಿ ಯಾವ ಲಾಭವನ್ನು ಪಡೆದಿರಿ? ಗೋದಾವರಿಯ ವರೆಗೆ ದಂಡಯಾತ್ರೆಮಾಡಿ ಏನು ಲಾಭಪಡೆದಿರಿ? ಅದೇ ಲಾಭ, ನಗರದಿಂದ ತಮಗೆ. ನಾನು ರಾಜಕೀಯವನ್ನರಿಯದ ತರುಣಿಯೆಂದು ನೆನೆಯಬೇಡಿರಿ. ನಗರದಮೇಲೆ ದಂಡೆತ್ತಿಹೋಗಬೇಕೆಂದು ತಮ್ಮ ಮನಸ್ಸಿನಲ್ಲಿ ಎಷ್ಟೋ ದಿವಸಗಳಿಂದ ಅಭಿಪ್ರಾಯವಿದೆ. ಈಗ ಯುವ ರಾಜರು ತಮಗೆ ಶರಣಾಗತರಾಗಿ ಬಂದಿದ್ದಾರೆ. ಈ ಸಮಯವು ನಗರದ ಮೇಲೆ ಯುದ್ಧಕ್ಕೆ ತಕ್ಕುದಾಗಿದೆ. ರಾಣಿಯ ದುಶ್ಚರಿತ್ರದಿಂದ ಪಾಳೆಯ ಗಾರರು ಖತಿಗೊಂಡಿದ್ದಾರೆ. ಮಹಾಮಂತ್ರಿಯು ತನಗಾದ ಅಪಮಾನ ದಿಂದ ಖಿನ್ನನಾಗಿದ್ದಾನೆ. ಪ್ರಜಾವರ್ಗದ ಅಭಿಮಾನವು ಯುವರಾಜರ ಮೇಲಿದೆ. ಈಗ ಯುದ್ಧಕ್ಕೆ ಒಳ್ಳೆಯ ಸಮಯ. ಯುವರಾಜ ಚೆನ್ನಬಸಪ್ಪನಾಯಕರನ್ನು ನಗರದ ಸಿಂಹಾಸನದಮೇಲೆ ಪಟ್ಟಗಟ್ಟು ತ್ತೇವೆಂದು ಹೇಳುವ ನೆಪವು ರಾಜನೀತಿಗೆ ಸರಿಹೊಂದುತ್ತದೆ." ಎಂದಳು.

ಹೈದರನು ನಕ್ಕು, "ಭೈರವಿ, ನೀನು ಗಟ್ಟಿಗಳಾದ ಹುಡುಗಿ. ಎಲ್ಲಿ ? ತೆಗೆ. ನಿನ್ನಲ್ಲಿ ಏನು ಆಧಾರಗಳಿವೆ ?" ಎಂದು ಕೇಳಿದನು.

ಭೈರವಿಯು ತನ್ನ ಜೋಳಿಗೆಯಿಂದ ಎರಡು ಪತ್ರಗಳನ್ನು ಹೊರಗೆ ತೆಗೆದಳು.

"ಇದು ಮಹಾಮಂತ್ರಿ ರಾಮಕೃಷ್ಣರು ತಮಗೆ ಬರೆದಿರುವ ಪತ್ರ. ಇದು ಪಾಳೆಯಗಾರರು ಮಹಾಮಂತ್ರಿ ರಾಮಕೃಷ್ಣರವರಿಗೆ ಬರೆದಿರುವ ಪತ್ರ" ಎಂದು ಹೇಳಿ ಹೈದರನ ಕೈಲಿ ಎರಡು ಲಕ್ಕೋಟೆಗಳನ್ನೂ ಕೊಟ್ಟಳು.

ಹೈದರನು ಹುಕ್ಕಾದ ನಳಿಕೆಯನ್ನು ಕೆಳಗಿಟ್ಟು ಲಕ್ಕೋಟಿ ಗಳನ್ನು ಕೈಗೆ ತೆಗೆದುಕೊಂಡನು. ಸಣ್ಣದನಿಯಿಂದ ಹಯಾತನನ್ನು ಒಳಗೆ ಕರೆದನು. ರಾಯಸದ ನಾರಣಪ್ಪನನ್ನು ಕರೆತರುವಂತೆ ಅಪ್ಪಣೆ ಮಾಡಿದನು.

ನಾರಣಪ್ಪನು ನವಾಬನ ಸನ್ನಿಧಾನಕ್ಕೆ ಬಂದು ನೆಲಮುಟ್ಟಿ ಸಲಾಂಮಾಡಿ ನಿಂತುಕೊಂಡನು. ಹೈದರನು "ನಾರಣಪ್ಪ, ಈ ಲಕ್ಕೋಟಿ ಯನ್ನು ಓದು" ಎಂದು ನಾರಣಪ್ಪನ ಕೈಗೆ ಲಕ್ಕೋಟಿಯನ್ನು ಕೊಟ್ಟನು. ನಾರಣಪ್ಪನು ಎರಡು ಕೈಗಳಿಂದಲೂ ಲಕ್ಕೋಟಿಯನ್ನು ಕೈಗೆ ತೆಗೆದು ಕೊಂಡು, ಲಕ್ಕೋಟಿಯೊಳಗಿನಿಂದ ಕಾಗದವನ್ನು ತೆಗೆದು ನವಾಬರ ಮುಖವನ್ನು ನಿರೀಕ್ಷಿಸಿದನು. ನವಾಬರು "ಸುಲಾವಣೆ ಮಾಡು" ಎಂದರು.

ಮಹಾಮಂತ್ರಿಗಳಾದ ರಾಮಕೃಷ್ಣರವರೇ,

ಈ ಪತ್ರವನ್ನು ನಗರದ ಸಮಸ್ತ ಪಾಳೆಯಗಾರರ ಪರವಾಗಿ ತಮಗೆ ನಾನು ಬಿನ್ನೈಸುತ್ತಿದ್ದೇನೆ. ಯುವರಾಜ ಚೆನ್ನಬಸಪ್ಪ ನಾಯಕರಿಗೆ ನಗರದ ಸಿಂಹಾಸನದಮೇಲೆ ಪಟ್ಟಗಟ್ಟಬೇಕೆಂದು ನಾವೆ ಲ್ಲರೂ ನಿರ್ಧಾರಮಾಡಿಕೊಂಡಿದ್ದೇವೆ. ಈ ಪ್ರಸಂಗದಲ್ಲಿ ಯುದ್ಧವೇ ಸಂಭವಿಸಿದರೂ ಸಿದ್ಧರಾಗಿದ್ದೇವೆ. ತಮ್ಮ ಆಶೀರ್ವಾದವು ನಮ್ಮಮೇಲೆ ಇರಬೇಕು. ಯುವರಾಜರಮೇಲೆ ತಾವು ಅನುಗ್ರಹಿಸಬೇಕು. ಇದೇ ನಮ್ಮಗಳ ಪ್ರಾರ್ಥನೆ.

ಗೋಪಾಲನಾಯಕ.

ಈ ಪತ್ರವನ್ನು ಓದಿ ಮುಗಿಸಿ ನಾರಣಪ್ಪನು ನಿಂತುಕೊಂಡನು. ಹೈದರನು ಕೈನೀಡಿ ಆ ಪತ್ರವನ್ನು ತೆಗೆದುಕೊಂಡು ಮತ್ತೊಂದು ಪತ್ರ ವನ್ನು ನಾರಣಪ್ಪನ ಕೈಗೆ ಕೊಟ್ಟನು. ನಾರಣಪ್ಪನು ಯಥಾಪ್ರಕಾರ ಲಕ್ಕೋಟಿಯನ್ನು ಬಿಚ್ಚಿ ಪತ್ರವನ್ನು ತೆಗೆದು ಸುಲಾವಣೆ ಮಾಡಿದನು.

ಮಹಾಮಾನ್ಯರಾದ ಶ್ರೀರಂಗಪಟ್ಟಣದ ನವಾಬ್ ಹೈದರಲ್ಲೀ ಖಾನರ ಸಮ್ಮುಖದಲ್ಲಿ ರಾಮಕೃಷ್ಣನ ಬಿನ್ನಹಗಳು :—

ಹುಜೂರು! ತಮ್ಮಲ್ಲಿಗೆ ಯುವರಾಜ ಚೆನ್ನಬಸಪ್ಪನಾಯಕನು ಶರಣಾಗತನಾಗಿ ಬಂದಿದ್ದಾನೆ. ಈತನ ಇಷ್ಟಾರ್ಥವನ್ನು ನೆರವೇರಿಸಿ ಕೊಡಬೇಕೆಂದು ನಾನು ಪ್ರಾರ್ಥಿಸುತ್ತೇನೆ. ಈಗ ನಾನು ಬಂಧನದಲ್ಲಿದ್ದೇನೆ. ಪ್ರಕೃತ ಇಷ್ಟೇ ವಿಜ್ಞಾಪಿಸಬಲ್ಲೆ.

ತಮ್ಮ ವಿಶ್ವಾಸಿ,

**ರಾಮಕೃಷ್ಣ.**

ಈ ಪತ್ರವನ್ನು ಓದಿ ಮುಗಿಸಿ, ಲಕ್ಕೋಟೆಯನ್ನು ಮಡಿಸಿಟ್ಟು ಎರಡು ಕೈಗಳಿಂದಲೂ ನವಾಬರಿಗೆ ಒಪ್ಪಿಸಿದನು.

ಒಂದು ಕ್ಷಣ ಯೋಚನೆಮಾಡಿ ಹೈದರಲ್ಲೀಖಾನನು "ನಾರಣಪ್ಪ, ನಮ್ಮ ಸರ್ಕಾರಕ್ಕೆ ಹಿಂದೊಂದುಬಾರಿ ರಾಮಕೃಷ್ಣನ ರಾಯಭಾರ ಪತ್ರವು ಬಂದಿರುವುದು ಜ್ಞಾಪಕವಿದೆಯಷ್ಟೇ? ಅದು ನಮ್ಮ ಖಾಸ್ ದಫ್ತರದಲ್ಲಿದೆ. ಆದನ್ನು ತೆಗೆದುಕೊಂಡು ಬಾ" ಎಂದು ಹೇಳಿದನು. ನಾರಣಪ್ಪನು ಬಗ್ಗಿ ಸಲಾಂಮಾಡಿ ಹೊರಟು ಹೋದನು.

"ಭೈರವಿ, ನಿನ್ನ ಪತ್ರಗಳೆರಡೂ ಸಮಾಧಾನಕರವಾಗಿವೆ. ನಾವು ಇದನ್ನು ಪರ್ಯಾಲೋಚಿಸುತ್ತೇವೆ. ಒಂದು ಮಾತು. ಹಿಂದೆ ನಮ್ಮ ಸಮ್ಮುಖಕ್ಕೆ ಬಂದಿದ್ದ ವಿರೂಪಾಕ್ಷನು ಪರಾಕ್ರಮಿಯೆಂದೂ ಅವನು ನಗರದ ರಾಜ್ಯದಲ್ಲಿ ಮಹಾಸೇನಾನಾಯಕನೆಂದೂ ಕೇಳಿದ್ದೇವೆ. ಈಗ ಅವನು ಯಾವ ದೆಶೆಯಲ್ಲಿದ್ದಾನೆ?"

ಭೈರವಿಯು ನಕ್ಕು, "ಖಾವಂದರವರೇ! ಅವನು ನರಕದಲ್ಲಿದ್ದಾನೆ. ಯುವರಾಜರು ಅವನನ್ನು ಕೊಂದು ಹಾಕಿದರು. ಅಂದಿನಿಂದಲೇ ಯುವರಾಜರಿಗೆ ಈ ಆಪತ್ತು ಸಂಭವಿಸಿದೆ. ಅವನು ರಾಣಿ ಚೆಲುವಮ್ಮಣ್ಣಿಯ ಪ್ರಣಯಭಾಗಿಯಾಗಿದ್ದನು. ಈಗ ನರಕದಲ್ಲಿದ್ದಾನೆ" ಎಂದಳು.

ಹೈದರನು, "ಓಹೋ! ನಿಜ! ಅವನು ಮೃತ್ಯುವಶನಾದನೆಂದು ಕೇಳಿದ್ದೇವೆ. ಯಾರೋ ಕೊಂದು ಹಾಕಿದರೆಂದೂ ನಮ್ಮ ಕಿವಿಯಲ್ಲಿ

ಬಿದ್ದಿತ್ತು. ಒಳ್ಳೆಯದು" ಎಂದು ಹೇಳುವಷ್ಟರಲ್ಲಿ ನಾರಣಪ್ಪನು ಹಿಂದೆ ನಗರದ ರಾಯಭಾರಿಯು ತಂದಿದ್ದ ಪತ್ರವನ್ನು ತಂದು ನವಾಬನ ಕೈಯಲ್ಲಿ ಒಪ್ಪಿಸಿದನು. ನವಾಬರು ಲಕ್ಕೋಟೆಯಿಂದ ಪತ್ರವನ್ನು ತೆಗೆದು ಆ ಪತ್ರಕ್ಕೂ ಈಗ ಭೈರವಿಯು ತಂದಿರುವ ಪತ್ರಕ್ಕೂ ಹೋಲಿಸಿ ನೋಡಿದರು. ಭೈರವಿಯು ನಕ್ಕಳು.

ಹೈದರನು "ಅಕ್ಷರಗಳು ಹೋಲುತ್ತವೆ" ಎಂದು ಹೇಳಿ ಆ ಎರಡು ಕಾಗದಗಳನ್ನೂ ನಾರಣಪ್ಪನ ಕೈಗೆ ಕೊಟ್ಟನು. ನಾರಣಪ್ಪನು ಬಹಳ ಸೂಕ್ಷ್ಮದೃಷ್ಟಿಯಿಂದ ನೋಡಿ "ಜಹಾಪನಾ, ಅಕ್ಷರಗಳು ಸರಿಯಾಗಿ ಹೋಲುತ್ತವೆ. ಒಂದು ರೇಖೆಯೂ ವ್ಯತ್ಯಾಸವಿಲ್ಲ" ಎಂದು ತಲೆ ತೂಗುತ್ತಾ ಹೇಳಿದನು.

"ಒಳ್ಳೆಯದು, ನೀನು ಹೋಗಬಹುದು" ಎಂದು ಹೈದರಲ್ಲೀ ಖಾನನು ರಾಯಸದ ನಾರಣಪ್ಪನನ್ನು ಕಳುಹಿಸಿದನು. ಪುನಃ ನಾರಣಪ್ಪನನ್ನು ಕರೆದು "ನಾರಣಪ್ಪ, ಜೋಕೆ! ಈ ವಿಷಯವು ಮತ್ತಾರ ಕಿವಿಗಾದರೂ ಬಿದ್ದರೆ ಶಿರಚ್ಛೇದವಾದೀತು! ಜೋಕೆ!" ಎಂದು ಎಚ್ಚರಿಸಿದನು. ನಾರಣಪ್ಪನು ತಲೆಬಾಗಿ ಸಲಾಂಮಾಡಿ ಆ ಭವನದಿಂದ ಹೊರಟು ಹೋದನು.

ಹೈದರನು ಭೈರವಿಯ ಕಡೆ ತಿರುಗಿ "ಭೈರವಿ, ನೀನು ನಮ್ಮ ರಾಜ್ಯಕ್ಕೆ ಯುವರಾಜ ಚೆನ್ನಬಸಪ್ಪನಾಯಕರನ್ನು ಏಕಾಕಿಯಾಗಿ ಕರೆ ತಂದಿರುವೆ. ಈ ರಾಯಭಾರಕ್ಕೆ ನಾವು ಸಮ್ಮತಿಸದಿದ್ದರೆ?" ಎಂದನು.

"ನಮ್ಮ ಅದೃಷ್ಟಪರೀಕ್ಷೆಯಾಯಿತೆಂದು ಹೊರಟುಹೋಗುತ್ತೇವೆ."

ಹೈದರನು ನಕ್ಕು, "ರಾಜಕೀಯ ಕಾರಣಗಳಿಗಾಗಿ ನಿಮ್ಮಿಬ್ಬರನ್ನೂ ನಾವು ಸೆರೆಯಲ್ಲಿಡಿಸಿದರೆ?" ಎಂದನು.

"ಖಾವಂದರವರೇ, ಒಳ್ಳೆಯ ಕೆಲಸವಾಯಿತು. ಅದನ್ನು ಯೋಚನೆಮಾಡಿದ್ದೇವೆ. ನಾವು ತಮ್ಮ ಅನುಗ್ರಹವಿಲ್ಲದಿದ್ದರೆ ಇಂದು ಭಿಕಾರಿಗಳು. ಆಗ ತಾವು ಸೆರೆಯಲ್ಲಿಟ್ಟರೇನು? ಬೀದಿಯಲ್ಲಿ ಬಿಟ್ಟರೇನು? ನಗರದ ರಾಜ್ಯದಲ್ಲಿ ಕ್ಷಣಕ್ಷಣಕ್ಕೂ ಅಪಾಯ. ಇಲ್ಲಿ

ನಮಗೆ ಆಶ್ರಯವು ದೊರೆಯದಿದ್ದರೆ, ಬೇರೊಂದು ರಾಜ್ಯಕ್ಕೆ ಹೋಗುವೆವು"

"ಭೈರವಿ, ಯಾವ ರಾಜ್ಯಕ್ಕೆ ಹೋಗುವಿರಿ? ಪುಣೆಗೆ ಹೋಗುವಿರೋ?"

"ಇಲ್ಲ ಹುಜೂರು. ತಮ್ಮ ಅನುಗ್ರಹವಿಲ್ಲದಿದ್ದರೆ, ಇನ್ನು ರಾಜ್ಯದ ಆಸೆಯಿಲ್ಲ. ನಾವು ಕಾಶೀಕ್ಷೇತ್ರಕ್ಕೆ ಹೋಗುವೆವು."

ಹೈದರನು ನಕ್ಕು, "ಒಳ್ಳೆಯದು, ನಾವು ಶರಣಾಗತರನ್ನು ಬಿಟ್ಟು ಕೊಡುವುದಿಲ್ಲ. ಚಿನ್ನಬಸಪ್ಪನಾಯಕರನ್ನು ನಮ್ಮ ರಾಜಧಾನಿಯ ಬಿಡಾರದಲ್ಲಿ ಇಳಿದುಕೊಳ್ಳುವಂತೆಮಾಡು. ಅದಕ್ಕೆ ನಾವು ತಕ್ಕ ಏರ್ಪಾಡುಗಳನ್ನು ಮಾಡುವೆವು. ಯಾರಿಗೂ ಗೋಚರವಾಗದಂತೆ ಆತನನ್ನು ಮುಚ್ಚಿಡು. ಹೋಗು. ನಾವು ನಿನಗೆ ಸರಿಯಾದ ಸಮಯದಲ್ಲಿ ಹೇಳಿಕಳುಹಿಸುವೆವು." ಎಂದನು.

"ಹುಜೂರು, ತಮ್ಮ ಅಪ್ಪಣೆಯಾದಂತೆ ನಡೆದು ಕೊಳ್ಳುವೆನು. ಯುವರಾಜನನ್ನು ತಾವು ಏರ್ಪಡಿಸುವ ಬಿಡಾರದಲ್ಲಿ ತಂದು ಗೋಪ್ಯವಾಗಿರಿಸುವೆನು. ನಾನು ಈ ರಾಜಧಾನಿಯಲ್ಲಿ ಮಠದಲ್ಲಿಯೋ ಮಂದಿರದಲ್ಲಿಯೋ ಮಂಟಪದಲ್ಲಿಯೋ ವಾಸಮಾಡುವೆನು."

"ಭೈರವಿ ನೀನು ಸನ್ಯಾಸಿನಿಯಲ್ಲ. ರಾಯಭಾರಿ. ಮಹತ್ಕಾರ್ಯಕ್ಕೆ ಬಂದಿರುವವಳು. ಶತೃಗಳು ನಿಮ್ಮ ನೆರಳು ಹಿಡಿದು ಕಾಯುತ್ತಿರಬಹುದು. ಯುವರಾಜನಿಗಿಂತಲೂ ನಿನಗೆ ಹೆಚ್ಚು ಆಪತ್ತು ಸಂಭವಿಸಬಹುದೆಂದು ನನಗೆ ಭಯವಾಗುತ್ತದೆ."

ಭೈರವಿಯು ತಲೆಬಾಗಿ ನಕ್ಕು, "ನವಾಬರವರೇ, ಅದು ತಮಗೆ ನನ್ನ ಮೇಲೆ ಉಂಟಾಗಿರುವ ಅಭಿಮಾನ. ಅದು ನನ್ನ ಪುಣ್ಯ. ಆದರೆ ನನಗೆ ಭಯವಿಲ್ಲ. ನಾನು ಬಹುದಿವಸಗಳಿಂದಲೂ ನಗರದಲ್ಲಿ ಈ ಭೈರವಿಯ ವೇಷದಿಂದಲೇ ಅಲೆಯುತ್ತಿದ್ದೇನೆ. ನನ್ನ ಗೋಜಿಗೆ ಯಾರೂ ಬರುವುದಿಲ್ಲ. ದೈವ ದುರ್ವಿಪಾಕದಿಂದ ನಾನು ಬಾಲ್ಯದಿಂದಲೂ ಆ ಪಾತಕಿ ಮಹಾರಾಣಿಗೆ ಗೆಳತಿ. ಪುಣ್ಯಾತ್ಮಳಾದ ಭವಾನೀರಾಣಿಗೆ

ಶಿಷ್ಯಳು. ಈಗ ಈ ಯುವರಾಜರಿಗೆ ಸಹಚರಿ. ನನ್ನ ಗೋಜಿಗೆ ಯಾರೂ ಬರುವುದಿಲ್ಲ. ಇನ್ನು ನಾನು ಸತ್ತರೆ ತಾನೇ ಏನು? ನನ್ನ ಕಾರ್ಯ ವಾಯಿತು. ಯುವರಾಜರನ್ನು ತಂದು ತಮ್ಮ ಆಶ್ರಯಕ್ಕೆ ಸೇರಿಸಿದ್ದೇನೆ." ಎಂದಳು.

ಹೈದರನು ನಕ್ಕು "ನೀನು ಚಾಲಕ್ಕಿನ ಹುಡುಗಿ. ನೀನು ಸಾಯ ಕೂಡದು. ನೀನು ನಮಗೆ ಬೇಕು. ನೀನಿಲ್ಲದಿದ್ದರೆ ನಾವು ನಗರದ ಯುದ್ಧಕ್ಕೆ ಕೈಹಾಕುವುದಿಲ್ಲ." ಎಂದನು.

ಭೈರವಿಯು ನಕ್ಕು "ಜಹಾಪನಾ, ತಾವು ನನ್ನ ಮೇಲೆ ತೋರುವ ಅಭಿಮಾನಕ್ಕಾಗಿ ಅಮರಣಾಂತ ನಾನು ತಮ್ಮ ದಾಸಿಯಾಗಿರುವೆನು." ಎಂದು ಹೇಳಿ ಪ್ರಣಾಮಮಾಡಿದಳು. ನವಾಬರ ಅಪ್ಪಣೆಯನ್ನು ಪಡೆದು ಹೊರಗೆ ಹೊರಟಳು. ಹಯಾತನು ಜೊತೆಯಲ್ಲಿ ಕರೆದು ಕೊಂಡು ಬಂದು ಮಹಾದ್ವಾರವನ್ನು ದಾಟಿಸಿ ಚಾವಡಿಯ ಎದುರಿನಲ್ಲಿ ಭೈರವಿ ಯನ್ನು ಬಿಟ್ಟು ಹೋದನು. ಇಷ್ಟು ಹೊತ್ತಿಗೆ ಸೂರ್ಯದೇವನು ಆಕಾಶ ಮಧ್ಯವನ್ನೇರಿದನು. ಅರಮನೆಯಲ್ಲಿ ನಗಾರಿ ನೌಪತ್ತುಗಳಾಗುತ್ತಿದ್ದವು. ಭೈರವಿಯು ಮನೋಹರ ಕಂಠದಿಂದ ಆ ರಾಜಮಾರ್ಗದಲ್ಲಿ ಹರನಾಮ ವನ್ನು ಗಾನಮಾಡುತ್ತಾ ಹೊರಟು ಹೋದಳು. ಬೀದಿಯಲ್ಲಿ ಅನೇಕರು ಅವಳನ್ನು ಕಂಡು ಭಕ್ತಿಭಾವದಿಂದ ಭಿಕ್ಷವಿಕ್ಕಿದರು.

---

## ೨೩

## ಯುವರಾಜನ ಪ್ರತಿರೂಪ

ರಾತ್ರಿ ಒಂಭತ್ತು ಘಂಟೆಯ ತುತ್ತೂರಿಯಾದಮೇಲೆ ನವಾಬ ಹೈದರಲ್ಲೀಖಾನರವರ ಅರಮನೆಯಿಂದ ರಾಜಾನುಚರರು ಮ್ಯಾನಾವನ್ನು ತೆಗೆದುಕೊಂಡು ನಗರದ ಯುವರಾಜರಿಳಿದಿದ್ದ ಬಿಡಾರಕ್ಕೆ ಬಂದು ಯುವರಾಜರವರನ್ನು ದೊಡ್ಡನವಾಬರವರು ಕರೆತರಬೇಕೆಂಬುದಾಗಿ

ಅಪ್ಪಣೆ ಮಾಡಿದ್ದಾರೆಂದು ತಿಳಿಸಿದರು. ಭೈರವಿಯು ಯುವರಾಜನನ್ನು ತಕ್ಕ ರಾಜಯೋಗ್ಯವಾದ ವೇಷಭೂಷಣಗಳಿಂದ ಅಲಂಕರಿಸಿ ಅಂತರಂಗ ದಲ್ಲಿ ಎರಡು ಮಾತುಗಳನ್ನು ಹೇಳಿ ಕಳುಹಿಸಿದಳು.

"ನೋಡು ಯುವರಾಜ! ನಿನ್ನನ್ನು ನಾನು ಸಿಂಹದ ಗುಹೆಗೆ ಕರತಂದಿದ್ದೇನೆ. ಇಲ್ಲಿ ಒಂದು ದೊಡ್ಡ ಮಾಯಾಜಾಲವನ್ನು ಹೂಡಿ ದ್ದೇನೆ. ನೀನು ನಗರದ ಸಾಕ್ಷಾತ್ ಯುವರಾಜನೆಂದು ನವಾಬರಲ್ಲಿ ಹೇಳಿ ಅನೇಕ ಕಾರಣಗಳಿಂದ ಅವರು ಅದನ್ನು ದೃಢವಾಗಿ ನಂಬುವಂತೆ ಮಾಡಿದ್ದೇನೆ. ಈ ಪ್ರಾತಃಕಾಲ ಅವರಿಗೂ ನನಗೂ ನಡೆದ ಸಂಭಾಷಣೆ ಯನ್ನೆಲ್ಲಾ ಚಾಚೂ ತಪ್ಪದೆ ನಿನಗೆ ಹೇಳಿದ್ದೇನೆ. ನೀನು ನವಾಬರಲ್ಲಿ ಬಹಳ ಹುಷಾರಾಗಿ ನಡೆದುಕೊಳ್ಳಬೇಕು. ನವಾಬರು ಸಾಮಾನ್ಯ ಮನುಷ್ಯರಲ್ಲ. ಅವರ ಕಣ್ಣುಗಳು ನಿನ್ನ ಹೃದಯವನ್ನು ಮಾಟಬಲ್ಲವು. ಅವರ ಮಾತುಗಳು ನಿನ್ನನ್ನು ಪುಟಕ್ಕೆ ಹಾಕಿ ಎತ್ತಬಲ್ಲವು. ನೀನು ಈ ಆಟದಲ್ಲಿ ಗೆದ್ದರೆ ನಗರದ ಸಿಂಹಾಸನವನ್ನು ಹತ್ತುವಿ. ಎಲ್ಲಿಯಾದರೂ ಸ್ವಲ್ಪ ಸಂದೇಹಕ್ಕೆ ಎಡೆಗೊಟ್ಟರೆ ನವಾಬರು ನಿನ್ನ ಕುತ್ತಿಗೆಯನ್ನು ಕತ್ತರಿಸಿ ಚೆಂಡಾಡುವರು. ಧೈರ್ಯವಿದ್ದರೆ ಹೇಳು. ನವಾಬರ ಸಮ್ಮುಖಕ್ಕೆ ಹೋಗು. ಇಲ್ಲದಿದ್ದರೆ ನಾನು ನಿನ್ನನ್ನು ಯಾವುದಾದರೂ ಉಪಾಯಾಂತರದಿಂದ ಈ ಶ್ರೀರಂಗಪಟ್ಟಣದಿಂದ ಪಾರು ಮಾಡಿ ಬಿಡುತ್ತೇನೆ. ಎಲ್ಲಿಯಾದರೂ ಹೊರಟು ಹೋಗು. ನಿನ್ನ ದಾರಿ ನಿನಗೆ. ನನ್ನ ದಾರಿ ನನಗೆ."

"ಇಲ್ಲ ಭೈರವಿ, ನಾನು ಯುವರಾಜನಿಗಿಂತಲೂ ನಿಜವಾದ ಯುವ ರಾಜನಂತೆ ನಡೆದುಕೊಳ್ಳುತ್ತೇನೆ. ನನ್ನ ಭಾಗ್ಯವು ನಿನ್ನ ಕೈಯಲ್ಲಿದೆ. ನಾನು ನಿನ್ನಲ್ಲಿ ಮನಸೋತು ಸರ್ವಸ್ವವನ್ನೂ ನಿನಗೊಪ್ಪಿಸಿ ನೀನು ಆಡಿಸುವಂತೆ ಆಡುವ ಬೊಂಬೆಯಾಗಿ ಇಲ್ಲಿಗೆ ಬಂದಿದ್ದೇನೆ. ಇಂದು ನವಾಬರಲ್ಲಿ ಹೋಗಿ ನಾನು ಎಂತಹ ಸಾಮರ್ಥ್ಯಶಾಲಿಯೆಂಬುದನ್ನು ಸಾಬೀತುಮಾಡಿಕೊಡುತ್ತೇನೆ. ನೋಡು" ಎಂದು ಹೆಮ್ಮೆಯಿಂದ ಹೇಳಿದನು. ಭೈರವಿಯು ಯುವರಾಜನನ್ನು ಕರೆದುಕೊಂಡುಹೋಗಿ

ಮ್ಯಾನಾದಲ್ಲಿ ಕುಳ್ಳಿರಿಸಿ ಅರಮನೆಗೆ ಕಳುಹಿಸಿದಳು. ತಾನು ಬಿಡಾರ ದೊಳಗೆ ಪ್ರವೇಶಮಾಡಿದಳು.

ಈ ಯುವರಾಜನಾರೆಂದು ವಾಚಕರು ಗುಣಾಕಾರಹಾಕುತ್ತಿರ ಬಹುದು. ನಗರದ ಮಹಾರಾಜರಾದ ಬಸಪ್ಪನಾಯಕರ ಕಥೆಯು ಚಿತ್ರವಿಚಿತ್ರವಾದುದು. ಬಸಪ್ಪನಾಯಕನು ಎಷ್ಟು ಉದಾರಿಯೋ, ಎಂತಹ ಧರ್ಮಿಷ್ಠನೋ ಅಷ್ಟೇ ಶೃಂಗಾರಪ್ರಿಯ. ಅವನಿಗೆ ಮೂರು ವಿವಾಹಗಳಾಗಿದ್ದರೂ, ಹಲವಾರು ಬಂಗಾರದ ಸ್ತ್ರೀಯರು, ಯೌವನ ಪ್ರಾದುರ್ಭಾವದಿಂದ ಪರಲೋಕವನ್ನೈದುವವರೆವಿಗೆ ರಾಜನ ಉಪಪತ್ನಿ ಯಾದವರು ಬಹುಮಂದಿ. ರಾಜನು ತನ್ನ ಉಪಭೋಗಕ್ಕಾಗಿ ಎಷ್ಟೋ ವಿಲಾಸಗೃಹಗಳನ್ನು ಕಟ್ಟಿಸಿದನು. ಅವುಗಳಲ್ಲೆಲ್ಲಾ ಅಪ್ಸರೆಯರಂಥಾ ನಾರೀಮಣಿಯರನ್ನಿಟ್ಟು ಭೋಗಮಂದಿರಗಳನ್ನಾಗಿ ಮಾಡಿದ್ದನು. ಅಂಥಾ ಬಂಗಾರದ ಸ್ತ್ರೀಯರಲ್ಲಿ ಸೋಮಮ್ಮನೆಂಬುವಳು ರಾಜನಿಗೆ ಅಚ್ಚುಮೆಚ್ಚಿನ ರಮಣಿ. ಅವಳ ಉದರದಲ್ಲಿ ಈ ನೀಲಕಂಠನು ಜನಿಸಿ ದನು. ಮಹಾರಾಜರ ಪ್ರೇಮವು ಇವನಮೇಲೆ ಬಾಲ್ಯದೆಸೆಯಲ್ಲಿ ಬಹಳವಾಗಿದ್ದಿತು. ಇವನು ವಿದ್ಯೆಯನ್ನು ಚೆನ್ನಾಗಿ ಕಲಿತಿದ್ದನು. ಮಹಾರಾಜನ ಮರಣಾಂತರ ಯಾವುದೋ ವೈರಾಗ್ಯದಲ್ಲಿ ಇವನು ಮುಳುಗಿದನು. ಯಾವಾಗಲೂ ಯೋಗಿಯಂತೆ ಜಟೆಗಳನ್ನು ಬೆಳೆಸಿ ಕೊಂಡು ಅನೇಕ ವಿಧವಾದ ಮಂತ್ರತಂತ್ರಗಳನ್ನು ಅಭ್ಯಾಸಮಾಡುತ್ತಾ ಮಲ್ಲಿಕಾರ್ಜುನಕ್ಷೇತ್ರದಲ್ಲಿಯೇ ಇರುತ್ತಿದ್ದನು. ಅಭಿರಾಮಸ್ವಾಮಿಗೆ ಇವನ ಜನ್ಮವೃತ್ತಾಂತವು ಚೆನ್ನಾಗಿ ಗೊತ್ತಿದ್ದಿತು. ಅಭಿರಾಮಸ್ವಾಮಿ ಯಲ್ಲಿ ಮಹತ್ತರ ಭಕ್ತಿಭಾವವನ್ನಿಟ್ಟು ಈ ನೀಲಕಂಠನು ಸೇವೆಗೈಯ್ಯು ತ್ತಿದ್ದನು. ಆ ಗುರುವಿಗೆ ಚಿನ್ನ ಮಾಡುವುದಕ್ಕೆ ಬರುತ್ತದೆಂದೂ, ಆ ರಹಸ್ಯವನ್ನು ತಾನು ಕಲಿಯಬೇಕೆಂದೂ, ಈ ನೀಲಕಂಠನು ಅಭಿರಾಮಸ್ವಾಮಿಯ ಆಶ್ರಯ ಮಾಡುತ್ತಿದ್ದನು. ಇವನನ್ನು ಎಲ್ಲರೂ "ಶಿವಾಚಾರ್ಯ ಶಿವಾಚಾರ್ಯ" ಎಂದು ಕರೆಯುತ್ತಿದ್ದರು. ವಿರೂಪಾಕ್ಷನಿಗೂ ಈ ಶಿವಾಚಾರ್ಯನಿಗೂ ವಿಶೇಷ ಸ್ನೇಹವಿದ್ದಿತು. ಅದೇ ಸಮಯದಲ್ಲಿಯೇ

ಭೈರವಿಯ ಪರಿಚಯವು ಈ ನೀಲಕಂಠನಿಗೆ ಆಯಿತು. ನೀಲಕಂಠನು ಮಹತ್ಪ್ರಯತ್ನಮಾಡಿ ಭೈರವಿಯ ಸ್ನೇಹಮಾಡಿದ್ದನು. ಭೈರವಿಯು ಮಾತ್ರ ನೀಲಕಂಠನನ್ನು ಎಂದೂ ನಂಬುತ್ತಿರಲಿಲ್ಲ. ಈ ಶಿವಾಚಾರ್ಯನು ತನ್ನಲ್ಲಿ ಕಾಮಾಸಕ್ತನಾಗಿ ತನ್ನ ಹಿಂದೆ ಅಲೆಯುತ್ತಿದ್ದಾನೆಂದು ಭೈರವಿಗೆ ತಿಳಿದಿದ್ದಿತು. ಭೈರವಿಯೂ ಶಿವಾಚಾರ್ಯನೂ ಅರ್ಧರಾತ್ರಿಯ ಸಮಯ ಗಳಲ್ಲಿ ಎಷ್ಟೋಬಾರಿ ಆ ವನಾಂತರಾಳದಲ್ಲಿ ಅಲೆಯುತ್ತಿದ್ದರು. ಭೈರವಿಗೆ ನೀಲಕಂಠನನ್ನು ಕಂಡರೆ ಸ್ವಲ್ಪವೂ ಭಯವಿರಲಿಲ್ಲ. ಅವನು ಅತ್ಯಂತ ಕಾಮುಕನಾಗಿ ತನ್ನನ್ನು ಬಲಾತ್ಕರಿಸಿದರೆ ತ್ರಿಶೂಲದಿಂದ ಒಂದೇಬಾರಿಗೆ ಅವನನ್ನು ಮೃತ್ಯುವು ಆಲಿಂಗಿಸುವಂತೆ ಮಾಡುತ್ತೇನೆಂಬ ಧೈರ್ಯವು ಭೈರವಿಗಿತ್ತು. ನೀಲಕಂಠನು ಮಾತ್ರ ಭೈರವಿಯೊಡನೆ ಬಹಳ ಸ್ನೇಹದಿಂದ ಮಾತನಾಡುತ್ತಿದ್ದನು. ಅವನು ಭೈರವಿಯು ತನ್ನಲ್ಲಿ ಮಲಿದೇ ಇದ್ದಾಳೆಂದು ಸಂಪೂರ್ಣವಾಗಿ ನಂಬಿದ್ದನು. ಪುರುಷರೇ ಹೀಗೆ. ಕಲ್ಪನಾರಾಜ್ಯದಲ್ಲಿ ಇಂಥಾ ಎಷ್ಟೋ ಮಧುರಕಲ್ಪನೆಗಳನ್ನು ಮಾಡಿ ಕೊಂಡು ಸ್ತ್ರೀಯರಲ್ಲಿ ಮೋಸಹೋಗುತ್ತಾರೆ. ನೀಲಕಂಠನು ತಾನು ಭವಾನೀರಾಣಿಯ ಮಗನೆಂದೂ, ಭವಾನೀರಾಣಿಗೂ ಮಹಾರಾಜರಿಗೂ ಗುಪ್ತವಾಗಿ ವಿವಾಹವಾಗಿತ್ತೆಂದೂ, ಅವರ ದಾಂಪತ್ಯಾನುಭವದಲ್ಲಿ ಹುಟ್ಟಿದ ಗುಪ್ತಶಿಶುವು ತಾನೆಂದೂ ಭೈರವಿಗೆ ಅನೇಕಾವರ್ತಿ ಹೇಳಿದ್ದನು. ಭವಾನೀರಾಣಿಯ ಸಾಹಚರ್ಯದಲ್ಲಿದ್ದು, ರಾಣಿಯ ವಿಷಯವನ್ನೆಲ್ಲಾ ಸಂಪೂರ್ಣವಾಗಿ ಅರಿತಿದ್ದ ಭೈರವಿಯು ಇವನ ಸುಳ್ಳುಕಂತೆಯ ರಹಸ್ಯವನ್ನೆಲ್ಲಾ ಚೆನ್ನಾಗಿ ಅರಿತಿದ್ದಳು. ಭವಾನೀ ರಾಣಿಯ ಐಶ್ವರ್ಯಕ್ಕೆಲ್ಲಾ ತಾನೇ ಹಕ್ಕುದಾರನೆಂದು ಭೈರವಿಯೊಡನೆ ನೀಲಕಂಠನು ಅನೇಕಬಾರಿ ಹೇಳಿದ್ದನು. ಅಷ್ಟೇ ಅಲ್ಲ. ಈ ರಾಜ್ಯಕ್ಕೆ ತಾನು ಉತ್ತರಾಧಿಕಾರಿಯಾಗುವೆನೆಂದೂ ಅದಕ್ಕಾಗಿಯೇ ಈ ಮಂತ್ರ ತಂತ್ರ ಪುನಶ್ಚರಣೆಗಳನ್ನು ಮಾಡುತ್ತಿರುವೆನೆಂದೂ ಭೈರವಿಯೊಡನೆ ಹೇಳುತ್ತಿದ್ದನು. ವಸ್ತುತಃ ಇದೆಲ್ಲಾ ಅಬದ್ಧಪ್ರಲಾಪವೆಂದು ಅವನಿಗೇ ಗೊತ್ತಿದ್ದಿತು. ಆದರೂ ಹಾಗೆ ಬಡಾಯಿಕೊಚ್ಚಿಕೊಳ್ಳುವುದು ಡಾಂಭಿಕರಿಗೆ

ಸಹಜ. ಭೈರವಿಯು ಇದನ್ನೆಲ್ಲಾ ನಂಬದಿದ್ದರೂ ನಂಬಿದವಳಂತೆ ನಟಿಸುತ್ತಿದ್ದಳು. ವಿರೂಪಾಕ್ಷನು ಸತ್ತುಹೋದಮೇಲೆ ಭೈರವಿಯು ಈ ನೀಲಕಂಠನಮೇಲೆ ಒಂದು ವಿಧವಾದ ಅನುಗ್ರಹ ಬುದ್ಧಿಯನ್ನಿಟ್ಟಿದ್ದಳು. ಆಗಾಗ ಕರುಣೆಯಿಂದ ಮಾತನಾಡಿಸುತ್ತಿದ್ದಳು. ಇದು ನೀಲಕಂಠನ ಪೂರ್ವವೃತ್ತಾಂತ.

ಇಂತಹ ಘಟನಾವಿಶೇಷಗಳಿದ್ದುದರಿಂದಲೇ ಭೈರವಿಯು ಈ ನೀಲಕಂಠನಿಗೆ ತಾನೇ ಯೌವರಾಜ್ಯಪಟ್ಟವನ್ನುಕಟ್ಟಿ ಶ್ರೀರಂಗ ಪಟ್ಟಣಕ್ಕೆ ಸುಲಭವಾಗಿ ಕರೆದೊಯ್ದಳು. ನೀಲಕಂಠನು ಯುವರಾಜನೆಂದರೆ ಒಪ್ಪುವಹಾಗಿತ್ತು. ಅವನು ಸುರೂಪ ಶರೀರವುಳ್ಳವನಾಗಿದ್ದನು. ಮಾತಿನಲ್ಲಿ ಗಟ್ಟಿಗನಾಗಿದ್ದನು. ತೇಜೋವಂತನಾಗಿದ್ದನು. ಅನೇಕ ರಾಜ ಚಿಹ್ನೆಗಳು ಅವನ ಮುಖದಲ್ಲಿ ಪ್ರಕಾಶಮಾನವಾಗಿದ್ದವು. ಎಷ್ಟೋ ವಿಷಯಗಳಲ್ಲಿ ಚಿನ್ನಬಸಪ್ಪನಾಯಕನಿಗೂ ಇವನಿಗೂ ಹೋಲಿಕೆಯಿದ್ದಿತು. ಚಿನ್ನಬಸಪ್ಪನಾಯಕನಿಗಿಂತಲೂ ಪ್ರಾಗಲ್ಭ್ಯತೆಯಿತ್ತೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಆದುದರಿಂದ ಭೈರವಿಯ ತಂತ್ರವು ಪರಿಪೂರ್ಣವಾಗಿ ಫಲಿಸಿತು.

ಈ ಯುವರಾಜನು ಹೈದರನ ಅರಮನೆಗೆ ಪ್ರವೇಶ ಮಾಡಿದನು. ದ್ವಾರಪಾಲಕರು ಅವನನ್ನು ನವಾಬರವರ ಬೈಠಕ್‌ಖಾನೆಗೆ ಕರೆದೊಯ್ದರು. ಬೈಠಕ್‌ಖಾನೆಯು ವಿಶಾಲವಾದ ಚೌಕಿ. ಆ ಚೌಕಿಯಲ್ಲಿ ಎಣ್ಣೆಗೆಂಪಿನ ರತ್ನಗಂಬಳಿಯು ಹಾಸಿದ್ದಿತು. ಮೃದುವಾದ ಲೋಡು ದಿಂಬುಗಳಿಂದ ಅಲಂಕೃತವಾಗಿದ್ದಿತು. ನವಾಬ್ ಹೈದರಲ್ಲೀಖಾನನು ಲೋಡಿನ ಮೇಲೆ ಕುಳಿತಿದ್ದನು. ಪಕ್ಕದಲ್ಲಿ ದಿಂಬನ್ನೊರಗಿಕೊಂಡು ಪೂರ್ಣಯ್ಯನವರು ಕುಳಿತಿದ್ದರು. ನಗರದ ಯುವರಾಜನು ದೂರದಲ್ಲಿಯೇ ನಿಂತು ಸಲಾಂಮಾಡಿದನು. ಹೈದರಲ್ಲೀಖಾನನು ನಗುತ್ತಾ ಸಲಾಂಮಾಡಿ ನಗರದ ಯುವರಾಜನನ್ನು ಎದುರಿಗೆ ಸಿದ್ಧವಾಗಿದ್ದ ಶಿವಾಶಿಯಮೇಲೆ ಕುಳಿತುಕೊಳ್ಳುವಂತೆ ಅಪ್ಪಣೆಮಾಡಿದರು. ನಗರದ ಯುವರಾಜನು ಪೂರ್ಣಯ್ಯನವರಿಗೆ ವಿನಯದಿಂದ ಕೈಮುಗಿದು

ಆಸನದಲ್ಲಿ ಕುಳಿತು ಕೊಂಡನು. ಹೈದರಲ್ಲೀಖಾನರು ಪೂರ್ಣಯ್ಯ ನವರನ್ನು ಸಂಭೋಧಿಸಿ.

"ಮಂತ್ರಿಗಳೇ, ಇವರು ನಗರದ ಯುವರಾಜರಂತೆ ಹೆಸರು ಚೆನ್ನಬಸಪ್ಪನಾಯಕರಂತೆ. ನಮ್ಮ ಆಶ್ರಯಕ್ಕೆ ಬಂದಿದ್ದಾರೆ. ಇವರನ್ನು ನಗರದ ಸಿಂಹಾಸನದ ಮೇಲೆ ಕುಳ್ಳಿರಿಸುವುದಾಗಿ ಅಭಯ ವಚನ ಕೊಟ್ಟಿದ್ದೇನೆ. ತಾವು ಇವರೊಡನೆ ಸಂಭಾಷಿಸೋಣವಾಗಲಿ."

ಪೂರ್ಣಯ್ಯನವರು, "ಯುವರಾಜರವರೇ, ತಾವು ನಗರವನ್ನು ಬಿಟ್ಟು ಏಕಾಏಕೀ ನಮ್ಮ ಆಶ್ರಯಕ್ಕೆ ಬಂದುದು ಆಶ್ಚರ್ಯಕರವಾಗಿದೆ." ಎಂದರು.

"ಮಂತ್ರಿಗಳವರೇ, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ನಗರದ ಪರಸ್ಥಿತಿಯು ಹಾಗಿದೆ. ಅದನ್ನೆಲ್ಲಾ ವಿವರಿಸಿ ಹೇಳಲು ನನಗೆ ನಾಚಿಕೆ ಯಾಗುತ್ತದೆ."

"ಒಳ್ಳೆಯದು. ನಾವು ಸೈನ್ಯ ಸಮೇತ ನಗರದ ಮೇಲೆ ಯುದ್ಧಕ್ಕೆ ಹೋದರೆ ನಮಗೇ ಜಯುವಾಗುತ್ತದೆಂದು ತಮಗೆ ಭರವಸೆಯೇನಿದೆ?"

"ಸಂಪೂರ್ಣ ಭರವಸೆಯಿದೆ. ನಗರದ ರಾಣಿಯ ಮೋಹ ಜಾಲಕ್ಕೆ ಸಿಲುಕಿದ ನಾಲ್ಕಾರು ಮಂದಿ ಪ್ರಬಲರಾದ ವ್ಯಕ್ತಿಗಳು ಹೊರತು ಉಳಿದ ಸಮಸ್ತರ ಪ್ರೇಮವೂ ನನ್ನ ಮೇಲಿದೆ. ತಮ್ಮ ಸೈನ್ಯದ ಬಿರುಗಾಳಿಯು ನಗರದ ಮೇಲೆ ಬೀಸಿದರೆ ಆಗ ನಗರದ ರಾಜ್ಯವೆಲ್ಲವೂ ನನ್ನ ವಶವರ್ತಿ ಯಾಗುವುದು."

"ಒಳ್ಳೆಯದು. ಈ ಯುದ್ಧದಲ್ಲಿ ನಮಗೆ ಜಯವಾಗುತ್ತದೆಂಬ ಭರವಸೆಯು ನನಗೂ ಇದೆ. ನೀವು ಮೈಸೂರಿನ ಸಿಂಹಾಸನಕ್ಕೆ ಅಧೀನ ರಾಗಿರಲು ಸಂಪೂರ್ಣವಾಗಿ ಒಪ್ಪಿಕೊಂಡಿರುವಿರೋ?"

"ಒಪ್ಪಿಕೊಂಡೆ ತಮ್ಮ ಆಶ್ರಯಕ್ಕೆ ಬಂದಿದ್ದೇನೆ."

"ಮಹಾ ಮಂತ್ರಿ ರಾಮಕೃಷ್ಣರು ಈ ಪರಿಗೆ ಒಪ್ಪುತ್ತಾರೆಯೋ?"

"ಒಪ್ಪಿದ್ದಾರೆ. ಅವರ ಪ್ರೇರಣೆಯಿಂದಲೇ ನಾನು ತಮ್ಮ ಸನ್ನಿಧಾನಕ್ಕೆ ಬಂದಿದ್ದೇನೆ. ಅವರು ದುರವಸ್ಥೆಯಲ್ಲಿದ್ದಾರೆ. ಬಂಧಿತರಾಗಿದ್ದಾರೆ."

ಪೂರ್ಣಯ್ಯನವರು ಸಣ್ಣ ನಗುವನ್ನು ನಕ್ಕು, "ಯುವರಾಜರವರೇ, ರಾಮಕೃಷ್ಣರು ಬಿಡಿಸಿಕೊಂಡು ಹೋಗಬೇಕೆಂದರೆ ಸಹಸ್ರ ಮಾರ್ಗ ಗಳನ್ನು ಕಲ್ಪಿಸಬಲ್ಲ ಬುದ್ಧಿಚಾತುರ್ಯವು ಅವರಿಗೆ ಇದೆ. ಅವರು ಬಂಧನದಲ್ಲಿದ್ದಾರೆಂದರೆ ಆಶ್ಚರ್ಯದ ಮಾತು" ಎಂದರು.

"ಹೌದು ಮಹಾಶಯರೇ, ತಮ್ಮ ಮಾತು ನಿಜ. ರಾಣಿಯು ತನ್ನ ಅವಿವೇಕದಿಂದ ಮಹಾಮಂತ್ರಿಗಳನ್ನು ಸೆರೆಯಲ್ಲಿಡಿಸಿದಳು. ಮಹಾಮಂತ್ರಿಗಳು ಅಲ್ಲಿಂದಲೇ ಅಭಿಯೋಗ ನಡೆಸುತ್ತಿದ್ದಾರೆ. ಈಗ ನನ್ನನ್ನು ಇಲ್ಲಿಗೆ ಕರೆತಂದಿರುವ ಭೈರವಿಯು ಮಹಾಮಂತ್ರಿಗಳ ಅಂತರಂಗ ನಿಯೋಗದವಳು. ಅವರ ತಂತ್ರದಿಂದಲೇ ನಾನು ಇಲ್ಲಿಗೆ ಬರುವಂತೆ ಸಂಧಿಯು ಏರ್ಪಟ್ಟಿರ ಬಹುದೆಂದರೂ ಆಶ್ಚರ್ಯವಲ್ಲ." ಯುವರಾಜನು ಗಂಭೀರವಾಗಿ ನುಡಿದನು.

ಪೂರ್ಣಯ್ಯ ನಗುತ್ತಾ, "ಯುವರಾಜರು ಬುದ್ಧಿವಂತರೆಂದೇ ಕಾಣುತ್ತದೆ. ಒಳ್ಳೆಯದು ನಾಯಕರೆ, ನಗರದಲ್ಲಿ ಮಹತ್ತರವಾದ ಸ್ವರ್ಣನಿಧಿಯಿದೆಯೆಂದು ಕೇಳಿದ್ದೇವೆ. ಅವನ್ನು ಪೂರ್ತಿಯಾಗಿ ನಮಗೊಪ್ಪಿಸುವ ಷರತ್ತಿಗೆ ನೀವು ಒಡಂಬಡಬೇಕು" ಎಂದರು.

ಯುವರಾಜನು ಗಾಂಭೀರ್ಯದಿಂದ ತಲೆಯನ್ನಲ್ಲಾಡಿಸುತ್ತಾ, "ಅದಕ್ಕೆ ನಾನು ಒಡಂಬಡುವಂತಿಲ್ಲ" ಎಂದನು.

"ಪ್ರಯೋಜನವಿಲ್ಲದೇ ಇಷ್ಟು ಸನ್ನಾಹವನ್ನು ಮಾಡಿಕೊಂಡು ನಗರಕ್ಕೆ ನಾವು ಬರುವೆವೆಂದು ನೀವು ಸ್ವಪ್ನದಲ್ಲಾದರೂ ಎಣಿಸಿರುವಿರಾ?"

"ಇಲ್ಲ. ನಿಮ್ಮ ಸಕಲ ಖರ್ಚುಗಳನ್ನೂ ನಾವು ಕಟ್ಟಿಕೊಡುತ್ತೇವೆ."

"ಅದು ಪರದೇಶಿಗಳಾದ ಪಿರಂಗಿಯವರ ಮಾತು. ಪಿರಂಗಿಯವರು ಖರ್ಚುಕೊಟ್ಟ ರಾಜರಕಡೆ ಸೇರಿಕೊಂಡು ಯುದ್ಧಮಾಡುವರೆಂದು ನಿಮಗೆ ಗೊತ್ತಿದೆ. ಅಂತಹ ಹೀನ ಕಾರ್ಯವನ್ನು ನಾವು ಮಾಡುವವರಲ್ಲ. ನಗರವು ಅದರಲ್ಲಿರುವ ಸಕಲ ಸಂಪತ್ತುಗಳೊಡನೆ ನಮ್ಮ ಅಧೀನ ವಾಗಬೇಕು. ನಾವು ನೆಪಮಾತ್ರಕ್ಕೆ ನಿಮ್ಮನ್ನು ರಾಜರನ್ನಾಗಿ

ಮಾಡುವೆವು. ನೀವು ಆತಂಕವಿಲ್ಲದೇ ಆ ರಾಜಭೋಗಗಳನ್ನು ಅನುಭವಿಸಬಹುದು."ಎಂದನು.

ಯುವರಾಜನು ಮೌನವಾಗಿ ಕುಳಿತನು.

ಹೈದರನು ಗಂಭೀರಸ್ವರದಿಂದ, "ಯುವರಾಜರೇ! ಮಾತನಾಡಲೊಲ್ಲರೇಕೆ?"ಎಂದನು.

"ವೃಥಾ ಮಾತಿನಿಂದೇನು ಫಲ? ಒಪ್ಪಿದ ಮಾತನ್ನು ನಡೆಸಿಕೊಡಬೇಕು. ಮೈಸೂರಿನ ರಾಜರಿಗೆ ನಾವು ಅಧೀನರೆಂದು ಒಪ್ಪಿಕೊಳ್ಳುತ್ತೇವೆ. ಮತ್ತಾವ ಷರತ್ತಿಗೂ ನಾವು ಒಪ್ಪುವುದಿಲ್ಲ. ಅಷ್ಟೇಅಲ್ಲ ರಾಣಿ ಚೆಲುವಮ್ಮಣ್ಣಿಯು ಯುದ್ಧದಲ್ಲಿ ಮಡಿದುಹೋದರೆ ಒಳ್ಳೆಯದೇ ಆಯಿತ. ಇಲ್ಲದೇ ರಾಣಿಯು ಶೆರೆಸಿಕ್ಕಿದರೆ ಅವಳನ್ನು ನಮಗೊಪ್ಪಿಸಬೇಕು."

"ರಾಣಿಯನ್ನು ನಿಮಗೊಪ್ಪಿಸಿದರೆ ಏನು ಮಾಡುವಿರಿ?"

"ಆ ರಾಣಿಯನ್ನು ಗೌರವದಿಂದ ಕಾಪಾಡುವುದು ನಮ್ಮ ಭಾರ."

"ಸರಿ! ಆ ರಾಣಿಯಿಂದ ನಮಗಾಗಬೇಕಾದ ಕಾರ್ಯವೇನು? ಒಳ್ಳೆಯದು, ನೀವು ಹೇಳಿದ ಷರತ್ತುಗಳಿಗೆ ನಿಮ್ಮ ಪಾಳೆಯಗಾರರೆಲ್ಲರೂ ಒಪ್ಪುವರೋ?"

"ನಾವು ಅವರನ್ನು ಒಪ್ಪಿಸುತ್ತೇವೆ."

ಹೈದರನು ಮನಸ್ಸಿನಲ್ಲಿಯೇ "ಯುವರಾಜನು ಸಮರ್ಥನಾಗಿದ್ದಾನೆ. ಧೈರ್ಯದಿಂದ ಮಾತನಾಡುತ್ತಾನೆ. ಏಕಾಕಿಯಾಗಿ ನಮ್ಮಲ್ಲಿಗೆ ಬಂದು ನಮ್ಮ ಷರತ್ತುಗಳನ್ನು ಒಪ್ಪುವುದಿಲ್ಲವೆಂದು ಹೇಳುವ ಎದೆಗಾರತನವು ಇವನಿಗಿರುವುದು ಶ್ಲಾಘನೀಯವೇ ಸರಿ" ಎಂದು ಆಲೋಚಿಸುತ್ತಿದ್ದನು.

ಮಂತ್ರಿ ಪೂರ್ಣಯ್ಯನು "ಒಳ್ಳೆಯದು ಯುವರಾಜರೇ! ನಾವು ಈ ಷರತ್ತುಗಳಿಗೆ ಒಪ್ಪುತ್ತೇವೆ. ಈ ರಾಜ್ಯಕ್ಕೆ ಇನ್ನಾರೂ ಹಕ್ಕುದಾರರಿಲ್ಲವೋ?"ಎಂದನು.

ಯುವರಾಜನು ಗಂಭೀರವಾಗಿ ನಗುತ್ತಾ, "ಮತ್ತಾರೂ ಇಲ್ಲ"

ಎಂದು ನುಡಿದನು. ಅಲ್ಲಿಗೆ ಮಾತು ಮುಗಿಯಿತು. ಯುವರಾಜನು ತನ್ನ ಬಿಡಾರಕ್ಕೆ ಹೊರಡಲು ಅಪ್ಪಣೆ ಬೇಡಿದನು.

ಹೈದರನು, "ಯುವರಾಜರೇ! ಮತ್ತೊಂದು ಮಾತು. ಈ ಪ್ರಾತಃಕಾಲ ನಮ್ಮ ಸಮ್ಮುಖಕ್ಕೆ ಬಂದಿದ್ದ ಚತುರೆಯಾದ ಆ ಹುಡುಗಿಯಾರು ?"ಎಂದನು.

ಯುವರಾಜನು ಮಾತನಾಡಲಿಲ್ಲ, ತಲೆಬಾಗಿಸಿದನು.

ಹೈದರನು ಸಣ್ಣ ನಗುವನ್ನು ನಕ್ಕು, "ನೀವಿಬ್ಬರೂ ಒಂದಾಗಿ ಈ ರಾಜ್ಯಭಾರಕ್ಕೆ ಬಂದಿದ್ದೀರೆನ್ನಿರಿ? ಎಲ್ಲವೂ ಅರ್ಥವಾಗುವುದು "ಎಂದನು.

ಯುವರಾಜನು ನಕ್ಕು ಸಣ್ಣ ದನಿಯಿಂದ, "ಹೌದು" ಎಂದನು.

"ಈ ರಾಜ್ಯಕ್ಕೆ ನೀವಿಬ್ಬರೂ ಸಮಭಾಗಿಗಳು.?"

"ಹೌದು, ಹಾಗೆಯೇ ದೇವರ ಮುಂದೆ ಆಣೆಮಾಡಿಕೊಂಡಿದ್ದೇವೆ."

"ಒಳ್ಳೆಯದು" ಎಂದು ಹೇಳಿ ಹೈದರನು ಆಸನದಿಂದೆದ್ದು ಯುವರಾಜನನ್ನು ಭುಜಕ್ಕೆ ಭುಜಕೊಟ್ಟು ಆಲಿಂಗಿಸಿದನು. ಯುವರಾಜನು ಹೈದರನಿಗೆ ನಮ್ರಭಾವದಿಂದ ತಲೆಬಾಗಿ ಪೂರ್ಣಯ್ಯನವರ ಕಡೆ ತಿರುಗಿ ವಿನಯದಿಂದ ಕೈಮುಗಿದು ಅವರಿಬ್ಬರ ಅಣತಿಯನ್ನು ಪಡೆದು ಹೊರಟನು.

ಯುವರಾಜನು ತನ್ನ ಬಿಡಾರಕ್ಕೆ ಬರುವಹೊತ್ತಿಗೆ ಅರ್ಧರಾತ್ರಿಯಾಗಿತ್ತು. ಭೈರವಿಯು ಯುವರಾಜನಿಗಾಗಿ ಕಾದು ಕುಳಿತಿದ್ದಳು. ಅವಳು ಆ ಬಿಡಾರದಲ್ಲಿ ಉಪ್ಪರಿಗೆಯ ಮೇಲೆ ಅಲಂಕೃತಳಾಗಿ ಶೋಭಾಯಮಾನವಾಗಿದ್ದ ವಿಶ್ರಾಂತಿಗೃಹದಲ್ಲಿ ಪರ್ಯಂಕದ ಮೇಲೆ ಕುಳಿತ್ತಿದ್ದಳು. ಕಂದೀಲುಗಳಲ್ಲಿ ಉಜ್ವಲವಾದ ದೀಪಗಳು ಉರಿಯುತ್ತಿದ್ದವು. ಯುವರಾಜನು ಆ ವಿಶ್ರಾಂತಿಗೃಹವನ್ನು ಪ್ರವೇಶಿಸುತ್ತಲೇ ಭೈರವಿಯು ಎದ್ದು ಯುವರಾಜನ ಕೈಹಿಡಿದು ಆ ಮಂಚದ ಮೇಲೆ ಕುಳ್ಳಿರಿಸಿದಳು. ಯುವರಾಜನು ನವಾಬ್ ಹೈದರಲ್ಲೀಖಾನರವರ, ಮತ್ತು ಪೂರ್ಣಯ್ಯನವರ ಸಮ್ಮುಖದಲ್ಲಿ ನಡೆದ ಮಾತುಕಥೆಗಳನ್ನೆಲ್ಲಾ

ವಿವರವಾಗಿ ಭೈರವಿಯೊಡನೆ ಹೇಳಿದನು. ಭೈರವಿಯು ಅತ್ಯಂತ ಸಂತೋಷಪಟ್ಟವಳಾಗಿ ಆ ಆನಂದೋದ್ವೇಗದಲ್ಲಿ ಯುವರಾಜನನ್ನು ಆಲಿಂಗಿಸಿ ಅವನ ಅರುಣಪ್ರಭಾಮಯವಾದ ಕಪೋಲವನ್ನು ಚುಂಬಿಸಿ "ಯುವರಾಜ, ರಾಯಭಾರವನ್ನು ಚೆನ್ನಾಗಿಮಾಡಿದೆ. ನೀನು ಯುವ ರಾಜನೇ ಹೌದು. ನಮ್ಮ ವಿಜಯವು ಖಂಡಿತ. ರಾಣಿಗೆ ತಕ್ಕ ಪ್ರತೀ ಕಾರ ಮಾಡಿದಂತಾಯಿತು." ಎಂದು ಹೇಳಿ ಮತ್ತೊಮ್ಮೆ ನೀಲಕಂಠನ ಕಂಠವನ್ನು ಬಿಗಿದಪ್ಪಿ ಚುಂಬಿಸಿದಳು. ಆ ಉತ್ಸಾಹಭರದಲ್ಲಿ, ಆ ಪ್ರಶಾಂತವಾದ ವಿಶ್ರಾಂತಿಗೃಹದಲ್ಲಿ ಆ ಉಜ್ವಲವಾದ ದೀಪಪ್ರಭೆಯಲ್ಲಿ ಆ ಉತ್ಸಾಹದಿಂದ ಶೋಭಾಯಮಾನವಾದ ಭೈರವಿಯ ಮುಖಕಮಲ ವನ್ನು ಯುವರಾಜನು ನೂರಾರು ಬಾರಿ ಚುಂಬಿಸಿದನು. ಆ ಭೈರವಿಯ ತೇಲುವ ಕಣ್ಣುಗಳಿಂದ ವರ್ಷಿತವಾಗುತ್ತಿರುವ ಅಮೃತವನ್ನು ಹೀರು ತ್ತಿರುವ ಆ ಮುಖಕಮಲದಲ್ಲಿ ಭೃಂಗದಂತೆ ತೃಪ್ತನಾಗದೇ ಚುಂಬಿ ಸಿದನು.

---

## ೨೪

## ಹೈದರನ ಮಹಾಸೈನ್ಯ

ಮೈಸೂರಿನ ಮಹಾಸೈನ್ಯವು ನಗರದಮೇಲೆ ಯುದ್ಧಕ್ಕೆ ಹೊರಟೇ ಬಿಟ್ಟಿತು. ಕಾಮಾಟಿಗಳೂ ಕಾಲಾಳುಗಳ ಪಡೆಯೂ ಮುಂದೆಮುಂದೆ ಹೊರಟಿತು. ಡೇರಾಗಳನ್ನೂ ಇತರ ಸಾಮಗ್ರಿಗಳನ್ನೂ ಹೊತ್ತು ಕೊಂಡು ದೊಡ್ಡ ಆನೆಯ ಪಡೆಯು ಮುಂದೆ ಹೊರಟಿತು. ಕುದುರೆಯ ಸೈನ್ಯ, ಒಂಟೆಯ ಶಿಪಾಯಿಗಳೂ ಹಿಂದೆ ಹೊರಟರು. ಸೇನಾಧಿಕಾರಿ ಗಳೂ ತಮ್ಮತಮ್ಮ ಅಂಗರಕ್ಷಕರ ಪಡೆಗಳೊಡನೆ ಹೊರಟರು. ಅಡಿಗೆ ಯವರು, ಉಗ್ರಾಣದವರು, ಎತ್ತಿನಗಾಡಿಗಳಲ್ಲಿಯೂ, ಒಂಟೆಯ ಹೇರು ಗಳಮೇಲೆಯೂ ತಮ್ಮತಮ್ಮ ಪರಿಕರಗಳನ್ನು ಸಾಗಿಸಿಕೊಂಡು ಹೊರ

ಟರು. ಶ್ರೀರಂಗಪಟ್ಟಣದಿಂದ ನಗರದಕಡೆಗೆ ಐವತ್ತುಸಹಸ್ರ ದಂಡು ಹೊರಟಿತು. ಈ ದಂಡು ಅನೇಕ ತುಕ್ಕಡಿಗಳಾಗಿ ಮುಂದುವರಿಯ ಲಾರಂಭಿಸಿತು. ಇಪ್ಪತ್ತು ಮೈಲಿಗಳ ದಾರಿಯುದ್ದಕ್ಕೂ ಈ ದಂಡು ಗಳು ನಡೆದುನಡೆದು ಹೋಗುತ್ತಲೇ ಇದ್ದವು. ಎಲ್ಲದಕ್ಕೂ ಹಿಂದುಗಡೆ ಆನೆಅಂಬಾರಿಗಳು, ಅದರ ಹಿಂದುಗಡೆ ಆನೆಯುಮೇಲೇರಿಸಿದ ನಗಾರಿ ಗಳು, ಅದರ ಹಿಂದುಗಡೆ ರಣವಾದ್ಯದ ವಾದ್ಯಗಾರರು, ಎಲ್ಲಕ್ಕೂ ಹಿಂದೆ ನವಾಬ್ ಹೈದರಲ್ಲೀಖಾನರವರ ಖಾಸ್‌ಸೈನ್ಯ, ಆ ಸೈನ್ಯದಿಂದ ಸುತ್ತು ವರಿಯಲ್ಪಟ್ಟ ಎರಡು ಮ್ಯಾನಾಗಳು, ಒಂದು ಖಾಸ್ ಹೈದರಲ್ಲೀಖಾ ರವರಿಗಾಗಿ, ಮತ್ತೊಂದು ಸರ್ವಸೇನಾಧಿಪತಿಗಳಾದ ಮಂತ್ರಿ ಮಹಮ ದಾಲಿಯುವರಿಗಾಗಿ. ಅವರಿಬ್ಬರೂ ಅಶ್ವಾರೂಢರಾಗಿ ದಂಡಯಾತ್ರೆ ಹೊರಟರು. ಆ ಸೈನ್ಯವು ಐದುಸಹಸ್ರ ಕಟ್ಟಾಳುಗಳ ಸೈನ್ಯ. ಎಷ್ಟೋ ಯುದ್ಧಗಳಲ್ಲಿ ವಿಜಯವನ್ನು ಪಡೆದ ಸೈನ್ಯ. ಆ ಸೈನ್ಯಮಧ್ಯದಲ್ಲಿ ನಗರದ ಯುವರಾಜರ ಮತ್ತು ಭೈರವಿಯ ಎರಡು ಮ್ಯಾನಾಗಳು. ಹೀಗೆ ಸೈನ್ಯಸಮುದ್ರವು ನಗರದಕಡೆ ಪ್ರವಹಿಸಲಾರಂಭಿಸಿತು. ಅಂಗಡಿ ಯವರೂ, ಆಟಗಾರರೂ, ಕಣಿ ಹೇಳುವವರೂ, ಜ್ಯೋತಿಷ್ಯ ಹೇಳು ವವರೂ, ಮಿಠಾಯಿ ಮಾರುವವರೂ, ಶರಬತ್ತುಗಳನ್ನು ತಯಾರಿಸಿ ಮಾರುವವರೂ ಬಹುಮಂದಿ ಹೊರಟರು. ಈ ಸೈನ್ಯದಲ್ಲಿ ರಾಯಭಾರಿ ಗಳು, ರಾಯಸದವರು, ಗುಪ್ತಚರರು, ಅನೇಕರಿದ್ದರು. ಹಿಂದುಗಳು, ಮುಸಲ್ಮಾನರು, ದಕ್ಷಿಣದೇಶದವರು, ಮಹಾರಾಷ್ಟ್ರದೇಶದವರು, ಮಳ ಯಾಳದವರು, ಹೀಗೆ ನಾನಾದೇಶದ ಜನರು, ಆ ಸೈನ್ಯದಲ್ಲಿದ್ದರು. ಅವರೆಲ್ಲರೂ ನಾನಾದೇಶಭಾಷೆಗಳನ್ನು ಆಡಿಕೊಳ್ಳುತ್ತಿದ್ದರೂ ಹಿಂದೂ ಸ್ಥಾನಿಯು ಫೌಜುದಾರೀ ಭಾಷೆ. ಈ ಸೈನ್ಯದಲ್ಲಿ ಒಬ್ಬಳಾದರೂ ಹೆಂಗಸಿರಲಿಲ್ಲ. ಮಹಮುದಾಲಿಯುವರ ಸೇನಾಧಿಪತ್ಯದಲ್ಲಿ ಸೈನ್ಯವು ಹೊರಟರೆ ಯಾವ ನೆಪದಿಂದಲೂ ಆ ಸೈನ್ಯದಲ್ಲಿ ಹೆಂಗಳಿರಕೂಡದು. ಆ ಮಹಾಸೈನ್ಯದಲ್ಲಿ ಹೆಂಗಸೆಂದರೆ ಭೈರವಿಯೊಬ್ಬಳೇ. ಈ ಸೈನ್ಯವು ನಗರಕ್ಕೆ ತಲುಪಲು ಮೂವತ್ತು ಮೊಕ್ಕಾಮುಗಳು ಏರ್ಪಡಿಸಲ್ಪಟ್ಟಿದ್ದವು. ಹೀಗೆ

ಈ ಮಹಾಸೈನ್ಯವು ಮೊಕ್ಕಾಮಿನಮೇಲೆ ಮೊಕ್ಕಾಮುಗಳನ್ನು ಮಾಡುತ್ತಾ ನಗರದ ರಾಜ್ಯದ ಗಡಿಯನ್ನು ಸೇರಲು ಮೂರುತಿಂಗಳ ಕಾಲ ಹಿಡಿಯಿತು. ಈ ಸೈನವು ಈಗ ನಗರಂದ ರಾಜ್ಯದೊಳಗೆ ನುಗ್ಗಿ ಶಿವಮೊಗ್ಗೆಯ ತುಂಗಾನದಿಯ ದಂಡೆಯಮೇಲೆ ವಿಶಾಲವಾದ ಬೀಡು ಬಿಟ್ಟದೆ.

ಈ ಶಿಬಿರವು ಎರಡು ಮೈಲಿಗಳ ಅಗಲ, ಎರಡು ಮೈಲಿಯ ಉದ್ದವುಳ್ಳ ಪ್ರದೇಶದಲ್ಲಿ ಝುಂಡಾಹಾಕಿದೆ. ಈ ಮಧ್ಯದಲ್ಲಿ ಹೈದರಲ್ಲೀ ಖಾನರವರಿಗೆ ಪ್ರಶಸ್ತವಾದ ಗುಡಾರವು ಏರ್ಪಾಡಾಗಿದೆ. ಅವರ ಗುಡಾರದ ಸಮೀಪದಲ್ಲಿಯೇ ನಗರದ ಯುವರಾಜರ ವಾಸಭವನವು ನಿರ್ಮಿತವಾಗಿದೆ. ಸ್ವಲ್ಪದೂರದಲ್ಲಿ ಆಧ್ಯತೆಯಿಂಧ ಎಲ್ಲ ಗುಡಾರಗಳಿಗಿಂತಲೂ ಎತ್ತರವಾದ ಮಹಮುದಾಲಿಯವರ ಗುಡಾರವು ನಿರ್ಮಿತವಾಗಿದೆ. ಸುತ್ತಲೂ ನೂರಾರು ಸೇನಾನಾಯಕರ ಸಣ್ಣ ಸಣ್ಣ ಗುಡಾರಗಳು ಹಾಕಲ್ಪಟ್ಟಿವೆ. ಸುತ್ತಲೂ ಸೈನಿಕರ ವಾಸಕ್ಕೆ ನೆರಳು ಮಾಡಲ್ಪಟ್ಟಿದೆ. ಈ ಶಿಬಿರಕ್ಕೆ ಕೋಟೆ ಕಟ್ಟಿದಂತೆ ಒಂದು ಕಡೆ ಕುದುರೆಯ ಸೈನ್ಯ, ಮತ್ತೊಂದು ಕಡೆ ಒಂಟೆಯ ಸೈನ್ಯವು ಬೀಡುಬಿಟ್ಟಿದೆ. ಎಲ್ಲದಕ್ಕೂ ಮುಂಭಾಗದಲ್ಲಿ ಆನೆಗಳನ್ನು ಕಟ್ಟಿದ್ದಾರೆ. ಅಲ್ಲಿಯೇ ಎತ್ತರವಾದ ನಿಚ್ಚಣಿಗೆಯನ್ನು ಕಟ್ಟಿ ಅದಕ್ಕೆ ಮೈಸೂರಿನ ಧ್ವಜಗಳನ್ನು ಎತ್ತಿ ಕಟ್ಟಿದ್ದಾರೆ. ಅಲ್ಲಿ ನಗಾರಿ ನೌಬತ್ತುಗಳು ಇಡಲ್ಪಟ್ಟಿದೆ. ಹೀಗೆ ಹೈದರಲ್ಲೀಖಾನರವರ ಮಹಾಸೈನ್ಯವು ಬಂದು ನಗರದ ರಾಜ್ಯವನ್ನು ಹೊಕ್ಕು ಬೀಡು ಬಿಟ್ಟಿದೆ.

ಶ್ರೀರಂಗಪಟ್ಟಣದ ಸೈನ್ಯವು ನಗರದಮೇಲೆ ಹೊರಡುತ್ತದೆಂಬ ಸಮಾಚಾರವು ವಾಯುವೇಗದಿಂದ ರಾಣಿಗೆ ತಿಳಿದುಬಂದಿತು. ರಾಣಿಯು ತನ್ನ ಸೇನಾನಾಯಕರಾದ ರಾಮರಾಯನೇ ಮುಂತಾದ ಆಪ್ತರನ್ನು ಕರೆಸಿ ಸಮಾಲೋಚನೆ ಮಾಡತೊಡಗಿದಳು. ಹೈದರನು ಏಕಾಏಕೀ ನಗರದಮೇಲೆ ದಂಡೆತ್ತಿ ಬರುತ್ತಿರುವುದು ಆಶ್ಚರ್ಯವೆಂದೂ ತಾವು ಈಗ ಏನು ಮಾಡಬೇಕೆಂದೂ ಅವರು ಆಲೋಚಿಸತೊಡಗಿದರು.

ಶ್ರೀರಂಗಪಟ್ಟಣದ ಸೈನ್ಯವು ಮೊಕ್ಕಾಮಿನಮೇಲೆ ಮೊಕ್ಕಾಂ ಮಾಡುತ್ತಾ ಬರುತ್ತಿದೆಯೆಂದು ಗುಪ್ತಚಾರರಿಂದ ಪ್ರತಿದಿನವೂ ತಿಳಿಯುತ್ತಿದ್ದಿತು. ಆದರೆ ಯುವರಾಜನ ಸಮಾಚಾರವು ಮಾತ್ರ ರಾಣಿಗೆ ಸುತರಾಂ ತಿಳಿಯ ಬರಲಿಲ್ಲ. ರಾಣಿಯು ತನ್ನ ಸೇನಾನಾಯಕರಿಗೆ ಯಥೇಚ್ಛವಾಗಿ ಧನಕನಕಗಳನ್ನು ಕೊಟ್ಟು ಸೈನ್ಯವನ್ನು ಸಜ್ಜುಗೊಳಿಸುವಂತೆ ಉತ್ಸಾಹ ವನ್ನು ತುಂಬುತ್ತಿದ್ದಳು. ರಾಣಿ ಚೆಲುವಮ್ಮಣ್ಣಿಗೆ ಧೈರ್ಯವಿಲ್ಲದಿದ್ದರೂ ಆತಂಕವಿರದೇ ಇರಲಿಲ್ಲ. ಅವಳು ರಾಮರಾಯನನ್ನು ಅಂತರಂಗದಲ್ಲಿ ಕರೆಸಿಕೊಂಡು ಪುನಃ ಪುನಃ ಸಮಾಲೋಚನೆ ನಡೆಸುತ್ತಿದ್ದಳು. ಒಂದು ದಿನ ರಾಣಿಯು ಮಹಾಮಂತ್ರಿ ರಾಮಕೃಷ್ಣನನ್ನು ಕರೆಯಿಸಬೇಕೆಂದೂ ಅವನಿಗೆ ಅಧಿಕಾರವನ್ನು ವಹಿಸಿ ಯುದ್ಧಕ್ಕೆ ಸಿದ್ಧಗೊಳಿಸಬೇಕೆಂದು ರಾಣಿಯು ರಾಮರಾಯನೊಡನೆ ನುಡಿದಳು.

ಅವನು "ರಾಣಿಯವರೇ, ಈ ಯುದ್ಧವನ್ನು ನಾವೇ ಗೆಲ್ಲುತ್ತೇವೆಂಬ ಧೈರ್ಯವು ನಮಗಿದೆ. ಮಂತ್ರಿಗಳನ್ನು ಕರೆಸಿದರೆ ಪರಿಸ್ಥಿತಿಯು ವಿಷಮಿಸಬಹುದು. ನಾವು ಪರಾಕ್ರಮದಿಂದ ಹೈದರನನ್ನು ಹಿಮ್ಮೆಟ್ಟಿ ಸಿದರೆ ಈ ಪ್ರಪಂಚದಲ್ಲಿ ನಮಗೆ ಎದುರಿಲ್ಲ. ನಾವು ರಣದಲ್ಲಿ ಮಡಿಪರೆ ವೀರಸ್ವರ್ಗವನ್ನು ಪಡೆಯುತ್ತೇವೆ. ಈ ಸಮಯದಲ್ಲಿ ಮಂತ್ರಿಯು ಬಂದರೆ, ಗೆದ್ದರೆ ಯಶಸ್ಸು ಅವನಿಗೆ ಹೋಗುತ್ತದೆ. ಸೋತರೆ ನಾವು ನಿರ್ವೀರ್ಯರಾದ ಕುರಿಗಳಂತೆ ಸಾಯುತ್ತೇವೆ. ಅದನ್ನು ನಾವು ಒಪ್ಪುವುದೇ ಇಲ್ಲ." ಎಂದನು.

"ಸೇನಾಧಿಪತಿಗಳೇ! ನಿಮ್ಮ ಮಾತು ಸತ್ಯವಾಗಿದೆ. ಅದಕ್ಕೆ ನಾನೇ ಒಪ್ಪುತ್ತೇನೆ. ಆದರೆ ಪಾಳೆಯಗಾರರು ನಮಗೆ ವಿಮುಖ ರಾಗಿದ್ದಾರೆ. ನೀವು ಅವರುಗಳನ್ನು ಕಂಡು ಸಮಾಧಾನ ಮಾಡಿ ನಮ್ಮ ಸೈನ್ಯದೊಡನೆ ಸೇರಿ ಹೈದರನೊಡನೆ ಯುದ್ಧಮಾಡುವಂತೆ ಮಾಡಬೇಕು"

"ನಾನು ಪಾಳೇಗಾರರಲ್ಲಿ ಹೋಗಿ ತಲೆಬಾಗಲಾರೆನು. ಇಷ್ಟು ದಿನಗಳಿಂದಲೂ ಪಾಳೇಗಾರರನ್ನು ಲಕ್ಷಿಸದೇ ನಡೆದಿದ್ದೇನೆ. ಇಂದು

ಅವರಲ್ಲಿ ಹೋಗಿ ಸಹಾಯವನ್ನು ಬೇಡುವುದೆಂದರೆ ನನಗೆ ಮರಣಕ್ಕಿಂತಲೂ ಅದು ಹೀನಾಯವಾದುದು."

"ಸೇನಾಧಿಪತಿಗಳೇ, ನಾನು ಹೋಗಿ ಪಾಳೇಗಾರರ ಸಹಾಯವನ್ನು ಬೇಡಿದರೆ ನಿಮ್ಮ ಆಕ್ಷೇಪಣೆಯಿಲ್ಲವಷ್ಟೆ?"

"ರಾಣಿಯವರೇ, ನಿಜವಾಗಿಯೂ ಅದಕ್ಕೆ ನನ್ನ ಪ್ರತಿರೋಧವಿಲ್ಲ. ನಾನು ರಣಭೂಮಿಯಲ್ಲಿ ಅವರುಗಳೊಡನೆ ಹೊಂದಿಕೊಂಡು ನಡೆಯುವೆನು."

ರಾಣಿಯು ಸೇನಾಧಿಪತಿಯನ್ನು ಪ್ರಶಂಸಿಸಿ ಅವನಿಗೆ ವೀಳೆಯವಿತ್ತು ಕಳುಹಿಸಿದನು.

ತಾನು ಸೌಮ್ಯವಾದ ವೇಷಭೂಷಣಗಳಿಂದ ಅಲಂಕರಿಸಿಕೊಂಡು ಮ್ಯಾನಾದಲ್ಲಿ ಕುಳಿತು ಮಲ್ಲಿಕಾರ್ಜುನಕ್ಷೇತ್ರಕ್ಕೆ ತೆರಳಿದಳು. ಅಲ್ಲಿ ಮಹಾದೇವನ ಪೂಜಾದಿಗಳನ್ನು ನೆರವೇರಿಸಿ ಮಂಗಳಾರತಿಯನ್ನು ಪಡೆದು ಭವಾನೀರಾಣಿಯ ಆವಾಸಸ್ಥಾನಕ್ಕೆ ಮಹಾರಾಣಿ ಚೆಲುವಮ್ಮಣ್ಣಿಯು ಹೋದಳು. ಪರ್ಣಶಾಲೆಯಲ್ಲಿ ವ್ಯಾಘ್ರಾಸನದಮೇಲೆ ಭವಾನೀರಾಣಿಯು ಮಂಡಿಸಿದ್ದಳು. ರಾಣಿ ಚೆಲುವಮ್ಮಣ್ಣಿಯು ತನ್ನ ಪರಿಜನರನ್ನು ದೂರದಲ್ಲಿಯೇ ಬಿಟ್ಟು ಏಕಾಕಿನಿಯಾಗಿ ಪರ್ಣಶಾಲೆಯೊಳಗೆ ಪ್ರವೇಶಮಾಡಿ ಧ್ಯಾನಾಸಕ್ತಳಾಗಿ ಕುಳಿತಿದ್ದ ಭವಾನೀರಾಣಿಗೆ ಅಭಿವಂದಿಸಿದಳು. ಭವಾನೀರಾಣಿಯು ಹಸನ್ಮುಖದಿಂದ ಚೆಲುವಮ್ಮಣ್ಣಿಯನ್ನು ಸ್ವಾಗತಿಸಿ ಎದುರಿಗಿದ್ದ ಕೃಷ್ಣಾಜಿನದಮೇಲೆ ಕುಳಿತುಕೊಳ್ಳುವಂತೆ ವಿಶ್ವಾಸದಿಂದ ಸನ್ನೆಮಾಡಿದಳು. ಚೆಲುವಮ್ಮಣ್ಣಿಯು ಆಸನದಲ್ಲಿ ಕುಳಿತುಕೊಂಡಳು. ಆ ಪರ್ಣಶಾಲೆಯಲ್ಲಿ ಮಿಣುಗುತ್ತಿದ್ದ ಸಣ್ಣ ಹಣತೆಯ ದೀಪದಲ್ಲಿಯೂ ಚೆಲುವಮ್ಮಣ್ಣಿಯ ಪ್ರಕಾಶಮಾನವಾದ ಮುಖವು ಜ್ವಾಜಲ್ಯಮಾನವಾಗಿ ಕಂಗೊಳಿಸುತ್ತಿತ್ತು.

ಭವಾನೀರಾಣಿಯವರು ಪ್ರೀತಿಯಿಂದ "ರಾಣಿಯವರೇ! ತಾವು ನನ್ನ ಕುಟೀರಕ್ಕೆ ದಯಮಾಡಿಸಲು ಕಾರಣವೇನು?"

"ಭವಾನೀರಾಣಿಯವರೇ, ತಮ್ಮ ಅಂತರಂಗವೇನೋ ಅದನ್ನು

ನಾನರಿಯೆ. ನಾನು ತಮ್ಮ ಪರಿಚಯವನ್ನು ಸರಿಯಾಗಿ ಅರಿತು ಕೊಂಡಿದ್ದೇನೆ. ತಾವು ಈ ರಾಜ್ಯದ ದೊಡ್ಡ ರಾಣಿಯವರು. ನಾನು ಚಿಕ್ಕವಳು. ಈಗ ಈ ರಾಜ್ಯಕ್ಕೆ ಆಪತ್ತು ಬಂದಿದೆ. ಅದಕ್ಕಾಗಿ ತಮ್ಮ ಸನ್ನಿಧಾನಕ್ಕೆ ಬಂದಿದ್ದೇನೆ."

"ರಾಣಿಯವರೇ, ನಾನು ಒಪ್ಪಿಕೊಳ್ಳುತ್ತೇನೆ. ಮಹಾರಾಜರವರ ಧರ್ಮಪತ್ನಿ ನಾನು. ನಾನು ಎಂದು ಮಹಾರಾಜರ ಸಾನ್ನಿಧ್ಯವನ್ನು ತೊರೆದೆನೋ ಅಂದೇ ಅದನ್ನು ಮರೆತುಬಿಟ್ಟೆ. ತಾವು ತಿಳಿದುಕೊಂಡಿದ್ದರೆ ಅದರಿಂದ ಬಾಧಕವೇನೂ ಇಲ್ಲ. ರಾಜ್ಯಕ್ಕೆ ಏನು ಆಪತ್ತು ಸಂಭವಿಸಿದೆ?"

"ಮೈಸೂರಿನ ಹೈದರಲ್ಲೀಖಾನರವರು ನಗರದಮೇಲೆ ಬಲು ದೊಡ್ಡದಾದ ದಂಡನ್ನು ತೆಗೆದುಕೊಂಡು ಬಂದಿದ್ದಾರೆ."

"ಬಹುದಿವಸಗಳಿಂದಲೂ ನಗರದಮೇಲೆ ಅವರಿಗೆ ಕಣ್ಣು ಇದ್ದೇ ಇದೆ. ಎಂದಾದರೊಂದುದಿನ ಈ ಯುದ್ಧವು ಸಂಭವಿಸಲೇ ಬೇಕಾಗಿತ್ತು. ಅದು ಇಂದೇ ಸಂಭವಿಸಿರಬಹುದು. ಭಗವಂತನ ಇಷ್ಟವಿದ್ದರೆ ಆಗುತ್ತದೆ."

"ನೋಡಿ ಅಕ್ಕನವರೇ, ಯುದ್ಧಕ್ಕೆ ನಾನು ಹೆದರುವುದಿಲ್ಲ. ಮಹಾರಾಜರವರು ಯುದ್ಧವಾಗುತ್ತದೆಂದು ಹೇಳುತ್ತಲೇ ಇದ್ದರು. ಆದರೆ ಮೊದಲು ನಾನು ತಮ್ಮ ಕ್ಷಮಾಪ್ರಾರ್ಥನೆಯನ್ನು ಮಾಡಲು ಬಂದಿದ್ದೇನೆ."

"ಚೆಲುವಮ್ಮಣ್ಣಿಯವರೇ, ನಿಮ್ಮ ಅಪರಾಧವೇನಿದೆ? ಏನಾದರೂ ಇದ್ದರೂ ನಾನು ಪೂರ್ಣವಾಗಿ ಕ್ಷಮಿಸಿದ್ದೇನೆ. ನಿಮ್ಮಮೇಲೆ ನನಗೆ ಅವ್ಯಾಜವಾದ ಪ್ರೇಮವಿದೆ. ನನ್ನಂಥಾ ಸನ್ಯಾಸಿನಿಯು ಮುಚ್ಚುಮರೆಯಿಂದ ಮಾತನಾಡಬಾರದು. ಅಂದು ನಿಮ್ಮ ಸೇನಾಧಿಪತಿಯಾದ ವಿರೂಪಾಕ್ಷನು ನನ್ನಮೇಲೆ ನಡೆಸಿದ ಆಕ್ರಮಣದಿಂದ ನಾನು ಕ್ರುದ್ಧಳಾಗಿದ್ದೆನು. ಆದರೆ ತಕ್ಷಣ ಮರಣೋನ್ಮುಖನಾದ ಅವನನ್ನು ನೋಡಿ ನನ್ನ ಹೃದಯವು ಪರಿತಪಿಸತೊಡಗಿತು. ನನಗಾದ ದುಃಖಕ್ಕಿಂತಲೂ

ಅವನ ಘೋರಮರಣವು ನನ್ನ ಹೃದಯವನ್ನು ಚುಚ್ಚಿ ಕರುಣೆಯನ್ನುಂಟುಮಾಡಿತು. ಅರಕ್ಷಿತರಾದ ಸ್ತ್ರೀಯರನ್ನು ಕಂಡರೆ ಮದೋನ್ಮತ್ತರಾದ ಪುರುಷರಿಗೆ ಅಂಥಾ ದುರಾಚರಣೆಯು ಸಹಜವಾಗಿಯೇ ಇದೆ. ಈ ಲೋಕವೇ ಅಂತಹುದು. ಅದಕ್ಕೆ ನಾವೇನು ಮಾಡಬಲ್ಲೆವು? ರಾಮರಾಯನು ನನ್ನ ವಾಸಸ್ಥಾನಕ್ಕೆ ಬಂದು ನನ್ನ ಅಧೀನದಲ್ಲಿದ್ದ ಸಂಪತ್ತನು ಬಿಟ್ಟುಕೊಡಬೇಕೆಂದು ಕೇಳಿದನು. ರಾಜಾಜ್ಞೆಯಾಗಿದೆಯೆಂದು ಹೇಳಿದನು. ಅವನು ಅತ್ಯಂತ ವಿನಯಶೀಲನಾಗಿ ನಡೆದುಕೊಂಡನು. ನಾನೇ ನಿಮಗೆ ಒಪ್ಪಿಸಿದ್ದ ಸಂಪತ್ತನ್ನು ಸಂತೋಷದಿಂದ ಬಿಟ್ಟುಕೊಟ್ಟೆನು. ಅದರಲ್ಲಿ ನನಗೆ ಕಿಂಚಿತ್ತೂ ದುಃಖವಿಲ್ಲ. ನಿಮ್ಮ ಅಪರಾಧವೇನೂ ಇಲ್ಲ. ಆದಕ್ಕಾಗಿ ನೀವು ಚಿಂತಿಸಬೇಡಿರಿ."

"ಅಕ್ಕನವರೇ, ಸ್ತ್ರೀಯರ ಹೃದಯವು ತಮಗೆ ಚೆನ್ನಾಗಿ ಗೊತ್ತಾಗುತ್ತದೆ. ಈ ರಾಜಕೀಯ ವ್ಯಾಪಾರಗಳಲ್ಲಿ ಪುರುಷರ ಸಾನ್ನಿಧ್ಯ ಮಂತ್ರಾಲೋಚನೆಗಳು. ಇವುಗಳಿಂದ ಸಹಿಸಲಾರದಷ್ಟು ಲೋಕಾಪವಾದವು ನನ್ನ ಮೇಲೆ ಹೊರಿಸಲ್ಪಟ್ಟದೆ. ಈ ಹಾಳು ನನ್ನ ಯೌವನ ರೂಪಲಾವಣ್ಯಗಳು, ನನಗೆ ಶತೃಗಳಾಗಿವೆ. ಅದು ನನ್ನ ಮನಸನ್ನು ಕಲಕಿರಬಹುದು."

ಭವಾನೀರಾಣಿಯು, ನಕ್ಕು "ತಂಗಿ, ಈ ಲೋಕವೇ ಅಂತಹುದು ಎಲ್ಲಿ ಐಶ್ವರ್ಯವಿದೆಯೋ, ಎಲ್ಲಿ ರಾಜಭೋಗಗಳಿವೆಯೋ, ಎಲ್ಲಿ ಅಧಿಕಾರವಿದೆಯೋ, ಅಲ್ಲಿ ಇಂತಹ ದೂಷಣೆಗಳಿಗೆ ಭಗವಂತನು ಅವುಗಳನ್ನೆಲ್ಲಾ ಪರಿಹರಿಸಿ ಪಾವನ ಮಾಡಬೇಕು. ಹೇಗೇ ಇರಲಿ, ಸ್ತ್ರೀಯ ಜನ್ಮವು ಬಲು ಕಷ್ಟ. ನೀನು ರಾಜಸಸ್ತ್ರೀ. ಪಾಪಪುಣ್ಯಗಳ ಜಿಜ್ಞಾಸೆಯನ್ನು ನನ್ನೊಡನೆ ಮಾತನಾಡುತ್ತಾ ಕುಳಿತು ಕೊಂಡರೆ ನಿನಗೆ ಲಭಿಸುವ ಫಲವೇನು?'' ಎಂದಳು.

ಭವಾನೀರಾಣಿಯು ಈ ಮಾತುಗಳನ್ನು ಹೇಳುತ್ತಿರುವಾಗ ಚೆಲುವಮ್ಮಣ್ಣಿಯ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಅವಳು ಗದ್ಗದ ಕಂಠದಿಂದ "ಅಕ್ಕನವರೇ! ಮಂತ್ರಿಗಳು ವಿರೋಧ

ವಾಗಿದ್ದಾರೆ. ಪಾಳೇಗಾರರು ವ್ಯಗ್ರ ಚಿತ್ತರಾಗಿದ್ದಾರೆ. ನಾನು ಈ ರಾಜ್ಯವನ್ನು ತಮ್ಮ ಪಾದಕೊಪ್ಪಿಸಿ ಅರಣ್ಯದಲ್ಲಿ ಜಲಸಮಾಧಿಯಲ್ಲಿ ಮುಳುಗಿ ಈ ಲೋಕವನ್ನು ತ್ಯಜಿಸುವೆನು. ತಾವು ಸ್ವೀಕರಿಸದಿದ್ದರೆ ಹೈದರನಿಗೆ ಬಿಟ್ಟು ಕೊಡುವೆನು. ಮಲ್ಲಿಕಾರ್ಜುನನ ಇಷ್ಟವಿದ್ದಂತಾಗಲಿ" ಎಂದಳು.

"ಚೆಲುವಮ್ಮಣ್ಣಿ ! ವಿರಕ್ತಳಾದ ನನಗೆ ಈ ರಾಜ್ಯವನ್ನೊಪ್ಪಿಸುವುದೆಂದರೆ ಪರಿಹಾಸ್ಯಾಸ್ಪದವೇ ಸರಿ. ಯುವರಾಜನಿಗೆ ಈ ರಾಜ್ಯದ ಪಟ್ಟವನ್ನು ಕಟ್ಟಿ ನೀನೂ ನನ್ನೊಡನೆ ಈ ಕುಟೀರದಲ್ಲಿರು. ನಾವಿಬ್ಬರೂ ಒಟ್ಟಿಗೆ ಇರೋಣ, ಅಥವಾ ಒಟ್ಟಿಗೆ ಸಾಯೋಣ.''

ರಾಣಿ ಚೆಲುವಮ್ಮಣ್ಣಿಯು ಬಿಕ್ಕಿ ಬಿಕ್ಕಿ ಅಳುತ್ತಾ, "ಯುವರಾಜನು ಅಂತರ್ಧಾನನಾಗಿದ್ದಾನೆ" ಎಂದು ಹೇಳಿದಳು.

ಬಹಳಹೊತ್ತು ಚೆಲುವಮ್ಮಣ್ಣಿಯು ಅಳುತ್ತಿದ್ದಳು. ಭವಾನೀರಾಣಿಯು ಅವಳನ್ನು ಸಂತೈಸಿ ತನ್ನ ಜೊತೆಯಲ್ಲಿ ಕರೆದು ಕೊಂಡು ಕಾಲು ನಡಗೆಯಲ್ಲಿಯೇ ಆ ಅರಣ್ಯ ಮಾರ್ಗದಲ್ಲಿ ನಡೆದುಕೊಂಡು ಹೋಗಿ ಮಲ್ಲಿಕಾರ್ಜುನಕ್ಷೇತ್ರದಲ್ಲಿ ತನ್ನ ಭವನದಲ್ಲಿ ನಿದ್ರಿಸುತ್ತಿದ್ದ ಅಭಿರಾಮಸ್ವಾಮಿಯ ಸಾನ್ನಿಧ್ಯವನ್ನು ಹೊಂದಿದಳು. ಅಭಿರಾಮಸ್ವಾಮಿಯು ಎದ್ದು ಕುಳಿತು ಇಬ್ಬರು ರಾಣಿಯರನ್ನೂ ಎದುರಿಗೆ ಕುಳ್ಳಿರಿಸಿಕೊಂಡನು. ದೀಪಸ್ತಂಭದಲ್ಲಿ ದೀಪವು ಉರಿಯುತ್ತಿತ್ತು. ಸುಮಾರು ಅರ್ಧರಾತ್ರಿಯು ಕಳೆದುಹೋಗಿ ಬೆಳಗಿನಝಾವವು ಆರಂಭವಾಗಿತ್ತು. ಭವಾನೀರಾಣಿಯು ತಾವು ಬಂದ ವೃತ್ತಾಂತವನ್ನೆಲ್ಲಾ ವಿವರವಾಗಿ ಅಭಿರಾಮಸ್ವಾಮಿಗೆ ತಿಳಿಸಿ, ಈಗೇನುಮಾಡಬೇಕೆಂದು ಕೇಳಿದಳು. ಅಭಿರಾಮಸ್ವಾಮಿಯು ತಿರಸ್ಕಾರಪೂರ್ಣವಾದ ನಗುವನ್ನು ನಕ್ಕು, "ಭವಾನೀರಾಣಿ, ಬಡಬ್ರಾಹ್ಮಣನಾದ ನಾನು ಏನು ಮಾಡಬಲ್ಲೆ? ಈ ಶಿವಧರ್ಮದ ರಾಜ್ಯವು ಮ್ಲೇಂಛರ ಕೈಗೆ ಸೇರುವ ಕಾಲವು ಬಂದಿದೆ. ಅದು ಕಲಿಧರ್ಮ. ಈ ರಾಜ್ಯಕ್ಕೆ ರಕ್ಷಕರಿಲ್ಲ. ನಾನೇನು ಮಾಡಬಲ್ಲೆ ?" ಎಂದನು.

"ಮಹಾನುಭಾವರಾದ ಗುರುಗಳೇ ತಾವು ಹೇಗೆ ಹೇಳಿದರೆ ನಾವು

ಹಾಗೆ ನಡೆಯುತ್ತೇವೆ. ತಾವು ಮನಸಾರ ಸಹಾಯ ಮಾಡದಿದ್ದರೆ ನಾನು ಪ್ರಾಣ ಕಳೆದುಕೊಳ್ಳುತ್ತೇನೆ."

"ಮಗಳೇ! ಮ್ಲೇಂಛರ ಕೈಗೆ ಸಿಕ್ಕುವುದಕ್ಕಿಂತ ಪ್ರಾಣ ಕಳೆದು ಕೊಳ್ಳುವುದು ಸ್ತ್ರೀಯರಿಗೆ ಉಚಿತವಾಗಿಯೇ ಇದೆ. ನನಗೆ ಈಗ ಏನು ಮಾಡಬೇಕೆಂದೂ ಭಗವಂತನ ಪ್ರೇರಣೆಯಾಗಿಲ್ಲ"

"ಮಹಾಪುರುಷರೇ, ಈ ನಗರದ ರಾಜ್ಯವನ್ನು ಉಳಿಸುವುದಕ್ಕೆ ನಾವು ಏನಾದರೂ ಮಾಡಬೇಕು ನಮ್ಮಲ್ಲಿ ಬಲವಾದ ಸೈನ್ಯವಿದೆ. ಪಾಳೇಗಾರರಿದ್ದಾರೆ. ಜನಬಲವಿದೆ. ಧನಬಲವಿದೆ. ನಾವು ಹೈದರಲ್ಲೀ ಖಾನನಿಗೆ ಹೆದರಿ ಈ ರಾಜ್ಯವನ್ನೇಕೆ ಬಿಟ್ಟುಕೊಡಬೇಕು ?"

"ಭವಾನೀರಾಣಿಯವರೇ! ನಿಮಗೆ ಈ ರಾಜ್ಯದ ಹುಚ್ಚು ಎಲ್ಲಿ ಹಿಡಿಯಿತು ? ಚೆಲುವಮ್ಮಣ್ಣಿಯು ಹೆಂಗಸು. ಹೆಂಗಸಿನ ಮೇಲಿನ ಕರುಣೆಯಿಂದ ನಿಮ್ಮ ಹೆಣ್ಣುಹೃದಯವು ಕರಗಿ ಈ ಆಂದೋಳನದಲ್ಲಿ ನಿಮ್ಮನ್ನು ಸಿಕ್ಕಿಸುತ್ತಿದೆ. ಎಚ್ಚರವಾಗಿರಿ! ಈ ನಗರಕ್ಕೆ ಜನಬಲವಿದೆ! ಧನಬಲವಿದೆ! ಆದರೆ ಧರ್ಮದ ಬಲವಿಲ್ಲ" ಎಂದು ತಿರಸ್ಕಾರದಿಂದ ನುಡಿದನು.

ಚೆಲುವಮ್ಮಣ್ಣಿಯು ಎದ್ದು ಅಭಿರಾಮಸ್ವಾಮಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿ ಎದ್ದುನಿಂತು, "ಗುರುವರ್ಯಾ, ನೀವು ಕೈಬಿಡು ವಿರಾ ? ಇಷ್ಟುದಿವಸಗಳಿಂದ ನಾನು ಮಲ್ಲಿಕಾರ್ಜುನನ ಸನ್ನಿಧಾನದಲ್ಲಿ ಮಾಡಿದ ಸೇವೆಯು ವ್ಯರ್ಥವೇ ? ತಮ್ಮಲ್ಲಿ ಇಟ್ಟ ಅಚಂಚಲವಾದ ಭಕ್ತಿಯು ನಿಷ್ಫಲವಾದುದೇ ? ಈ ನಗರದ ರಾಜ್ಯದಲ್ಲಿ ಸದಾಶಿವರಾಯ ರಿಂದ ಇಂದಿನವರೆಗೆ ನಡೆದುಬರುತ್ತಿರುವ ಶಿವಧರ್ಮವು ನಿರರ್ಥಕವೇ ? ನನಗೆ ಈ ನಗರದಮೇಲಿರುವ ಅಭಿಮಾನವು ಪ್ರಲೋಭವೇ ? ಈ ನಗರದಮೇಲೆ ಮಲ್ಲಿಕಾರ್ಜುನನ ಕರುಣೆಯಿಲ್ಲವೇ ? ತಮ್ಮ ಧರ್ಮ ರಕ್ಷಣೆಯಿಲ್ಲವೇ ? ತಾವು ಏನನ್ನೂ ಮಾಡಲಾರದ ಅಸಮರ್ಥರೆಂದು ನಾನು ಬಗೆದಿಲ್ಲ" ಎಂದು ಗಟ್ಟಿಯಾಗಿ ರೋದಿಸುತ್ತಾ ಅಭಿರಾಮ ಸ್ವಾಮಿಯ ಪಾದಗಳಮೇಲೆ ಬಿದ್ದಳು.

ಸ್ವಾಮಿಯು ಮನಸ್ಸಿನಲ್ಲಿಯೇ "ಆಹಾ! ಪ್ರಾಯಶ್ಚಿತ್ತಕ್ಕೆ ಆರಂಭವಾಗಿದೆ" ಎಂದುಕೊಂಡು, ಬಹಿರಂಗವಾಗಿ ಭವಾನೀರಾಣಿಯನ್ನು ಕುರಿತು, "ಮಗಳೇ! ಈ ರಾಜ್ಯದ ಸಂಬಂಧವು ನಿನಗೆ ಸ್ವಲ್ಪವಿದೆ. ಈ ಶರೀರವಿರುವವರೆಗೂ ಅದು ತಪ್ಪದು. ನೀನು ಹೋಗಿ ಗೋಪಾಲ ನಾಯಕರಲ್ಲಿ ಸಹಾಯವನ್ನು ಬೇಡು. ಅವರು ಧರ್ಮಕ್ಕೆ ಕಟ್ಟುಬಿದ್ದು ಯುದ್ಧಕ್ಕೆ ನಿಲ್ಲುತ್ತಾರೆ. ಮಲ್ಲಿಕಾರ್ಜುನನ ಅನುಗ್ರಹವಿದ್ದಂತಾಗಲಿ" ಎಂದನು.

ಆ ರಾಣಿಯರಿಬ್ಬರೂ ಅಭಿರಾಮಸ್ವಾಮಿಗೆ ವಂದಿಸಿ ಮಲ್ಲಿಕಾರ್ಜುನನ ಕ್ಷೇತ್ರದಿಂದ ಬಿದನೂರಿನ ಅರಮನೆಗೆ ಹೊರಟುಹೋದರು. ಭವಾನೀರಾಣಿಯು ರಾಣಿ ಚೆಲುವಮ್ಮಣ್ಣಿಯನ್ನು ಬಿದನೂರಿನ ಅರಮನೆಯಲ್ಲಿ ಬಿಟ್ಟು ಗೋಪಾಲನಾಯಕರ ಕೋಟೆಗೆ ಪ್ರಯಾಣ ಬೆಳೆಸಿದಳು.

---

## ೨೫

## ಪಾಳೆಯಗಾರರ ಪ್ರತಿಜ್ಞೆ

ನಗರದ ರಾಜ್ಯದಲ್ಲಿ ಗೋಪಾಲನಾಯಕರು ಸುಪ್ರತಿಷ್ಠಿತರಾದ ಪಾಳೇಗಾರರು. ಆ ಶೀಮೆಯ ಪಾಳೇಗಾರರೆಲ್ಲರೂ ಅವರನ್ನು ತಮ್ಮ ಗುರುವಿನಂತೆ ಭಾವಿಸುತ್ತಿದ್ದರು. ನಗರದ ರಾಜರಿಗೆ ಯಾವ ಗೌರವ ವಿದ್ದಿತೋ ಗೋಪಾಲನಾಯಕರಿಗೆ ಅದಕ್ಕೆ ಸರಿಸಮವಾದ ಗೌರವ ವಿದ್ದಿತು. ಗೋಪಾಲನಾಯಕರು ಮಹಾಧೀರರು. ದಾನಧರ್ಮಗಳಲ್ಲಿ ಎತ್ತಿದ ಕೈ. ಧರ್ಮಾಚರಣೆಯಲ್ಲಿ ಆ ಕಾಲದಲ್ಲಿ ಅವರನ್ನು ಮೀರಿಸಿದವ ರಿರಲಿಲ್ಲ. ಸಂಸಾರಸಮೇತವಾಗಿ ಕಾಶೀಯಾತ್ರೆಯನ್ನು ಮಾಡಿ ಬಂದು ಸಹಸ್ರ ಗೋದಾನಮಾಡಿದರೆಂದು ಅವರ ಕೋಟೆಯ ಬಾಗಿಲಿನಲ್ಲಿ ಶಿಲಾಶಾಸನವು ಕೆತ್ತಲ್ಪಟ್ಟಿತ್ತು. ನಾಯಕರು ವೀರಶೈವರಲ್ಲದಿದ್ದರೂ ಮಹಾಶೈವರಾಗಿದ್ದರು. ಅವರ ಶಿವಭಕ್ತಿಯೆಂದರೆ ಆದರ್ಶ.

ಹಿಂದೊಂದುಬಾರಿ ಗೋಪಾಲನಾಯಕರು, ಪೇಷ್ವೆಯರ ದರಬಾರಿಗೆ ಹೋಗಿದ್ದರು. ಅಲ್ಲಿ ಈ ಪಾಳೇಗಾರರಿಗೆ, ಮಹಾರಾಜರುಗಳಿಗೆ ನಡೆಯುವ ಗೌರವಾತಿಥ್ಯಗಳು ನಡೆದವು. ಮತ್ತೊಂದು ಬಾರಿ ಮೈಸೂರಿಗೆ ಹೋಗಿದ್ದರು. ಆಗ ಹೈದರನು ಉಚ್ಚದೆಶೆಗೆ ಏರುತ್ತಿದ್ದ ಕಾಲ. ಮಹಾರಾಣಿ ಲಕ್ಷಮ್ಮಣ್ಣಿಯವರು ಗೋಪಾಲನಾಯಕರಿಗೆ ಆದರ ಪೂರ್ವಕವಾಗಿ ಮಾನಮನ್ನಣೆಗಳನ್ನು ನಡೆಸಿ ಭೇಟಿಯಿತ್ತು ನಾಯಕರ ದಾನಧರ್ಮಗಳನ್ನು ಪ್ರಶಂಸಿಸಿ ಮರ್ಯಾದೆಮಾಡಿದ್ದರು. ನಾಯಕರ ಪಾಳೇಪಟ್ಟಿನಿಂದ ಮೂವತ್ತುಸಾವಿರ ವರಹಗಳ ವರಮಾನ ವಿತ್ತು. ಅಧಷ್ಟೂ ಬಡಬಗ್ಗರಿಗಾಗಿಯೇ ವೆಚ್ಚವಾಗಿಹೋಗುತ್ತಿತ್ತು. ನಾಯಕರಿಗೆ ಏಳು ಕೊಪ್ಪರಿಗೆಗಳ ಚಿನ್ನದ ನಾಣ್ಯಗಳಿವೆಯೆಂದು ಪ್ರಸಿದ್ಧಿಯಿತ್ತು. ಹತ್ತುಸಹಸ್ರ ಯೋಧರನ್ನು ಅವರು ತರಪೇತುಮಾಡಿ ಇಟ್ಟುಕೊಂಡು ಇದ್ದರು. ಆ ಪ್ರಾಂತದಲ್ಲಿದ್ದ ಕಡುಗಲಿಗಳಾದ ವೀರ ರನ್ನು ಒಬ್ಬೊಬ್ಬರನ್ನೂ ಚುನಾಯಿಸಿ ಹತ್ತುಸಹಸ್ರ ದಂಡನ್ನೂ ಕಟ್ಟಿದ್ದರು.

ಅವರಿಗೆ ಬೇಕಾದ ಅಸ್ತ್ರಶಸ್ತ್ರಗಳನ್ನು ಯಾವಾಗಲೂ ಅರಮನೆಯ ಆಯುಧಾಗಾರದಲ್ಲಿ ಶೇಖರಿಸಿಟ್ಟಿದ್ದರು. ಎಲ್ಲರಿಗೂ ಯುದ್ಧದ ದಿರಸು ಗಳನ್ನೂ ಉತ್ಸವಗಳ ದಿರಸುಗಳನ್ನೂ ತಯಾರುಮಾಡಿಸಿ ಇಡಿಸಿದ್ದರು. ಸೈನ್ಯವನ್ನು ಕಟ್ಟಿ, ಬಿಟ್ಟ ಅನ್ನಹಾಕಿ ಅವರು ಮದೋನ್ಮತ್ತರಾಗಿ ಬೆಳೆದು ಲೋಕಕಂಟಕರಾಗಿ ಬಾಳುವಂಥಾ ಸೈನ್ಯವ್ಯವಸ್ಥೆಯು ಗೋಪಾಲನಾಯಕರಿಗೆ ಸರ್ವಥಾ ಒಪ್ಪಿರಲಿಲ್ಲ. ಆ ಹತ್ತುಸಾವಿರ ಕುಟುಂಬಗಳನ್ನೂ ಅವರು ಕಾಪಾಡುತ್ತಿದ್ದರು. ಅವರೆಲ್ಲರೂ ಭೂಮಿಯನ್ನುತ್ತು ಬೇಸಾಯ ಮಾಡಬೇಕು. ದನಕರುಗಳನ್ನು ಸಾಕಬೇಕು. ಕುಟುಂಬಿಗಳಾಗಿ ಗೃಹಸ್ಥರಾಗಿ ಬದುಕಿ ಬಾಳಬೇಕು. ಧರ್ಮಾನುಷ್ಠಾನ ಮಾಡಬೇಕು. ಧರ್ಮಕ್ಕಾಗಿ ಪ್ರಾಣವನ್ನು ತೆರಲು ಸದಾ ಸಿದ್ಧರಾಗಿರಬೇಕು. ವರ್ಷಕ್ಕೆ ಎರಡುಬಾರಿ ನವರಾತ್ರಿ, ಯುಗಾದಿ ಗಳಲ್ಲಿ ಗೋಪಾಲನಾಯಕರು ಈ ಸೈನಿಕರನ್ನೆಲ್ಲಾ ಅರಮನೆಗೆ

ಬರವಮಾಡಿಕೊಂಡು ಉತ್ಸವಗಳನ್ನು ನಡೆಸಿ ಇನಾಮುಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಗೋಪಾಲನಾಯಕರು ಅರಮನೆಯಲ್ಲಿ ಒಂದು ದಿವಸವೂ ಸುಖಲೋಲುಪರಾಗಿ ಕೂಡುತ್ತಿರಲಿಲ್ಲ. ಬೆಳಗಾದರೆ ಮಧ್ಯಾಹ್ನದವರೆಗೆ ಕುದುರೆಯನ್ನೇರಿ ಗ್ರಾಮಗಳಮೇಲೆ ಸಂಚಾರ ಮಾಡುತ್ತಿದ್ದರು. ಬಡವನ ಗುಡಿಸಲಿನ ಬಾಗಿಲಿನಲ್ಲಿ ಗೋಪಾಲ ನಾಯಕರ ದರ್ಶನವಾಗುತ್ತಿತ್ತು. ವಿದ್ಯಾಪಾರಂಗತನಾದ ಬ್ರಾಹ್ಮಣನ ಮನೆಯ ಜಗುಲಿಯಮೇಲೆ ಗೋಪಾಲನಾಯಕರು ಹೋಗಿ ಕುಳಿತು ಆ ವಿದ್ವಾಂಸರನ್ನು ಕುಶಲಪ್ರಶ್ನೆಮಾಡಿ ಆನಂದದಿಂದ ಧರ್ಮಜಿಜ್ಞಾಸೆ ಮಾಡುತ್ತಿದ್ದರು. ವ್ಯಾಪಾರಸ್ಥನ ಅಂಗಡಿಯ ಮುಂದೆ ಕುದುರೆಯನ್ನು ನಿಲ್ಲಿಸಿ ಆ ಗೃಹಸ್ಥನ ಯೋಗಕ್ಷೇಮವನ್ನು ವಿಚಾರಿಸಿ ಧರ್ಮವಾಗಿರುವಂತೆ ಎಚ್ಚರಿಸಿ ಮುಂದೆ ಹೋಗುತ್ತಿದ್ದರು. ರೈತನ ಭೂಮಿಯಮೇಲೆ ಕುದುರೆಯನ್ನು ನಿಲ್ಲಿಸಿ ಅಲ್ಲಿ ಅವನು ಹರ್ಷಚಿತ್ತನಾಗಿ ಭೂದೇವಿಯ ಸೇವೆ ಮಾಡುತ್ತಿರುವುದನ್ನು ನೋಡಿ ಸಂತಸಗೊಳ್ಳುತ್ತಾ ಅವನ ಕಷ್ಟ ಸುಖಗಳನ್ನು ಕೇಳಿ ಪ್ರೋತ್ಸಾಹಿಸುತ್ತಾ ಪ್ರಜೆಗಳಿಗೆ ಸುಖದಲ್ಲಿ ಕಷ್ಟದಲ್ಲಿ ಸಮಭಾಗಿಗಳಾಗಿದ್ದರು.

ರಾಮಪುರವೆಂಬುದು ಗೋಪಾಲನಾಯಕರ ರಾಜಧಾನಿ. ಕೋಟೆ ಕೊತ್ತಲಗಳಿಂದಲೂ, ರಾಜಪ್ರಾಸಾದ ದೇವಾಲಯಗಳಿಂದಲೂ, ಅನಾಥ ರಕ್ಷಣಾಲಯಗಳಿಂದಲೂ,ಅದು ಪರಿಶೋಭಿತವಾಗಿದ್ದಿತು. ಪ್ರಾತಃಕಾಲ, ಮಧ್ಯಾಹ್ನ, ಸಂಧ್ಯಾಕಾಲ, ಈ ತ್ರಿಕಾಲಗಳಲ್ಲಿ ದೇವಮಂದಿರಗಳಲ್ಲಿ ಸಹಸ್ರಸಹಸ್ರ ಘಂಟಾನಾದಗಳು ಕೇಳಿಸುತ್ತಿದ್ದವು. ಬಡಬಗ್ಗರಿಗೆ ಅನ್ನವಸ್ತ್ರದಾನಗಳು ನಿರುಪಾಧಿಕವಾಗಿ ದೊರೆಯುತ್ತಿದ್ದವು. ಅಂಥಾ ಧರ್ಮಿಷ್ಠರಾದ ಗೋಪಾಲನಾಯಕರು ರಾಜರಿಗಿಂತಲೂ ದೊಡ್ಡ ರಾಜ ರಂತೆ ಧರ್ಮರಾಜರಾಗಿದ್ದರು.

ಭವಾನೀರಾಣಿಯವರು ಪ್ರಯಾಣದಲ್ಲಿ ಕುಳಿತು ಮಿತಪರಿವಾರ ದೊಂದಿಗೆ ರಾಮಪುರವನ್ನು ಪ್ರವೇಶಿಸಿ ಛತ್ರದ ಬಾಗಿಲಿನ ಪಡಸಾಲೆ ಯಮೇಲೆ ಬಿಡಾರಮಾಡಿದರು. ಗೋಪಾಲನಾಯಕರಿಗೆ ರಾಣಿಯವರ

ಆಗಮನ ವಾರ್ತೆಯು ತಿಳಿಯುತ್ತಲೇ ಸ್ವತಃ ಬಂದು ರಾಣಿಯವರ ದರ್ಶನಮಾಡಿ ರಾಜಪ್ರಾಸಾದಕ್ಕೆ ಬಂದು ಬಿಡದಿಮಾಡಬೇಕೆಂದು ಪ್ರಾರ್ಥಿಸಿದರು. ರಾಣಿಯವರು ಗೋಪಾಲನಾಯಕರ ಯೋಗಕ್ಷೇಮ ಗಳನ್ನು ವಿಚಾರಿಸಿ ಸನ್ಯಾಸಿನಿಯರಾದ ತಾವು ಛತ್ರದ ಕೈಸಾಲೆಯಲ್ಲಿ ಇರುವುದೇ ಧರ್ಮವೆಂದೂ ತಾವು ಗೋಪಾಲನಾಯಕರ ಧರ್ಮಛತ್ರದ ನೆರಳಿನಲ್ಲಿರುವುದರಿಂದ ನಾಯಕರ ಆತಿಥ್ಯದಲ್ಲಿಯೇ ಇದ್ದೇವೆಂದೂ ತಿಳಿಯಪಡಿಸಿದರು ಗೋಪಾಲನಾಯಕರು ರಾಣಿಯವರ ಪರಿವಾರದ ಜನರಿಗೆ ಭೋಜನೋಪಚಾರಗಳಿಗೆ ಬೇಕಾದ ಏರ್ಪಾಡುಗಳನ್ನೆಲ್ಲಾ ಅಣಿಮಾಡಿ ರಾಣಿಯವರ ಅಪ್ಪಣೆಪಡೆದು ತಮ್ಮ ಆವಾಸಸ್ಥಾನಕ್ಕೆ ತೆರಳಿದರು.

ಭವಾನೀರಾಣಿಯವರು ಮಧ್ಯಾಹ್ನ ಭೋಜನೋತ್ತರ ಮೂರು ಝಾವದ ಸಮಯದಲ್ಲಿ ಮ್ಯಾನಾದಲ್ಲಿ ಕುಳಿತು ಅರಮನೆಗೆ ಭೇಟಿ ಯಿತ್ತರು. ಇಷ್ಟರಲ್ಲಿ ನಗರದಲ್ಲೆಲ್ಲಾ ಮಹಾಮಹಿಮರಾದ ಭವಾನೀ ರಾಣಿಯವರು ಬಂದಿದ್ದಾರೆಂಬ ವಾರ್ತೆಯು ಹಬ್ಬಿಹೋಗಿದ್ದಿತು. ದಾರಿ ಯುದ್ದಕ್ಕೂ ಸ್ತ್ರೀಯರು, ಪುರುಷರು, ಬಾಲಕರು, ವೃದ್ಧರು, ಎಲ್ಲರೂ ನಿಂತು ರಾಣಿಯವರ ದರ್ಶನಕ್ಕಾಗಿ ಆತುರದಿಂದ ಕಾದಿದ್ದರು. ರಾಣಿ ಯವರು ಅರಮನೆಗೆ ಹೋಗುವಾಗ ಮಾರ್ಗದಲ್ಲಿ ಪುರಜನರು ಅವರ ದರ್ಶನವನ್ನು ಮಾಡಿ ಜಯಕಾರಗಳನ್ನು ಮಾಡುತ್ತಿದ್ದರು. ಗೋಪಾಲ ನಾಯಕರು ಅರಮನೆಯ ಹೊರಗಿನ ಹೆಬ್ಬಾಗಿಲಿನಲ್ಲಿಯೇ ಬಂದು ರಾಣಿ ಯವರನ್ನು ಎದುರುಗೊಂಡು ತಮ್ಮ ಅರಮನೆಗೆ ಕರೆದುಕೊಂಡು ಹೋದರು. ಅಲ್ಲಿ ಪ್ರಶಸ್ತವಾದ ಚೌಕಿಯಲ್ಲಿ ಬೆಳ್ಳಿಯ ಸಿಂಹಾಸನದ ಮೇಲೆ ರಾಣಿಯವರನ್ನು ಕೂರಿಸಿ ಗೋಪಾಲನಾಯಕರು ಕೆಳಗೆ ಸಮೀ ಪದಲ್ಲಿ ಅಣಿಮಾಡಿದ್ದ ಸದರಿನಮೇಲೆ ರಾಣಿಯವರ ಅಪ್ಪಣೆಪಡೆದು ಕುಳಿತುಕೊಂಡರು.

ಗೋಪಾಲನಾಯಕರಿಗೆ ಐವತ್ತುವರುಷ ವಯಸ್ಸು ಮೀರಿದ್ದಿತು. ಎಣ್ಣೆಗೆಂಪು ಬಣ್ಣ, ಆಜಾನುಬಾಹು ಶರೀರ, ವಿಶಾಲವಾದ ಎದೆ, ಹೋರ

ವಾದ ಭುಜಗಳು, ದಪ್ಪನಾದ ಕಂಠ, ವಿಶಾಲವಾದ ಹಣೆ, ಪ್ರಕಾಶ
ಮಾನವಾದ ನೇತ್ರಗಳು, ದೀರ್ಘವಾದ ನಾಸಿಕ, ತೆಳುವಾದ ತುಟಿಗಳು,
ಸ್ವಲ್ಪ ಮೊನಚಾದ ಗಡ್ಡ. ಆ ಮುಖಕ್ಕೆ ಅಲಂಕಾರಪ್ರಾಯವಾದ ಗಲ್ಲಿ
ಮಿಾಸೆಗಳು. ಆ ವೀರಪುರುಷನ ಪರಾಕ್ರಮವು ಆ ಮುಖಮಂಡಲ
ದಲ್ಲಿಯೇ ಅಭಿವ್ಯಕ್ತವಾಗುತ್ತಿತ್ತು. ಗೋಪಾಲನಾಯಕರು ವಿನಯ
ಗಾಂಭೀರ್ಯಗಳಿಂದ ಕೈಮುಗಿದು "ಮಹಾದೇವಿಯವರ ಆಗಮನವು
ನಮ್ಮ ಭಾಗ್ಯೋದಯವೆಂದು ಹೇಳಬೇಕು. ಇಲ್ಲಿಗೆ ಮಹಾಮಾತೆಯವರು
ದಯಮಾಡಿಸಿದ ಕಾರಣವೇನು ? ಈ ಸೇವಕನ ಸೇವೆಯೇನಿದೆ ?"

"ರಾಮಪುರದ ಅರಸರೇ, ಮೈಸೂರಿನ ದಳವಾಯಿ ಹೈದರಲ್ಲೀ
ಖಾನನು ನಗರದ ಮೇಲೆ ದಂಡೆತ್ತಿ ಬರುತ್ತಿರುವ ಸಮಾಚಾರವನ್ನು
ಕೇಳಿದ್ದೀರಷ್ಟೆ ? ಆ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?"

"ತಾಯಿಯವರೇ, ಏನು ಹೇಳುವುದು ? ಭಗವಂತನು ನನ್ನನ್ನು
ತನ್ನ ಲೋಕಕ್ಕೆ ಕರೆದುಕೊಂಡುಬಿಟ್ಟದ್ದರೆ ಎಷ್ಟೋ ಆನಂದವಾಗು
ತ್ತಿದ್ದಿತು. ನಗರದ ರಾಣಿಯವರ ವೃತ್ತಾಂತವು ಖೇದಕರವಾಗಿದೆ.
ನಾವುಗಳೇ ಆ ರಾಣಿಯನ್ನು ಕಿತ್ತೊಗೆದು ಯುವರಾಜರಿಗೆ ಪಟ್ಟಗಟ್ಟ
ಬೇಕೆಂದು ಯೋಚಿಸುತ್ತಿದ್ದೆವು. ಅಷ್ಟರಲ್ಲಿ ಯುವರಾಜರು ಅಂತರ್ಧಾನ
ರಾದರು. ನಗರದ ಕಾರುಬಾರುಗಳು ಆಲೋಚನಾತೀತವಾಗಿವೆ.
ಯುವರಾಜರಿಗೆ ಪ್ರಾಣಾಪತ್ತು ಸಂಭವಿಸಿತೇನೋ ಎಂದು ನಾವು ಶಂಕಿ
ತರಾಗಿದ್ದೆವು. ಈಗ ದೂತರು ತಂದಿರುವ ಸಮಾಚಾರದ ಪ್ರಕಾರ
ಯುವರಾಜರೇ ಶ್ರೀರಂಗಪಟ್ಟಣಕ್ಕೆ ಹೋಗಿ ಹೈದರಲ್ಲೀಖಾನರನ್ನು
ಕರೆತಂದಿದ್ದಾರೆಂದು ತಿಳಿದುಬರುತ್ತದೆ. ಅಷ್ಟು ಸಾಹಸವು ನಮ್ಮ
ಯುವರಾಜರಿಗಿದೆಯೆಂದು ನಾವು ಭಾವಿಸಿರಲಿಲ್ಲ. ನಮಗೆ ಎಷ್ಟೋ
ಮೆಚ್ಚಿಗೆಯಾಗಿದೆ. ನಾವು ಮಾಡುವ ಕಾರ್ಯವನ್ನು ಯುವರಾಜರೇ
ಮಾಡಿದಂತಾಯಿತು.

"ಸಂತೋಷ. ಭಗವಂತನು ದೊಡ್ಡವನು. ಯುವರಾಜರ
ಅಂತರ್ಧಾನದಿಂದ ನನ್ನ ಮನಸ್ಸು ಕಳವಳಗೊಳ್ಳುತ್ತಿದ್ದಿತು. ಅವರು

ಸೈನ್ಯವನ್ನು ತೆಗೆದುಕೊಂಡು ನಗರದ ಮೇಲೆ ಯುದ್ಧಕ್ಕೆ ಬರುತ್ತಾರೆಂಬುದು ಸಂತೋಷಕರವಾಗಿದ್ದರೂ ಆಶ್ಚರ್ಯಕರವಾಗಿದೆ."

"ದೇವಿಯವರೇ, ಆಶ್ಚರ್ಯವೇನಿದೆ? ನಗರದ ರಾಣಿಯು ಸಾಮಾನ್ಯಳಲ್ಲ. ಅವಳನ್ನು ಶಾಸನ ಮಾಡಬೇಕಾದರೆ ಪ್ರಬಲರಾದ ಪರರಾಜರ ಸಹಾಯವು ಬೇಕೇಬೇಕು. ಯುವರಾಜರ ಪ್ರಯತ್ನವು ನ್ಯಾಯವಾಗಿಯೇ ಇದೆ."

"ಗೋಪಾಲನಾಯಕರೇ, ನಾನು ತಮ್ಮೊಡನೆ ವಾದಮಾಡುವುದಕ್ಕೆ ಬಂದಿಲ್ಲ. ನಗರವು ಧರ್ಮರಾಜ್ಯ. ಈ ರಾಜ್ಯವನ್ನು ಉಳಿಸಬೇಕೆಂದು ತಮ್ಮಲ್ಲಿ ಬೇಡಲು ಬಂದಿದ್ದೇನೆ."

ಗೋಪಾಲನಾಯಕರು ಬಗ್ಗಿಸಿದ ತಲೆಯನ್ನು ಮೇಲಕ್ಕೆತ್ತಿ ಕೈಮುಗಿದು ಆ ಭವಾನೀರಾಣಿಯ ತೇಜಸ್ಸನ್ನು ನೋಡಿ ಭಕ್ತಿಭಾವದಿಂದ ಅವಳಿಗೆ ನಮಸ್ಕರಿಸಿ "ತಾಯೇ ತಮ್ಮ ಸನ್ನಿಧಾನದಲ್ಲಿ ನಾನು ವಾದ ಮಾಡುತ್ತಿದ್ದೇನೆಂದರೆ ಅದು ನನ್ನ ಅಪಚಾರವೇ ಸರಿ. ತಾವು ನಮಗೆ ಮಹಾರಾಣಿಯವರು. ತಮ್ಮ ಸೇವೆಗಾಗಿ ನನ್ನ ಶಿರಸ್ಸನ್ನು ಕತ್ತರಿಸಿ ಪಾದಕ್ಕೆ ಸಮರ್ಪಣೆಮಾಡಬೇಕೆಂದರೆ ನಾನು ಸಿದ್ಧನಾಗಿದ್ದೇನೆ. ಅಪ್ಪಣೆ ಕೊಡಿಸೋಣವಾಗಲಿ."

"ಗೋಪಾಲನಾಯಕರೇ, ಉದ್ವಿಗ್ನರಾಗಬೇಡಿರಿ. ನನ್ನ ಮಾತನ್ನು ಕೇಳಿರಿ. ಹೈದರನೊಡನೆ ಯುದ್ಧಮಾಡಿ ನಗರದ ರಾಜ್ಯವನ್ನು ಉಳಿಸಿರಿ. ನಾವೇ ನಮ್ಮ ಯುವರಾಜರಿಗೆ ಪಟ್ಟಕಟ್ಟೋಣ."

"ತಮ್ಮ ಅಪ್ಪಣೆಯನ್ನು ನಾನು ಶಿರಸಾವಹಿಸುವೆನು. ಆದರೆ ಈ ನಗರದ ಪಾಳೇಗಾರರೆಲ್ಲರೂ ವಿಮುಖರಾಗಿದ್ದಾರೆ. ರಾಣಿಗಾಗಿ ಕೈಯೆತ್ತುವುದಿಲ್ಲವೆಂದು ಶಪಥಮಾಡಿದ್ದಾರೆ."

"ಚೆನ್ನಾಗಿದೆ. ಗೋಪಾಲನಾಯಕರೇ! ಭೇತಾಳನಿಗಾಗಿ ಕೆರೆಯ ಕೋಡಿಯನ್ನು ಒಡೆದುಹಾಕಿದಂತಾಯಿತು. ರಾಣಿಗಾಗಿ ನಗರವನ್ನು ಸೂರೆಗೊಡುವುದು ಎಂತಹಧರ್ಮ? ತಾವು ಆ ಪಾಳೆಯಗಾರರೆಲ್ಲರನ್ನೂ

ಕರೆತರೆಸಿ ವಿವೇಕವನ್ನು ಹೇಳಿ ಉತ್ಸಾಹವನ್ನು ತುಂಬಿ ಯುದ್ಧಕ್ಕೆ ನಿಲ್ಲಿಸಬೇಕು."

"ಮಾತೆಯವರೇ! ನಾನು ಆ ಪಾಳೆಯಗಾರರೆಲ್ಲರನ್ನೂ ಕರೆತರಿಸಿ ತಮ್ಮ ಪಾದದ ಮೇಲೆ ಕೆಡಹುವೆನು. ತಾವೇ ಅವರಿಗೆ ಬೋಧಿಸೋಣ ವಾಗಲಿ. ಯಾರು ಬರಲಿ, ಯಾರು ಬಾರದಿರಲಿ, ನನ್ನ ಭುಜಗಳಲ್ಲಿ ಬಲವಿರುವವರೆಗೆ ನನ್ನ ಧಮನಿಗಳಲ್ಲಿ ಕಡೆಯ ರಕ್ತದ ಬೊಟ್ಟು ಆಡುತ್ತಿರುವವರೆಗೆ, ನನ್ನ ಹೃದಯಕುಹರದಲ್ಲಿ ಪರಮಾಣುವಿನಷ್ಟು, ಪ್ರಾಣವು ಉಳಿದಿರುವವರೆಗೆ ನಾನು ತಮ್ಮ ಆಜ್ಞಾಧಾರಕನಾಗಿ ಸೇವೆ ಮಾಡುತ್ತೇನೆ" ಎಂದು ಹೇಳಿದರು. ಭವಾನೀರಾಣಿಯು ಸಂತಸಗೊಂಡು ಗೋಪಾಲನಾಯಕರ ಶಿರಸ್ಸಿನ ಮೇಲೆ ಎರಡು ಕೈಗಳನ್ನೂ ಇಟ್ಟು ಹರಸಿ ತನ್ನ ಆವಾಸಸ್ಥಾನಕ್ಕೆ ಬಂದು ಸೇರಿದಳು.

ಮಾರನೆಯದಿನ ಪ್ರಾತಃಕಾಲವೇ ಗೋಪಾಲನಾಯಕರು ಎಲ್ಲಾ ಪಾಳೆಯಗಾರರಿಗೂ ಭವಾನೀರಾಣಿಯವರ ಆಗಮನವನ್ನು ತಿಳಿಸಿ ಅವರ ದರ್ಶನಕ್ಕಾಗಿ ಬರಬೇಕೆಂದು ಓಲೆಗಳನ್ನು ಬರೆಸಿ ದೂತರ ಮುಖೇನ ಕಳುಹಿಸಿಕೊಟ್ಟರು. ಮೂರುದಿವಸಗಳೊಳಗಾಗಿ ಎಲ್ಲಾ ಪಾಳೇಗಾರರೂ ರಾಮಪುರದಲ್ಲಿ ಬಂದು ನೆರೆದರು. ಪ್ರತ್ಯೇಕ ಪ್ರತ್ಯೇಕ ವಾಗಿ ರಾಣಿಯವರ ಭೇಟಿಯನ್ನು ಮಾಡಿ ಆಶೀರ್ವಾದವನ್ನು ಪಡೆದು ಬರುತ್ತಿದ್ದರು. ಗೋಪಾಲನಾಯಕರು ತಮ್ಮ ಅರಮನೆಯ ವಿಶಾಲವಾದ ದರಬಾರುಮಂದಿರದಲ್ಲಿ ಪಾಳೆಯಗಾರರೆಲ್ಲರನ್ನೂ ಸಭೆಗೂಡಿಸಲು ಬೇಕಾದ ಏರ್ಪಾಡುಗಳನ್ನೆಲ್ಲಾ ಸಡಗರದಿಂದ ಮಾಡಿದರು. ಸಿಂಹಾ ಸನವನ್ನು ಅಲಂಕರಿಸಿ ಎದುರಿನಲ್ಲಿ ಪಾಳೇಗಾರರುಗಳಿಗೆ ವೀರಾಸನ ಗಳು ಸಿದ್ಧಮಾಡಲ್ಪಟ್ಟವು.

ಸೋಮವಾರದದಿನ ಪ್ರಾತಃಕಾಲ ಎಲ್ಲಾ ಪಾಳೇಗಾರರೂ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಲಲಾಟಗಳಲ್ಲಿ ವಿಭೂತಿಪುಂಡ್ರ ಗಳನ್ನು ಧರಿಸಿಕೊಂಡು ತಮ್ಮತಮ್ಮ ಪೂರ್ವಾಚಾರದಂತೆ ದಿರಸು ಗಳಿಂದಲಂಕೃತರಾಗಿ ಸಭಾಭವನಕ್ಕೆ ಬಂದು ಸೇರಿದರು. ಗೋಪಾಲ

ನಾಯಕರು ಆದರದಿಂದ ಎಲ್ಲರನ್ನೂ ಎದುರುಗೊಂಡು ಕುಶಲಪ್ರಶ್ನೆಗಳನ್ನು ಮಾಡಿ ಉಚಿತಾಸನಗಳಲ್ಲಿ ಕುಳ್ಳಿರಿಸಿದರು. ಭವಾನೀರಾಣಿಯವರು ಸ್ನಾನಾನ್ಹಿಕಗಳನ್ನು ತೀರಿಸಿಕೊಂಡು ಮ್ಯಾನಾದಲ್ಲಿ ಕುಳಿತು ಗೋಪಾಲನಾಯಕರ ಅರಮನೆಗೆ ಬಿಜಯಮಾಡಿದರು. ಗೋಪಾಲ ನಾಯಕರು ರಾಣಿಯವರನ್ನು ಎದುರುಗೊಂಡು ಸಭಾಮಂದಿರದೊಳಕ್ಕೆ ಕರೆತಂದರು. ಪಾಳೇಗಾರರೆಲ್ಲರೂ ಎದ್ದುನಿಂತು ಮಹಾದೇವಿಗೆ ಮನ್ನಣೆ ಮಾಡಿದರು. ದೇವಿಯವರು ಮಂದಹಾಸವನ್ನು ಬೀರುತ್ತಾ ಎಲ್ಲರನ್ನೂ ಮುಗುಳುನಗೆಯಿಂದಲೂ, ಕರುಣಾಪೂರ್ಣವಾದ ದೃಷ್ಟಿಯಿಂದಲೂ, ಮನ್ನಣೆಮಾಡುತ್ತಾ ಸಿಂಹಾಸನದ ಸಮೀಪಕ್ಕೆ ಹೋಗಿ ನಿಂತರು. ಗೋಪಾಲನಾಯಕರ ಪ್ರಾರ್ಥನೆಯಿಂದ ರಾಣಿಯವರು ಸಿಂಹಾಸನದ ಮೇಲೆ ಮಂಡಿಸಿದರು. ಪಾಳೆಯಗಾರರೆಲ್ಲರೂ ಜಯಧ್ವನಿಯನ್ನು ಮಾಡಿದರು. ಎಲ್ಲರೂ ದೇವಿಗೆ ಅಭಿವಂದಿಸಿ ತಮ್ಮತಮ್ಮ ಆಸನಗಳಲ್ಲಿ ಕುಳಿತರು.

ಕಾಷಾಯಾಂಬರದಿಂದ ಪರಿಶೋಭಿತವಾದ ಆ ದಿವ್ಯಶರೀರ. ವಿಭೂತಿಯಿಂದ ಅಲಂಕೃತವಾದ ಲಲಾಟದಿಂದ ಪರಿಶೋಭಿಸುತ್ತಿರುವ ಆ ಪ್ರಸನ್ನ ಮುಖಮಂಡಲ. ಪುಷ್ಪಮಾಲಾಂಕೃತವಾದ ಜಟಾಜೂಟ. ವಿಶಾಲವಾದ ಪ್ರಶಾಂತವಾದ ನೇತ್ರಯುಗ್ಮ. ನೀಲಮಣಿಗಳಿಂದ ಲಂಕೃತವಾದ ಕರ್ಣಗಳು, ಥಳಥಳಿಸುವ ಕಪೋಲಗಳು. ಗುಂಡಾದ ಚುಬುಕ. ಕೋಮಲವಾದ ನಾಸಿಕ. ಕೆಂದುಟಿಗಳ ಮಧ್ಯದಿಂದ ದಂತಚ್ಛವಿಯನ್ನು ಸೂಸುತ್ತಿರುವ ಮಂದಹಾಸ. ಕಂಠದಲ್ಲಿ ಪರಿಶೋಭಿಸುತ್ತಿರುವ ರುದ್ರಾಕ್ಷಮಾಲೆ. ಕೈಯಲ್ಲಿ ಅಲಂಕರಿಸಿರುವ ಸ್ಫಟಿಕಮಾಲೆ. ತೇಜೋವಿರಾಜಮಾನವಾದ, ಸರ್ವಾಂಗಸುಂದರವಾದ ಆಕೃತಿ! ಸಾಕ್ಷಾತ್ ದಾಕ್ಷಾಯಿಣಿಯು ಕೈಲಾಸದಿಂದ ಭೂಲೋಕಕ್ಕೆ ನಡೆದುಬಂದು ಪ್ರತ್ಯಕ್ಷವಾಗಿ ದರ್ಶನವೀಯುತ್ತಿರುವಂಥಾ ಜಗನ್ಮೋಹನ ರೂಪ. ಆ ಭವಾನೀರಾಣಿಯನ್ನು ನೋಡಿದಮಾತ್ರದಿಂದಲೇ ಪಾಳೆಯಗಾರರೆಲ್ಲರಿಗೂ, ಭಕ್ತಿಭಾವವು ಉದಯವಾಯಿತು. ಗೋಪಾಲನಾಯಕರು

ಎದ್ದು ನಿಂತು, "ಸಹೋದರರುಗಳಿರಾ! ಮಹಾದೇವಿ ಭವಾನೀರಾಣಿ ಯವರು ಮಲ್ಲಿಕಾರ್ಜುನನ ಆಜ್ಞೆಯನ್ನು ನಮಗೆ ನುಡಿಯಲು ಇಲ್ಲಿಗೆ ದಯಮಾಡಿಸಿದ್ದಾರೆ. ನಾವೆಲ್ಲರೂ ಅವರ ಆಜ್ಞಾಧಾರಕರೆಂದು ನಾನು ಮೊದಲೇ ಅರಿಕೆಮಾಡಿದ್ದೇನೆ. ಅವರು ಹೇಗೆ ಅಪ್ಪಣೆಕೊಡಿಸು ತ್ತಾರೆಯೋ ಹಾಗೆ ನಡೆಯುವುದು ನಮ್ಮ ಧರ್ಮ" ಎಂದು ಹೇಳಿ ಒರೆ ಯಿಂದ ಕತ್ತಿಯನ್ನು ಹಿರಿದು ರಾಣಿಯವರ ಪಾದಕ್ಕೆ ಮುಟ್ಟಿಸಿ ಆ ಕತ್ತಿಯನ್ನು ಕಣ್ಣಿಗೊತ್ತಿಕೊಂಡು ಒರೆಯಲ್ಲಿ ಸೇರಿಸಿದನು.

ರಾಣಿಯು ಮಂದಹಾಸವನ್ನು ಸೂಸುತ್ತಾ "ನಗರದ ವೀರ ನರಪತಿಗಳಿರಾ! ನಗರಕ್ಕೆ ಮಹದಾಪತ್ತು ಸಂಭವಿಸಿದೆ. ಕುಲಕ್ರಮಾಗತ ವಾಗಿ ನಗರದ ರಾಜ್ಯದ ಸಂರಕ್ಷಕರಾದ ನೀವು ನಗರದ ಸ್ವಾತಂತ್ರ್ಯ ವನ್ನು ಕಾಪಾಡಿರಿ" ಎಂದು ಕೇಳಿಕೊಳ್ಳುವುದಕ್ಕೆ ಬಂದಿದ್ದೇನೆ. ಮೈಸೂರಿನ ಹೈದರಲ್ಲೀಖಾನನು ನಗರದ ಮೇಲೆ ದಂಡೆತ್ತಿಬಂದು ಶಿವಮೊಗ್ಗೆಯಲ್ಲಿ ಬೀಡುಬಿಟ್ಟಿದ್ದಾನೆಂದು ನೀವೆಲ್ಲರೂ ಕೇಳಿದ್ದೀರಿ. ನಮ್ಮ ಯುವರಾಜರಾದ ಚೆನ್ನಬಸಪ್ಪನಾಯಕರವರು ಹೈದರನ ಶರಣು ಹೋಗಿದ್ದಾರೆಂದು ಗೋಪಾಲನಾಯಕರು ನನಗೆ ತಿಳಿಸಿದರು. ಇದರಿಂದ ನನಗಾದ ಯಾತನೆಯನ್ನು ಹೇಳತೀರದು. ಹೈದರನು ನಗರದ ಪುನರುದ್ಧಾರಮಾಡಿ ಯುವರಾಜರನ್ನು ಸಿಂಹಾಸನದ ಮೇಲೆ ಪ್ರತಿಷ್ಠಾಪನೆ ಮಾಡಲು ಸೈನ್ಯವನ್ನು ತೆಗೆದುಕೊಂಡು ಬಂದಿಲ್ಲ. ಹೈದರನು ಮೈಸೂರನ್ನು ಆಕ್ರಮಿಸಿ ಹೇಗೆ ಬಿಗಿಮುಷ್ಟಿಯಲ್ಲಿ ಹಿಡಿದಿ ದ್ದಾನೆಯೋ ಹಾಗೆಯೇ ನಗರವನ್ನು ಜಯಿಸಿ ತನ್ನ ಪದತಲದಲ್ಲಿ ತುಳಿದು ಆಳಲು ಸೈನ್ಯವನ್ನು ತೆಗೆದುಕೊಂಡು ಬರುತ್ತಿದ್ದಾನೆ. ನಗರವು ವೀರಭೂಮಿ. ಈ ನಗರವು ನಿಮ್ಮಗಳ ಮಾತೃಭೂಮಿ. ನಗರದ ಸಿಂಹಾಸನವು ನಿಮ್ಮದು. ಈ ನಗರದ ಧರ್ಮವು ನಿಮ್ಮಿಂದ ರಕ್ಷಿತ ವಾಗಬೇಕು. ನಗರವು ಸ್ವರ್ಣಭೂಮಿ. ಇಲ್ಲಿರುವ ಸ್ವರ್ಣರಾಶಿಯನ್ನು ಲೂಟಿಮಾಡಿ ಒಂದು ಕವಡೆಯನ್ನೂ ಬಿಡದೇ ಸೂರೆಮಾಡಿಕೊಂಡು ಹೋಗಲು ಹೈದರನು ಬರುತ್ತಿದ್ದಾನೆ. ವೀರರಾದ ನಿಮ್ಮನ್ನು

ಸದೆಬಡಿದು ದಾಸಾನುದಾಸರಾಗಿಮಾಡಿ ನಿಮ್ಮಮೇಲೆ ಪದಾಹತಿಯನ್ನು ಮಾಡಲು ಹೈದರನು ಬರುತ್ತಿದ್ದಾನೆ. ನೀವುಗಳು ಅಂತಃಕಲಹದಿಂದ ಕಲುಷಿತಹೃದಯರಾಗಿ ನಿರ್ವೀರ್ಯರಾಗಿ ಹೋಗಿರುವುದು ನನಗೆ ದುಃಖವನ್ನುಂಟುಮಾಡುತ್ತಿದೆ. ನೀವೆಲ್ಲರೂ ಈ ಧರ್ಮರಾಜ್ಯವಾದ ನಗರವನ್ನು ಮ್ಲೇಂಛರಿಗೆ ಬಿಟ್ಟುಕೊಡುವಿರಾ? ನೀವೆಲ್ಲರೂ ಸ್ವರ್ಣಭೂಮಿಯಾದ ನಗರವನ್ನು ಸೂರೆಗೊಟ್ಟು ಈ ರಾಜ್ಯವನ್ನು ಸ್ಮಶಾನವಾಗಿ ಮಾಡುವಿರಾ? ನೀವೆಲ್ಲರೂ ನಗರದ ಸಿಂಹಾಸನವನ್ನು ಮುಸಲ್ಮಾನ್ ದಳಪತಿಗೆ ಬಿಟ್ಟುಕೊಟ್ಟು ಈ ವೀರಭೂಮಿಯನ್ನು ಗುಲಾಮರಾಜ್ಯವಾಗಿ ಮಾಡುವಿರಾ? ನಾನು, ಈ ನಗರದ ಸಿಂಹಾಸನಕ್ಕಾಗಿ ಯುದ್ಧಮಾಡಿ ಈ ಧರ್ಮರಾಜ್ಯವನ್ನು ಉಳಿಸಿರಿ ಎಂದು ಕೇಳಿಕೊಳ್ಳಲು ನಿಮ್ಮೊಡನೆ ಬಂದಿದ್ದೇನೆ.

ನಿಮ್ಮಗಳ ಹೃದಯವು ನಗರದ ರಾಣಿಯ ವಿಷಯದಲ್ಲಿ ಕ್ರೋಧಪೂರಿತವಾಗಿದೆಯೆಂದು ಕೇಳಿದ್ದೇನೆ. ಇನ್ನುಮೇಲೆ ನಗರದ ಸಿಂಹಾಸನಕ್ಕೆ ರಾಣಿಯೂ ಬೇಡ, ರಾಜನೂ ಬೇಡ. ಆ ಪವಿತ್ರ ಸಿಂಹಾಸನವು ಶೂನ್ಯಸಿಂಹಾಸನವಾಗಲಿ. ಈ ನಗರದ ರಾಜ್ಯವು ಮಲ್ಲಿಕಾರ್ಜುನನ ಧರ್ಮರಾಜ್ಯವಾಗಿ ಬೆಳಗಲಿ. ತ್ರಿಲೋಕಾಧಿಪತಿಯಾದ ಮಲ್ಲಿಕಾರ್ಜುನನು ಈ ರಾಜ್ಯದ ಅಧಿಪತಿಯಾಗಲಿ. ನೀವೆಲ್ಲರೂ ಅವನ ದಳಪತಿಗಳಾಗಿ ಯುದ್ಧಮಾಡಿರಿ.

ಹೈದರನು ಸಾಮಾನ್ಯನಲ್ಲ. ಮಹಾಪರಾಕ್ರಮಶಾಲಿ. ಕಾವೇರಿಯಿಂದ ಗೋದಾವರಿಯವರೆಗೆ ರಾಜ್ಯವನ್ನು ವಿಸ್ತರಿಸಿರುವ ಶೂರಾಗ್ರೇಸರ. ಐವತ್ತು ಸಹಸ್ರ ದಂಡಿನೊಂದಿಗೆ ಬಂದಿದ್ದಾನೆ. ಕ್ಷತ್ರಿಯೋತ್ತಮರಾದ ನಿಮ್ಮಗಳಿಗೆ ಈ ಯುದ್ಧಕ್ಕಿಂತಲೂ ಪರಮಭಾಗ್ಯವು ಮತ್ತಾವುದೂ ಇಲ್ಲ. ಇಂತಹ ಅಪೂರ್ವ ಸುಯೋಗವು ಎಲ್ಲ ಕಾಲಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ, ಎಲ್ಲರಿಗೂ ಲಭಿಸುವುದಿಲ್ಲ. ನಿಮ್ಮ ಪುಣ್ಯದಿಂದ ಈ ಯುದ್ಧವು ಲಭಿಸಿದೆ. ನೀವು ಹೈದರನಮೇಲೆ ವೀರ್ಯಪರಾಕ್ರಮಗಳಿಂದ ಯುದ್ಧಮಾಡಿರಿ. ಧರ್ಮಕ್ಕೆ ಜಯವಾಗುತ್ತದೆ. ಪುಣ್ಯಭೂಮಿ, ಧರ್ಮ

ಭೂಮಿ; ಈ ನಗರದ ರಾಜ್ಯವು ಆಚಂದ್ರಾರ್ಕವಾಗಿ ಧರ್ಮರಾಜ್ಯವಾಗಿ ಮೆರೆಯುತ್ತದೆ. ನೀವೆಲ್ಲರೂ ನನಗೆ ಅಭಿವಚನವನ್ನು ಕೊಡಿರಿ. ಮಹಾದೇವನಮೇಲೆ ಆಣೆಯನ್ನಿಟ್ಟು ಕತ್ತಿಯನ್ನು ಮುಟ್ಟಿ ನಿಮ್ಮ ಪವಿತ್ರಕುಲಗಳ ಹೆಸರಿನಲ್ಲಿ ಪ್ರಮಾಣಮಾಡಿರಿ" ಎಂದು ಭವಾನೀ ರಾಣಿಯು ಶರವರ್ಷದಂತೆ ವೀರವಾಕ್ಯಗಳನ್ನು ಸುರಿಸಿದಳು.

ಪಾಳೆಯಗಾರರೆಲ್ಲರಿಗೂ ವೀರಾವೇಶವು ತುಂಬಿಬಂದಿತು. ಎಲ್ಲರೂ ಕತ್ತಿಗಳನ್ನು ಹಿರಿದು ಪ್ರಮಾಣಮಾಡಿದರು. ಒಬ್ಬೊಬ್ಬರಾಗಿ ಭವಾನೀ ರಾಣಿಯ ಮುಂದೆ ಬಂದು ತಲೆಬಾಗಿ ವಂದಿಸಿದರು. ರಾಣಿಯು ಎಲ್ಲ ರನ್ನೂ ಹರಿಸಿದಳು. ಎಲ್ಲರೂ ಗೋಪಾಲನಾಯಕರ ಅಪ್ಪಣೆಯನ್ನು ಪಡೆದು ತಮ್ಮತಮ್ಮ ಬಿಡಾರಗಳಿಗೆ ತೆರಳಿದರು. ರಾಣಿಯು ಗೋಪಾಲ ನಾಯಕರನ್ನು ಅಭಿನಂದಿಸಿ ಆಶೀರ್ವದಿಸಿ ತನ್ನ ಬಿಡಾರಕ್ಕೆ ಚಿತ್ತೈ ಸಿದಳು.

ಹೀಗೆ ತಪಸ್ವಿನಿಯಾದ ಭವಾನೀರಾಣಿಯು ರಜೋಗುಣದಿಂದ ಎರಕಹೊಯ್ದ ಮೂರ್ತಿಯಂತೆ ಪ್ರತ್ಯಕ್ಷಳಾಗಿ ಪಾಳೆಯಗಾರರನ್ನೆಲ್ಲಾ ಎತ್ತಿಕಟ್ಟಿ ಸಂತೃಪ್ತಹೃದಯಳಾಗಿ ಗೋಪಾಲನಾಯಕರ ರಾಜಧಾನಿ ಯಿಂದ ನಗರಕ್ಕೆ ಹಿಂತಿರುಗಿದಳು.

---

## ೨೬

## ಭೇದೋಪಾಯವೇ ?

ಹೈದರಲ್ಲೀಖಾನನ ಗುಪ್ತಚಾರರು ನಗರದ ಸಮಾಚಾರವನ್ನೆಲ್ಲಾ ತಿಳಿದುಕೊಂಡು ಮೈಸೂರಿನ ಪಾಳಯಕ್ಕೆ ಬಂದು ಸೇರಿದರು. ಅವರು ಹೈದರಲ್ಲೀಖಾನನನ್ನು ಕಂಡು,

"ಖಾವಂದರವರೇ! ನಗರದ ಸಮಾಚಾರವು ವಿಚಿತ್ರವಾಗಿದೆ. ನಗರದ ನಾಡಿನಲ್ಲಿ ರಾಣಿಯವರಿಗೂ ಪಾಳೇಗಾರರಿಗೂ, ವೈಮನಸ್ಯ

ವಿದೆಯೆಂದು ಪ್ರತಿಯೊಂದು ಹಳ್ಳಿಯಲ್ಲಿಯೂ ಮಾತನಾಡುತ್ತಿದ್ದರು. ಈಚೆಗೆ ಭವಾನೀರಾಣಿಯೆಂಬ ಒಬ್ಬ ಸನ್ಯಾಸಿನಿಯು ರಾಮಪುರದ ಪಾಳೆಯಗಾರರಾದ ಗೋಪಾಲನಾಯಕರ ಸನ್ನಿಧಾನಕ್ಕೆ ಬಂದು ಅಲ್ಲಿ ನಗರದ ಪಾಳೆಯಗಾರರನ್ನು ಸೇರಿಸಿ ಯುದ್ಧಕ್ಕೆ ಎತ್ತಿಕಟ್ಟಿದ್ದಾಳೆ. ಗೋಪಾಲನಾಯಕರೆಂಬುವರು ಪಾಳೆಯಗಾರರಲ್ಲೆಲ್ಲಾ ಅಗ್ರಗಣ್ಯರು, ಧರ್ಮಾತ್ಮರು. ಅವರ ಮಾತೆಂದರೆ ಯಾರೂ ಗೆರೆ ದಾಟುವುದಿಲ್ಲ. ಅವರು ಯುದ್ಧಕ್ಕೆ ನಿಂತಮೇಲೆ ಇಡೀ ನಗರದ ರಾಜ್ಯವೇ ನಮ್ಮನ್ನು ಎದುರಿಸಲು ನಿಂತ ಹಾಗೆಯೇ ಸರಿ. ಇದ್ದದ್ದು ಇದ್ದಹಾಗೆ ಸನ್ನಿಧಾನದಲ್ಲಿ ಅರಿಕೆಮಾಡಿದ್ದೇವೆ" ಎಂದು ತಿಳಿಸಿದರು.

ಬಿದನೂರಿಗೆ ಹೋಗಿದ್ದ ಗುಪ್ತಚಾರರು "ಹುಜೂರು, ನಗರದ ರಾಣಿಯು ಸಾಮಾನ್ಯಳಲ್ಲ. ಸೈನ್ಯವನ್ನೆಲ್ಲಾ ಒಳ್ಳೆಯ ಹುರುಪಿನಿಂದ ಎತ್ತಿಕಟ್ಟಿದ್ದಾಳೆ. ಪಾಳೇಗಾರರ ದಂಡು, ನಗರದ ದಂಡು ಸೇರಿದರೆ ಒಂದು ಲಕ್ಷ ಸೈನ್ಯವಾಗುವಂತೆ ತೋರುತ್ತದೆ. ಮೈಸೂರಿನ ಸೈನ್ಯವು ಬಂದು ನಗರದ ರಾಜ್ಯದ ಹೆಬ್ಬಾಗಿಲಿನಲ್ಲಿ ನಿಂತಿದ್ದರೂ ನಗರದವರು ಸ್ವಲ್ಪವೂ ಭಯಪಟ್ಟಿಲ್ಲ. ಯುದ್ಧದ ಸಿದ್ಧತೆಗಳು ಅಹೋರಾತ್ರಿಯೂ ನಡೆಯುತ್ತಿವೆ. ನಗರದ ಶೀಮೆಯಲ್ಲಿ ಮನೆಮನೆಯಲ್ಲಿಯೂ ಯುದ್ಧದ ಮಾತೇ" ಎಂಬುದಾಗಿ ಅರಿಕೆಮಾಡಿದರು.

ನವಾಬರು ಆ ಗುಪ್ತಚಾರರುಗಳಿಗೆ ಹೇರಳವಾದ ಇನಾಮುಗಳನ್ನು ಕೊಡಿಸಿ ವಿಶ್ರಮಿಸಿಕೊಳ್ಳುವಂತೆ ಕಳುಹಿಸಿಕೊಟ್ಟರು. ಅನಂತರ ಮಹಾಸೈನ್ಯದ ಮುಖ್ಯಸೇನಾಧಿಪತಿಯಾದ ಮಹಮದಾಲಿಯವರನ್ನು ಕರೆತರುವಂತೆ ಅಪ್ಪಣೆ ಮಾಡಿದರು. ಮಹಮದಾಲಿಯವರು ಬಿಳಿಯ ಅಂಗರೇಕುಗಳನ್ನೂ ಪೋಷಾಕುಗಳನ್ನೂ ಧರಿಸಿಕೊಂಡು ಹೈದರಲ್ಲೀಖಾನರವರ ಭವ್ಯವಾದ ಪಟಭವನಕ್ಕೆ ಬಂದರು. ಹೊರಗೆ ಕಾದು ನಿಂತಿದ್ದ ದ್ವಾರಪಾಲಕರು ಮಹಮದಾಲಿಯವರನ್ನು ಮರ್ಯಾದೆಯೊಡನೆ ನವಾಬರ ಸಮ್ಮುಖಕ್ಕೆ ಕರೆದೊಯ್ದರು. ಸೇನಾಧಿಪತಿಗಳಾದ ಮಹಮದಾಲಿಯವರು ಸುಲ್ತಾನರನ್ನು ಮರ್ಯಾದೆಯಿಂದ ಕುರ್ನಿಸಾಥ್

ಮಾಡಿ ಕುಳಿತುಕೊಂಡರು. ಹೈದರಾಲಿಯವರು ನಗುತ್ತಾ, ಆಸನವನ್ನು ತೋರಿಸಿ, "ಕುಳಿತುಕೊಳ್ಳಿರಿ ಸೇನಾಧಿಪತಿಗಳೇ" ಎಂದು ಹೇಳಿದರು. ಸೇನಾಧಿಪತಿಯು ನಮ್ರಭಾವದಿಂದ ಮತ್ತೊಮ್ಮೆ ಸಲಾಂ ಮಾಡಿ ಕುಳಿತುಕೊಂಡರು.

"ಸೇನಾಧಿಪತಿಗಳೇ, ನಗರದ ರಾಜ್ಯದೊಳಗೆ ಪ್ರತಿಯೊಂದು ಕಡೆಯೂ ಸುತ್ತಿ ತಾಜಾ ಸಮಾಚಾರವನ್ನು ತಂದಿರುವ ಗುಪ್ತಚಾರರಿಂದ ಅಲ್ಲಿಯ ವಿದ್ಯಮಾನಗಳೆಲ್ಲಾ ತಿಳಿದುಬಂದಿದೆ. ಪಾಳೆಯಗಾರರಿಗೂ ರಾಣಿ ಚೆಲುವಮ್ಮಣ್ಣಿಯವರಿಗೂ ಪ್ರಬಲ ವಿರೋಧವಿತ್ತು. ಯಾವಳೋ ಭವಾನೀರಾಣಿಯಂತೆ, ಸನ್ಯಾಸಿನಿಯಂತೆ, ಅವಳು ಎಲ್ಲರನ್ನೂ ಸಮಾಧಾನಮಾಡಿ ಯುದ್ಧಕ್ಕೆ ಎತ್ತಿಕಟ್ಟಿದ್ದಾಳಂತೆ. ಈಗ ಮುಂದೇನು ಆಲೋಚನೆ ಮಾಡುವಿರಿ?"

"ಹುಜೂರು, ನಾವು ಇಲ್ಲಿ ಆಲೋಚನೆ ಮಾಡಲು ಬಂದಿಲ್ಲ. ಯುದ್ಧಕ್ಕಾಗಿ ಬಂದಿದ್ದೇವೆ. ಇಡೀ ಹಿಂದೂಸ್ಥಾನವನ್ನು ಜಯಿಸಬಲ್ಲ ತಮ್ಮ ಕತ್ತಿಯ ಮುಂದೆ ಈ ನಗರವೆಷ್ಟರದು? ನಾವು ಖಂಡಿತವಾಗಿಯೂ ಜಯಿಸುತ್ತೇವೆ."

"ಜಯಿಸುತ್ತೇವೆ ಎಲ್ಲೆಲ್ಲಿಯೂ ನಮಗೆ ಜಯವಾಗಿರುವುದು ನಿಜ. ನಾವೆಲ್ಲಿಯೂ ಹಿಮ್ಮೆಟ್ಟಿಲ್ಲ. ನಗರದರಾಜ್ಯ ಗಂಡು ರಾಜ್ಯ. ಇಲ್ಲಿಯ ಪಾಳೇಗಾರರು ಪ್ರಬಲವಾಗಿಯೇ ಹೋರಾಡುತ್ತಾರೆ."

"ಖಾವಂದ್, ನಾವು ಗಂಡಸರೊಡನೆ ಯುದ್ಧಮಾಡುವುದಕೆ ಬಂದಿರುವುದು. ಮಾಫ್ ಮಾಡಬೇಕು. ಈ ಪಾಳೇಗಾರರ ಪರಾಕ್ರಮವನ್ನು ತಮ್ಮ ಬಾಯಿನಿಂದ ಹೊಗಳುವುದನ್ನು ಕೇಳಲಾರೆನು. ನನಗೆ ಅಪ್ಪಣೆ ಕೊಡೋಣವಾಗಲಿ. ಹತ್ತುಸಾವಿರ ದಂಡಿನೊಡನೆ ಹೋಗಿ ನಾನು ನಗರವನ್ನು ಗೆದ್ದುಕೊಂಡು ಬರುತ್ತೇನೆ."

ಹೈದರನು ನಕ್ಕು, "ಶಹಬಾಸ್, ಸೇನಾಧಿಪತಿಗಳು ಅಂತಹ ಮಹಾಪರಾಕ್ರಮಿಗಳೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಹಾಗಾದರೆ ನಾವು ಈ ಐವತ್ತುಸಹಸ್ರ ದಂಡನ್ನು ತಂದಿರುವುದೇಕೆ?" ಎಂದನು.

"ಜಹಾಪನಾ, ಮೈಸೂರಿನ ಪರಾಕ್ರಮವನ್ನು ಪ್ರದರ್ಶನ ಮಾಡುವುದಕ್ಕೆ ಖಂಡಿತವಾಗಿಯೂ ಐವತ್ತುಸಹಸ್ರ ದಂಡಿನಿಂದ ಇಲ್ಲಿ ಕೆಲಸವಿಲ್ಲ. ಹತ್ತುಸಹಸ್ರ, ಹತ್ತೇಸಹಸ್ರ ದಂಡು ಸಾಕು."

"ಮಹಮದಾಲಿಯವರೇ, ನಗರದ ದಂಡು ಒಂದು ಲಕ್ಷ ದಂಡು ಇದೆಯೆಂದು ತಿಳಿಯಬಂದಿದೆ."

"ಹತ್ತಾರು ವರ್ಷಗಳಿಂದಲೂ ನಗರದಲ್ಲಿ ಲಕ್ಷ ದಂಡು ಇದೆಯೆಂದು ಕೇಳುತ್ತಲೇ ಇದ್ದೇನೆ. ಅಂದಿನಿಂದಲೂ ಈ ನಗರದ ಯುದ್ಧಕ್ಕೆ ನಾನೇ ಬರಬೇಕೆಂದು ಆಶೆಪಡುತ್ತಿದ್ದೆ. ಹುಜೂರಿನಲ್ಲಿ ಈ ಅಂಶವನ್ನು ಎಷ್ಟೋ ಬಾರಿ ಅರಿಕೆಮಾಡಿದ್ದೇನೆ. ನನ್ನ ಹತ್ತುಸಹಸ್ರ ದಂಡಿನಿಂದಲೇ ಈ ಲಕ್ಷ ದಂಡನ್ನು ಬಲಿಕೊಡಬೇಕೆಂದು ಶಪಥಮಾಡಿದ್ದೇನೆ. ಹಾಗಿಲ್ಲದಿದ್ದರೆ ಮೈಸೂರಿಗೇನು ಕೀರ್ತಿ ? ನಗರದ ದಂಡು ಗಂಡಾಳುಗಳ ದಂಡಿರ ಬಹುದು. ಆದರೆ ಯಾವ ರಣರಂಗದಲ್ಲಿ ಆ ದಂಡು ಹೋರಾಡಿ ಗೆದ್ದಿದೆ ಹುಜೂರು ? ರಣಕ್ಷೇತ್ರವನ್ನು ಕಾಣದ ದಂಡು ನಿಜವಾದ ದಂಡಲ್ಲ ಖಾವಿಂದ್. ಹೆಚ್ಚು ಮಾತನಾಡುವುದಕ್ಕೆ ಭಯವಾಗುತ್ತದೆ. ನನಗೆ ಅಪ್ಪಣೆ ಕೊಡೋಣವಾಗಲಿ."

"ಸೇನಾಧಿಪತಿಗಳೇ, ಯುದ್ಧದ ಬಲಾಬಲಗಳನ್ನು ಅಳತೆ ಮಾಡಲು ತಮ್ಮೊಡನೆ ಆಲೋಚನೆ ಮಾಡುತ್ತಿಲ್ಲ. ತಮ್ಮ ಪರಾಕ್ರಮದಲ್ಲಿ ನನಗೆ ಪೂರ್ಣ ಭರವಸೆಯುಂಟು. ಈ ಪಾಳೇಗಾರರಿಗೂ ರಾಣಿಗೂ ವೈಮನಸ್ಯವಿದೆಯೆಂದು ಖಚಿತವಾಗಿ ತಿಳಿದಿತ್ತು. ಈಗ ರಾಜಿಯಾಗಿದೆ ಯೆಂದು ಕೇಳುತ್ತೇವೆ. ಅವರಲ್ಲಿ ಭೇದೋಪಾಯವನ್ನುಂಟುಮಾಡಲು ಉಪಾಯವನ್ನು ಆಲೋಚಿಸಬೇಕೆಂದು ತಮ್ಮನ್ನು ಮಂತ್ರಾಲೋಚನೆಗೆ ಕರೆಸಿದೆ."

"ಹುಜೂರು, ಮಾಫ್ ಮಾಡಬೇಕು. ಈ ಮಲೆನಾಡಿನ ಜನ ಮರಟು ಜನ. ಹಿಂದೂಜನ ಎಷ್ಟೇ ಪರಸ್ಪರ ದ್ವೇಷವಿದ್ದರೂ ಧರ್ಮಕ್ಕಾಗಿ ಪ್ರಾಣತೊರೆಯುವಜನ. ಈ ಜನಕ್ಕೆ ಗುರುಗಳು, ದೇವರು, ಸನ್ಯಾಸಿಗಳು ಎಂದರೆ ಬಹುಭಕ್ತಿ. ಆ ಭವಾನೀರಾಣಿಯೆಂಬ ಸನ್ಯಾಸಿನಿಯು

ಅರಸರನ್ನೆಲ್ಲಾ ಒಟ್ಟುಗೂಡಿಸಿದಮೇಲೆ ಅದನ್ನು ಒಡೆಯಲು ಸಾಧ್ಯ ವಾಗುವುದಿಲ್ಲ. ಆ ಪ್ರಯತ್ನಕ್ಕೆ ಹೋದರೆ ನಾವೇ ಮೋಸಹೋಗುತ್ತೇವೆ. ನಾವು ಇಲ್ಲಿಗೆ ಯುದ್ಧಕ್ಕೆ ಬಂದಿದ್ದೇವೆ. ಖಡಾಖಡಿ ಯುದ್ಧಮಾಡೋಣ. ಜಯವು ನಮ್ಮದು" ಎಂದು ದಿಟ್ಟತನದಿಂದ ಹೇಳಿದನು.

ಹೈದರನು ತಲೆಯಲ್ಲಾಡಿಸಿ, "ಸರಿಯಾಗಿದೆ. ಇದೇ ಒಳ್ಳೆಯ ಯೋಚನೆ. ಒಳ್ಳೆಯದು. ಯುದ್ಧವು ಯಾವ ಕ್ಷಣದಲ್ಲಿ ಬರುತ್ತ ದೆಂಬುದನ್ನು ಹೇಳಲಾಗುವುದಿಲ್ಲ. ಎಲ್ಲವನ್ನೂ ತಯಾರಾಗಿಡಿರಿ."

ಸೇನಾಧಿಪತಿಯು ಆಸನದಿಂದೆದ್ದು ಸಲಾಂಮಾಡಿ ಒರೆಯಿಂದ ಕತ್ತಿಯನ್ನು ಹಿರಿದು "ಹುಜೂರು, ಮೈಸೂರಿನ ಸೈನ್ಯವು ಸಿದ್ಧವಾಗಿದೆ" ಎಂದು ಹೇಳಿದನು. ಹೈದರನು ಸಂತಸಗೊಂಡು ಸೇನಾಧಿಪತಿಯನ್ನು ಬೀಳ್ಕೊಟ್ಟನು.

ಸೇನಾಧಿಪತಿಯು ಹೊರಟುಹೋದಮೇಲೆ ಶಾಯಿಸ್ತಖಾನ್ ಎಂಬ ಸರದಾರನನ್ನು ಕರೆತರುವಂತೆ ದ್ವಾರಪಾಲಕರಿಗೆ ಅಪ್ಪಣೆ ಮಾಡಿದನು. ಶಾಯಿಸ್ತಾಖಾನನು ಹುಜೂರಿಗೆ ಬಂದು ನೆಲಮುಟ್ಟಿ ಸಲಾಂಮಾಡಿ ನಿಂತುಕೊಂಡನು. ಹೈದರನು ಆ ಸರದಾರನನ್ನು ಆಸನದಲ್ಲಿ ಕುಳಿತುಕೊಳ್ಳುವಂತೆ ಅಪ್ಪಣೆ ಮಾಡಿದನು.

ಶಾಯಿಸ್ತಾಖಾನನು ಹೈದರನಿಗೆ ಬಾಲ್ಯದಿಂದಲೂ ಪರಮಾಪ್ತನು. ಸಂಧಾನಗಳಲ್ಲಿ ಬಲು ಚತುರನು. ಯುದ್ಧದಲ್ಲಿಯೂ ಧೈರ್ಯಸ್ಥ. ಹೈದರನು ಅವನೊಡನೆ ನಗರದ ಸಮಾಚಾರಗಳನ್ನೆಲ್ಲಾ ಅರುಹಿ ಪಾಳೇಗಾರರಲ್ಲಿ ಭೇದೋಪಾಯವನ್ನು ಕಲ್ಪಿಸುವ ತಂತ್ರವನ್ನು ಕುರಿತು ಪ್ರಸ್ತಾಪ ಮಾಡಿದನು. ಶಾಯಿಸ್ತಾಖಾನನು, "ಹುಜೂರು, ಈ ಸಮಾಚಾರವೆಲ್ಲವೂ ಅಷ್ಟೇನೂ ಅಗಾಧವಾಗಿದೆಯೆಂದು ನನಗೆ ತೋರ ಲಿಲ್ಲ. ರಾಣಿ ಚೆಲುವಮ್ಮಣ್ಣಿಯ ಮೇಲೆ ನಗರದ ರಾಜ್ಯವು ಅಸಮಾಧಾನ ಗೊಂಡಿದೆಯೆಂಬುದು ಸಿದ್ಧಾಂತವಾದಮಾತು. ನಾವು ಗೋಪಾಲ ನಾಯಕರನ್ನು ಕಂಡು ನಗರದ ರಾಜ್ಯಕ್ಕೆ ಅವರಿಗೇ ಪಟ್ಟಗಟ್ಟುತ್ತೇ ವೆಂದು ಭರವಸೆಕೊಟ್ಟರೆ ಸುಲಭವಾಗಿ ನಮ್ಮ ಇಷ್ಟಾರ್ಥವು ಸಾಧನೆ ಯಾಗುತ್ತದೆ." ಎಂದನು.

ಹೈದರನು ನಕ್ಕು, “ಒಳ್ಳೆಯ ಯೋಚನೆ. ಈ ಯೋಚನೆಗೆ ನಾನು ಒಪ್ಪಿದೆ. ಆದರೆ ಈ ಯುವರಾಜನೊಬ್ಬನಿದ್ದಾನಲ್ಲ? ಇವನಿಗೆ ನಾವೇನು ಮಾಡುವುದು ?” ಎಂದನು.

“ಇದೇನು ಹುಜೂರು? ಹೀಗೆ ಮಾತನಾಡೋಣವಾಗುತ್ತದೆ. ಯುವರಾಜನಿಗೆ ಯಾರಿದ್ದಾರೆ ? ಪರದೇಶಿಯಾಗಿ ಇಲ್ಲಿಗೆ ಬಂದಿದ್ದಾನೆ. ಅವನಿಗೇನು ರಾಜ್ಯವಿದೆಯೇ ? ಕೋಶವಿದೆಯೇ ? ಸೈನ್ಯವಿದೆಯೇ ? ಏನಿದೆ ಅವನಿಗೆ? ಅವನು ಈ ಪಾಳೇಗಾರರೆಲ್ಲ ತನ್ನ ಕಡೆಗೆ ಇದ್ದಾರೆಂದು ಸುಳ್ಳು ಹೇಳಿದ್ದಾನೆ. ಈಗ ಅವರೆಲ್ಲರೂ ಬಿಗಡಾಯಿಸಿದ್ದಾರೆ. ನಾವು ಅವನನ್ನು ವಿಚಾರಣೆಮಾಡಿ ಶೂಲಕ್ಕೇರಿಸಿ ಬಿಡಬೇಕು. ಆಗ ಎಲ್ಲವೂ ಅಚ್ಚುಗಟ್ಟಾಗಿ ಹೋಗುತ್ತದೆ.”

“ನಿಮ್ಮ ಆಲೋಚನೆಯೇನೋ ರಾಜನೀತಿಗೆ ಸರಿಯಾಗಿದೆ. ನಿರಪರಾಧಿಯಾದ ಚಿನ್ನಬಸಪ್ಪನಾಯಕನನ್ನು ಕೊಲ್ಲಿಸಲು ನನ್ನ ಮನಸ್ಸು ಒಪ್ಪುವುದಿಲ್ಲ. ಅವನು ನಮಗೆ ಶತೃವಾಗಿದ್ದರೆ ಅವನನ್ನು ಕೊಲ್ಲಿಸಬಹುದು. ಅವನು ಮಹಾಪರಾಕ್ರಮಶಾಲಿಯಾಗಿದ್ದು ಮುಂದೆ ಶತೃವಾಗುವವನಾಗಿದ್ದರೆ ಮುಗಿಸಿಬಿಡಲೇಬೇಕು. ಯುವರಾಜನು ಸಾಮಾನ್ಯ ಯುವಕ. ಆ ಭೈರವಿ ಸನ್ಯಾಸಿನಿಯ ಆಟದಗೊಂಬೆ. ನಿಜವಾಗಿ ಈ ನಗರವನ್ನು ಗೆದ್ದು ನಾವು ಅವನಿಗೆ ಪಟ್ಟಗಟ್ಟಿಸಿದರೆ ರಾಣಿಗಿರಿಯನ್ನು ಮಾಡುವವಳು ಈ ಭೈರವಿ. ನೋಡಿ ಖಾನರೇ! ಈ ನಗರಕ್ಕೆ ಇನ್ನುಮೇಲೆ ರಾಜರು ಇಲ್ಲವೆಂದು ಕಾಣುತ್ತದೆ. ರಾಣಿಗಳ ರಾಜ್ಯಭಾರವೇ ರಾಜ್ಯಭಾರ. ಆ ಚೆಲುವಮ್ಮಣ್ಣಿಯನ್ನು ಕಿತ್ತುಹಾಕಿ ತಾನೇ ಪಟ್ಟಕ್ಕೇರಬೇಕೆಂದು ಈ ಭೈರವಿಯು ಯುವರಾಜನನ್ನು ಹಾರಿಸಿಕೊಂಡು ಬಂದು ನಮ್ಮಲ್ಲಿ ಸೇರಿದ್ದಾಳೆ. ಅವಳ ಕಣ್ಣುಗಳನ್ನು ನೋಡಿರಿ ಎಂತಹ ಉಜ್ವಲವಾದ ಕಣ್ಣುಗಳು. ಅವಳ ಬುದ್ಧಿಯನ್ನು ನೋಡಿರಿ ಎಂತಹ ಉತ್ಪಾತಬುದ್ಧಿ! ಯುವರಾಜನೇನು? ಕುರಿಯ ಮರಿ. ಅವನನ್ನೇಕೆ ಕೊಲ್ಲಬೇಕು. ಕೊಂದುಹಾಕಿದರೆ ಮಣ್ಣಾಗಿ ಹೋಗುತ್ತಾನೆ. ಬದುಕಿದ್ದರೆ ಹೆಣವಾಗಿ ಬದುಕಿರುತ್ತಾನೆ. ಅವನ ಮೇಲೇಕೆ ನಿಮ್ಮ ಆಕ್ರೋಶ.”

"ಹುಜೂರು, ಖಾವಂದರಮಾತು ಸತ್ಯವಾಗಿದೆ. ಯುವರಾಜನನ್ನು ಕೊಲ್ಲಬೇಕಾಗಿಲ್ಲ ಗೋಪಾಲನಾಯಕರಲ್ಲಿ ಸಂಧಾನಕ್ಕೆ ಕಳುಹಿಸಬೇಕು"

"ನೀವೇ ಸಂಧಾನಕ್ಕೆ ಹೋಗಬೇಕು. ನಿಮ್ಮಂಥಾ ಚಮತ್ಕಾರವುಳ್ಳವರು ಮತ್ತಾರಿದ್ದಾರೆ ?"

"ಖಾವಂದರ ಅಪ್ಪಣೆಯಾದರೆ ನಾನೇ ಹೊರಡುತ್ತೇನೆ."

ಹೈದರನು ಶಾಯಿಸ್ತಾಖಾನನನ್ನು ಬಹಳವಾಗಿ ಪ್ರಶಂಶಿಸಿ ಮಾರನೆಯ ದಿನವೇ ಅವರು ಸಂಧಾನಕ್ಕೆ ಹೊರಡುವಂತೆ ಆಜ್ಞೆಯಿತ್ತು ಕಳುಹಿಸಿಕೊಟ್ಟನು.

ಮಧ್ಯಾಹ್ನಾತ್ಪರ ಭೈರವಿಯು ಹೈದರಲ್ಲೀಖಾನ್‌ರವರ ವಾಸ ಭವನಕ್ಕೆ ಬಂದು ನವಾಬರ ಭೇಟಿಮಾಡಬೇಕೆಂದು ದ್ವಾರಪಾಲಕರ ಮುಖ್ಯಸ್ಥನಾಗಿದ್ದ ಹಯಾತನೊಡನೆ ನುಡಿದಳು. ಹಯಾತನು ನವಾಬರ ಸನ್ನಿಧಾನಕ್ಕೆ ಹೋಗಿ ಭೈರವೀರಾಣಿಯು ಬಂದಿದ್ದಾಳೆಂದು ಅರಿಕೆಮಾಡಿದನು. ಹೈದರಲ್ಲೀಖಾನನು ಒಳಕ್ಕೆ ಕರತರುವಂತೆ ಸನ್ನೆ ಮಾಡಿದನು. ಹಯಾತನು ಹೊರಗೆಬಂಧು ಭೈರವಿಯನ್ನು ಪಟಭವನದೊಳಗೆ ಕರೆದೊಯ್ದನು. ಹೈದರನು ಕುಳಿತಿದ್ದ ಪಟಭವನವು ವಿಶಾಲವಾದ ಪಟಭವನ. ನೆಲದಮೇಲೆ ಕೆಂಪುಬಣ್ಣದ ರತ್ನಗಂಬಳಿಯು ಹಾಸಿತ್ತು. ಕರಿಯ ಮಖಮಲ್ಲಿನ ಫರದೆಗಳು ಸುತ್ತಲೂ ಕಟ್ಟಲ್ಪಟ್ಟಿದೆ. ಮೇಲೆ ಶುಭ್ರವಾದ ಬಿಳಿಯ ವಿತಾನ. ಆ ಮಧ್ಯದಲ್ಲಿ ರಜತ ನಿರ್ಮಿತವಾದ ಪರ‍್ಯಂಕ. ಆ ಪರ‍್ಯಂಕದಮೇಲೆ ಪ್ರಶಸ್ತವಾದ ತಲ್ಪ. ಎದರುಗಡೆ ಎರಡು ರಜತಾಸನಗಳು. ಮಧ್ಯದಲ್ಲಿ ಸ್ವರ್ಣನಿರ್ಮಿತವಾದ ಒಂದು ಸಣ್ಣ ಮಂಟಪ. ಆ ಮಂಟಪದ ಮೇಲುಗಡೆ ಸುವಾಸನೆಯ ಊದು ಬತ್ತಿಗಳು ಹಚ್ಚಲ್ಪಟ್ಟಿವೆ. ವಾಸಮಂಟಪವೆಲ್ಲವೂ ಘಮಘಮಿಸುವ ಅತ್ತರುಗಳಿಂದ ಸಿಂಚಿತವಾಗಿದೆ. ಹುಡುಗನೊಬ್ಬನು ಬಿಳಿಯ ದಿರುಸುಗಳನ್ನು ಧರಿಸಿಕೊಂಡು ಲಾವಂಚದ ಬೀಸಣಿಗೆಯಿಂದ ನವಾಬರಿಗೆ ಗಾಳಿಹಾಕುತ್ತಿದ್ದಾನೆ. ಭೈರವಿಯು ಆ ಪಟಭವನದೊಳಗೆ ಮೆತ್ತಗೆ ಹೆಜ್ಜೆಗಳನ್ನಿಡುತ್ತಾ ಹೈದರನ ಮಂಚದ ಸಮೀಪಕ್ಕೆ ಬಂದು ನಿಂತು

ಕೊಂಡಳು. ನಮ್ರಭಾವದಿಂದ ಹೈದರನಿಗೆ ಸಲಾಂ ಮಾಡಿದಳು. ಹೈದರನು ನಗುತ್ತಾ ಪ್ರತ್ಯಭಿವಾದನಮಾಡಿ, "ರಾಣಿಯವರೇ! ದಯ ಮಾಡಿಸಬೇಕು. ಆ ಪೀಠವನ್ನಲಂಕರಿಸಬೇಕು" ಎಂದು ಕೈತೋರಿಸಿದನು.

ಭೈರವಿಯು ಪೀಠದಮೇಲೆ ಕುಳಿತುಕೊಂಡಳು. ಭೈರವಿಯೇ ಮಾತಿಗೆ ಮೊದಲುಮಾಡಿದಳು.

"ನವಾಬರವರೇ, ನಗರದ ರಾಜಕೀಯವು ಸನ್ನಿಧಾನಕ್ಕೆ ತಿಳಿದಿರುವುದಲ್ಲವೇ ? ಪಾಳೆಯಗಾರರೂ ನಗರದ ರಾಣಿಯೂ ಒಂದಾಗಿದ್ದಾರಂತೆ. ನಗರದ ಸೈನ್ಯವು ನಿಮ್ಮಮೇಲೆ ಏರಿಬರುತ್ತಿದೆಯಂತೆ."

ಹೈದರನು ನಗುತ್ತಾ, "ಹೌದು ರಾಣಿಯವರೇ, ನಗರದ ಪಾಳೇಗಾರರು ಒಗ್ಗಟ್ಟಾಗಿ ನಮ್ಮಮೇಲೆ ಬೀಳುತ್ತಾರಂತೆ. ಮಹತ್ತರವಾದ ಯುದ್ಧಪ್ರಮೇಯವೇ ಸಂಭವಿಸಿತು. ಈಗೇನು ಮಾಡಬೇಕು ?" ಎಂದನು.

"ಮಹಾಪರಾಕ್ರಮಶಾಲಿಗಳೆಂದು ಸುಪ್ರಸಿದ್ಧರಾದ ನವಾಬ್ ಹೈದರಲ್ಲೀಖಾನರವರು ಯುದ್ಧಕ್ಕೆ ಹೆದರುವರೇನು ?" ಎಂದು ವಿಸ್ತೃತ ನಯನಗಳನ್ನು ತಿರುಗಿಸುತ್ತಾ ಹೈದರನ ಮೇಲೆ ತನ್ನ ಕಟಾಕ್ಷವನ್ನು ಬೀರಿದಳು.

"ರಾಣಿಯವರೇ, ಹಿಂದಕ್ಕೆ ಹೋಗುವುದಿಲ್ಲ. ನೀವು ನಮ್ಮಲ್ಲಿ ಬಂದಾಗ ಪಾಳೆಯಗಾರರು ಈ ಯುದ್ಧದ ಗೋಜಿಗೆ ಬರುವುದಿಲ್ಲವೆಂದು ಹೇಳಿದಿರಿ. ಈಗ ಯುದ್ಧಕ್ಕೆ ಅವರೇ ಮುಂದಾಗಿ ಬರುತ್ತಿದ್ದಾರೆ. ನಾವು ಇನ್ನುಮೇಲೆ ನಿಮ್ಮ ಮಾತಿನಲ್ಲಿ ಭರವಸೆಯಿಡುವುದು ಹೇಗೆ? ಎಂದು ಯೋಚಿಸುತ್ತಿದ್ದೇವೆ."

ಭೈರವಿಯು ನಕ್ಕು, "ಮಹಾನುಭಾವರಾದ ನವಾಬರವರೇ! ತಾವು ಸಂಧಿವಿಗ್ರಹಗಳನ್ನು ಅರಿಯದವರೇನು ? ರಾಜಕೀಯವನ್ನು ತಿಳಿಯದವರೇನು ? ರಾಣಿ ಚೆಲುವಮ್ಮಣ್ಣಿಗೂ ಪಾಳೇಗಾರರಿಗೂ ಪ್ರಬಲವಾದ ವಿರೋಧವಿದ್ದಿತು. ಈಗ ಭವಾನೀರಾಣಿಯವರು ಅವರನ್ನು

ಒಂದುಗೂಡಿಸಿದ್ದಾರಂತೆ. ಅದನ್ನು ನಾವು ಭೇದೋಪಾಯದಿಂದ ಮುರಿಯಬೇಕು" ಎಂದಳು.

"ನೀವು ಒಳ್ಳೇ ರಾಜಕೀಯ ನಿಷ್ಣಾತರಾಗಿದ್ದೀರಿ. ಭೇದೋಪಾಯದ ಮಾರ್ಗವಾವುದು ?"

"ತಮ್ಮೊಡನೆ ಯುವರಾಜರು ಬಂದಿದ್ದಾರೆಂಬುದನ್ನು ಪಾಳೆಯಗಾರರು ಅರಿಯರು. ಒಂದುಪಕ್ಷ ಅರಿತಿದ್ದರೂ ನಂಬರು. ಏತಕ್ಕೆಂದರೆ ನಾನು ಯುವರಾಜರು ಮರಣಹೊಂದಿದ್ದಾರೆಂದು ಸಮಾಚಾರವನ್ನು ಹರಡಿದ್ದೇನೆ. ಆದುದರಿಂದ ಅವರಿಗೆ ಯುವರಾಜರು ಬದುಕಿದ್ದಾರೆಂಬುದಕ್ಕೆ ಪ್ರತ್ಯಕ್ಷಪ್ರಮಾಣವು ಬೇಕು."

ಹೈದರನು ತಿರಸ್ಕಾರಭಾವದಿಂದ, "ರಾಣಿಯವರೇ! ನಿಮ್ಮ ಯುವರಾಜರಿಗೆ ರಾಜ್ಯವಿಲ್ಲ, ಕೋಶವಿಲ್ಲ, ಸೈನ್ಯವಿಲ್ಲ. ಅಂಥಾ ಅನಾಥರಾದ ಯುವರಾಜರು ಬದುಕಿದ್ದಾರೆಂದು ತಿಳಿದರೇನು, ಇಂದೇ ಸತ್ತು ಹೋದರೇನು! ಆ ಪಾಳೇಗಾರರನ್ನು ಬದಲಾಯಿಸುವುದು ಹೇಗೆ?" ಎಂದನು.

"ನೋಡಿ ನವಾಬರೇ! ತಮ್ಮ ಮಾತು ಸತ್ಯವಾದರೂ ಶಲ್ಯದಂತೆ ಇರಿಯುತ್ತಿದೆ. ನಾನು ನಗರದಲ್ಲಿಯೇ ಇದ್ದು ತಂತ್ರವನ್ನು ಹೂಡಿ ಯುವರಾಜರಿಗೆ ಪಟ್ಟಗಟ್ಟಿಸಬೇಕೆಂದಿದ್ದರೆ ಏನೂ ಕಷ್ಟವಾಗುತ್ತಿರಲಿಲ್ಲ. ತಂತ್ರದಿಂದ ರಾಣಿ ಚೆಲುವಮ್ಮಣ್ಣಿಯನ್ನು ಸುಲಭವಾಗಿ ಕೊಲೆಮಾಡಿಸಬಹುದಾಗಿತ್ತು. ಏಕೆ? ನನ್ನ ಕೈಗಳಿಂದಲೇ ಅವಳನ್ನು ಕತ್ತರಿಸಿ ಬಿಸುಡುವ ಸಾಮರ್ಥ್ಯವು ನನಗಿತ್ತು. ರಾಣಿಯು ಸತ್ತುಹೋಗಿದ್ದರೆ ಪ್ರಜೆಗಳು ಯುವರಾಜನ ರಾಜತ್ವವನ್ನು ಸಂತೋಷವಾಗಿ ಒಪ್ಪಿಕೊಳ್ಳುತ್ತಿದ್ದರು. ನಾನು ಆ ರಾಣಿಯನ್ನು ಬಂದಿಯಾಗಿ ಹಿಡಿದು ಅವಮಾನಗೊಳಿಸಿ ದ್ವೇಷವನ್ನು ತೀರಿಸಿಕೊಳ್ಳಬೇಕೆಂದು ಹಟ ತೊಟ್ಟಿದ್ದೇನೆ. ಅವಳು ನಿಸ್ಸಹಾಯಕಳಾಗಿ ಬೀದಿಯಲ್ಲಿ ಭಿಕಾರಿಣಿಯಂತೆ ತಿರುಗುವುದನ್ನು ನೋಡಿ ಮನದಣಿಸಿಕೊಳ್ಳಬೇಕೆಂದು ಆಶೆಯುಳ್ಳವಳಾಗಿದ್ದೇನೆ. ಆ ಹಟ, ಆ ಆಸೆಗಳಿಂದಲೇ ಈ ಭಿಕಾರಿಣಿಯ ವೇಷದಲ್ಲಿ

ನಿಮ್ಮಲ್ಲಿ ಬಂದು ಬೇಡುತ್ತಿದ್ದೇನೆ. ಈಗಲೂ ನೀವು ಹೇಳಿರಿ. ನಮಗೆ ಸಹಾಯಮಾಡಲಾರಿರಾದರೆ ಬಿಟ್ಟುಬಿಡಿರಿ. ನಮ್ಮ ದಾರಿಯನ್ನು ನಾವು ನೋಡಿಕೊಳ್ಳುತ್ತೇವೆ" ಎನ್ನುತ್ತಾ ಭೈರವಿಯು ಎದ್ದು ನಿಂತಳು.

ಹೈದರನು ನಗುತ್ತಾ, "ರಾಣಿಯವರೇ, ಕುಳಿತುಕೊಳ್ಳಿರಿ. ಹೈದರನು ಯಾವ ರಾಜ್ಯದ ಮೇಲೆಯೂ ದಂಡೆತ್ತಿಹೋಗಿ ಹಿಂತಿರುಗಿದ ಕಥೆಯನ್ನು ಯಾರೂ ಕೇಳಿಲ್ಲ. ನಾವು ಈ ಯುದ್ಧದಲ್ಲಿ ನಗರದ ರಾಜ್ಯವನ್ನು ನಿಮ್ಮ ಪಾದಾಕ್ರಾಂತವಾಗಿ ಮಾಡುತ್ತೇವೆ. ರಾಣಿ ಚೆಲುವಮ್ಮಣ್ಣಿಯನ್ನು ಸೆರೆಹಿಡಿಯುತ್ತೇವೆ. ಅದರಲ್ಲಿ ನಿಮಗೇಕೆ ಸಂದೇಹ?" ಎಂದನು.

ಭೈರವಿಯು ಪುನಃ ಆಸನದಮೇಲೆ ಕುಳಿತುಕೊಂಡು, "ನವಾಬರೇ, ನನಗೆ ಸಂದೇಹವೆಲ್ಲಿಬಂತು? ಮಾತಿಗೆಮಾತು ಬಂದು ಎಲ್ಲಿಯೋ ಹೋಯಿತು. ಕೇಳಿರಿ. ನಾನು ತಮ್ಮಲ್ಲಿ ಬಂದಿರುವುದು ಗೋಪಾಲ ನಾಯಕರಿಗೂ ರಾಣಿಗೂ ಭೇದೋಪಾಯವನ್ನು ಕಲ್ಪನೆ ಮಾಡ ಬೇಕೆಂದು ಸೂಚಿಸಲು ಬಂದಿದ್ದೇನೆ" ಎಂದಳು.

ಹೈದರನು ಆಶ್ಚರ್ಯಚಕಿತನಾಗಿ, "ರಾಣಿಯವರೇ, ನಗರದ ರಾಣಿಯವರಿಗೂ ಗೋಪಾಲನಾಯಕರಿಗೂ ಭೇದೋಪಾಯವನ್ನು ಕಲ್ಪಿಸುವದೆಂತು?" ಎಂದನು.

"ನೋಡಿ ನವಾಬರೇ, ಪ್ರಯತ್ನಮಾಡಲೇಬೇಕು. ಫಲಿಸಿದರೆ ಮಹತ್ತರವಾದ ಲಾಭ. ವಿಫಲವಾದರೆ ನಷ್ಟವೇನೂ ಇಲ್ಲ."

"ರಾಣಿಯವರೇ! ಏನುಮಾಡಬೇಕು?"

"ನೀವು, ಈ ಯುದ್ಧದಲ್ಲಿ ಗೋಪಾಲನಾಯಕರು ನಿಮಗೆ ಸಹಾಯ ಮಾಡಬೇಕೆಂದು ಪ್ರಾರ್ಥನೆಮಾಡಿರಿ. ಅವರಿಗೆ ನಗರದ ರಾಜ್ಯವನ್ನು ಪಟ್ಟಗಟ್ಟುವುದಾಗಿ ಹೇಳಿಕಳುಹಿಸಿರಿ. ಆಗ ಅವರು ನಿಮ್ಮಕಡೆಗೆ ಬರ ಬಹುದು."

ಹೈದರನು ಮತ್ತೂ ಆಶ್ಚರ್ಯದಲ್ಲಿ ಮುಳುಗಿ ಕ್ಷಣಹೊತ್ತು ಆಲೋಚನಾ ಕ್ರಾಂತನಾಗಿದ್ದು ಭೈರವಿಯಕಡೆಗೆ ತಿರುಗಿ, "ರಾಣಿಯವರೇ,

ಇದೇನು ವಿಚಿತ್ರ? ಹೈದರನು ಎರಡು ನುಡಿದನೆಂದು ಇದುವರೆವಿಗೂ ಎಲ್ಲಿಯೂ ಅಪಪ್ರಥೆಯಿಲ್ಲ. ನೀವು ನನ್ನನ್ನು ವಂಚಿಸುತ್ತಿರುವಿರೋ? ಅಥವಾ ಪರೀಕ್ಷೆಮಾಡುತ್ತಿರುವಿರೋ?" ಎಂದನು.

ಭೈರವಿಯು ನಕ್ಕು, "ನವಾಬರೇ! ಎರಡೂ ಅಲ್ಲ. ನಾನು ನಿಮ್ಮನ್ನು ನನ್ನ ತಂದೆಗೆ ಸಮಾನವಾಗಿ ಭಾವಿಸಿದ್ದೇನೆ. ಗೋಪಾಲ ನಾಯಕರನ್ನು ಮೋಸಮಾಡುವ ಉಪಾಯವಿದು" ಎಂದಳು.

"ರಾಣಿಯವರೇ! ಯುದ್ಧದಲ್ಲಿ ಗೋಪಾಲನಾಯಕರು ನಮಗೆ ಎದುರಾಗಿ ನಿಲ್ಲಲಿ, ತಾಟಸ್ಥ್ಯವನ್ನು ವಹಿಸಲಿ, ನಮಗೆ ಜಯವು ಸಿದ್ಧ. ಹೀಗಿರುವಲ್ಲಿ ನಗರದ ಸಿಂಹಾಸನವನ್ನು ಗೋಪಾಲನಾಯಕರಿಗೆ ನಾವು ಕೊಡಲೇಬೇಕಾಗುತ್ತದೆ. ಆಗ ನಾವು ಧರ್ಮಸಂಕಟದಲ್ಲಿ ಬೀಳುತ್ತೇವೆ."

"ಖಾವಂದರವರೇ! ಅದೇ ನಿಮಗೆ ತಿಳಿಯದ ಜಟಿಲವಾದ ಸಮಸ್ಯೆ. ನಗರದ ರಾಜ್ಯವನ್ನು ನೀವು ಗೆಲ್ಲುತ್ತಲೇ ಮಂತ್ರಿ ರಾಮ ಕೃಷ್ಣನು ಬಂಧಮುಕ್ತನಾಗುತ್ತಾನೆ. ಅವನು ಸನ್ನಿಧಾನಕ್ಕೆ ಬರುತ್ತಾನೆ. ಭವಾನೀರಾಣಿಯವರು ಯಾರೋ ಭಿಕಾರಿಯಾದ ಸನ್ಯಾಸಿನಿಯಲ್ಲ. ಅವರು ಬಸಪ್ಪನಾಯಕನ ಧರ್ಮಪತ್ನಿ. ಸಂಸಾರವನ್ನು ತ್ಯಾಗಮಾಡಿ ಭಗವದಾರಾಧನೆಯಲ್ಲಿ ಆತ್ಮಾರ್ಪಣಮಾಡಿರುವ ತಪಸ್ವಿನಿ. ಈ ರಾಜ್ಯದ ಅಧಿಕಾರವು ಮಹಾಮಂತ್ರಿ ರಾಮಕೃಷ್ಣನಿಗೆ ವಂಶಪರಂಪರಾಗತ ವಾದುದು. ಭವಾನೀರಾಣಿಯವರಿಗೆ ಈ ರಾಜ್ಯದ ಧರ್ಮಾಧಿಕಾರವಿದೆ. ಅವರಿಬ್ಬರೂ ನಗರದ ರಾಜಪರಂಪರೆಗೆ ಯಾರು ಹಕ್ಕುದಾರರೋ ಅವರನ್ನು ಸಿಂಹಾಸನಕ್ಕೇರಿಸುತ್ತಾರೆ. ಮಹಾಮಂತ್ರಿ ರಾಮಕೃಷ್ಣನ ಮುಂದೆ ಗೋಪಾಲನಾಯಕನು ತಲೆಬಾಗಿ ತಣ್ಣಗಾಗುತ್ತಾನೆ. ವಚನ ಭ್ರಷ್ಟತ್ವವು ತಮಗೆಲ್ಲಿ ಬರುತ್ತದೆ."

"ರಾಣಿಯವರೇ! ನೀವು ಬಹದ್ದೂರ್ ಹೆಣ್ಣು. ನನ್ನ ಬುದ್ಧಿಯನ್ನು ಜಯಿಸಿದ ಬುದ್ಧಿ ನಿಮ್ಮದು. ನಾನು ಒಪ್ಪಿಕೊಳ್ಳುತ್ತೇನೆ. ನಾನು ಆ ಸಂಧಾನಕ್ಕೆ ಏರ್ಪಾಡುಮಾಡಿದ್ದೇನೆ."

ಭೈರವಿಯು ಆಶ್ಚರ್ಯದಿಂದ, "ಮಹಾಪುರುಷರಾದ ನವಾಬರೇ!

ನಾನು ಬಹುರಹಸ್ಯವೆಂದು ತಮ್ಮಲ್ಲಿ ಹೇಳುವುದಕ್ಕೆ ಬಂದ ರಾಜಕೀಯು ವನ್ನು ತಾವು ಮೊದಲೇ ಅರಿತಿದ್ದೀರಿ. ಸೂರ್ಯನಮುಂದೆ ಹಣತೆಯು ದೀಪದಂತೆ ನನ್ನ ಬುದ್ಧಿಯು ತಮ್ಮ ಮುಂದೆ ಸಾಗುವುದೇ ? ತಾವು ಸಂಧಾನಕ್ಕೆ ಏನು ವ್ಯವಸ್ಥೆಮಾಡಿದ್ದೀರಿ ? ಅಪ್ಪಣೆಕೊಡಿಸೋಣ ವಾಗಲಿ." ಎಂದಳು.

ಹೈದರಲ್ಲೀಖಾನನು ನಿಧಾನವಾಗಿ ಮಾತನಾಡುತ್ತಾ, "ರಾಣಿ ಯುವರೇ! ಸರದಾರ ಶಾಯಿಸ್ತಾಖಾನರು ನಾಳೆ ಗೋಪಾಲನಾಯುಕ ರಲ್ಲಿಗೆ ಸಂಧಾನಕ್ಕೆ ಹೊರಡುವರು. ಅವರು ಈ ಸಂಧಾನಕಾರ್ಯಗಳಲ್ಲಿ ಬಹಳ ನುರಿತವರು. ನಾಳೆ ವೇಷಾಂತರದಿಂದ ಅವರು ನಮ್ಮ ಪಾಳೆಯದಿಂದ ರಾಮಪುರಕ್ಕೆ ತೆರಳುವರು." ಎಂದನು.

ಭೈರವಿಯು ತಲೆಯನ್ನಲ್ಲಾಡಿಸಿ ಸಣ್ಣ ನಗುವನ್ನು ನಕ್ಕಳು. "ನವಾಬರೇ, ಮಾಫ್ ಮಾಡಬೇಕು. ನಿಮ್ಮ ಶಾಯಿಸ್ತಾಖಾನರು ಪೇಷ್ವೆಗಳ ದರಬಾರಿನಲ್ಲಾದರೂ ಗೆದ್ದು ಬರಬಹುದು. ಗೋಪಾಲ ನಾಯುಕರಲ್ಲಿ ಅವರ ಆಟವು ಸಾಗುವುದಿಲ್ಲ. ಯವನರೊಂದಿಗೆ ಗೋಪಾಲನಾಯುಕರು ಯಾವ ಸಂಧಾನಕ್ಕೂ ಒಪ್ಪುವುದಿಲ್ಲ."

"ಹಾಗಾದರೆ ಬೇರೇ ಏನು ಮಾಡಬೇಕು ?"

"ನವಾಬರವರೇ! ನನ್ನ ತಪ್ಪನ್ನು ಕ್ಷಮಿಸಬೇಕು. ಈ ಸಂಧಾ ನಕ್ಕೆ ಗುಂಡೋಪಂತರವರೂ, ರಾಮಣ್ಣನವರೂ ಹೋಗಬೇಕು. ಬ್ರಾಹ್ಮಣರೇ ಈ ಸಂಧಾನಕ್ಕೆ ಲಾಯಕ್ಕಾದವರು. ಅಷ್ಟೇ ಅಲ್ಲ. ತಾವು ನಗರದ ರಾಜ್ಯಕ್ಕೆ ಅವರನ್ನು ರಾಜರನ್ನಾಗಿಮಾಡುವುದಾಗಿ ಸಂಧಿಪತ್ರ ವನ್ನು ಕಳುಹಿಸಿಕೊಡಬೇಕು."

ಹೈದರನು ಅವಾಕ್ಕಾಗಿ ಸ್ವಲ್ಪಹೊತ್ತು ಚಿಂತಿಸತೊಡಗಿದನು. ಕ್ಷಣಹೊತ್ತು ಇಬ್ಬರೂ ಮೌನವಾಗಿದ್ದರು. ಹೈದರನು ನಿಟ್ಟುಸಿರು ಬಿಟ್ಟು "ರಾಣಿಯವರೇ! ರಾಯಸವನ್ನು ಕಳುಹಿಸುವುದೆಂತು ? ಒಂದು ಪಕ್ಷ ಗೋಪಾಲನಾಯುಕರು ಇದಕ್ಕೆ ಸಮ್ಮತಿಸದಿದ್ದರೆ ಪರಿಣಾಮ ವೇನು ?" ಎಂದನು.

"ಪರಿಣಾಮವೇನು? ರಾಯಸವು ಹಿಂತಿರುಗಿ ಬರುತ್ತದೆ. ಅದು ಸಂಧಿಕಾರ್ಯಕ್ಕೆ ಹೋಗುವವರ ಪ್ರತಿಭೆಯ ಮೇಲೆ ಅವಲಂಬಿಸಿದೆ. ಗೋಪಾಲನಾಯಕರು ಸಂಧಿಗೆ ಸಂಪೂರ್ಣ ಒಪ್ಪಿಕೊಂಡರೆ, ಅವರು ಆ ಮಾತಿಗೆ ಪ್ರಮಾಣಬೇಕೆಂದು ಬೇಡಿದರೆ ಈ ಪತ್ರವನ್ನು ಅವರ ಕೈಗೆ ಕೊಡಬೇಕು. ಅದು ಕಟ್ಟಕಡೆಯ ಅಸ್ತ್ರವಾಗಿ ಉಪಯೋಗಿಸಲ್ಪಡಬೇಕು. ತಾವು ನನ್ನ ಸಲಹೆಯನ್ನು ಒಮ್ಮೆ ಪರೀಕ್ಷೆಮಾಡಿರಿ. ಆಮೇಲೆ ನೀವೇ ಅರಿತುಕೊಳ್ಳುವಿರಿ."

"ಭೈರವಿರಾಣಿ, ನಿಮ್ಮನ್ನು ನಾನು ಮೆಚ್ಚಿದ್ದೇನೆ. ಈ ಸಂಧಾನವನ್ನು ನಿಮ್ಮ ಇಷ್ಟದಂತೆ ನಡೆಸುತ್ತೇನೆ"

"ಮತ್ತೊಂದು ಮಾತು. ನನಗೆ ತಮ್ಮ ಪಾಳೆಯವನ್ನು ಬಿಟ್ಟು ನಗರದ ರಾಜ್ಯದೊಳಗೆ ಹೋಗಲು ಅಪ್ಪಣೆಕೊಡಿರಿ. ನಾನು ಹೋಗಿ ಈ ಸಂಧಾನವನ್ನು ಗೆಲಿಸುತ್ತೇನೆ. ಆ ಚೆಲುವಮ್ಮಣ್ಣಿಗೆ ಸರಿಯಾದ ಪ್ರತಿದ್ವಂದ್ವಿ ನಾನು. ಅವಳಿಗೆ ನನ್ನನ್ನು ನೋಡಿದರೆ ಹಾವಿಗೆ ಗರುಡ ಮಚ್ಚೆಯನ್ನು ತೋರಿಸಿದಂತೆ."

"ಒಂದುಪಕ್ಷ ನೀವು ಅಲ್ಲಿ ಎಲ್ಲಿಯಾದರೂ ಸಿಕ್ಕಿಕೊಂಡರೆ ನಿಮ್ಮ ಪ್ರಾಣ ಉಳಿದೀತೇ? ರಾಜದ್ರೋಹಿಯೆಂದು ನಿಮ್ಮನ್ನು ಚಿತ್ರವಧೆ ಮಾಡಿಸದೇ ಆ ರಾಣಿಯವರು ಬಿಟ್ಟಾರೇ?"

ಭೈರವಿಯು ವಿಕಟವಾದ ನಗುವನ್ನು ನಕ್ಕು, "ನವಾಬರೇ, ಅದೇ ಗುಟ್ಟು. ರಾಣಿಯವರು ನನ್ನನ್ನು ಎಂದೋ ಕೊಲ್ಲಿಸುತ್ತಿದ್ದರು ಮಹಾರಾಜರ ಘೋರ ಮರಣಕ್ಕೆ ಸಾಕ್ಷಿಯು ನಾನು. ವಿರೂಪಾಕ್ಷನ ಪ್ರಣಯ ಪ್ರಸಾದಕ್ಕೆ ಪ್ರತ್ಯಕ್ಷ ಸಾಕ್ಷಿಯು ನಾನು. ಅವನ ಮರಣಕ್ಕೆ ಯಮದೂತಿಯಂತೆ ಹೋಗಿ ನಿಂತವಳು ನಾನು. ಇಂದು ರಾಣಿಯ ಪ್ರಣಯಪಾಶಬದ್ಧರೆಲ್ಲರಿಗೂ ಕಾರ್ಕೋಟಕ ವಿಷದಂತೆ ವಿರೋಧಿಯಾದವಳು ನಾನು. ರಾಣಿಯ ವಿರೋಧಿಗಳೆಲ್ಲರಿಗೂ ಪ್ರಿಯಳಾದವಳು ನಾನು. ಭವಾನೀರಾಣಿಯವರ ಪ್ರಿಯ ಪುತ್ರಿಯಂತೆ ಆ ಮಹಾದೇವಿಯ ಅನುಗ್ರಹಕ್ಕೆ ಪಾತ್ರಳಾದವಳು ನಾನು. ನನ್ನನ್ನು ಕೊಲ್ಲಿಸಬೇಕಾಗಿದ್ದರೆ

ರಾಣಿಯು ಎಂದೋ ಕೊಲ್ಲಿಸುತ್ತಿದ್ದಳು. ನಾನು ಇಂದು ಉಳಿದಿರುವುದೇ ಈ ನಗರದ ರಾಜ್ಯದ ಪುಣ್ಯಪ್ರಭಾವ. ನೋಡಿರಿ! ನನ್ನನ್ನು ಈ ಸಂಧಿ ರಾಯಭಾರಿಗಳ ಜೊತೆಯಲ್ಲಿ ಕಳುಹಿಸಿಕೊಟ್ಟರೆ ಆ ಕಾರ್ಯವು ಜಯವಾಗುವುದು." ಎಂದಳು.

ಹೈದರನು ಸ್ವಲ್ಪಹೊತ್ತು ಯೋಚಿಸಿ, "ಒಳ್ಳೆಯದು ರಾಣಿಯವರೇ, ನೀವು ಹೋಗಬಹುದು. ಯುವರಾಜರನ್ನು ಒಬ್ಬಂಟಿಗರಾಗಿ ಬಿಟ್ಟು ಹೋಗುವಿರಾ ?" ಎಂದನು.

"ಹೌದು ನವಾಬರೇ! ನಾನಾಗಿ ಬಿಟ್ಟು ಹೋಗಬೇಕಾಗಿದ್ದರೆ ಎಂದೋ ಹೊರಟು ಹೋಗುತ್ತಿದ್ದೆ. ಯುವರಾಜರನ್ನು ಸಂರಕ್ಷಿಸುವುದ ಕ್ಕಾಗಿಯೇ ನಾನು ತಮ್ಮ ಶಿಬಿರದಲ್ಲಿದ್ದೆ. ಈಗ ಯುವರಾಜರನ್ನು ತಾವು ರಕ್ಷಿಸಬೇಕು. ಈ ನಗರದ ರಾಜ್ಯದಲ್ಲಿ, ಅಡಿಗಡಿಗೂ ಅವರಿಗೆ ಅಪಾಯವುಂಟು. ಆದರಿಂದಲೇ ತಮ್ಮ ರಕ್ಷಣೆಯನ್ನು ಬೇಡುತ್ತೇನೆ."

"ಹೌದು ರಾಣಿಯವರೇ! ನೀವು ಹೇಳುವುದು ಸರಿಯಾಗಿದೆ. ಯುವರಾಜರನ್ನು ನಾನು ಗುಪ್ತವಾಗಿ ರಕ್ಷಿಸುತ್ತೇನೆ." ಎಂದು ಹೈದರನು ಭರವಸೆಯಿತ್ತನು. ದ್ವಾರಪಾಲಕರನ್ನು ಕರೆದು ಗುಂಡೋಪಂತರನ್ನೂ, ರಾಮಣ್ಣನವರನ್ನೂ, ರಾಯಸದ ನಾರಾಯಣಪ್ಪನನ್ನೂ, ಕರೆತರುವಂತೆ ಅಪ್ಪಣೆಮಾಡಿದನು. ಭೈರವಿಯು ಕುಳಿತಿದ್ದ ಹಾಗೆಯೇ ಅವರು ಮೂವರೂ ಸನ್ನಿಧಾನಕ್ಕೆ ಬಂದುಸೇರಿದರು. ಹೈದರನು ಗುಂಡೋಪಂತ ರಿಗೂ, ರಾಮಣ್ಣನವರಿಗೂ ಹೇಳುವ ಮಾತುಗಳನ್ನೆಲಾ ಹೇಳಿ ನಾರಾಯಣಪ್ಪನ ಹಸ್ತ ರಾಯಸವನ್ನು ಬರೆಸಿ ತನ್ನ ರುಜು ಮಾಡಿ ರಾಮಣ್ಣನವರ ಕೈಗೆ ಕೊಟ್ಟು ಖಾಸಾ ಖಜಾನೆಯಲ್ಲಿ ಖರ್ಚಿಗೆ ಬೇಕಾ ದಷ್ಟು ಹಣವನ್ನು ತೆಗೆದುಕೊಂಡುಹೋಗುವಂತೆ ಅಪ್ಪಣೆಯಿತ್ತು ಕಳುಹಿಸಿದನು. ಅವರು ಹೊರಟು ಹೋದನಂತರ ಶಾಯಿಸ್ತಾಖಾನ ರನ್ನು ಪುನಃ ಸನ್ನಿಧಾನಕ್ಕೆ ಕರೆಸಲಾಯಿತು. ನವಾಬರು ನಡೆದ ವಿದ್ಯ ಮಾನವನ್ನೆಲ್ಲಾ ಯಥೋಚಿತವಾಗಿ ಅವರಿಗೆ ತಿಳಿಸಿದರು. ಶಾಯಿಸ್ತಾಖಾನರು, "ಖಾವಂದರವರು ಸರಿಯಾಗಿ ಯೋಚನೆ

ಮಾಡೋಣವಾಗಿದೆ. ಈ ಸಣ್ಣ ಪಾಳೇಗಾರರಲ್ಲಿ ನಾನು ಸಂಧಾನಕ್ಕೆ
ಹೋಗುವುದೇ ಎಂದು ಮನಸ್ಸು ಹಿಂತೆಗೆಯುತ್ತಿತ್ತು. ಆದರೂ
ಹುಜೂರಿನ ಅಪ್ಪಣೆಯನ್ನು ಮೀರಲಾರದೆ ಒಪ್ಪಿಕೊಂಡೆ. ಈ ರಾಣಿ
ಯವರ ಸಲಹೆಯು ಯುಕ್ತವಾಗಿದೆ.” ಎಂದು ಸಂತೋಷದಿಂದ
ನುಡಿದರು. ಭೈರವಿಯು ತಾನು ಬಂದ ಕಾರ್ಯವು ಸಫಲವಾಯಿತೆಂದು
ಮನದೊಳಗೇ ಸಂತೋಷಪಟ್ಟುಕೊಂಡಳು. ಶಾಯಿಸ್ತಾಖಾನನು
ಹುಜೂರಿನ ಅಪ್ಪಣೆಯನ್ನು ಪಡೆದು ತನ್ನ ಡೇರೆಗೆ ಹೊರಟು
ಹೋದನು.

ಭೈರವಿಯು ಎದ್ದು ನವಾಬರ ಅಪ್ಪಣೆಯನ್ನು ಬೇಡಿದಳು.
ಹೈದರನು ಆಸನದಿಂದೆದ್ದು ಭೈರವಿಯ ತಲೆಯನ್ನು ತಡವುತ್ತಾ ಬೆನ್ನು
ತಟ್ಟಿ “ರಾಣಿಯವರೇ, ನೀವು ಬಹಳ ಚಾಲಕ್ಕಿನ ಹೆಣ್ಣು! ಬಾದಶಹನ
ರಾಣಿಯಾಗುವುದಕ್ಕೆ ಲಾಯಕ್ಕಾದ ತರುಣಿ” ಎಂದು ಹೇಳಿದನು.

ಭೈರವಿಯು ನಗುತ್ತಾ ತನ್ನ ಸರಳ ನಯನಗಳನ್ನು ಒಂದು
ಮಾಟದಲ್ಲಿ ತಿರುಗಿಸಿ, “ನವಾಬರವರೇ, ನಾನು ಬಾದಷಹನ ರಾಣಿಯಲ್ಲ
ದಿದ್ದರೂ ಬಾದಷಹನ ಪುತ್ರಿಯ ಅಂತಸ್ತಿಗೆ ಏರಿದ್ದೇನೆ. ಅದು ತಮ್ಮ
ಪರಮಾನುಗ್ರಹ” ಎಂದು ಹೇಳಿ ನವಾಬರಿಂದ ಬೀಳ್ಕೊಂಡು ಆ ವಾಸ
ಭವನದಿಂದ ಹೊರಟು ಹೋದಳು.

ಹೈದರನು ಅತ್ಯಂತ ದಣಿದವನಂತೆ ತನ್ನ ಪರ್ಯಂಕದ ಮೇಲೆ
ಬಿದ್ದನು. ಮನಸ್ಸಿನಲ್ಲಿ ಯೋಚನೆಗಳ ಕಲ್ಲೋಲವು ಹೊಡೆಯಲಾರಂಭ
ವಾಯಿತು. “ಈ ಭೈರವಿಯು ಎಂತಹ ರಮಣಿ! ಅವಳ ಕಣ್ಣುಗಳಲ್ಲಿ
ಎಂತಹ ಕಾಂತಿ! ಅವಳ ಮುಖದಲ್ಲಿ ಎಷ್ಟು ಮನೋಹರವಾದ ಮಂದ
ಹಾಸ! ಆ ಕಪೋಲಗಳು ಎಷ್ಟು ಸುಂದರವಾಗಿದೆ! ಆ ಮುಖದಲ್ಲಿ
ಎಂತಹ ತೇಜಸ್ಸು! ಆ ಶರೀರದಲ್ಲಿ ಎಂತಹ ಸ್ನಿಗ್ಧತೆ! ಎಷ್ಟೊಂದು
ಮನೋಹಾರಿತೆ! ನಿಜವಾಗಿಯೂ ಎಂತಹ ಚಮತ್ಕಾರ! ಎಷ್ಟು ಬುದ್ಧಿ!
ಎಂತಹ ರಾಜನೀತಿ ನೈಪುಣ್ಯ! ನಾನು ತರುಣನಲ್ಲ. ಹರೆಯ ವಯಸ್ಸಿ
ನಲ್ಲಿ ಕಾಲಿಡುತ್ತಿದ್ದೇನೆ. ಆದರೂ ಮನವು ತುಡಿಯುತ್ತದೆ. ಈ ರಾಣಿಯು

ತಾನಾಗಿ ಒಪ್ಪಿಬಂದರೆ ನಮ್ಮ ಜನಾನಾದಲ್ಲಿಯೇ ಇರಬಾರದೇಕೆ? ಎನ್ನಿಸುತ್ತಿದೆ. ಈ ರಮಣಿಯಿರುವ ಅಂತಃಪುರವು ಪೂರ್ಣಚಂದ್ರನಿಂದ ವಿರಾಜಿಸುವ ಆಕಾಶದಂತೆ ಬೆಳಗುತ್ತದೆ. ಈ ಹಾಳು ಕಾಷಾಯ, ರುದ್ರಾಕ್ಷಗಳಿಂದ ಮುಚ್ಚಲ್ಪಟ್ಟ ಈ ಶರೀರದಲ್ಲಿಯೇ ಇಂತಹ ಉಜ್ವಲ ಕಾಂತಿಯು ಹೊರಹೊಮ್ಮುತ್ತಿರುವಾಗ ಇನ್ನು ದುಕೂಲಾಭರಣಗಳಿಂದ ಅಲಂಕೃತಳಾದರೆ ಇವಳೊಬ್ಬ ಮೋಹಿನೀಮೂರ್ತಿಯೇ ಆಗುತ್ತಾಳೆ." ಹೀಗೆ ಭೈರವಿಯನ್ನು ನಾನಾವಿಧವಾಗಿ ಚಿತ್ರಿಸುತ್ತಾ, ಮನಸ್ಸಿನಲ್ಲಿ ಮಾಧುರ್ಯದ ಪ್ರಭಾವವು ಹರಿಯುತ್ತಿರಲಾಗಿ ಹೈದರನು ಜಾಗ್ರದವಸ್ಥೆಯಲ್ಲಿ ನಿದ್ರಿತನಂತೆ, ಆ ನಿದ್ರೆಯಲ್ಲಿ ಕಂಡ ಸ್ವಪ್ನಸಾಮ್ರಾಜ್ಯದಂತೆ, ಆ ಸ್ವಪ್ನಾಕಾಶದಲ್ಲಿ ಪ್ರತಿಷ್ಠಿತಳಾದ ಮೋಹಿನೀಮೂರ್ತಿಯ ಮಾಯಾಜಾಲದಲ್ಲಿ ಮುಳುಗಿದವನಂತೆ ಭಾವನಾಮಗ್ನನಾಗಿ ಪರ್ಯಂಕದಲ್ಲಿ ಹೊರಳುತ್ತಿದ್ದನು.

---

## ೨೭

## ಭೈರವಿಯ ದೃಢಸಂಕಲ್ಪ

ಭೈರವಿಯು ಹೈದರಲ್ಲೀಖಾನನ ವಾಸಭವನದಿಂದ ಯುವರಾಜನ ಡೇರೆಯೊಳಕ್ಕೆ ಪ್ರವೇಶಮಾಡಿದಳು. ಯುವರಾಜನು ಆತ್ಯಾತುರದಿಂದ ಭೈರವಿಯ ನಿರೀಕ್ಷಣೆಯಲ್ಲಿಯೇ ಇದ್ದನು. ಯುವರಾಜನ ಡೇರೆಯು ಪ್ರಶಸ್ತವಾದ ಪಟಮಂಟಪ. ರೇಶಿಮೆಯ ವಿತಾನವು ಕಟ್ಟಲ್ಪಟ್ಟು ಸುತ್ತಲೂ ಝಾಲರಿಗಳು ಬಿಡಲ್ಪಟ್ಟಿದ್ದವು. ನಾಲ್ಕು ದಿಕ್ಕಿನಲ್ಲಿಯೂ ಡೇರೆಗೆ ಬಿಳಿಯ ಫರದೆಗಳು ಬಿಡಲ್ಪಟ್ಟಿದ್ದವು. ನೆಲಕ್ಕೆ ಪ್ರಶಸ್ತವಾದ ರತ್ನಗಂಬಳಿಯು ಹಾಸಲ್ಪಟ್ಟಿತ್ತು. ಮಧ್ಯದಲ್ಲಿ ರಾಜಯೋಗ್ಯವಾದ ಪರ್ಯಂಕವು ಅಣಿಮಾಡಲ್ಪಟ್ಟಿದ್ದಿತು. ಆ ಪರ್ಯಂಕದ ಮೇಲೆ ಹಂಸತೂಲಿ ಕಾತ್ಪಲ. ಆ ತಲ್ಪದಮೇಲೆ ಮೆತ್ತನೆಯ ಬನಾತಿನ ದಿಂಬುಗಳು.

ಎದುರಿನಲ್ಲಿ ಒರಗುಮಣೆಯಿಂದ ಕೂಡಿದ ಸುಖಾಸನಗಳು. ಆ ಸುಖಾಸನಗಳ ಮೇಲೆ ಲೋಡುದಿಂಬುಗಳು ಅಲಂಕರಿಸಲ್ಪಟ್ಟಿದ್ದವು. ಯುವರಾಜನು ಪರ್ಯಂಕದಮೇಲೆ ಕಾಲುಚಾಚಿಕೊಂಡು ದಿಂಬನ್ನೊರಗಿಕೊಂಡು ನೀಳವಾಗಿ ಕುಳಿತಿದ್ದನು. ಕಾಲುಮಣೆಯ ಮೇಲೆ ಪ್ರಕಾಶಮಾನವಾದ ತೈಲದೀಪವು ಉರಿಯುತ್ತಿತ್ತು. ಆ ದೀಪದ ಬೆಳಕಿನಲ್ಲಿ ಭೈರವಿಯ ಸುಮಂದಹಾಸ ಮುಖವನ್ನು ನೋಡುತ್ತಾ,

"ರಾಣಿಯವರೇ! ಇದೇನು ಆಶ್ಚರ್ಯ? ಎರಡು ದಿವಸಗಳಿಂದ ನಿಮ್ಮ ಮುಖಚಂದ್ರನ ದರ್ಶನವೇ ಇಲ್ಲ?" ಎಂದು ನಗುತ್ತಾ ಎದ್ದು ಭೈರವಿಯ ಕೈಹಿಡಿದು ಪಕ್ಕದಲ್ಲಿ ಪರ್ಯಂಕದ ಮೇಲೆ ಕುಳ್ಳಿರಿಸಿಕೊಂಡನು. ಭೈರವಿಯು ಮಂದಹಾಸವದನೆಯಾಗಿ "ನೋಡು ಯುವರಾಜ! ಯುದ್ಧದ ಘಟನೆಗಳು ಬಹುಬೇಗ ಬದಲಾವಣೆಯಾಗುತ್ತಿವೆ. ಪಾಳೆಯಗಾರರೆಲ್ಲಾ ಒಂದಾಗಿ ನಿಂತಿದ್ದಾರೆ. ಹೈದರನ ಮೇಲೆ ಗೋಪಾಲನಾಯಕರು ಯುದ್ಧದ ಡಂಗೂರವನ್ನು ಹೊಡೆಸಿದ್ದಾರೆ. ನಗರವೆಲ್ಲವೂ ಎದ್ದು ಸಮುದ್ರದೋಪಾದಿಯಲ್ಲಿ ಮೈಸೂರು ಸೈನ್ಯದ ಮೇಲೆ ಕಳಚಿಕೊಳ್ಳುತ್ತಿದೆ. ನಾನು ಎರಡು ದಿವಸಗಳಿಂದ ಆ ಸಡಗರದಲ್ಲಿದ್ದೇನೆ" ಎಂದಳು.

"ಭೈರವಿ! ನಿನ್ನ ಮಾತುಗಳು ಆಶ್ಚರ್ಯವನ್ನುಂಟುಮಾಡುತ್ತಿವೆ. ಮತ್ತಾರಾದರೂ ಈ ಮಾತನ್ನು ಹೇಳಿದ್ದರೆ ನಾನು ನಂಬುತ್ತಲೇ ಇರಲಿಲ್ಲ. ನಿನ್ನ ಉಪಾಯವೆಲ್ಲವೂ ವ್ಯರ್ಥವಾದಂತಾಯಿತು. ನನಗೇಕೊ ಗಾಬರಿಯಾಗುತ್ತದೆ."

"ಭೈರವಿಯು ನಗುತ್ತಾ, ಹಲ್ಲುಗಿಂಜಿ, ಅಣಕಿಸಿ, "ಯುವರಾಜನೇ ನಗರದ ರಾಜ್ಯವು ಸುಮ್ಮನೇ ಕೈಗೆ ಸಿಕ್ಕುವುದೆಂದು ಬಗೆದಿರುವೆಯೇನು? ರಣರಂಗದಲ್ಲಿ ಮಹಾಯುದ್ಧವು ಬಂದರೆ ಹೇಡಿಯಂತೆ ಓಡಿಹೋಗುವಿಯೇನು?" ಎಂದಳು.

"ಯುವರಾಜನು ಭೈರವಿಯನ್ನು ಬಿಗಿಯಾಗಿ ಅಪ್ಪಿಕೊಂಡು ಮುತ್ತಿಟ್ಟು, ಏಕ ಭೈರವಿ? ನೀನೇಕೆ ನನ್ನ ಪರಾಕ್ರಮವನ್ನು

ಅಲ್ಲಗೆಳೆಯುವೆ? ನೀನು ಸಮೀಪದಲ್ಲಿದ್ದರೆ ರಣಭೈರವನಂತೆ ನಾನು ಯುದ್ಧಮಾಡುವೆನು. ಈ ರಣಕ್ಷೇತ್ರದಲ್ಲಿ ನನ್ನಲ್ಲಿ ಎಂತಹ ಕ್ಷಾತ್ರತೇಜಸ್ಸಿದೆ ಯೆಂಬುದನ್ನು ನಗರದ ಪಾಳೇಗಾರರಿಗೆ ತೋರಿಸುವೆನು. ಹೈದಲ್ಲೀಖಾನನು ಮೂಗಿನಮೇಲೆ ಬೆರಳಿಟ್ಟುಕೊಂಡು ಆಶ್ಚರ್ಯಪಡುವಂತೆ ಮಾಡುತ್ತೇನೆ” ಎಂದನು.

ಭೈರವಿಯು ನಗುತ್ತಾ ಬೆನ್ನುತಟ್ಟಿ, “ಭೇಷ್! ಹಾಗೆ ಮಾಡುವಿಯೆಂದೇ ನಾನು ನಿನ್ನನ್ನು ಒಲಿದಿರುವುದು. ಮಹಾಪರಾಕ್ರಮಿಯಾದ ಹೈದರನ ಬೆಂಬಲವನ್ನು ಕಟ್ಟಿಕೊಟ್ಟಿರುವೆನು. ನೋಡು ಯುವರಾಜ! ನನ್ನ ಸಂಧಾನವು ವ್ಯರ್ಥವಾಯಿತೆಂಬ ಸಂದೇಹವು ನನಗಿಲ್ಲ. ಆ ಭವಾನೀರಾಣಿಯು ನನಗೆ ಮಾತೃದೇವತೆ. ಅವಳಿಗೆ ಈ ನಗರದ ಸಿಂಹಾಸನದ ಹುಚ್ಚು ಹಿಡಿದಿದೆ. ಅವಳು ಈ ಪಾಳೇಗಾರರನ್ನು ಒಟ್ಟುಗೂಡಿಸಿ ಯುದ್ಧಕ್ಕೆ ಎತ್ತಿಕಟ್ಟಿದ್ದಾಳೆ. ನಾನು ಹೋಗಿ ಭೇದೋಪಾಯವನ್ನು ಕಲ್ಪಿಸಿ ನಗರದ ಸೈನ್ಯವೆಲ್ಲಾ ಒಡೆದು ಹೋಗಿ ದಿಕ್ಕಾಪಾಲು ಚದುರಿ ಹೋಗುವಂತೆ ಮಾಡುವೆನು. ನಾನು ಈದಿನ ರಾತ್ರಿ ಕಳೆದು ಉದಯವಾಗುವಹೊತ್ತಿಗೆ ಈ ಶಿಬಿರದಿಂದ ಪ್ರಯಾಣ ಮಾಡುವೆನು. ಅದಕ್ಕೆ ನಿನ್ನ ಅಪ್ಪಣೆಯನ್ನು ಬೇಡಲು ಬಂದಿರುವೆನು” ಎಂದಳು.

ಯುವರಾಜ ಗಾಬರಿಯಿಂದ, “ಏನು ಭೈರವಿ ನೀನು ಹೊರಟು ಹೋಗುವೆಯಾ? ನನ್ನೊಬ್ಬನನ್ನೇ ಬಿಟ್ಟು ಹೋಗುವೆಯಾ? ಹೈದರಲ್ಲೀಖಾನನು ನಿನ್ನ ಪ್ರಯಾಣಕ್ಕೆ ಅನುಮತಿಯಿತ್ತಿರುವನೇ?” ಎಂದನು.

“ಹೌದು ಯುವರಾಜ! ನಾನು ಹೈದರಲ್ಲೀಖಾನರ ರಾಯಭಾರಿಗಳೊಡನೆ ಗೋಪಾಲನಾಯಕರಲ್ಲಿಗೆ ಹೊರಟ್ಟಿದ್ದೇನೆ. ನವಾಬರ ಅಪ್ಪಣೆಯಂತೆಯೇ ಹೊರಟಿದ್ದೇನೆ. ನೀನೊಬ್ಬನೇ ಇಲ್ಲಿರಲು ಹೆದರುವೆಯಾ?”

“ಭಯವಿಲ್ಲ. ಆದರೆ ನಿನ್ನನ್ನು ಬಿಟ್ಟಿರಲು ಮನಸ್ಸು ಬಾರದು.”

“ನಾನು ನಿನ್ನ ಕಾರ್ಯಾರ್ಥವಾಗಿಯೇ ಹೊರಡುತ್ತಿದ್ದೇನೆ. ಗೋಪಾಲನಾಯಕರಿಗೂ, ಹೈದರಲ್ಲೀಖಾನರಿಗೂ ಭೇಟಿಯಾಗದಂತೆ ಮಾಡುತ್ತೇನೆ. ಭೇಟಿಯಾದರೆ ನಿನ್ನ ಗುಟ್ಟು ಬಯಲಾಗಿ ಹೋಗುತ್ತದೆ.

ರಾಣಿ ಚೆಲುವಮ್ಮಣ್ಣಿಯ ಕಡೆಯ ಸರದಾರರೂ ಹೈದರಲ್ಲೀಖಾನರನ್ನು
ನೋಡದಂತೆ ತಂತ್ರಮಾಡಿಡುತ್ತೇನೆ. ಮಹಾಮಂತ್ರಿ ರಾಮಕೃಷ್ಣ
ನನ್ನು ಕಡೆಯವರೆಗೂ ಅಂಧಕಾರದಲ್ಲಿರುವಂತೆ ಮಾಡುತ್ತೇನೆ. ಈ
ಯುದ್ಧಾನಂತರ ಭವಾನೀರಾಣಿಯ ಸನ್ನಿಧಾನಕ್ಕೆ ನಿನ್ನನ್ನು ಕರೆದು
ಕೊಂಡುಹೋಗಿ ಆ ಭವಾನೀರಾಣಿಯ ಆಶೀರ್ವಾದವನ್ನು ಪಡೆದು
ನಿನಗೆ ಈ ನಗರದ ರಾಜ್ಯಾಭಿಷೇಕವನ್ನು ಮಾಡಿಸುತ್ತೇನೆ. ಧೈರ್ಯ
ದಿಂದಿರು."

ಭೈರವಿಯೂ ಯುವರಾಜನೂ ರಾತ್ರಿ ಬಹಳಹೊತ್ತಿನವರೆಗೆ
ಮಾತುಕಥೆಗಳನ್ನಾಡುತ್ತಿದ್ದರು. ಕ್ಷಿಪ್ರದಲ್ಲಿಯೇ ಸಂಭವಿಸುವ ಯುದ್ಧದ
ವಿಚಾರವಾಗಿ ಭೈರವಿಯು ನಾನಾ ಕಲ್ಪನೆಗಳನ್ನೂ ಸಂಭವಗಳನ್ನೂ
ಹೇಳಿದಳು. ನಗರದ ಸೈನ್ಯಕ್ಕೂ ಪಾಳೆಯಗಾರರ ಸೈನ್ಯಕ್ಕೂ ಭೇದ
ಕಲ್ಪನೆಮಾಡುವುದಾಗಿಯೂ ಅದು ಸಾಧ್ಯವಾಗದೆ ಹೋದರೂ ಹೈದರನ
ಸೈನ್ಯಕ್ಕೇ ಖಂಡಿತವಾಗಿಯೂ ಜಯವಾಗುವುದೆಂದೂ ಹೇಳಿದಳು.
ಮುಂದಿನ ನಗರದ ರಾಜ್ಯವು ಈ ಯುವರಾಜನಿಗೇ ಸಿಕ್ಕುವುದೆಂಬ
ಅನೇಕ ಆಶಾಕಲ್ಪನೆಗಳನ್ನೂ ಪ್ರಚೋದಕವಾಗಿ ಹೇಳಿದಳು. ಹೇಗೆ
ಹೇಗೆಯೋ ಯುವರಾಜನನ್ನು ಒಪ್ಪಿಸಿ ಅವನ ಡೇರೆಯಿಂದ ಹೊರಗೆ
ಹೋದಳು. ಆ ಯುವರಾಜನನ್ನು ಹಾಗೆ ಏಕಾಂಗಿಯಾಗಿ ಬಿಟ್ಟು
ಹೋಗುವೆನೆಂಬ ಭಾವನೆಯು ಭೈರವಿಯ ಮನಸ್ಸಿನಲ್ಲಿ ಹೊಳೆದಾಗ
ಅವಳ ಕಣ್ಣಿನಿಂದ ಎರಡು ಕಂಬನಿಗಳು ಉದುರಿದವು. ಎಂತಹ
ಪಾಷಾಣ ಹೃದಯವಾದರೂ ಒಂದೊಂದುಬಾರಿ ಕರಗಿ ನೀರಾಗಿ
ಹೋಗುತ್ತದೆ. ಭೈರವಿಯ ಹೃದಯವು ಕರಗದಿರುವುದೆಂತು? ಈ
ಭೈರವಿಯು ರಾಣಿ ಚೆಲುವಮ್ಮಣ್ಣಿಗೆ ಸರಿಯಾದ ಜೋಡಿ. ಇವರಿಬ್ಬ
ರಲ್ಲಿ ಯಾರು ಕಠಿಣಾತ್ಮರೋ ಅದನ್ನು ನಿರ್ಣಯಿಸುವ ಕೆಲಸವನ್ನು
ವಾಚಕರಿಗೇ ಬಿಟ್ಟಿದ್ದೇವೆ. ನಾವು ಇಷ್ಟು ಮಾತ್ರ ಇಲ್ಲಿ ಉಲ್ಲೇಖಿಸು
ತ್ತೇವೆ. ಹೆಣ್ಣಿನ ಮನಸ್ಸು ಕಾಠಿಣ್ಯವನ್ನು ಹೊಂದಿದಾಗ ಕಲ್ಲುಬಂಡೆ
ಗಿಂತಲೂ ಕರ್ಕಶವಾಗುತ್ತದೆ. ಮೃದುವಾದಾಗ ಶಿರೀಷ ಪುಷ್ಪಕ್ಕಿಂತಲೂ

ಕೋಮಲವಾಗುತ್ತದೆ ಇವೆರಡು ಗುಣಗಳನ್ನೂ ಏಕತ್ರ ಸಮಾವೇಶ ಮಾಡುವುದಕ್ಕಾಗಿಯೇ ಭಗವಂತನು ಸ್ತ್ರೀ ಜನ್ಮವನ್ನು ಸೃಷ್ಟಿಸಿದ್ದಾನೆ. ಅದಕ್ಕೆ ಹೆಣ್ಣು ಹೆಣ್ಣಾಗಿ ಹುಟ್ಟಿದೆ.

---

## ೨೮

## ಮಾಟಗಾತಿ ಭೈರವಿ !

ಮರುದಿನ ಸೂರ್ಯೋದಯವಾಗುವ ಮುಂಚೆಯೇ ಮೈಸೂರಿನ ಶಿಬಿರದಿಂದ ಗುಂಡೋಪಂತನೂ ರಾಮಣ್ಣನೂ ವೇಷಾಂತರದಿಂದ ಶಿಬಿರವನ್ನು ಬಿಟ್ಟುಹೊರಟರು. ಭೈರವಿಯು ಭೈರವಿಯ ವೇಷ ದಿಂದಲೇ ಶಿಬಿರವನ್ನು ಬಿಟ್ಟುಹೊರಟಳು. ಈ ಮೂವರು ಯಾತ್ರಿಕರೂ ಬಲುಜಾಗ್ರತೆಯಿಂದ ನಗರದ ರಾಜ್ಯದಕಡೆಗೆ ಪಯಣಮಾಡಿದರು. ದಾರಿಯುದ್ದಕ್ಕೂ ನಗರದ ರಾಜ್ಯದ ಠಾಣೆಗಳಿದ್ದವು. ಅಲ್ಲೆಲ್ಲಾ ಸಿಪಾಯಿ ಗಳು ಕಾವಲಿದ್ದರು. ಪ್ರತಿಯೊಂದು ಠಾಣ್ಯದಲ್ಲಿಯೂ ಝಡತಿಯನ್ನು ಕೊಟ್ಟುಹೋಗಬೇಕಾಗಿದ್ದಿತು. ಈ ಇಬ್ಬರು ರಾಜಕಾರಣಿಗಳು ಸಾಮಾನ್ಯರಲ್ಲ. ಹಿಂದಿನ ರಾಜಕೀಯ ಪ್ರಕರಣಗಳಲ್ಲಿ ಗುಂಡೋ ಪಂತರು ಮತ್ತು ರಾಮಣ್ಣ ಇವರುಗಳ ಬುದ್ಧಿಚಾತುರ್ಯಕ್ಕೆ ಜಯ ವಾಗಿದ್ದಿತು. ಎಷ್ಟೋ ಸಮಯಗಳಲ್ಲಿ ಇವರುಗಳು ಫರಂಗಿಯವರ ಕೈಗೆ ಸಿಕ್ಕಿ ಪಾರಾಗಿದ್ದರು.

ನಗರದ ಸೀಮೆಯಲ್ಲಿ ಯುದ್ಧದಕಾಲವಾದ್ದರಿಂದ ಪ್ರತಿಯೊಂದು ಠಾಣ್ಯೆಯಲ್ಲಿಯೂ ಹೊಸಬರು ಪರಿಚಯವನ್ನು ಕೊಡದೇ ಮುಂದಕ್ಕೆ ಹೋಗುವಂತಿರಲಿಲ್ಲ ಗುಂಡೋಪಂತನು ಉತ್ತರದೇಶದಲ್ಲಿ ಪ್ರಖ್ಯಾತಿ ಜ್ಯೋತಿಷಿಯೆಂದೂ ರಾಮಣ್ಣನು ಶಿಷ್ಯನೆಂದೂ ಪರಿಚಯವನ್ನು ಕೊಡು ತ್ತಿದ್ದರು. ಅದಕ್ಕೆ ಬೇಕಾದ ಯೋಗ್ಯತಾಪತ್ರಗಳೆಲ್ಲವೂ ಗುಂಡೋ ಪಂತನ ಸಮೀಪದಲ್ಲಿದ್ದುವು. ಅವರುಗಳಲ್ಲಿ ಠಾಣೆಯ ಸರದಾರರುಗಳಿಗೆ

ಸ್ವಲ್ಪವೂ ಸಂದೇಹಬರುತ್ತಿರಲಿಲ್ಲ ರಾಮಪುರದ ಗಡಿಯನ್ನು ಪ್ರವೇಶ ಮಾಡುವಾಗ ಮಾತ್ರ ಠಾಣೆಯ ಸುಬೇದಾರರಿಗೂ, ಗುಂಡೋಪಂತ ರಿಗೂ ಸ್ವಲ್ಪ ವಾಗ್ವಾದವು ನಡೆಯಿತು. ಪರಿಚಯವನ್ನು ಕೊಟ್ಟನಂತರ ಠಾಣೆಯ ಸುಬೇದಾರನು ಗುಂಡೋಪಂತರನ್ನು ಕುರಿತು, "ಸ್ವಾಮಿ ಜೋಯಿಸರೇ, ನೀವು ಪ್ರಶ್ನೆಹೇಳುತ್ತೀರೇನು?" ಎಂದು ಕೇಳಿದನು.

"ಅಹುದು ಹೇಳುತ್ತೇವೆ. ಜಾತಕಗಳನ್ನು ನೋಡುತ್ತೇವೆ. ಮಂತ್ರತಂತ್ರಗಳನ್ನು ಮಾಡುತ್ತೇವೆ."

ಸುಬೇದಾರನು ಇವರಿಬ್ಬರನ್ನೂ ತನ್ನ ಮನೆಗೆ ಮರ್ಯಾದೆಯಿಂದ ಕರೆದೊಯ್ದನು. ಅವನ ಮಗಳಿಗೆ ಪಿಶಾಚಿಯು ಹಿಡಿದಿತ್ತು. ಹುಡುಗಿಯು ಸುಮಾರು ಹದಿನಾರು ವರ್ಷದ ಹುಡುಗಿ. ಮುದ್ದಾದ ಹುಡುಗಿ. ಅವಳನ್ನು ಗುಂಡೋಪಂತರ ಮುಂದೆ ಕರೆತಂದು ಕೂಡಿಸುತ್ತಲೇ ಪಂಡಿತರು ಅವಾಕ್ಕಾದರು. ಸ್ವಲ್ಪಹೊತ್ತು ಮೌನವಾಗಿದ್ದು ಪಂತರು ಈ ಹುಡುಗಿಗೆ "ಏನು ಶಾಸ್ತ್ರ ಹೇಳಬೇಕು" ಎಂದು ಕೇಳಿದರು.

ಸುಬೇದಾರನು ಸ್ವಲ್ಪಹೊತ್ತು ಮಾತನಾಡಲಿಲ್ಲ. ಅವನು ನಾಯಕರ ಜಾತಿಯವನು. ಗುಂಡೋಪಂತನು ಹುಡುಗಿಯ ಕೈಯ್ಯನ್ನು ನೋಡಿ ಸಾಮುದ್ರಿಕವನ್ನು ಹೇಳಲಾರಂಭಿಸಿದನು. "ಮದುವೆಯಾಗು ತ್ತದೆ. ಒಳ್ಳೆಯ ಜಾಗಕ್ಕೆ ಮದುವೆಯಾಗುತ್ತೆ" ಎಂದು ಹೇಳಿದನು.

ಮದುವೆಯ ಮಾತು ಬಂದಿತೋ ಇಲ್ಲವೋ ಹುಡುಗಿಯು ಎದ್ದು ಆರ್ಭಟಿಸತೊಡಗಿದಳು. ಮನೆಯಲ್ಲಿ ನಾಲ್ವರು ಹಿಡಿದು ಅತಿ ಪ್ರಯಾಸ ದಿಂದ ಅವಳನ್ನೊಂದುಕಡೆ ಕೂಡಿಸಿದರು. ಪಿಶಾಚಿಯ ಆವೇಶದಿಂದ ಹುಡುಗಿಯು ಪಟಪಟನೆ ಮಾತನಾಡತೊಡಗಿದಳು. ಏನೇನೋ ಮಾತನಾಡಿದಳು. ಅದನ್ನು ನೋಡಿ ಗುಂಡೋಪಂತರಿಗೆ ದಿಕ್ಕು ತೋರದಂತಾಯಿತು. ಹುಡುಗಿಯು ಬಾಯಿನಲ್ಲಿ ಉಚ್ಚರಿಸುತ್ತಿದ್ದುದೆಲ್ಲಾ ಅರಬ್ಬೀಭಾಷೆ. ಗುಂಡೋಪಂತರಿಗೆ ಆ ಮಾತುಗಳು ಸ್ವಲ್ಪಸ್ವಲ್ಪ ಅರ್ಥ ವಾಗುತ್ತಿದ್ದವು.

"ನನ್ನನ್ನು ಅರಬ್ಬೀದೇಶಕ್ಕೆ ಕರೆದುಕೊಂಡುಹೋಗಿ ಬಿಡು"

ಎಂಬುದಾಗಿ ಆ ಹುಡುಗಿಯು ಕೂಗುತ್ತಿದ್ದಳು. ಮನೆಯುವರು ಈ ರೀತಿಯಾಗಿ ಭೂತಚೇಷ್ಟೆಗೆ ಆರಂಭವಾಗಿ ಎರಡುವರ್ಷಗಳಾದುವೆಂದೂ ತುರಕಪಿಶಾಚಿಯು ಹಿಡಿದಿದೆಯೆಂದೂ, ಎಷ್ಟೋ ಮಂತ್ರತಂತ್ರಗಳನ್ನು ಮಾಡಿಸಿದ್ದಾಯಿತೆಂದೂ ತಿಳಿಸಿದರು. ಗುಂಡೋಪಂತರಿಗೆ ಪೀಕಲಾಟಕ್ಕೆ ಇಟ್ಟುಕೊಂಡಿತು. ಅವರು ತಮ್ಮ ಜೊತೆಯಲ್ಲಿ ಒಬ್ಬ ಭೈರವಿಯು ಮೊದಲು ನಡೆದುಬರುತ್ತಿದ್ದಳೆಂದೂ, ಅವಳನ್ನು ಕರೆತರಸಬೇಕೆಂದೂ ಹೇಳಿದರು. ಸುಬೇದಾರನು ಊರಿನಲ್ಲೆಲ್ಲಾ ಹುಡುಕಿಸಿದನು ಭೈರವಿಯು ಎಲ್ಲಿಯೂ ಇರಲಿಲ್ಲ. ಊರಹೊರಗೆ ಒಂದು ಮಂಟಪದಲ್ಲಿ ಯಾರೋ ಒಬ್ಬ ಶಿವಯೋಗಿನಿಯು ಇದ್ದಾಳೆಂದು ಸಮಾಚಾರವು ಬಂದಿತು. ಕಾವಲುಗಾರರು ಹೋಗಿ ಆಕೆಯನ್ನು ಕಂಡು ಸುಬೇದಾರರ ಅಪ್ಪಣೆಯಾಗಿದೆಯೆಂದು ಹೇಳಿ ಕರೆತಂದರು. ಭೈರವಿಯು ಅವರ ಜೊತೆಯಲ್ಲಿ ಬರುತ್ತಾ ಸಮಾಚಾರವನ್ನು ಸ್ವಲ್ಪಸ್ವಲ್ಪ ವಿಚಾರಿಸಿ ತಿಳಿದುಕೊಂಡಳು. ಗುಂಡೋಪಂತನು ಯಾವುದೋ ಗೊಂದಲದಲ್ಲಿ ಸಿಕ್ಕಿಬಿದ್ದಿದ್ದಾನೆಂದು ಅವಳಿಗೆ ಅರ್ಥವಾಯಿತು. ಅವಳು ಸುಬೇದಾರನ ಮನೆಗೆ ಹೋಗಿ ಹಜಾರದಲ್ಲಿ ನಡೆಯುತ್ತಿದ್ದ ದೃಶ್ಯವನ್ನು ನೋಡಿದಳು. ಹಜಾರದಲ್ಲಿ ಪಿಶಾಚಿಯ ಆವೇಶದಿಂದ ಬಿರುನುಡಿಗಳನ್ನು ನುಡಿಯುತ್ತಾ ಗದ್ದಲಮಾಡುತ್ತಿರುವ ಹೆಣ್ಣು ಒಂದುಕಡೆ. ದಿಕ್ಕುತೋಚದೇ ಮಣೆಯ ಮೇಲೆ ಕೂತು ಮಂತ್ರಹಾಕುತ್ತಿರುವ ಪಂತನೊಂದುಕಡೆ. ಭೈರವಿಯು ಒಳಗೆಬಂದು ಮಂತ್ರವಾದಿಗಳೇ ಇದೇನು ಗದ್ದಲ. ಇಲ್ಲಿ ಹೇಗೆ ಸಿಕ್ಕಿಕೊಂಡಿರಿ ಎಂದು ಕೇಳಿದಳು. ಅವರು ಕಥೆಯನ್ನೆಲ್ಲಾ ಒಂದೆರಡು ಮಾತುಗಳಲ್ಲಿ ಹೇಳಿದರು. ಭೈರವಿಯು "ತುರುಕು ಪಿಶಾಚಿಯು ಮಂತ್ರಕ್ಕೆ ಬಗ್ಗುವುದಿಲ್ಲ. ಇಲ್ಲಿ ನಿಮ್ಮ ಆಟವೊಂದೂ ನಡೆಯುವುದಿಲ್ಲ. ಗಂಡಸರೆಲ್ಲರೂ ಹೊರಗೆಹೋಗಿರಿ" ಎಂದು ಹೇಳಿದಳು. ಪಿಶಾಚಿಹಿಡಿದ ಹುಡುಗಿಯು ಮತ್ತೂ ಆರ್ಭಟಿಸತೊಡಗಿದಳು. ಮನೆಯಲ್ಲಿ ನಾಲ್ವರು ಮೊದಲಿನಂತೆ ಬಂದು ಹಿಡಿದುಕೊಂಡರು. ಆರ್ಭಟವು ಮತ್ತೂ ಹೆಚ್ಚಾಯಿತು. ಭೈರವಿಯು ಆ ಹುಡುಗಿಯ ಮುಂದಲೆಯನ್ನು ಹಿಡಿದು

ಕೊಂಡು "ಎಲ್ಲರೂ ಆಕೆಯನ್ನು ಬಿಟ್ಟುಬಿಡಿರಿ" ಎಂದು ಕೂಗಿಹೇಳಿದಳು. ಆಗ ಎಲ್ಲರೂ ಬಿಟ್ಟರು. ಭೈರವಿಯೊಬ್ಬಳೇ ಅವಳನ್ನು ಹಿಡಿದುಕೊಂಡಿದ್ದಳು. ಸುಬೇದಾರನಿಗೂ ಅವನ ಮನೆಯುವರಿಗೂ ಇದನ್ನು ನೋಡಿ ಆಶ್ಚರ್ಯವಾಯಿತು. ಭೈರವಿಯ ತೋಳುಗಳಲ್ಲಿ ಎಷ್ಟು ಶಕ್ತಿಯಿದೆ ಎಂದು ಸುಬೇದಾರನು ಆಶ್ಚರ್ಯಪಟ್ಟನು. ಆ ಪಿಶಾಚಿಯಿಂದ ಗುಂಡೋಪಂತರ ಕಾರ್ಯಕ್ಕೆ ವಿಘಾತವಾಯಿತು. ಆ ಪಿಶಾಚಿಯು "ಇವರು ಮಂತ್ರವಾದಿಗಳಲ್ಲ. ಜ್ಯೋತಿಷ್ಕರಲ್ಲ. ಶತ್ರುಪಕ್ಷದ ಗೂಢಚಾರರು" ಎಂದು ಕೂಗಿಬಿಟ್ಟಿತು. ಸುಬೇದಾರನಿಗೂ ಆಶ್ಚರ್ಯವಾಯಿತು. ಆದರೆ ಭೈರವಿಯು ಚಲಿಸಲಿಲ್ಲ. ಅಗ್ಗಿಷ್ಟಿಕೆಯಲ್ಲಿ ಬೆಂಕಿಯನ್ನು ತಂದಿಡುವಂತೆ ಹೇಳಿದಳು. ಅದರಲ್ಲಿ ಧೂಪವನ್ನು ಹಾಕಿಸಿ ಹೊಗೆ ಎಬ್ಬಿಸಿದಳು. ಮನೆಯುವರೆಲ್ಲರನ್ನೂ ಅಲ್ಲಿದ್ದ ಗಂಡಸರೆಲ್ಲರನ್ನೂ ಹೊರಗೆಹೋಗುವಂತೆ ಆಜ್ಞೆ ಮಾಡಿದಳು. ಆ ಹುಡುಗಿಯು ಅರಬ್ಬೀ ಭಾಷೆಯಲ್ಲಿ ಅರ್ಭಟಿಸುತ್ತಲೇ ಇದ್ದಳು. ಭೈರವಿಯು ಆ ಹುಡುಗಿಯ ಎರಡು ಕೈಗಳನ್ನೂ ಹಿಡಿದು ಬಲಾತ್ಕಾರದಿಂದ ಅಗ್ಗಿಷ್ಟಿಕೆಯ ಮುಂದೆ ತಂದು ನಿಲ್ಲಿಸಿದಳು. ಹುಡುಗಿಯ ಮೈಮೇಲಿದ್ದ ಬಟ್ಟೆಗಳನ್ನು ಬಿಚ್ಚಿ ಹೊರಗೆಹಾಕಿದಳು. ಬಲಾತ್ಕಾರದಿಂದ ಆ ಹುಡುಗಿಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ತನ್ನ ಜೋಳಿಗೆಯಿಂದ ವಿಭೂತಿಯನ್ನು ತೆಗೆದು ಮೈಗೆಲ್ಲಾ ಹಚ್ಚಿದಳು. ತಾನು ಹೊದ್ದಿದ್ದ ಕಾವಿಯ ಬಟ್ಟೆಯನ್ನು ಉಡಿಸಿ ಕೈಗೆ ತನ್ನ ತ್ರಿಶೂಲವನ್ನು ಕೊಟ್ಟು ಎಬ್ಬಿಸಿ ನಿಲ್ಲಿಸಿ ಕಪಾಲಕ್ಕೆ ಬಲವಾದ ಒಂದೇಟುಕೊಟ್ಟು "ನಡೆ, ಅರಬ್ಬೀದೇಶಕ್ಕೆ ಹೊರಡು" ಎಂದು ಹೇಳುತ್ತಾ ಹಜಾರದಲ್ಲಿದ್ದ ನಿಲುಗನ್ನಡಿಯ ಮುಂದೆ ಕರೆದುಕೊಂಡುಹೋಗಿ ನಿಲ್ಲಿಸಿದಳು. ಹುಡುಗಿಯು ಬಿರುಗಣ್ಣಿನಿಂದ ಕನ್ನಡಿಯಲ್ಲಿ ತನ್ನ ಹೊಸ ಆಕಾರವನ್ನು ನೋಡಿದಳು. ಭೈರವಿಯ ಕಡೆಗೆ ತಿರುಗಿನೋಡಿದಳು. ಪುನಃ ಕನ್ನಡಿಯಕಡೆ ನೋಡಿಕೊಂಡಳು. ಭೈರವಿಯ ಕಡೆ ತಿರುಗಿ, "ದೇವೀ, ನಾನೇನಾಗಿದ್ದೇನೆ" ಎಂದು ಕೇಳಿದಳು.

ಭೈರವಿಯು ಹುಡುಗಿಯ ತಲೆ ಸವರುತ್ತಾ "ಮಗು ನೀನು ಭೈರವಿಯಾಗಿದ್ದೀಯೆ. ಇನ್ನುಮೇಲೆ ನಿನಗೆ ಮದುವೆಯಿಲ್ಲ. ಸಂಸಾರ ವಿಲ್ಲ. ನನ್ನಂತೆ ಭೈರವಿ" ಎಂದು ಹೇಳಿದಳು. ಹುಡುಗಿಯು ಗಹಗಹಿಸಿ ನಕ್ಕು ದೊಪ್ಪನೆ ಭೂಮಿಯಮೇಲೆ ಬಿದ್ದಳು. ಭೈರವಿ ಪಕ್ಕದಲ್ಲಿಯೇ ಕುಳಿತು ತಲೆ ಮೈಗಳನ್ನು ಸವರುತ್ತಿದ್ದಳು. ಸ್ವಲ್ಪಹೊತ್ತಿನಲ್ಲಿ ಜ್ಞಾನಾ ವಸ್ಥೆಯು ಬಂದಿತು. ಇಷ್ಟು ಹೊತ್ತಿಗೆ ಸಂಧ್ಯಾಕಾಲವಾಗಿದ್ದಿತು. ಭೈರವಿಯು ಸುಬೇದಾರನನ್ನು ನೋಡಿ "ನಿಮ್ಮ ಮಗಳಿಗೆ ಪಿಶಾಚಿಯು ಬಿಟ್ಟುಹೋಗಿದೆ. ಆದರೆ ನಾನು ಅವಳಿಗೆ ಭೈರವ ದೀಕ್ಷೆಯನ್ನು ಕೊಟ್ಟ ದ್ದೇನೆ. ಪುನಃ ಮುಂದಿನವರ್ಷ ಇದೇ ದಿವಸಕ್ಕೆ ನಾನು ಇಲ್ಲಿಗೆ ಬರುತ್ತೇನೆ. ಅದುವರೆವಿಗೆ ನಿಮ್ಮ ಮಗಳು ನಿಮ್ಮ ಮನೆಯಲ್ಲಿರಲಿ. ಆದರೆ ಭೈರವಿ ಯಾಗಿಯೇ ಇರಬೇಕು" ಎಂದು ಹೇಳಿ ಅಲ್ಲಿಂದ ಹೊರಡಲು ಅಪ್ಪಣೆ ಬೇಡಿದಳು. ಸುಬೇದಾರನು ಅಲ್ಲಿಯೇ ಆ ದಿವಸ ತಂಗಿರಬೇಕೆಂದು ಪ್ರಾರ್ಥನೆ ಮಾಡಿದನು. ಭೈರವಿಯು ರಾತ್ರಿಯಹೊತ್ತು ಊರೊಳಗೆ ವಾಸಮಾಡುವುದಿಲ್ಲವೆಂದೂ ತಾನು ಊರು ಹೊರಗಿನ ಮಂಟಪದಲ್ಲಿಯೇ ಇರುವುದಾಗಿಯೂ ಹೇಳಿ ಹೊರಟು ಹೋದಳು. ಸುಬೇದಾರನು ಭೈರವಿಗೆ ಆ ಮಂಟಪಕ್ಕೆ ಸದಾಬರ್ತ್ ಕಳುಹಿಸಿಕೊಟ್ಟನು. ಗುಂಡೋಪಂತರಿಗೂ ರಾಮಣ್ಣನಿಗೂ ಸುಬೇದಾರರು ಪುರೋಹಿತರ ಮನೆಯಲ್ಲಿ ದಿವ್ಯಭೋಜನಕ್ಕೆ ಏರ್ಪಾಡು ಮಾಡಿದ್ದರು. ಗುಂಡೋ ಪಂತನೂ ರಾಮಣ್ಣನೂ ಭೋಜನೋತ್ತರ ಠಾಣೆಯಲ್ಲಿ ಹೋಗಿ ಮಲಗಿದರು. ಪ್ರಾತಃಕಾಲ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಮುಂದಕ್ಕೆ ಪ್ರಯಾಣಮಾಡಲು ಸುಬೇದಾರರನ್ನು ಅಪ್ಪಣೆಯನ್ನು ಬೇಡಿದರು. ಸುಬೇದಾರನು ಮೂರು ದಿನಗಳು ಅಲ್ಲಿಯೇ ಇರಬೇಕೆಂದು ಬಹಳ ಮರ್ಯಾದೆಯಿಂದ ಪ್ರಾರ್ಥನೆ ಮಾಡಿದನು. ಗುಂಡೋಪಂತನೂ ರಾಮಣ್ಣನೂ ಎಷ್ಟೋ ಪ್ರಯತ್ನಮಾಡಿದರೂ ಅಪ್ಪಣೆಯು ದೊರೆಯ ಲಿಲ್ಲ. ಬುದ್ಧಿವಂತನಾದ ಗುಂಡೋಪಂತನು ಠಾಣೆಯಲ್ಲಿ ತಾವಿಬ್ಬರೂ ಬಂಧಿತರಾಗಿದ್ದೇವೆಂದು ತಿಳಿದುಕೊಂಡನು. ಊಟಉಪಚಾರಗಳಿಗೂ

ಸ್ನಾನಸಾನ್ನಿಧ್ಯಕಗಳಿಗೂ ಬೇಕಾದ ಏರ್ಪಾಡುಗಳೆಲ್ಲಾ ಆಗಿದ್ದಾಗ್ಯೂ ಗುಂಡೋಪಂತನು ಬಂಧನದಲ್ಲಿ ಸಿಕ್ಕಿದಂತಾಗಿ ಆಲೋಚಿಸ ತೊಡಗಿದನು. ಪಿಶಾಚಿ ಹಿಡಿದಾಗ ಹುಡುಗಿಯ ಬಾಯಿಯಿಂದ ಹೊರಟ ಮಾತುಗಳೇ ಇದಕ್ಕೆ ಕಾರಣವೆಂದು ಗುಂಡೋಪಂತನಿಗೆ ಅರ್ಥವಾಯಿತು. ಮಾರನೆಯ ದಿನ ಭೈರವಿಯು ಊರಿನೊಳಗೆ ಬಂದು ಸಂಚಾರಮಾಡಿದಳು. ಸುಬೇದಾರನ ಮನೆಗೆ ಹೋಗಿ ಹುಡುಗಿಯನ್ನು ಕಂಡಳು "ಪಿಶಾಚಿಯು ಬಿಟ್ಟಿದ್ದರೂ ಹುಡುಗಿಗೆ ಜ್ವರ ಬಂದಿದ್ದಿತು. ಸುಬೇದಾರನು ಭೈರವಿಯನ್ನು ದರ್ಶನಮಾಡಿ ತಾಯಿ ಇದಕ್ಕೇನು ಮಾಡಬೇಕು." ಎಂದು ಕೇಳಿದನು. ಭೈರವಿಯು ನಗುತ್ತಾ "ಏನೂ ಮಾಡತಕ್ಕದ್ದಿಲ್ಲ. ಔಷಧೋಪಚಾರಗಳನ್ನು ಮಾಡಬಾರದು. ಪ್ರಾತಃ ಕಾಲ, ಸಂಧ್ಯಾಕಾಲಗಳಲ್ಲಿ ಹುಡುಗಿಯ ಮುಂದೆ ಧೂಪದ ಹೊಗೆ ಯನ್ನು ಹಾಕಬೇಕು. ಮೈ ಎಲ್ಲಾ ವಿಭೂತಿಯ ಉದ್ಧೂಳನಮಾಡ ಬೇಕು" ಎಂದು ಹೇಳಿ ಹೊರಟಳು. ಠಾಣೆಯ ಮುಂದೆ ಬರುವಾಗ ಪಹರೆಯವರಿಂದ ಅವಳಿಗೆ ಸೂಚನೆಯು ಬಂದಿತು. ಠಾಣೆಯೊಳಗೆ ಹೋಗಿ ಗುಂಡೋಪಂತನನ್ನೂ, ರಾಮಣ್ಣನನ್ನೂ ಭೇಟಿಮಾಡಿದಳು. ಅವರ ಬಂಧನವನ್ನು ನೋಡಿ ನಕ್ಕಳು. "ಪಂತರೇ ಈ ನಗರದ ರಾಜ್ಯದ ಧರ್ಮವನ್ನು ನೋಡಿದಿರಾ? ಸುಬೇದಾರರಿಗೆ ನೀವು ಉಪಕಾರ ಮಾಡಿ ದರೆ ಅವರು ನಿಮ್ಮನ್ನು ಬಂಧನದಲ್ಲಿಟ್ಟು ಅಪಕಾರಕ್ಕೆ ಹೊಂಚುಹಾಕಿ ದ್ದಾರೆ. ಇರಲಿ, ಅದಕ್ಕೂ ನನ್ನಲ್ಲಿ ಮಂತ್ರವಿದೆ. ಹುಡುಗಿಗೆ ಪಿಶಾಚಿ ಯನ್ನು ಬಿಡಿಸಿದಂತೆ ನಿಮಗೂ ಈ ಬಂಧನವನ್ನು ಬಿಡಿಸುತ್ತೇನೆ" ಎಂದು ಹೇಳಿ ಹೊರಟುಹೋದಳು.

ಭೈರವಿಯು ಸುಬೇದಾರನ ಮನೆಗೆ ಹೋಗಿ ಭೇಟಿಕೊಟ್ಟಳು. ಮನೆಯವರೆಲ್ಲರೂ ಸಾಕ್ಷಾತ್ ಮಹಾದೇವಿಯನ್ನು ಕಂಡಂತೆ ಆದರಿಸಿ ಗೌರವಿಸಿದರು. ಭೈರವಿಯು ಸುಬೇದಾರನೊಡನೆ ಮಾತನಾಡ ಬೇಕೆಂದು ತಿಳಿಸಿದಳು. ಸುಬೇದಾರನು ಒಳಗಿನ ಚೌಕಿಗೆ ಭೈರವಿ ಯನ್ನು ಕರೆದುಕೊಂಡುಹೋಗಿ ಆಸನದಮೇಲೆ ಕುಳ್ಳಿರಿಸಿ ಅವಳಿಗೆ

ನಮಸ್ಕರಿಸಿ ತಾನು ಕೆಳಗೆ ಕುಳಿತನು. ಭೈರವಿ ಸುಬೇದಾರನನ್ನು ದ್ದೇಶಿಸಿ ಮಾತನಾಡಲಾರಂಭಿಸಿದಳು. "ನೋಡಿರಿ ಸುಬೇದಾರರೇ! ನಿನ್ನೆ ನಿಮ್ಮ ಮನೆಗೆ ಬಂದಿದ್ದ ಮಂತ್ರವಾದಿಗಳನ್ನು ನೀವು ಠಾಣೆಯಲ್ಲಿ ನಿರ್ಬಂಧಿಸಿದ್ದೀರಿ. ಅದು ನ್ಯಾಯವಲ್ಲ. ಅವರು ನಿಮ್ಮ ಮಗಳಿಗೆ ಪಿಶಾಚಿಯನ್ನು ಬಿಡಿಸಲು ಬಂದರು. ದೈವಕೃಪೆಯಿಂದ ನಿಮ್ಮ ಮಗಳಿಗೆ ಗುಣವಾಯಿತು. ನೀವು ಅವರನ್ನು ಬಂಧಿಸಿಡುವುದು ಘಾತುಕತನ ವಲ್ಲವೇ? ಬ್ರಾಹ್ಮಣರು ಎಲ್ಲಿಯೋ ದೇಶಸಂಚಾರಮಾಡಿ ನಾಲ್ಕುಕಾಸು ಸಂಪಾದಿಸುತ್ತಾರೆ. ಅವರನ್ನು ನೀವೇಕೆ ಬಂಧಿಸಬೇಕು? ಊರೆಲ್ಲಾ ನಿಮ್ಮನ್ನು ಬಯ್ಯುತ್ತಿದೆ" ಎಂದು ಹೇಳಿದಳು.

ಸುಬೇದಾರನು ಕೈಮುಗಿದು "ತಾಯೇ, ತಾವು ಹೇಳುವುದೆಲ್ಲಾ ಸರಿಯಾಗಿಯೇ ಇದೆ. ಆದರೆ ನನ್ನ ಕರ್ತವ್ಯವನ್ನು ನಾನು ನಿರ್ವಹಿಸದೆ ಬಿಡುವಂತಿಲ್ಲ. ನನ್ನ ಮಗಳನ್ನೇ ಬೇಕಾದರೂ ಬಲಿಕೊಟ್ಟೇನು. ನನ್ನ ಪ್ರಭುವಿಗೆ ದ್ರೋಹಮಾಡಲಾಗುವುದಿಲ್ಲ. ಇದು ಯುದ್ಧದಕಾಲ. ಅವರಿಬ್ಬರೂ ಗೂಢಚಾರರು. ನಾನು ಅವರನ್ನು ಹೇಗೆ ಬಿಡಲಿ? ನನ್ನ ಮಗಳ ಮೈಮೇಲೆ ಬಂದಿದ್ದ ಭೂತವು ಅವರು ಗೂಢಚಾರರೆಂದು ಹೇಳಿದ್ದನ್ನು ನೀವೇ ಕಿವಿಯಾರ ಕೇಳಲಿಲ್ಲವೇ? ಯಾವಾಗಲೂ ಆ ಭೂತವು ನಿಜವನ್ನೇ ನುಡಿದಿರುವ ನಿದರ್ಶನಗಳು ಹಿಂದೆ ಬೇಕಾದಷ್ಟಿವೆ" ಎಂದನು.

ಭೈರವಿಯು "ಸುಬೇದಾರರೇ, ನನಗೆ ರಾಜಕಾರಣಗಳು ತಿಳಿಯುವುದಿಲ್ಲ. ಅವರು ಈ ದೇಶಕ್ಕೆ ಬರುತ್ತಿರಲಿಲ್ಲ. ನನಗೆ ಈ ದೇಶದಲ್ಲಿ ಯುದ್ಧದ ಪ್ರಮೇಯವಿರುವುದು ಗೊತ್ತೇಯಿಲ್ಲ. ನಗರದ ರಾಜ್ಯದಲ್ಲಿ ಬಹುಮಂದಿ ಶ್ರೀಮಂತರಿದ್ದಾರೆಂದು ಅವರುಗಳು ಉದಾರಿ ಗಳೂ ಧರ್ಮಾತ್ಮರೂ ಆಗಿದ್ದಾರೆಂದೂ ಕೇಳಿ ಹತ್ತಾರು ಗಾವುದ ಗಳಿಂದ ಇತ್ತಕಡೆಗೆ ಅವರು ಬಂದರು. ಈ ಊರಿನಲ್ಲಾಗಲೀ ಎಲ್ಲೇ ಆಗಲೀ ಅವರು ಯಾರೊಡನೆಯೂ ರಾಜಕೀಯವನ್ನು ಮಾತನಾಡಿದ್ದು ನಾನರಿಯೆ. ನಿಮ್ಮ ಮಗಳ ಮೇಲಿನ ಭೂತವು

ನುಡಿದದ್ದೇ ನಿಮಗೆ ವೇದವಾಕ್ಯವಾಗಿದೆ. ಭೂತ ಚೇಷ್ಟೆಯೇ ಹಾಗೆ. ತನ್ನಮೇಲೆ ಮಂತ್ರತಂತ್ರ ಮಾಡುವುದಕ್ಕೆ ಬಂದವರನ್ನು ಯಾವುದಾದರೊಂದು ಕಷ್ಟಕ್ಕೆ ಸಿಕ್ಕಿಸಿಬಿಡುತ್ತದೆ. ಆದೆಲ್ಲಾ ಸುಳ್ಳೆಂದು ನಾನು ದೇವರಾಣೆಗೂ ಹೇಳುತ್ತೇನೆ. ಬಿಟ್ಟುಬಿಡಿರಿ" ಎಂದು ಹೇಳಿದಳು. ಭೈರವಿಯು ಎಷ್ಟೋ ನಯಭಯಗಳಿಂದ ಹೇಳಿದಾಗ್ಯೂ ಪ್ರಾರ್ಥನೆ ಮಾಡಿದಾಗ್ಯೂ ಸುಬೇದಾರರು ಒಪ್ಪಲಿಲ್ಲ. ಕೊನೆಗೆ ಭೈರವಿಯು ಕೋಪದಿಂದ ರೇಗಿ "ನಿಮಗೆ ಶಾಪ ಕೊಡುತ್ತೇನೆ" ಎಂದು ಬೆದರಿಸಿದಳು. ಮನೆಮಂದಿಯೆಲ್ಲಾ ನಡುಗುತ್ತ ಅಳಲಾರಂಭಿಸಿದರು. ಆಗ ಸುಬೇದಾರನು ಭೈರವಿಗೆ ನಮಸ್ಕರಿಸಿ "ಮಹಾದೇವಿ ನಾನೊಂದು ಮಾತನ್ನು ವಿಜ್ಞಾಪಿಸುತ್ತೇನೆ. ಕೇಳಿರಿ, ನಾನು ಗೋಪಾಲನಾಯಕರ ಸಮ್ಮುಖಕ್ಕೆ ಓಲೆ ಬರೆದು ಕಳುಹಿಸುತ್ತೇನೆ. ಅವರು ಅಪ್ಪಣೆಮಾಡಿದರೆ ರಾಮಪುರಕ್ಕೆ ಈ ಬ್ರಾಹ್ಮಣರನ್ನು ನಾನು ಕಳುಹಿಸಿಕೊಡುತ್ತೇನೆ. ಇಲ್ಲದಿದ್ದರೆ ನಗರದ ಗಡಿಯಿಂದ ದಾಟಿಸಿಬರುವಂತೆ ರಾವುತರಿಗೆ ಅಪ್ಪಣೆ ಮಾಡುತ್ತೇನೆ. ಇದಕ್ಕೆ ನೀವು ಒಪ್ಪಿಕೊಳ್ಳಬೇಕು. ನಮ್ಮ ನಗರದ ರಾಜ್ಯದಲ್ಲಿ ಶಿಸ್ತು ಹಾಗಿದೆ" ಎಂದು ಹೇಳಿದನು.

ಭೈರವಿಯು ಒಪ್ಪಿಕೊಂಡಳು. ಸುಬೇದಾರರು ಆಗಲೇ ಓಲೆಯನ್ನು ಬರೆದು ರಾಮಪುರಕ್ಕೆ ಒಂಟಿಯ ರಾವುತರನ್ನು ಕಳುಹಿಸಿದರು. ಅಲ್ಲಿಂದ ರಾಮಪುರಕ್ಕೆ ಹದಿನೆಂಟು ಮೈಲಿಗಳು ಫಾಸಲೆ ಇತ್ತು. ಭೈರವಿಯು ಮನೆಯೊಳಗೆ ಹೋಗಿ ಹಾಸಿಗೆಯ ಮೇಲೆ ಮಲಗಿದ್ದ ಸುಬೇದಾರರ ಮಗಳನ್ನು ನೋಡಿ ವಿಭೂತಿ ಮಂತ್ರಿಸಿಕೊಟ್ಟು ಊರು ಹೊರಗಿನ ಮಂಟಪಕ್ಕೆ ಹೊರಟುಹೋದಳು.

ಸಂಧ್ಯಾಕಾಲದ ಹೊತ್ತಿಗೆ ರಾಮಪುರದಿಂದ ರಾಯಸವು ಬಂದಿತು. ಸುಬೇದಾರರು ವೈದಿಕ ಬ್ರಾಹ್ಮಣರನ್ನು ಬಂಧಿಸಿದ್ದು ಗೋಪಾಲ ನಾಯಕರ ಚಿತ್ತಕ್ಕೆ ಕ್ಷೋಭೆಯಾಗಿದೆಯೆಂದೂ ಅವರುಗಳನ್ನು ಸತ್ಕರಿಸಿ ಮರ್ಯಾದೆಯಿಂದ ರಾಮಪುರಕ್ಕೆ ಕಳುಹಿಸಿಕೊಡಬೇಕೆಂದೂ ಅವರುಗಳು ಗುಪ್ತಚಾರರಾದ್ದಾಗ್ಯೂ ಭಯವಿಲ್ಲವೆಂದೂ ಆಜ್ಞೆಯು ಬಂದಿತು.

ಅಂತೂ ಸುಬೇದಾರನು ಧರ್ಮಸಂಕಟದಿಂದ ಪಾರಾದನು. ಕಾವಲುಗಾರರನ್ನು ಠಾಣೆಗೆ ಕಳಿಸಿ ಆ ಬ್ರಾಹ್ಮಣರಿಬ್ಬರನ್ನೂ ತನ್ನ ಮನೆಗೆ ಕರೆಸಿ ಯಥೋಚಿತವಾಗಿ ಸತ್ಕರಿಸಿ ಕ್ಷಮೆ ಬೇಡಿದನು. ಅವರಿಬ್ಬರೂ ಪ್ರಸನ್ನರಾಗಿ ಸುಬೇದಾರನನ್ನು ಆಶೀರ್ವದಿಸಿದರು. ಇಷ್ಟುಹೊತ್ತಿಗೆ ಭೈರವಿಯು ಅಲ್ಲಿಗೆ ಬಂದು ಸೇರಿದಳು. ಪ್ರಾತಃಕಾಲ ಆ ಬ್ರಾಹ್ಮಣರು ರಾಮಪುರಕ್ಕೆ ಹೊರಡಬಹುದೆಂದೂ ರಾಮಪುರದವರೆವಿಗೂ, ಬೆಂಗಾವಲಿನವರು ಬಿಟ್ಟುಬರುತ್ತಾರೆಂದೂ ಸುಬೇದಾರನು ತಿಳಿಸಿದನು. ಆ ಬ್ರಾಹ್ಮಣರಿಬ್ಬರೂ ಅಪ್ಪಣೆಪಡೆದು ಠಾಣೆಗೆ ಹೋಗಿ ವಿಶ್ರಾಂತಿಯನ್ನು ಪಡೆದರು. ಮರುದಿನ ಮುಂಜಾನೆಯಲ್ಲಿಯೇ ಎದ್ದು ದಾರಿನಡೆದು ರಾಮಪುರವನ್ನು ಸೇರಿದರು. ಭೈರವಿಯೂ ಅವರ ಬೆನ್ನುಹತ್ತಿದಳೆಂದು ಹೇಳಲೇಬೇಕಾಗಿಲ್ಲ. ಬ್ರಾಹ್ಮಣರು ಭವ್ಯವಾದ ಛತ್ರದಲ್ಲಿ ಹೋಗಿ ಇಳಿದುಕೊಂಡು ಬಿಡಾರಮಾಡಿದರು.

———

## ೨೮

## ಕ್ಷಾತ್ರ ತೇಜಸ್ಸು

ಗೋಪಾಲನಾಯಕರ ಅಪ್ಪಣೆಯಂತೆ ಅವರಿಗೆ ಬೇಕಾದ ಸಿದ್ಧತೆಗಳೆಲ್ಲವೂ ಅಲ್ಲಿ ಏರ್ಪಟ್ಟಿದ್ದವು. ಭೈರವಿಯು ಯಥಾಪ್ರಕಾರ ಊರ ಹೊರಗೆ ಇಳಿದುಕೊಂಡಳು. ಗುಂಡೋಪಂತನೂ, ರಾಮಣ್ಣನೂ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಸ್ವಯಂಪಾಕಮಾಡಿ ಭೋಜನಮಾಡಿದರು. ಸಂಧ್ಯಾಕಾಲ ಗೋಪಾಲನಾಯಕರ ಅರಮನೆಗೆ ಅವರು ಕರೆದೊಯ್ಯಲ್ಪಟ್ಟರು. ಗೋಪಾಲನಾಯಕರು ಅರಮನೆಯ ಹೆಬ್ಬಾಗಲಿನ ಚೌಕಿಯ ಕಛೇರಿಯಲ್ಲಿ ಕುಳಿತಿದ್ದರು. ಅಲ್ಲಿಗೆ ಈ ಬ್ರಾಹ್ಮಣರಿಬ್ಬರೂ ಹೋಗಿ ಗೋಪಾಲನಾಯಕರ ಭೇಟಮಾಡಿದರು. ಗೋಪಾಲನಾಯಕರು ಈ ಬ್ರಾಹ್ಮಣರಿಬ್ಬರನ್ನೂ ಆತ್ಮಾದರದಿಂದ ಕಂಡು ಯೋಗ

ಕ್ಷೇಮಗಳನ್ನು ವಿಚಾರಿಸಿದರು. ಆ ಸಮಯದಲ್ಲಿ ಗುಂಡೋಪಂತನು ಗೋಪಾಲನಾಯಕರಲ್ಲಿ ರಹಸ್ಯವಾದ ಮಾತನಾಡಬೇಕೆಂದು ತಿಳಿಸಿದನು. ಗೋಪಾಲನಾಯಕರು ಅವರಿಬ್ಬರನ್ನೂ ತಮ್ಮ ಅಂತಃಗೃಹಕ್ಕೆ ಕರೆತರುವಂತೆ ಅಪ್ಪಣೆಮಾಡಿ ತಾವು ಒಳಗೆ ಹೊರಟುಹೋದರು.

ಸಂಧ್ಯಾಕಾಲವಾಗಿತ್ತು. ಸೂರ್ಯನು ಮುಳುಗಿ ಕತ್ತಲು ಕವಿಯುವ ಸಮಯ. ಅರಮನೆಯ ಒಳಮಹಲಿನಲ್ಲಿ ರಾಜರ ಅಂತಗೃಹ. ಭವ್ಯವಾಗಿ ಅಲಂಕೃತವಾಗಿತ್ತು. ನೆಲಕ್ಕೆ ರತ್ನ ಗಂಬಳಿಗಳನ್ನು ಹಾಸಿ ಲೋಡುದಿಂಬುಗಳೇ ಇಡಲ್ಪಟ್ಟಿದ್ದವು. ಬೆಳ್ಳಿಯ ದೀವಿಗೆಗಳಲ್ಲಿ ದೀಪಗಳು ಉಜ್ವಲವಾಗಿ ಪ್ರಕಾಶಿಸುತ್ತಿದ್ದವು. ಚಾರರು ಈ ಇಬ್ಬರು ಬ್ರಾಹ್ಮಣರನ್ನು ಒಳಗೆ ಕರೆದೊಯ್ದು ಆಸನಗಳಲ್ಲಿ ಕುಳ್ಳಿರಿಸಿದರು. ಸ್ವಲ್ಪ ಹೊತ್ತಿನೊಳಗಾಗಿ ಗೋಪಾಲನಾಯಕರು ಆ ಅಂತಃಗೃಹಕ್ಕೆ ಬಂದು ಭೇಟಿ ಇತ್ತರು. ಗೋಪಾಲನಾಯಕರು ಆ ಹಜಾರಕ್ಕೆ ಬಂದೊಡನೆಯೇ ಈ ಇಬ್ಬರು ಬ್ರಾಹ್ಮಣರು ಎದ್ದುನಿಂತು ಅಭಿವಂದಿಸಿದರು. ಗೋಪಾಲನಾಯಕನು ಮುಗುಳು ನಗೆಯಿಂದ ಸಂಭಾವಿಸಿ ತಾನು ಆಸನದಲ್ಲಿ ಕುಳಿತುಕೊಂಡು ಅವರನ್ನೂ ಆಸನಗಳಲ್ಲಿ ಕುಳಿತುಕೊಳ್ಳುವಂತೆ ಸಂಜ್ಞೆಮಾಡಿದನು. ಅವರಿಬ್ಬರೂ ಸುತ್ತಲೂ ನೋಡಿ ಒಂದು ಬಾರಿ ಗೋಪಾಲನಾಯಕರಿಗೆ ಕೈಜೋಡಿಸಿ ಕುಳಿತುಕೊಂಡರು. ಗೋಪಾಲನಾಯಕರು ಮಾತಿಗೆ ಮೊದಲಿಟ್ಟರು. "ಸ್ವಾಮಿ, ಬ್ರಾಹ್ಮಣೋತ್ತಮರೇ, ತಾವು ರಾಜಕಾರಣಿಗಳೆಂಬುದರಲ್ಲಿ ಸಂದೇಹವಿಲ್ಲ. ತಾವು ಯಾವ ರಾಜ್ಯದಿಂದ ಬಂದಿದ್ದೀರಿ? ತಮ್ಮ ನಾಮಧೇಯಗಳೇನು? ತಾವು ಬಂದ ರಾಜಕಾರ್ಯವೇನು?" ಎಂಬುದಾಗಿ ಸೌಜನ್ಯದಿಂದ ಪ್ರಶ್ನೆಮಾಡಿದನು. ಗುಂಡೋಪಂತನು "ಪ್ರಭುಗಳೇ ತಮ್ಮ ಖ್ಯಾತಿಯನ್ನು ನಾವು ಬಹಳವಾಗಿ ಕೇಳಿದ್ದೇವೆ. ದಾನ ಧರ್ಮಗಳನ್ನು ಕೇಳಿದ್ದೇವೆ. ನಾವು ಮೈಸೂರಿನಿಂದ ಬಂದಿರುವ ರಾಜಕಾರಣಿಗಳು.

ನನ್ನ ಹೆಸರು ಗುಂಡೋಪಂತ. ಇವರ ಹೆಸರು ರಾಮಣ್ಣನವರು. ನಮ್ಮಿಬ್ಬರನ್ನೂ ಮೈಸೂರಿನ ದಳವಾಯಿಯವರಾದ ಹೈದರಲ್ಲಿಖಾನರು ತಮ್ಮಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ."

ಗೋಪಾಲನಾಯಕರು ಮುಗುಳು ನಗೆಯನ್ನು ಬೀರುತ್ತಾ, "ಒಳ್ಳೆಯದು, ಹೈದರಲ್ಲೀಖಾನರು ಬಲುದೊಡ್ಡ ಸೇನಾಧಿಪತಿಗಳೆಂದು ಕೇಳಿದ್ದೇವೆ. ಸಂಧಾನವೆಂದರೆ ನಮಗೆ ಅರ್ಥವಾಗುವುದಿಲ್ಲ. ತಾವುಗಳು ದಾರಿತಪ್ಪಿ ಇಲ್ಲಿಗೆ ಬಂದಂತೆ ಕಾಣುತ್ತದೆ. ಸಂಧಾನಕ್ಕೆ ಬಂದವರಾದರೆ ಬಿದನೂರಿನ ಅರಮನೆಗೆ ಹೋಗಬೇಕು. ನಗರದ ಮಹಾರಾಣಿಯವರೊಡನೆ ಮೈಸೂರಿನ ದಳಪತಿಗಳು ಸಂಧಾನ ನಡೆಸಬಹುದು. ಯುದ್ಧವಾದರೆ ನಮ್ಮಲ್ಲಿಗೆ ಬರಬೇಕು. ನೀವು ಯುದ್ಧ ವೀಳೆಯವನ್ನು ತಂದಿದ್ದರೆ, ನಾನು ಸಂತೋಷದಿಂದ ಸ್ವೀಕರಿಸುತ್ತೇನೆ" ಎಂದರು.

"ಹಾಗಲ್ಲ ನಾಯಕರೇ, ತಾವು ವಯೋವೃದ್ಧರಾಗಿಯೂ, ಜ್ಞಾನವೃದ್ಧರಾಗಿಯೂ ಇದ್ದೀರಿ. ಈ ಯುದ್ಧದಿಂದ ಯಾರಿಗೂ ಲಾಭವಾಗುವುದಿಲ್ಲ. ವೃಥಾ ಜನ ನಷ್ಟವಾಗುತ್ತದೆ. ದೇಶಕ್ಷೋಭೆಯಾಗುತ್ತದೆ. ಆದ್ದರಿಂದ ಸಂಧಿಯೇ ಒಳ್ಳೆಯದು" ಎಂದು ಹೇಳಿದರು.

ಗೋಪಾಲನಾಯಕರು "ನಿಮ್ಮ ಸಂಧಾನಪ್ರಯತ್ನವು ವಿಚಿತ್ರವಾಗಿದೆ. ಹೈದರಲ್ಲೀಖಾನರನ್ನು ಇಷ್ಟೊಂದು ಸೈನ್ಯ ಸಮೇತರಾಗಿ ಬರುವಂತೆ ಯಾರು ಆಹ್ವಾನವಿತ್ತರು? ನಗರದ ರಾಜ್ಯದಿಂದ ಮೈಸೂರಿಗೆ ನಡೆದಿರುವ ದ್ರೋಹವಾದರೂ ಏನು? ಹೈದರಲ್ಲೀಖಾನರು ಮಹಾಸೈನ್ಯವನ್ನು ತೆಗೆದುಕೊಂಡುಬಂದು ನಗರದ ರಾಜ್ಯದ ಗಡಿಯಲ್ಲಿ ನಿಂತು ಸಂಧಿಗೆ ಹೇಳಿಕಳುಹಿಸುವುದೆಂದರೆ ಆಶ್ಚರ್ಯವಾಗಿದೆ" ಎಂದು ತಿರಸ್ಕಾರಪೂರ್ಣವಾದ ನಗುವನ್ನು ನಕ್ಕರು

ಗುಂಡೋಪಂತನು "ಪ್ರಭುಗಳೇ, ತಮ್ಮ ಮಾತು ನ್ಯಾಯವಾಗಿದೆ. ನಗರದಲ್ಲಿ ಇತ್ತೀಚೆಗೆ ಮಹಾರಾಣಿಯವರ ಆಳ್ವಿಕೆಯಲ್ಲಿ ಬಹಳ ಅವ್ಯವಸ್ಥೆಗಳಾಗಿವೆಯೆಂದು ಶ್ರೀರಂಗಪಟ್ಟಣಕ್ಕೆ ದೂರುತಲ್ಪಟ್ಟಿದೆ. ಅದಕ್ಕಾಗಿ ಹೈದರಲ್ಲೀಖಾನರು ಇಲ್ಲಿಗೆ ಬಂದಿದ್ದಾರೆ"ಎಂದನು. ಗೋಪಾಲನಾಯಕರ

ಮುಖವು ಕೆಂಪೇರಿತು. ಮಾತು ಗಡುಸಾಯಿತು. "ಪಂತರೇ, ನಾಲಿಗೆ ಹಿಡಿದು ಮಾತನಾಡಿರಿ. ನಗರದಮೇಲೆ ದೂರು ಹಿಡಿಯುವುದಕ್ಕೆ ಮೈಸೂರಿನವರಿಗೇನು ಅಧಿಕಾರ? ದೂರುಕೊಟ್ಟವರು ಯಾರು? ನಗರದಮೇಲೆ ಶಾಸನಮಾಡಲು ಹೈದರಲ್ಲೀಖಾನರು ಬಂದಿದ್ದಾರೆಯೋ? ಅದು ಯುದ್ಧದಿಂದಲೇ ನಿರ್ಣಯವಾಗಬೇಕು" ಎಂದು ಗದ್ದರಿಸಿದರು. ಗುಂಡೋಪಂತನು ಮೃದು ಧ್ವನಿಯಿಂದ "ಮಹಾಪ್ರಭುಗಳೇ, ಶಾಂತರಾಗಿರಿ. ಹೈದರಲ್ಲೀಖಾನರು ಸ್ವಯಂಪ್ರೇರಿತರಾಗಿ ನಗರಕ್ಕೆ ಬಂದಿಲ್ಲ. ನಗರದ ಯುವರಾಜರವರು ನಗರದ ಮಹಾರಾಣಿಯವರಮೇಲೆ ದೂರು ತಂದು ಹೈದರಲ್ಲೀಖಾನರವರನ್ನು ಕರೆತಂದಿದ್ದಾರೆ. ನಗರದ ರಾಜ್ಯದಲ್ಲಿ ಹಿರಿಯರಾದ ತಾವೂ ಹೈದರಲ್ಲೀಖಾನರೂ ಸೇರಿ ಯುವರಾಜರಿಗೆ ಪಟ್ಟ ಕಟ್ಟಬೇಕೆಂದೂ ನಮ್ಮ ದಳವಾಯಿಯವರ ಅಭಿಪ್ರಾಯವಾಗಿದೆ. ಇದರಲ್ಲಿ ತಪ್ಪೇನಿದೆ? ಯುವರಾಜ ಚೆನ್ನಬಸಪ್ಪನಾಯಕರು ಈ ಸಿಂಹಾಸನಕ್ಕೆ ಅಧಿಕಾರಿಗಳಾಗಿಯೇ ಇದ್ದಾರೆ. ಈಬಗ್ಗೆ ನವಾಬರವರು ತಮಗೊಂದು ಪತ್ರವನ್ನು ಕಳಿಸಿದ್ದಾರೆ" ಎಂದು ಹೇಳುತ್ತಾ ಗುಂಡೋಪಂತನು ತನ್ನ ಬೆನ್ನಿಗೆ ಕಟ್ಟಿಕೊಂಡಿದ್ದ ಪಂಚಾಂಗದ ಗಂಟನ್ನು ಬಿಚ್ಚಿ ಒಂದು ಲಕ್ಕೋಟೆಯನ್ನು ತೆಗೆದು ಎದ್ದುನಿಂತು ಎರಡು ಕೈಗಳಿಂದಲೂ ಆ ಲಕ್ಕೋಟೆಯನ್ನು ಗೋಪಾಲನಾಯಕರ ಕೈಗೆ ಕೊಟ್ಟನು. ಗೋಪಾಲನಾಯಕರು ಲಕ್ಕೋಟೆಯನ್ನು ಬಿಚ್ಚಿ ಪತ್ರವನ್ನು ಓದಲಾರಂಭಿಸಿದರು. ಒಂದು ಬಾರಿ, ಎರಡು ಬಾರಿ, ಮೂರು ಬಾರಿ ಪತ್ರವನ್ನು ಓದಿಕೊಂಡರು. ಕೋಪಾವೇಶದಿಂದ ಮೀಸೆಯು ಕುಣಿಯುತ್ತಿದ್ದಿತು. ಕಣ್ಣುಗಳಲ್ಲಿ ಕಿಡಿಗಳು ಉದುರುತ್ತಿದ್ದಂತೆ ಇದ್ದವು. ಕ್ರೋಧಾವೇಶದಿಂದ ಬಿರುನುಡಿಗಳಿಂದ ಗೋಪಾಲನಾಯಕರು ನುಡಿದರು.

"ಪಂತರೇ, ಅರ್ಥವಾಯಿತು. ನಿಮ್ಮ ಸಂಧಾನವು ವಿದಿತವಾಯಿತು. ಇದು ಸತ್ಯಸಂಧಾನವಲ್ಲ. ಕೃತ್ರಿಮಸಂಧಾನ, ನೀವೇ ಹೇಳುವಂತೆ ಹೈದರಲ್ಲೀಖಾನರು ಯುವರಾಜರಿಗೆ ಸಿಂಹಾಸನವನ್ನು ಕೊಡಿಸುವುದಾಗಿ ಕರೆತಂದಿದ್ದಾರೆ. ನಮಗೆ ನಗರದ ರಾಜ್ಯದಲ್ಲಿ ಪಟ್ಟಕಟ್ಟುವುದಾಗಿ

ಪ್ರಲೋಭಮಾಡಿದ್ದಾರೆ. ಹೈದರಲ್ಲೀಖಾನರು ವೀರಾಗ್ರೇಸರರೆಂದು ಕೇಳಿದ್ದೆ. ಇಂತಹ ಕೃತ್ರಿಮ ಸಂಧಾನಮಾಡುವ ಕಳ್ಳರೆಂದು ನಾನು ಸರ್ವಥಾ ಕನಸು ಮನಸುಗಳಲ್ಲೂ ಭಾವಿಸಿರಲಿಲ್ಲ."

ಗುಂಡೋಪಂತರು ಮಧ್ಯೆ ಬಾಯಿಹಾಕಿ "ಇದರಲ್ಲಿ ನಿಮಗರ್ಧ ರಾಜ್ಯ ಯುವರಾಜರಿಗರ್ಧರಾಜ್ಯ" ಎಂದರು.

ಗೋಪಾಲನಾಯಕರ ಕೋಪವು ಇಮ್ಮಡಿಯಾಯಿತು."ಮುಚ್ಚಿರಿ, ಬಾಯಿ ಮುಚ್ಚಿರಿ. ನೀವು ಬ್ರಾಹ್ಮಣರು. ಬೇರೆಯವರಾಗಿದ್ದರೆ ನಾಲಿಗೆ ಯನ್ನು ಸೀಳಿಸುತ್ತಿದ್ದೆ. ಈ ಮುಪ್ಪಿನ ವಯಸ್ಸಿನಲ್ಲಿ ವೀರಾಧಿವೀರರು ಮೆಚ್ಚುವಂಥಾ ಯುದ್ಧ, ಧರ್ಮಾತ್ಮರು ಮೆಚ್ಚುವಂಥಾ ಕೀರ್ತಿ, ಇವೆರಡು ಹೊರತಾಗಿ ಮತ್ತಾವುದೂ ನನ್ನ ಮನಸ್ಸಿನ ಮುಂದೆ ಸುಳಿಯದು.

ಪಂತರವರೇ ಕೇಳಿರಿ, ನಿಮಗೆ ಎರಡು ಮಾತುಗಳನ್ನು ಹೇಳು ತ್ತೇನೆ. ವೇದವೇದಾಂಗ ಪಾರಂಗತರಾದ ತೇಜಸ್ವಿಗಳಾದ ನಿಮ್ಮಂತಹ ಬ್ರಾಹ್ಮಣರು ಈ ರಾಜಕಾರಣಗಳಿಗೆ ಇಳಿಯಬಹುದೇ ! ಅದರಲ್ಲಿಯೂ ಮುಸಲ್ಮಾನನ ದೂತರಾಗಿ ಬಂದಿದ್ದೀರಿ. ನಿಮಗೆ ಮೊದಲು ಶಿಕ್ಷೆಯನ್ನು ವಿಧಿಸಬೇಕು. ನೀವು ಬಂದಿರುವುದು ಪಾಪಕಾರ್ಯ.

ಎರಡನೆಯ ಮಾತು ಯುವರಾಜರದು. ರಾಜಾಧಿರಾಜ ಬಸಪ್ಪ ನಾಯಕರ ಔರಸಪುತ್ರರಾದ ಚೆನ್ನಬಸಪ್ಪನಾಯಕರು ವಿಧರ್ಮೀಯ ನಾದ ಹೈದರಲ್ಲೀಖಾನನಿಗೆ ಶರಣಾಗತರಾದುದು ಅಪರಾಧ. ಶಿವಪ್ಪ ನಾಯಕರ ಸಿಸ್ತಿನಂತೆ ಯುವರಾಜರು ಶಿಕ್ಷಾರ್ಹರಾಗಿದ್ದಾರೆ.

ಮೂರನೆಯ ಮಾತು ನನ್ನ ಮಾತು. ಯುದ್ಧವು ಪ್ರಾಪ್ತವಾಗಿರು ವಾಗ ಸಂಧಾನವೆಂಬುದು ಅಧರ್ಮ. ಅದರಲ್ಲಿಯೂ ವಿಧರ್ಮೀಯನಾದ ಹೈದರಲ್ಲೀಖಾನನೊಡನೆ ಸ್ನೇಹದಮಾತು ದೇಶದ್ರೋಹ. ಧರ್ಮ ದ್ರೋಹ. ನನಗೆ ಯುದ್ಧವೆಂದರೆ ಮಹಾಪ್ರೀತಿ. ಹೈದರಲ್ಲೀಖಾನನು ಶೂರಾಗ್ರೇಸರನೆಂದು ಬಲ್ಲೆ. ಅವನೊಡನೆಯೇ ಯುದ್ಧಮಾಡಬೇಕು. ಅದರಿಂದ ಅಜರಾಮರವಾದ ಕೀರ್ತಿ. ಯುದ್ಧದಲ್ಲಿ ಮರಣ ಹೊಂದಿದರೆ

ವೀರಸ್ವರ್ಗ. ಬ್ರಾಹ್ಮಣೋತ್ತಮರೇ ನೀವೇ ಹೇಳಿರಿ. ನಿಮ್ಮ ಶಾಸ್ತ್ರ ಗಳಲ್ಲಿ ಏನು ಹೇಳಿದೆ. ನಾನು ಹೇಳಿದಂತೆ ಹೇಳಿದೆಯೋ ನೀವು ಹೇಳು ತ್ತಿರುವಂತೆ ಹೇಳಿದೆಯೋ! ಈ ಹೀನ ಸೇವೆಯನ್ನು ಬಿಟ್ಟು ನಮ್ಮ ರಾಜ್ಯದಲ್ಲಿರಿ. ನಿಮಗೆ ಮಾನ್ಯಗಳನ್ನು ಕೊಡಿಸುತ್ತೇನೆ. ಇಲ್ಲದಿದ್ದರೆ ನಮ್ಮ ರಾಜ್ಯವನ್ನು ಬಿಟ್ಟು ಓಡಿಹೋಗಿರಿ. ನಿಮ್ಮಂಥಾ ಧರ್ಮದ್ರೋಹಿ ಗಳು, ಪಾಪಿಗಳು ಈ ರಾಜ್ಯದಲ್ಲಿರಕೂಡದು."

ಗುಂಡೋಪಂತರೂ, ರಾಮಣ್ಣನವರೂ ಕ್ಷಮಾಪಣೆಯನ್ನು ಬೇಡಿ ಅರಮನೆಯಿಂದ ಹಿಂತಿರುಗಿದರು. ಮಾರನೆಯ ದಿನ ನಗರದ ರಾಜ್ಯ ದಲ್ಲಿ ಅವರನ್ನು ಯಾರೂ ಕಾಣಲಿಲ್ಲ.

ವಾಚಕರು ಭೈರವಿಯ ವೃತ್ತಾಂತವೇನೆಂದು ಆತುರರಾಗಿರ ಬಹುದು. ನಾವು ಆ ಕಥೆಯನ್ನು ಮುಂದು ಮುಂದಕ್ಕೆ ಕೊಂಡುಹೋಗಿ ಬೇಗ ಭೈರವಿಯನ್ನು ಬಿದನೂರಿನ ಅರಮನೆಗೆ ಮುಟ್ಟಿಸಲು ಆತುರ ರಾಗಿದ್ದೇವೆ.

ರಾತ್ರಿಯೇ ಭೈರವಿಯು ಗುಂಡೋಪಂತರನ್ನೂ ರಾಮಣ್ಣನವರನ್ನೂ ಸಂಧಿಸಿ ಮಾತುಕಥೆಗಳನ್ನೆಲ್ಲಾ ತಿಳಿದುಕೊಂಡಳು. ತಾನು ಹೈದರಲ್ಲೀ ಖಾನರ ಶಿಬಿರಕ್ಕೆ ಹಿಂತಿರುಗುವುದಿಲ್ಲವೆಂದೂ ಇಲ್ಲಿಯೇ ಇದ್ದು ಭೇದೋ ಪಾಯವನ್ನು ಸಾಧಿಸುತ್ತೇನೆಂದೂ, ಉಪಾಯಗಳೆಲ್ಲವೂ ವಿಫಲವಾದರೆ ತಂತ್ರದಿಂದ ಮಹಾರಾಣಿಯವರನ್ನು ಕೊಲೆಮಾಡಿಸುವುದಾಗಿಯೂ, ಆಗ ಯುದ್ಧವಿಲ್ಲದೆಯೇ ನಗರವು ಹೈದರನ ವಶವಾಗುತ್ತದೆಂದೂ ಹೇಳಿ ಕಳುಹಿಸಿದಳು. ರಾಜಕಾರಣಿಗಳಿಗೆ ಆ ಮಾತುಗಳು ಸಮಾಧಾನಕರ ವಾಗಿದ್ದವು. ಮಾರನೆಯದಿನ ಪ್ರಾತಃಕಾಲ ಭೈರವಿಯು ಅರಮನೆಗೆ ಹೋಗಿ ಗೋಪಾಲನಾಯಕರ ಭೇಟಿಮಾಡಿದಳು.

ಭೈರವಿಗೆ ಗೋಪಾಲನಾಯಕರ ಪರಿಚಯವಿತ್ತು. ಗೋಪಾಲ ನಾಯಕರು ಭೈರವಿಯನ್ನು ಕುರಿತು, "ಭೈರವಿ, ಬಹು ದಿವಸಗಳ ಮೇಲೆ ದರ್ಶನಕೊಟ್ಟಿದ್ದೀಯೆ. ಏನು ಸಮಾಚಾರ" ಎಂದು ಕೇಳಿದರು. ಭೈರವಿಯು ಹಸನ್ಮುಖದಿಂದ ನಗುತ್ತಾ "ನಾಯಕರವರೇ, ಸಮಾಚಾರ

ವೇನಿದೆ ? ಎಲ್ಲಿಯೂ ಯುದ್ಧದ ಸಮಾಚಾರಗಳೇ ಕೇಳಿಬರುತ್ತಿವೆ" ಎಂದಳು. ಗೋಪಾಲನಾಯಕರು "ಹೌದು ಭೈರವಿತಾಯಿ, ಯುದ್ಧವು ಬಂದೇಬಿಟ್ಟದೆ. ನಾನು ಸಾಯುವುದರೊಳಗಾಗಿ ಇಂತಹ ಒಂದು ಮಹಾ ಯುದ್ಧವನ್ನು ನೋಡಬೇಕೆಂದಿದ್ದೆ. ಅದು ಬಂದೇಬಿಟ್ಟದೆ. ನಮ್ಮಗಳ ಪುಣ್ಯ. ಬಿದನೂರಿನ ಅರಮನೆಯಲ್ಲಿ ಯುದ್ಧದವಾರ್ತೆಯು ಹೇಗೆ ನಡೆಯುತ್ತಿದೆ? ಹೈದರನ ಶಿಬಿರದ ಸಮಾಚಾರಗಳೇನಾದರೂ ಬರುತ್ತಿವೆಯೋ" ಎಂದು ಕೇಳಿದರು. ಭೈರವಿಯು ತಾತ್ಸಾರ ಧ್ವನಿಯಿಂದ, "ನಾಯಕರೇ, ಬಿದನೂರಿನ ಅರಮನೆಯ ಮಾತು ನನಗೇತಕ್ಕೆ? ನಾನು ಅತ್ತಕಡೆಗೆ ತಿರುಗಿನೋಡಿ ಎಷ್ಟೋ ಕಾಲವಾಯಿತು. ರಾಣಿಯವರಿಗೂ ನನಗೂ ಬದ್ಧವೈರ. ಯುವರಾಜರು ಹೈದರನ ಮಹಾಸೈನ್ಯದ ಸಹಾಯವನ್ನು ಕರೆದುಕೊಂಡುಬಂದು ರಾಣಿಯವರಿಗೆ ತಕ್ಕಶಾಸ್ತಿ ಮಾಡಿಸುತ್ತಾರೆಂದು ಬಿದನೂರಿನಲ್ಲೆಲ್ಲಾ ಮಾತನಾಡಿಕೊಳ್ಳುತ್ತಾರೆ. ಅದರಿಂದ ನನಗೆ ಸ್ವಲ್ಪ ಸಂತೋಷವಾಗಿದೆ. ಹಾಗೆಯೇ ರಾಮಪುರದಲ್ಲಿ ಯುದ್ಧದ ಬಿಸಿಯು ಹೇಗಿದೆಯೋ ನೋಡಿ ಹೋಗೋಣವೆಂದು ಬಂದೆ" ಎಂದಳು. ಗೋಪಾಲನಾಯಕರು "ಭೈರವಿ, ರಾಮಪುರದಲ್ಲಿ ನೋಡತಕ್ಕದ್ದೇನಿದೆ? ರಾಮಪುರವು ಒಂದು ಪಾಳೆಯಪಟ್ಟೆಂದು ಭಾವಿಸಬೇಡ. ಹತ್ತುಸಾವಿರ ಪ್ರಚಂಡ ಯೋಧರ ಶಿಬಿರವೆಂದು ತಿಳಿ. ಯಾವಾಗಲೂ ಹತ್ತುಸಾವಿರ ಮಂದಿ ನಮ್ಮ ಸೈನಿಕರೊಡನೆ ನಾನು ಯುದ್ಧಕ್ಕೆ ಸಿದ್ಧ. ಹೈದರನ ಸೈನ್ಯವು ಐವತ್ತು ಸಹಸ್ರವಿದೆಯೆಂದು ಕೇಳಿದ್ದೇನೆ. ಹತ್ತುಸಾವಿರವೆಂದರೆ ಅದರಲ್ಲಿ ಒಂದೂ ಕಳಪೆಯಿಲ್ಲ. ಶತ್ರುಗಳ ಸೈನ್ಯದಲ್ಲಿ ಹತ್ತು ಮಂದಿಯನ್ನು ಒಬ್ಬನು ಲೀಲಾಜಾಲವಾಗಿ ತುಂಡರಿಸಬಲ್ಲ" ಎಂದು ಉದ್ವೇಗದಿಂದ ಗೋಪಾಲನಾಯಕರು ನುಡಿದರು.

ಭೈರವಿಯು ನಗುತ್ತ ವೈಯ್ಯಾರದಿಂದ ನಾಯಕರ ಸಮೀಪಕ್ಕೆ ಸರಿದು ಅವರ ಕೈಯನ್ನು ಹಿಡಿದುಕೊಂಡು, "ನಾಯಕರೇ, ನೀವು ಮಹಾವೀರರೆಂದು ಲೋಕಪ್ರಸಿದ್ಧವಾಗಿದೆ. ಮಹಾರಾಣಿಯ ಮೇಲೆ ನಿಮಗೆ ಆಗ್ರಹವೆಂದು ಮೊದಲೇ ನೀವು ಹೇಳಿರಲಿಲ್ಲವೇ ? ತಾವು

ಹೈದರನ ಐವತ್ತುಸಹಸ್ರ ಸೈನ್ಯವನ್ನಾದರೂ ಎದುರಿಸಬಲ್ಲಿರಿ. ಆದರೆ ಯುವರಾಜರ ಎದುರಿನಲ್ಲಿ ಕತ್ತಿಯನ್ನು ಹಿಡಿದು ನಿಲ್ಲಬಲ್ಲಿರಾ?" ಎಂದಳು. ನಾಯಕರು ತಲೆದೂಗುತ್ತಾ "ಹೌದು ಭೈರವಿ, ಇದೊಂದು ಧರ್ಮಸಂಕಟ. ನಗರದ ರಾಜ್ಯದಮೇಲೆ ಮುಸಲ್ಮಾನ್ ದಳಪತಿಯು ದಂಡೆತ್ತಿ ಬಂದಿದ್ದಾನೆ. ನಾವು ಅವನನ್ನು ಎದುರಿಸಿ ಯುದ್ಧಮಾಡಿ ಸದೆ ಬಡಿಯುವುದು ಧರ್ಮವಿಹಿತವಾದದ್ದು. ಒಂದು ಹೆಜ್ಜೆ ಹಿಂದಿಟ್ಟರೂ ಮುಂದಿನ ಚರಿತ್ರಕಾರರು ನಮ್ಮನ್ನು ಹೇಯವಾಗಿ ನಿಂದಿಸುತ್ತಾರೆ. ಆದರೆ ಯುವರಾಜರೇ ಸ್ವಯಂ ಯುದ್ಧಕ್ಕೆ ನಿಂತರೆ ಅವರಮೇಲೆ ಕತ್ತಿ ಎತ್ತುವುದೆಂತು? ಒಂದುಕಡೆ ಧರ್ಮಭ್ರಷ್ಟಳಾದ ರಾಣಿ ಮತ್ತೊಂದು ಕಡೆ ಸ್ವದೇಶ ವಿದ್ರೋಹಿಯಾದ ಯುವರಾಜ. ಈ ಪರಿಸ್ಥಿತಿಯನ್ನು ನೋಡಿದರೆ ಹೃದಯವು ಝಲ್ಲೆಂದು ಹಾರುತ್ತದೆ. ಶಿವಪ್ಪನಾಯಕರ ರಾಜ್ಯಕ್ಕೆ ಅಂತ್ಯಕಾಲವು ಸಮೀಪಿಸಿದೆಯೆಂದು ತೋರುತ್ತದೆ. ನಾವೇನು ಮಾಡುವುದು? ದೈವೇಚ್ಛೆ" ಎಂದು ನಿಟ್ಟುಸುರುಬಿಟ್ಟರು. ಭೈರವಿಯು, "ನಾಯಕರೇ, ಹಾಗಾದರೆ ನೀವು ಯುದ್ಧಮಾಡುವುದಿಲ್ಲವೇನು?" ಎಂದು ಕೇಳಿದಳು. ಗೋಪಾಲನಾಯಕರು ಉದ್ವಿಗ್ನರಾಗಿ "ಭೈರವಿ ಯಾರು ಯುದ್ಧಮಾಡುವುದಿಲ್ಲ! ಈ ನಗರದ ರಾಜ್ಯಗಳಲ್ಲಿ ಯಾವನಾದರೊಬ್ಬ ವೀರನು ಯುದ್ಧಮಾಡುವುದಿಲ್ಲವೆಂದು ಹೇಳಿದರೆ ಅವನನ್ನು ಕತ್ತರಿಸಿ ತುಂಡುತುಂಡುಮಾಡಿ ರಣಕ್ಷೇತ್ರದಲ್ಲಿ ಬಲಿಹಾಕುವೆನು. ಭವಾನೀರಾಣಿ ಯವರಲ್ಲಿಪ್ರಮಾಣಮಾಡಿಕೊಟ್ಟಿರುವೆನು. ಈಬಾರಿ ಹೈದರನು ಹಿಂತಿರುಗಿ ಹೋದರೂ ಬಿಡುವುದಿಲ್ಲ. ಶ್ರೀರಂಗಪಟ್ಟಣದವರೆಗೆ ಅವನ ಬೆನ್ನು ಹತ್ತಿ ಹೋಗಿ ಶ್ರೀರಂಗಪಟ್ಟಣದ ಕೋಟೆಯನ್ನು ಪುಡಿಪುಡಿಮಾಡಿ ಅವನನ್ನು ಕತ್ತರಿಸಿ ಹಾಕಿ ಆ ಕತ್ತಿಯನ್ನು ಕಾವೇರಿಯ ಪವಿತ್ರಜಲದಲ್ಲಿ ತೊಳೆದು ಹಿಂತಿರುಗುವೆನು. ಯುದ್ಧವೆಂದಮೇಲೆ ಯುದ್ಧ. ಅದನ್ನು ಯಾರೂ ತಪ್ಪಿಸಲಾರರು. ದಶದಿಕ್ಕುಗಳನ್ನು ಜಯಿಸಿದ ರಾವಣಾಸುರನು ಕಾರ್ತವೀರ್ಯಾರ್ಜುನನ ಮುಂದೆ ನೊಳಕಾಲೂರಿ ತಲೆಬಾಗಿ ಬಂದಿ ಯಾದಂತೆ ಅತ್ತ ಗೋದಾವರಿಯವರೆಗೂ ಇತ್ತ ತಾಮ್ರಪರ್ಣಿಯ

ವರೆಗೂ ದಿಗ್ವಿಜಯಮಾಡಿ ಬಂದಿರುವ ಹೈದರನು ಈ ಪಶ್ಚಿಮಘಟ್ಟದ ಸೆರೆಮನೆಯಲ್ಲಿ ಕೊಳೆಯುವುದನ್ನು ನೀನೇ ನೋಡುವೆ" ಎಂದರು. ಭೈರವಿಯು "ಹೌದು ನಾಯಕರೇ, ನೀವು ಅಂತಹ ಪರಾಕ್ರಮಿಗಳೇ ಹೌದು. ಅದನ್ನು ಹೈದರಲ್ಲೀಖಾನನು ಬಲ್ಲನು. ಅದಕ್ಕಾಗಿಯೇ ಯುವರಾಜರನ್ನು ಕರೆತಂದಿದ್ದಾನೆ. ರಣಕ್ಷೇತ್ರದಲ್ಲಿ ಭೀಷ್ಮಾಚಾರ್ಯರ ಮುಂದೆ ಶಿಖಂಡಿಯನ್ನು ನಿಲ್ಲಿಸಿದಂತೆ ಆ ಯುವರಾಜರನ್ನು ನಿಮ್ಮ ಮುಂದೆ ಯುದ್ಧಕ್ಕೆ ನಿಲ್ಲಿಸುತ್ತಾನೆ. ಆಗ ನೀವೇನು ಮಾಡುವಿರಿ?" ಎಂದು ಕೇಳಿದಳು. ಗೋಪಾಲನಾಯಕರು "ಹೌದು, ಅದು ದ್ವಾಪರಯುಗದ ಮಾತು. ಕುರುಕ್ಷೇತ್ರದ ಮಾತು. ಇದು ಕಲಿಯುಗ. ಇಂದಿನ ಯುದ್ಧದ ನೀತಿಯೇ ಬೇರೆ. ಯುವರಾಜನನ್ನು ಅರಘಳಿಗೆಯಲ್ಲಿ ಸೆರೆಹಿಡಿದು ರಾಮಪುರದ ಅರಮನೆಯಲ್ಲಿ ಬಂಧಿಸುತ್ತೇನೆ. ನಾನು ಹೈದರನೊಡನೆ ಯುದ್ಧಮಾಡಿ ಈ ರಣಕ್ಷೇತ್ರದಲ್ಲಿ ಅವನನ್ನು ಕೊಲ್ಲುತ್ತೇನೆ. ಆಗ ಗೋದಾವರಿಯಿಂದ ತಾಮ್ರಪರ್ಣಿಯವರೆಗಿನ ದಕ್ಷಿಣಾಪಥವೆಲ್ಲವೂ ನಗರದ ಅಧೀನವಾಗುತ್ತದೆ. ಅದು ಸದಾಶಿವರಾಯರ ಪುಣ್ಯದಫಲ. ಶಿವಪ್ಪನಾಯಕರ ದಾನಧರ್ಮಗಳ ಫಲ. ನೀನೇ ನೋಡುವೆಯಂತೆ, ಭೈರವಿ! ಈ ಯುದ್ಧವು ಏನಾಗುವುದೆಂಬುದನ್ನು" ಎಂದು ಗೋಪಾಲ ನಾಯಕರು ಉತ್ತೇಜಿತರಾಗಿ ಹೇಳಿದರು.

ಭೈರವಿಯು ಗೋಪಾಲನಾಯಕರನ್ನು ವಂದಿಸಿ ಬೀಳ್ಕೊಂಡು ಹೊರಟಳು. ಊರುಹೊರಗಿನ ಪಾಳುಮಂಟಪದಲ್ಲಿ ಕುಳಿತು ಆಲೋಚಿಸ ತೊಡಗಿದಳು. ನಾನೇನು ಮಾಡಿದೆ? ನನಗೆ ಆಗಬೇಕಾದುದೇನು? ರಾಣಿಯ ಮೇಲಿನ ಕ್ರೋಧವನ್ನು ತೀರಿಸಿಕೊಳ್ಳಬೇಕು ಅಷ್ಟೆ. ಅದನ್ನು ನಾನೊಬ್ಬಳೇ ಸಾಧಿಸಬಲ್ಲೆ. ಈ ಸೈನ್ಯಗಳೇಕೆ? ಈ ಮಹಾಯುದ್ಧ ವೇಕೆ? ಎಂದು ಚಿಂತಿಸುತ್ತಿದ್ದಳು. ಅವಳ ಮನಸ್ಸಿನ ಮೇಲೆ ಯೋಚನಾ ತರಂಗಗಳು ಮಹಾಸಮುದ್ರದ ಅಲೆಗಳಂತೆ ಎದ್ದು ಎದ್ದು ಬೀಳುತ್ತಿದ್ದವು. ತನ್ನ ಬಾಲ್ಯವನ್ನು ನೆನೆದುಕೊಂಡಳು. ರಾಣಿ ಚೆಲುವಮ್ಮಣ್ಣಿಯು ತನ್ನಲ್ಲಿ ತೋರುತ್ತಿದ್ದ ಸ್ನೇಹಸೌಹಾರ್ದಗಳನ್ನು ನೆನೆದುಕೊಂಡಳು.

ಅವಳ ಕಣ್ಣುಗಳು ಕಂಬನಿ ತುಂಬಿದವು. ನಾನೇಕೆ ಅರಮನೆಯನ್ನು ಬಿಟ್ಟೆ! ರಾಣಿಯ ಸಾನ್ನಿಧ್ಯವನ್ನೇಕೆ ಪರಿತ್ಯಾಗಮಾಡಿದೆ? ರಾಣಿಯದೇನುತಪ್ಪು? ಎಂಬ ಆಲೋಚನೆಗಳು ಬಂದು, "ಅಯ್ಯೋ! ನಾನು ಅರಮನೆಯಲ್ಲಿ ಇರಲಾಗುತ್ತಿದ್ದಿತೇ! ರಾಣಿಯ ದುಷ್ಕೃತ್ಯಗಳನ್ನೆಲ್ಲಾ ಸಹಭಾಗಿನಿಯಾಗಿದ್ದು ಸಹಿಸುವುದು ನನ್ನಿಂದ ಸಾಧ್ಯವೇ? ಅವಳನ್ನು ಪಾಪಿಯೆಂದು ದೂಷಿಸುವುದಕ್ಕೆ ನಾನಾರು? ನನ್ನ ಜೀವನವು ಪವಿತ್ರವಾದುದೇನು?" ಎಂದು ನಿಟ್ಟುಸಿರುಬಿಟ್ಟಳು. ಹಾಗೆಯೇ ನೆಲದ ಮೇಲೆ ಉರುಳಿದಳು ಪುನಃ ಪ್ರಗಾಢ ಯೋಚನೆಗಳು ಬರಲಾರಂಭವಾದವು. ಅಯ್ಯೋ! ಆ ವಿರೂಪಾಕ್ಷನು ಎಂತಹ ಒಳ್ಳೆಯವ. ಎಂಥಾ ವೀರಪುರುಷ. ಅವನಗತಿ ಏನಾಯಿತು? ಇದಕ್ಕೆಲ್ಲಾ ಕಾರಣ ಭೂತರಾರು? ನಾನೇ ಅಥವಾ ರಾಣಿ ಚೆಲುವಮ್ಮಣ್ಣಿಯೇ? ನಾನು ಈ ಭೈರವಿಯ ವೇಷವನ್ನು ಹೊತ್ತಿದ್ದೇನೆ. ಅದು ನನಗೆ ದುಃಖಕರವಾಗಿದೆಯೇನು? ಇಲ್ಲ. ಎಷ್ಟೋ ಸಂತೋಷಕರವಾಗಿದೆ. ಈಗ ನಾನು ಯಾರಿಗೂ ಅಂಜುವುದಿಲ್ಲ. ಯಾರೂ ನನ್ನನ್ನು ಅಂಜಿಸಲಾರರು. ಪ್ರೀತಿ ಸ್ನೇಹ ಇವುಗಳೆಲ್ಲವೂ ನನ್ನ ಮನಸ್ಸಿನಲ್ಲಿ ಇಲ್ಲವೇ ಇಲ್ಲ. ಕ್ರೋಧ ದ್ವೇಷಗಳು ಮಾತ್ರ ಜ್ವಲಿಸುತ್ತಲಿದೆ. ಈ ದಕ್ಷಿಣಾಪಥದಲ್ಲಿ ಹೈದರನಿಗಿಂತಲೂ ಮಹಾಸೇನಾಧಿಪತಿಯು ಮತ್ತಾರಿರುವನು! ಅವನನ್ನು ಎಬ್ಬಿಸಿತಂದು ನಗರದಮೇಲೆ ಎತ್ತಿ ಕಟ್ಟಿದ್ದೇನೆ. ಯುದ್ಧವೇನೋ ಆಗಿಯೇ ಆಗುತ್ತದೆ. ಯಾರು ಗೆದ್ದರೇನು ಯಾರು ಸೋತರೇನು! ಆದರೂ ರಾಣಿಯ ಮೇಲೆ ಕ್ರೋಧವು ಅಡಗುವುದಿಲ್ಲ. ನಗರವೇನೋ ವಿಧ್ವಂಸವಾಗಿ ಹೋಗುತ್ತದೆ. ಅದಕ್ಕೆ ನಾನು ಕಾರಣಕರ್ತಳೇನು? ಅಲ್ಲವೇ ಅಲ್ಲ. ಮಂತ್ರಿ ರಾಮಕೃಷ್ಣರ ಬಂಧನ. ಭವಾನೀರಾಣಿಯವರ ಮೇಲೆ ತೋರಿದ ದೌರ್ಜನ್ಯ. ಮಹಾರಾಜ ಬಸಪ್ಪನಾಯಕರ ಮರಣ. ಯುವರಾಜನ ಕೊಲೆ ಇವೆಲ್ಲವೂ ಮಹಾಪಾತಕಗಳಲ್ಲವೇನು? ಆ ಪಾಪಗಳಿಂದ ನಗರವು ಧ್ವಂಸವಾಗುತ್ತದೆ. ಬಿದನೂರು ಬೂದಿಯಾಗುತ್ತದೆ. ನನ್ನ ಅಪರಾಧವೇನಿದೆ? ರಾಣಿ ಚೆಲುವಮ್ಮಣ್ಣಿಯ ಅಪರಾಧ

ವಿದೆ. ಪಾಪಿ! ಭಗವಂತನು ಅವಳ ಶಿಕ್ಷಣೆಗೆ ಆರಂಭಿಸಿದ್ದಾನೆ. ಎಂಬ ಮಾತುಗಳು ಭೈರವಿಯ ಬಾಯಿಂದ ಸ್ಖಲಿತವಾಣಿಯಿಂದ ಬಿಸಿಯುಸಿರಿನೊಡನೆ ಹೊರಡುತ್ತಿದ್ದವು. ಭೈರವಿಯು ಉದ್ವೇಗದಿಂದ ಚಿಟ್ಟನೆ ಚೀರಿ ಮೂರ್ಛಿತಳಾಗಿ ಬಿದ್ದಳು. ಆ ಮಹಾರಣ್ಯದಲ್ಲಿ ಅವಳ ರೋದನವನ್ನು ಕೇಳುವವರಾರು ?

---

## ೩೦

## ಯುದ್ಧದ ಸಡಗರ

ಇಂದು ಬಿದನೂರಿನಲ್ಲಿ ಬಲುಗದ್ದಲ. ಇಂಥಾ ಗದ್ದಲವು ಎಂದೂ ನಗರದ ಸೀಮೆಯಲ್ಲಿ ಹುಟ್ಟಿರಲೇ ಇಲ್ಲ. ಎಲ್ಲೆಲ್ಲಿಯೂ ಯುದ್ಧದ ಸಡಗರಗಳು ನಡೆಯುತ್ತಿವೆ. ಸೈನಿಕರು ಉತ್ಸಾಹದಿಂದ ಓಡಿಯಾಡುತ್ತಾರೆ. ದೇವಾಲಯಗಳಲ್ಲೆಲ್ಲಾ ಪೂಜೆಪುನಸ್ಕಾರಗಳು, ದೀಪಾರಾಧನೆಗಳು ನಡೆಯುತ್ತಿವೆ. ಅರಮನೆಯು ಎಂದಿಗಿಂತಲೂ ಅಲಂಕೃತವಾಗಿ ಶೋಭಾವಹವಾಗಿದೆ. ಅರಮನೆಯಲ್ಲಿ ವೈದಿಕಬ್ರಾಹ್ಮಣರು ವಿಶೇಷ ಜಪತಪಗಳನ್ನೂ ಶಾಂತಿಹೋಮಗಳನ್ನೂ ನಡೆಸುತ್ತಿದ್ದಾರೆ. ಇಂಥಾ ಅಪೂರ್ವ ಶೋಭೆಯು ಬಿದನೂರಿನಲ್ಲಿ ಎಂದೂ ಇರಲಿಲ್ಲ.

ಮಲ್ಲಿಕಾರ್ಜುನಕ್ಷೇತ್ರದಲ್ಲಿ ಹಿಂದಿನಂತೆ ಭಗವದಾರಾಧನೆಯು ನಡೆಯುತ್ತಿದೆ. ದಾನಧರ್ಮಗಳು ವಿಶೇಷವಾಗಿ ಜರಗುತ್ತಿದೆ. ದೇಶವಿದೇಶಗಳಿಂದ ಬ್ರಾಹ್ಮಣೋತ್ತಮರನ್ನು ಕರೆತರಿಸಿ ಅಭಿರಾಮಸ್ವಾಮಿಯು ನಗರದ ವಿಜಯಕ್ಕಾಗಿ ಸಹಸ್ರ ಚಂಡೀಹೋಮವನ್ನು ಪ್ರಾರಂಭಿಸಿದ್ದಾನೆ. ಇಂದು ಆ ಮಹಾಯಾಗದ ಸಂಕಲ್ಪದ ದಿನ. ಬ್ರಾಹ್ಮಣರೆಲ್ಲರೂ ಅರಿಶಿನಬಣ್ಣದ ಹೊಸಬಟ್ಟೆಗಳನ್ನು ಸ್ವೀಕರಿಸಿ ದೀಕ್ಷೆಯನ್ನು ಕೈಗೊಂಡು ಮಹಾಯಾಗಕ್ಕೆ ಅಭಿರಾಮಸ್ವಾಮಿಯಿಂದ ವರ್ಣಣವನ್ನು ಸ್ವೀಕರಿಸಿ ಯಾಗಶಾಲೆಯಲ್ಲಿ ಕುಳಿತಿದ್ದಾರೆ. ಅಭಿರಾಮ

ಸ್ವಾಮಿಯು ದೀಕ್ಷಾವಸ್ತ್ರಗಳನ್ನುಟ್ಟು ಆಸನದಮೇಲೆ ಸಂಕಲ್ಪಕ್ಕೆ ಸಿದ್ಧನಾಗಿ ಕುಳಿತಿದ್ದಾನೆ. ಈ ಸಮಯಕ್ಕೆ ಸರಿಯಾಗಿ ಮಂಗಳವಾದ್ಯಗಳು ಭೋರ್ಗರೆಯುತ್ತಿರಲು ಮಹಾರಾಣಿ ಚೆಲುವಮ್ಮಣ್ಣಿಯು ಯಾಗಶಾಲೆಗೆ ಬಿಜಯಮಾಡಿದಳು. ಅಭಿರಾಮಸ್ವಾಮಿಗಳ ಎದುರಿನಲ್ಲಿ ಸಿದ್ಧವಾಗಿದ್ದ ಪೀಠದಮೇಲೆ ನಿಂತುಕೊಂಡಳು. ಪುರೋಹಿತರು ಸಂಕಲ್ಪಮಾಡಿಸಿ ಬ್ರಾಹ್ಮಣರಿಗೆಲ್ಲಾ ವರುಣವನ್ನು ಕೊಡಿಸಿದರು. ಅಭಿರಾಮಸ್ವಾಮಿಯು ಆ ಬ್ರಾಹ್ಮಣ ವೃಂದದ ಮಧ್ಯದಲ್ಲಿ ಸಹಸ್ರ ಚಂಡೀಹೋಮಕ್ಕೆ ಸಂಕಲ್ಪ ಮಾಡಿ "ನಗರದ ರಾಜ್ಯದ ವಿಜಯಕ್ಕಾಗಿ ಈ ಸಹಸ್ರ ಚಂಡೀ ಹೋಮವನ್ನು ಸಂಕಲ್ಪಿಸಿದ್ದೇನೆ. ನಗರಕ್ಕೆ ದುರದೃಷ್ಟವಶಾತ್ ಅಪಜಯವಾದರೆ ನಾನು ಈ ಅಗ್ನಿಕುಂಡದಲ್ಲಿ ಪ್ರವೇಶಮಾಡಿ ಮಹಾ ಚಂಡಿಗೆ ಬಲಿಯಾಗುತ್ತೇನೆ" ಎಂದು ಘೋಷಿಸಿದನು ಮಹಾರಾಣಿಯು ಅಭಿರಾಮಸ್ವಾಮಿಗೂ ಬ್ರಾಹ್ಮಣ ವೃಂದವಕ್ಕೂ ನಮಸ್ಕರಿಸಿ ಅರಮನೆಗೆ ತೆರಳಿದಳು. ಅಂದೇ ಬಿದನೂರಿನ ಕೋಟೆಯಲ್ಲಿದ್ದ ಮಂತ್ರಿ ರಾಮಕೃಷ್ಣರ ಅರಮನೆಯು ಸುಣ್ಣಬಣ್ಣಗಳಿಂದಲೂ ತಳಿರುತೋರಣ ಗಳಿಂದಲೂ ಪತಾಕೆಗಳಿಂದಲೂ ಅಲಂಕೃತವಾಗಿದ್ದಿತು. ಆ ಭವನವು ಸೇವಕಸೇವಕಿಯರಿಂದ ನಿಬಿಡವಾಗಿದ್ದಿತು. ನಗರದಲ್ಲೆಲ್ಲಾ ಮಂತ್ರಿ ರಾಮಕೃಷ್ಣರವರು ಬರುತ್ತಾರೆಂದೂ ಅಧಿಕಾರ ಸ್ವೀಕಾರಮಾಡುತ್ತಾ ರೆಂದೂ ಗದ್ದಲವೆದ್ದಿದ್ದಿತು.

ರಾಜಕೀಯ ವರ್ತಮಾನಗಳೇ ಹೀಗೆ. ಅರಮನೆಯಲ್ಲಿ ಹುಟ್ಟುವು ದಕ್ಕೆ ಮುಂಚೆಯೇ ಆ ವರ್ತಮಾನಗಳೆಲ್ಲಾ ಪೇಟೆಗಳಲ್ಲಿ ಬಹಿರಂಗವಾಗಿ ಹೋಗಿರುತ್ತವೆ. ಎಲ್ಲರೂ ಅಂತರಂಗ ಅಂತರಂಗ ಎನ್ನುತ್ತಾರೆ. ಎಂದೂ ಯಾವ ರಾಜಕಾರಣಗಳೂ ಅಂತರಂಗವಾಗಿ ಇರಲೇಇಲ್ಲ.

ಮಂತ್ರಿ ರಾಮಕೃಷ್ಣರವರು ಪರಿವಾರಸಮೇತವಾಗಿ ರಾಜಧಾನಿಗೆ ಯಾವಾಗ ಬಂದರೋ, ಹೇಗೆ ಬಂದರೋ, ಯಾರಿಗೂ ಆ ವಿಷಯಗಳು ಗೊತ್ತಿಲ್ಲ. ಆದರೆ ಮಂತ್ರಿ ರಾಮಕೃಷ್ಣರವರು ರಾಜಧಾನಿಗೆ ಬಂದರು, ಬಂದರು ಎಂಬ ಸಮಾಚಾರವು ರಾಜಧಾನಿಯಲ್ಲೆಲ್ಲಾ ಹರಡಿಹೋಗಿದೆ.

ಬೆಳಗಾಗುತ್ತಲೇ ವೈದಿಕ ಬ್ರಾಹ್ಮಣರು ರಾಮಕೃಷ್ಣರ ಮನೆಗೆ ಬಂದು ಮಂತ್ರಿಗಳ ಭೇಟಿ ಮಾಡಿದರು. ಯಥೋಚಿತ ಯೋಗಕ್ಷೇಮಗಳನ್ನು ಮಾಡಿಕೊಂಡು ಹೋದರು. ಅವರೇ ಮೊಟ್ಟಮೊದಲು ರಾಜಧಾನಿಯಲ್ಲಿ ಮಂತ್ರಿಗಳ ಭೇಟಿಮಾಡಿದವರು. ಮಧ್ಯಾಹ್ನಾತ್ಪರ ಅಧಿಕಾರಿಗಳು, ಸರ್ದಾರರುಗಳೂ ಬಂದು ಮಂತ್ರಿಗಳ ಭೇಟಿಮಾಡಿ ಕುಶಲಪ್ರಶ್ನೆಗಳನ್ನು ಮಾಡಿಕೊಂಡು ಹೊರಟು ಹೋದರು. ಮಂತ್ರಿಗಳು ನಿರ್ಬಂಧದಲ್ಲಿ ಇಡಲ್ಪಟ್ಟಿದ್ದ ವಿಚಾರವನ್ನಾಗಲೀ ಹೇಗೆ ಯಾವ ಕಾರಣದಿಂದ ಇಲ್ಲಿಗೆ ಕರೆತರಲ್ಪಟ್ಟರೆಂಬ ವಿಚಾರವನ್ನಾಗಲೀ ಎತ್ತಲು ಯಾರಿಗೂ ಧೈರ್ಯವಿಲ್ಲ. ಯುದ್ಧದ ವಿಚಾರಗಳನ್ನು ಮಂತ್ರಿಗಳೊಡನೆ ಪ್ರಸ್ತಾಪಿಸಲು ಯಾರಿಗೂ ಮುಖವಿಲ್ಲ. ಹೀಗೆ ದಿನವೆಲ್ಲವೂ ದೊಡ್ಡ ಮನುಷ್ಯರುಗಳ, ಸರ್ದಾರರುಗಳ ಭೇಟಿಯ ಸಮಾರಂಭಗಳಲ್ಲಿಯೇ ಕಳೆಯಿತು. ಮಾರನೆಯದಿನ ಪ್ರಾತಃಕಾಲ ಮಂತ್ರಿಗಳು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು, ವಿರೂಪಾಕ್ಷ ಕ್ಷೇತ್ರದಲ್ಲಿ ನಡೆಯುತ್ತಿದ್ದ ಚಂಡೀಶಾಲೆಗೆ ಹೋಗಿ ದೀಕ್ಷೆಯಲ್ಲಿ ಕುಳಿತಿದ್ದ ಅಭಿರಾಮಸ್ವಾಮಿಗಳ ದರ್ಶನವನ್ನು ತೆಗೆದುಕೊಂಡರು. ಅಲ್ಲಿ ನೆರೆದಿದ್ದ ಬ್ರಾಹ್ಮಣವೃಂದವೆಲ್ಲವೂ ಜಯಕಾರ ಮಾಡಿತು. ಮಂತ್ರಿ ರಾಮಕೃಷ್ಣರು ಅಭಿರಾಮಸ್ವಾಮಿಯ ದರ್ಶನಮಾಡುತ್ತಲೇ ಅವರು ಕುಶಲಪ್ರಶ್ನೆಯನ್ನುಮಾಡಿ ತಾವು ನಡೆಸುತ್ತಿರುವ ಚಂಡೀಯಾಗದ ಉದ್ದೇಶವನ್ನು ವಿವರಿಸಿದರು. ಅಲ್ಲದೆ ಮಂತ್ರಿಗಳು ಯಾಗವನ್ನು ರಕ್ಷಿಸಬೇಕೆಂದು ಪ್ರಾರ್ಥನೆ ಮಾಡಿದರು. ಮಂತ್ರಿಗಳು ಮೌನದಿಂದ ನಮಸ್ಕರಿಸಿ ದೇವಾಲಯದಲ್ಲಿ ದೇವರ ದರ್ಶನಮಾಡಿಕೊಂಡು ಮನೆಗೆ ಹಿಂತಿರುಗಿದರು. ಸುಮಾರು ಮಧ್ಯಾಹ್ನ ಹನ್ನೆರಡು ಘಂಟೆಯ ಸಮಯವಿರಬಹುದು. ರಾಮಕೃಷ್ಣರು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಪೂಜಾಗೃಹವನ್ನು ಪ್ರವೇಶಮಾಡಿದರು. ಅಷ್ಟರೊಳಗಾಗಿ ಹೊರಗಡೆ ಮನೆಯ ಹೊರಚೌಕಿಯಲ್ಲಿ ಗದ್ದಲವೆದ್ದಿತು. ಮಂತ್ರಿಗಳು ಕಿವಿಗೊಟ್ಟು ಕೇಳಿಸುವುದರೊಳಗಾಗಿ ಪೂಜಾಗೃಹದ ಪುರೋಹಿತರು ಬಂದು "ಮಹಾರಾಣಿಯವರ ಸವಾರಿಯು ಬಂದಿದೆ. ಮಂತ್ರಿಗಳ ಭೇಟಿಗಾಗಿ ಇತ್ತ

ಕಡೆಯೇ ಬರುತ್ತಿದ್ದಾರೆ" ಎಂದು ತಿಳಿಸಿದರು. ಮಂತ್ರಿಗಳು ಸಡಗರ ದಿಂದ ಆಸನವನ್ನು ಬಿಟ್ಟಿದ್ದರು. ಅಷ್ಟರೊಳಗಾಗಿ ಮಹಾರಾಣಿಯುವರ ಸವಾರಿಯು ಪೂಜಾಗೃಹವನ್ನು ಪ್ರವೇಶಮಾಡಿತು. ಮಂತ್ರಿ ರಾಮ ಕೃಷ್ಣರು ಒಂದೆರಡು ಹೆಜ್ಜೆ ಮುಂದಿಟ್ಟು ಬರುವುದರೊಳಗಾಗಿ ಮಹಾ ರಾಣಿಯುವರು ಮಂತ್ರಿಗಳ ಪಾದದಲ್ಲಿ ಬಿದ್ದು ನಮಸ್ಕರಿಸಿದರು. ಮಂತ್ರಿಗಳು ಕ್ಷಣಹೊತ್ತು ಸ್ತಂಭೀಭೂತರಾದರು. ಮರುಕ್ಷಣದಲ್ಲಿಯೇ ಗದ್ಗದಕಂಠದಿಂದ "ತಾಯೇ ಮಹಾರಾಣಿಯುವರೇ, ಇದೇನು ಕೆಲಸ ಮಾಡಿದಿರಿ" ಎಂದು ಗಾಬರಿಯಿಂದ ಹೇಳುತ್ತ ಮಹಾರಾಣಿಯುವರನ್ನು ಎತ್ತಿ ನಿಲ್ಲಿಸಿದರು. ರಾಣಿಯು ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿದ್ದಿತು. ಅವರು ಗದ್ಗದಕಂಠದಿಂದ ಮಂತ್ರಿಗಳಲ್ಲಿ ಕ್ಷಮಾ ಭಿಕ್ಷೆಯುನ್ನು ಬೇಡುತ್ತಿದ್ದರು. ಮಹಾರಾಣಿಯು ಇಂಥಹ ದೈನ್ಯಾವಸ್ಥೆ ಯಲ್ಲಿದ್ದುದನ್ನು ನಗರದ ರಾಜ್ಯದಲ್ಲಿ ಎಂದೂ ಯಾರೂ ಕಂಡಿರಲಿಲ್ಲ. ಮಂತ್ರಿ ರಾಮಕೃಷ್ಣರವರು ಮಹಾರಾಣಿಯುವರ ಈ ದೈನ್ಯಭಾವವನ್ನು ಯಾವಾಗಲೂ ನಿರೀಕ್ಷಿಸಿರಲಿಲ್ಲ. ಮಹಾರಾಣಿಯುವರನ್ನು ಸಂತೈಸಿ ಆಸನದಮೇಲೆ ಕುಳ್ಳಿರಿಸಿ ತಾವೂ ಕುಳಿತುಕೊಂಡರು. ಮಹಾರಾಣಿ ಯುವರು ಬಂಧನದ ವಿಚಾರವಾಗಿ ಮಾತನ್ನಾದರೂ ಉಚ್ಚರಿಸಲಿಲ್ಲ. ದುಃಖದ ಆವೇಗವು ಸ್ವಲ್ಪಸ್ವಲ್ಪ ಶಮನವಾಗುತ್ತಲೇ ನಗರದ ರಾಜ್ಯದ ಮೇಲೆ ಹೈದರಲ್ಲೀಖಾನನು ಮಹತ್ತರವಾದ ದಂಡನ್ನೆತ್ತಿಕೊಂಡು ಬಂದಿ ರುವುದಾಗಿಯೂ ನಗರದ ರಾಜ್ಯವು ಉಳಿಯುವ ಹಾಗಿಲ್ಲವೆಂದೂ ರಾಣಿ ಯುವರು ತಿಳಿಸಿದರು. ಮಂತ್ರಿಗಳು ತಮ್ಮ ಮಂತ್ರಿತ್ವವನ್ನು ಸ್ವೀಕರಿಸಿ ಸರ್ವಾಧಿಕಾರವನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥನೆ ಮಾಡಿದರು.

ರಾಣಿಯುವರು ಇಷ್ಟು ಮಾತುಗಳನ್ನು ಹೇಳಿ ಅಬೋಧಕ ಕನ್ನಿಕೆ ಯಂತೆ ಅಳುತ್ತನಿಂತರು. ಈ ಕರುಣಾಜನಕ ದೃಶ್ಯವನ್ನು ನೋಡುತ್ತಾ ರಾಮಕೃಷ್ಣನ ಪರಿವಾರದವರೆಲ್ಲರೂ ಸ್ತಂಭಿತರಾಗಿ ಚಿತ್ರ ಪ್ರತಿಮೆಗಳಂತೆ ದೂರದಲ್ಲಿ ನೋಡುತ್ತನಿಂತಿದ್ದರು. ಮಂತ್ರಿರಾಮ ಕೃಷ್ಣನ ಮನಸ್ಸು ಕರಗಿ ಕಣ್ಣುಗಳಲ್ಲಿ ಎರಡು ಹನಿಗಳು ಉದುರಿದವು.

ರಾಮಕೃಷ್ಣನು ಗದ್ಗದಕಂಠದಿಂದ "ತಾಯೇ ಮಹಾರಾಣಿಯವರೇ, ನಾನು ಅಧಿಕಾರವನ್ನು ವಹಿಸಿಕೊಳ್ಳಲಿ, ಬಿಡಲಿ ನನ್ನ ಭಾರವು ನನಗೆ ಇದ್ದೇ ಇದೆ. ಅದನ್ನು ನಿರ್ವಹಿಸುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ಇಲ್ಲದಿದ್ದರೆ ನಾನು ಈ ರಾಜಧಾನಿಗೇಕೆ ಬರುತ್ತಿದ್ದೆ. ನಾನು ನನ್ನ ಕರ್ತವ್ಯವನ್ನೇನೋ ನಿರ್ವಹಿಸುತ್ತೇನೆ. ಶಿವಪ್ಪನಾಯಕರ ಪುಣ್ಯವಿದ್ದಂತೆ ಆಗುತ್ತದೆ" ಎಂದು ಹೇಳಿದನು. ಬಹಳಹೊತ್ತು ಆ ಪೂಜಾಗೃಹದಲ್ಲಿ ಮೌನವು ಆವರಿಸಿತ್ತು. ಪುರೋಹಿತರು ದೇವರಿಗೆ ಮಂಗಳಾರತಿಯನ್ನು ಮಾಡಿದರು. ಅಷ್ಟುಹೊತ್ತಿಗೆ ಮಧ್ಯಾನ್ಹವು ಕಳೆದು ಅಪರಾನ್ಹವು ಜಾರುತ್ತಿದ್ದಿತು. ರಾಣಿಯು ಆ ದುಃಖೋದ್ವೇಗ ದಿಂದಲೇ ಬೀಳ್ಕೊಂಡು ಅರಮನೆಗೆ ತೆರಳಿದಳು.

ಮಾರನೆಯದಿವಸವೇ ಮಂತ್ರಿ ರಾಮಕೃಷ್ಣನು ರಾಜ್ಯಾಧಿಕಾರ ವನ್ನು ವಹಿಸಿಕೊಂಡನೆಂದು ನಗರದ ಶೀಮೆಯಲ್ಲೆಲ್ಲಾ ಡಂಗೂರವು ಹೊಡೆಸಲಾಯಿತು. ಮಂತ್ರಿ ರಾಮಕೃಷ್ಣನು ಸೇನಾಧಿಪತಿಗಳನ್ನೆಲ್ಲಾ ಕರೆಸಿ ಯುದ್ಧದ ಸನ್ನಾಹಗಳನ್ನು ಭರದಿಂದ ಮಾಡಿಸುವಂತೆ ಅಪ್ಪಣೆ ಯಿತ್ತನು. ಪಾಳೆಯಗಾರರನ್ನೆಲ್ಲಾ ಕರೆಕಳುಹಿಸಿ ಅವರಿಗೆ ಖಿಲ್ಲತ್ತು ಗಳನ್ನು ಕೊಟ್ಟು ಯುದ್ಧದ ವೀಳೆಯವನ್ನು ಕೊಡಿಸಿದನು. ನಗರದ ರಾಜ್ಯದಲ್ಲೆಲ್ಲಾ ಎಲ್ಲಿ ನೋಡಿದರೂ ಹೊಸಹುರುಪು, ಆವೇಶಪರಾಕ್ರಮ ಗಳೇ ಕಾಣುತ್ತಿದ್ದವು.

---

## ೩೧

## ಯುವರಾಜನ ಮನೋವಿಪ್ಲವ

ಹೈದರಲ್ಲೀಖಾನರ ಸೈನ್ಯಶಿಬಿರದಲ್ಲಿ ಉತ್ಸಾಹಕ್ಕೆ ಕೊರತೆ ಇರ ಲಿಲ್ಲ. ಮಹಮದಾಲಿಯವರು ಯುದ್ಧಕ್ಕೆ ಪ್ರಚಂಡ ಸಿದ್ಧತೆಗಳನ್ನು ಏರ್ಪಡಿಸಿದ್ದರು. ರಾಮಪುರದಿಂದ ಹಿಂತಿರುಗಿ ಬಂದ ಗುಂಡೋ

ಪಂತರೂ, ರಾಮಣ್ಣನವರೂ ಸಂಧಾನವು ವಿಫಲವಾದ ಸಮಾಚಾರವನ್ನು ವಿವರವಾಗಿ ಅರಿಕೆಮಾಡಿದರು. ಅದರಿಂದ ಹೈದರನ ಮನಸ್ಸು ಕುಗ್ಗಲೂ ಇಲ್ಲ, ಹಿಗ್ಗಲೂ ಇಲ್ಲ. ನಗರದಿಂದ ಗುಪ್ತಚಾರರು ತಂದ ಸಮಾಚಾರಗಳು ಹೈದರನನ್ನು ಉದ್ವೇಗಕ್ಕೊಳಪಡಿಸಿದವು. ಮಂತ್ರಿ ರಾಮಕೃಷ್ಣನು ಪುನಃ ಅಧಿಕಾರ ಸ್ವೀಕಾರಮಾಡಿದನೆಂಬ ವರ್ತಮಾನವು ಹೈದರನನ್ನು ಚಲಿಸುವಂತೆ ಮಾಡಿತು. ಆ ಮಂತ್ರಿಯ ಪ್ರಭಾವವನ್ನು ಅರಿತ ಹೈದರಲ್ಲೀಖಾನನು ನಗರಕ್ಕೆ ಹತ್ತುಸಾವಿರ ಆನೆಗಳ ಬಲ ಬಂದಂತೆ ಭಾವನೆಮಾಡಿದನು. ತಕ್ಷಣ ಮಹಮದಾಲಿಯವರನ್ನು ತನ್ನ ಡೇರೆಗೆ ಕರೆತರಬೇಕೆಂದು ಸೇವಕರಿಗೆ ಆಜ್ಞಾಪಿಸಿದನು. ಸ್ವಲ್ಪ ಹೊತ್ತಿನೊಳಗಾಗಿಯೇ ಮಹಮದಾಲಿಯವರು ಉತ್ಸಾಹಭರಿತರಾಗಿ ಹೈದರಲ್ಲೀಖಾನನ ಸಮೀಪಕ್ಕೆ ಬಂದು ಸಲಾಂಮಾಡಿ ನಿಂತರು. ಹೈದರಲ್ಲೀಖಾನನು ನಸುನಗುತ್ತಾ, "ದಿವಾನರವರೇ, ಯುದ್ಧವು ಸಿದ್ಧವಾದಂತೆಯೇ ಇದೆ" ಎಂದು ಹೇಳಿದನು. ಮಹಮದಾಲಿಯವರು, "ಜಹಾಪನ, ಯುದ್ಧವು ಇಲ್ಲಿ ಇಂದು ಸಿದ್ಧವಾದುದಲ್ಲ. ಶ್ರೀರಂಗಪಟ್ಟಣದಿಂದ ಹೊರಟಾಗಲೇ ಯುದ್ಧವನ್ನು ಸಿದ್ಧಮಾಡಿಕೊಂಡೇ ಬಂದಿದ್ದೇವೆ. ಈಗೇನು ಯೋಚನೆ?" ಎಂದರು.

ಹೈದರಲ್ಲೀಖಾನನು "ಹೌದು ದಿವಾನರೇ, ಈಗ ಹಿಂತಿರುಗಿ ಹೋಗೋಣವೆಂದು ನಾನು ನಿಮ್ಮೊಡನೆ ಆಲೋಚನೆ ಮಾಡುತ್ತಿಲ್ಲ. ನಗರದ ಸಮಾಚಾರವನ್ನು ನೀವು ಕೇಳಿದ್ದೀರಾ?" ಎಂದನು.

ಮಹಮದಾಲಿಯವರು "ಕೇಳಿದ್ದೇನೆ. ಅದರಲ್ಲಿ ಅಂತರಂಗವೇನಿದೆ. ನಗರದ ರಾಜ್ಯದಲ್ಲಾದರೂ ಅವರು ಯಾವುದನ್ನೂ ಗೋಪ್ಯವಾಗಿಟ್ಟಿಲ್ಲ. ನಗರದ ರಾಜ್ಯದಲ್ಲೆಲ್ಲಾ ಮಂತ್ರಿ ರಾಮಕೃಷ್ಣರು ಅಧಿಕಾರ ವಹಿಸಿದ್ದಾರೆಂದು ಡಂಗೂರ ಹೊಡೆಸಿದ್ದಾರೆ. ಪಾಳೆಯಗಾರರೆಲ್ಲರೂ ಯುದ್ಧದ ವೀಳಯವನ್ನು ಸ್ವೀಕರಿಸಿ ಬಂದಿದ್ದಾರೆ. ನಾವು ಶಿಬಿರವನ್ನು ಮುಂದೆ ನಡೆಸದಿದ್ದರೆ ಅವರೇ ಬಂದು ನಮ್ಮಮೇಲೆ ಹಲ್ಲಾ ನಡೆಸುತ್ತಾರೆ" ಎಂದರು.

ಹೈದರಲ್ಲೀಖಾನನು ನಗುತ್ತಾ, "ಈ ನಗರದವರು ಇಷ್ಟು ಒಗ್ಗಟ್ಟನ್ನು ಮಾಡುವರೆಂದು ನಾನು ಬಗೆದಿರಲಿಲ್ಲ. ನಗರದ ರಾಜ್ಯವು ಛಿನ್ನಭಿನ್ನವಾಗಿ ಹೋಗಿದ್ದಾಗ ಸುಲಭವಾಗಿ ಜಯಿಸಬಹುದೆಂದು ನನ್ನ ಆಲೋಚನೆಯಿತ್ತು. ನಮ್ಮ ಶಿಬಿರದಲ್ಲಿರುವ ಯುವರಾಜನಪಕ್ಷಕ್ಕೆ ಬಹುಜನರು ಬಂದುಬಿಡಬಹುದೆಂದು ಭಾವಿಸಿದ್ದೆ. ಆ ಭೈರವಿಯ ತಂತ್ರವು ಫಲಿಸಬಹುದೆಂದು ನಂಬಿದ್ದೆ. ಎಲ್ಲವೂ ವ್ಯರ್ಥವಾದಂತೆಯೇ ಆಯಿತು" ಎಂದನು.

ಮಹಮುದಾಲಿಯವರು ಸೆಟೆದು ನಿಂತು "ಇದೇನು ಪ್ರಭುಗಳೇ, ತಾವು ಇಂತಹ ಅಳುಕು ಮನಸ್ಸಿನವರಾದರೆ ಈ ದಕ್ಷಿಣಾಪಥವನ್ನೆಲ್ಲಾ ಗೆದ್ದು ಪ್ರಖ್ಯಾತಿಪಡೆದದ್ದು ಹೇಗೆ? ಈ ಹಿಂದೂಜನವೇ ಹೀಗೆ. ಜಗಳ ವಾಡುತ್ತಲೇ ಇರುತ್ತಾರೆ. ಮದುವೆಯೋ, ಮರಣವೋ ಬಂದರೆ ಎಲ್ಲರೂ ಒಂದಾಗಿ ಹೋಗುತ್ತಾರೆ. ನಾವು ಹಿಂದೂರಾಜ್ಯಗಳನ್ನು ಗೆಲ್ಲುವಾಗಲೆಲ್ಲಾ ಹೀಗೆಯೇ ಆಗಿದೆ. ನನಗೆ ಇದಾವ ಅಂಶಗಳ ಮೇಲೆಯೂ ಭರವಸೆಯಿರಲಿಲ್ಲ. ತಮ್ಮ ಭುಜಬಲಪರಾಕ್ರಮ, ನಮ್ಮ ಸೈನಿಕರ ಭಕ್ತಿ, ತಮ್ಮ ಖ್ಯಾತಿ ಇವುಗಳ ಮೇಲೆಯೇ ನಾನು ಭರವಸೆ ಯಿಟ್ಟಿರುವುದು. ನನ್ನ ಕಡೆಯ ಉಸಿರು ಹಾರಿಹೋಗುವವರೆಗೆ ಆ ಭರವಸೆಯಿಂದಲೇ ಜೀವಿಸಿದ್ದೇನೆ. ನನಗೆ ಅಪ್ಪಣೆ ಕೊಡೋಣವಾಗಲಿ. ಈ ನಗರದ ರಾಜ್ಯವನ್ನು ಎಡಗೈ ಮುಷ್ಟಿಯಲ್ಲಿ ಮುದುರಿತಂದು ತಮ್ಮ ಪಾದತಲದಲ್ಲಿ ಒಪ್ಪಿಸುತ್ತೇನೆ" ಎಂದನು.

ಹೈದರಲ್ಲೀಖಾನನು ತಲೆದೂಗುತ್ತಾ, "ಅದರಿಂದಲೇ ತಮಗೆ 'ಮೈಸೂರಿನ ಖಡ್ಗ' ಎಂಬ ಬಿರುದು ಬಂದಿದೆ. ಇಟ್ಟ ಹೆಜ್ಜೆಯನ್ನು ಹಿಂದಕ್ಕಿಡುವುದನ್ನು ನೀವು ಹುಟ್ಟಿದಂದಿನಿಂದ ಅರಿಯರಿ. ಹಿರಿದ ಕತ್ತಿಯನ್ನು ಒರೆಯೊಳಗೆ ಸೇರಿಸುವ ಅಭ್ಯಾಸವೇ ನಿಮ್ಮ ಕೈಗೆ ಇಲ್ಲ. ಹೊರಡಿರಿ. ನಾಳೆಯೇ ಈ ಸೈನ್ಯವು ಮುಂದುವರೆಯಲಿ. ಪಾಳೆಯಗಾರರ ಸೀಮೆಯನ್ನು ದಾಟಿಯೇ ನಗರಕ್ಕೆ ನುಗ್ಗಬೇಕು. ನಾಳೆನಿಂದ ಹೆಜ್ಜೆ ಹೆಜ್ಜೆಗೆ ಯುದ್ಧ. ಹೊರಡಿರಿ" ಎಂದು ಬೆನ್ನು ಚಪ್ಪರಿಸಿ ಆಜ್ಞೆಯಿತ್ತನು.

ಮಹಮದಾಲಿಯವರು ಸಂತೋಷದಿಂದ ತಲೆಬಾಗಿ ವಂದಿಸಿ ಗುಡಾರ ದಿಂದ ಹೊರಗೆ ಹೊರಟರು.

ಹೈದರಲ್ಲೀಖಾನನು ಬಾಗಿಲಿನ ಸೇವಕನನ್ನು ಕಳುಹಿಸಿ ಯುವ ರಾಜನನ್ನು ಕರೆಸಿದನು. ಯುವರಾಜನು ಬಂದು ನವಾಬರಿಗೆ ಸಲಾಂ ಮಾಡಿದನು. ಹೈದರಲ್ಲೀಖಾನರು ಆಸನದಲ್ಲಿ ಕುಳಿತುಕೊಳ್ಳುವಂತೆ ಸಂಜ್ಞೆಮಾಡಿದರು. ನವಾಬರು ಗಂಟಿಕ್ಕಿದ ಮುಖದಿಂದ, ಗಡಸು ದನಿ ಯಿಂದ "ಯುವರಾಜ ಚೆನ್ನಬಸಪ್ಪನಾಯಕರೇ, ನಿಮ್ಮ ಮಾತೆಲ್ಲವೂ ಸುಳ್ಳಾಯಿತು. ಈಗೇನು ಹೇಳುವಿರಿ. ನಿಮ್ಮ ಆ ಭೈರವಿಯು ಹಿಂತಿರುಗಿ ಬರಲಿಲ್ಲವೇಕೆ?" ಎಂದು ಕೇಳಿದರು.

ಯುವರಾಜನು ಧೈರ್ಯದಿಂದ ತಲೆಯೆತ್ತಿ ಎದೆಯನ್ನು ಮುಂದಕ್ಕೆ ಚಾಚಿ "ನವಾಬರವರೇ, ನಾನು ತಮ್ಮಲ್ಲಿ ಏನೂ ಸುಳ್ಳು ನುಡಿದಿಲ್ಲ. ನಗರದಲ್ಲಿ ನನಗೆ ಆಶ್ರಯವಿಲ್ಲದೇ ಅನಾಥ ಭಿಕಾರಿಯಂತೆ ತಮ್ಮ ಸನ್ನಿ ಧಾನಕ್ಕೆ ಬಂದೆ. ಪಾಳೆಯಗಾರರು ರಾಣಿಗೆ ವಿರೋಧಿಗಳಾಗಿದ್ದುದು ಸುಳ್ಳೇ? ಮಂತ್ರಿ ರಾಮಕೃಷ್ಣರವರು ಬಂಧನದಲ್ಲಿದ್ದುದು ಸುಳ್ಳೇ? ಇಡೀ ನಗರದ ರಾಜ್ಯವು ರಾಣಿಯ ಮೇಲೆ ಕ್ರೋಧ ತಿರಸ್ಕಾರಗಳನ್ನು ತೋರುತ್ತಿದ್ದುದು ಸುಳ್ಳೇ? ನಾನು ತಮ್ಮಲ್ಲಿ ಬಂದು ನನಗೆ ರಾಜ್ಯ ವನ್ನು ಕೊಡಿಸಿಕೊಡಬೇಕೆಂದು ಸೆರಗೊಡ್ಡಿ ಬೇಡಿದೆ. ತಾವು ಆಶ್ರಯ ವಿತ್ತು ಈ ನಗರದ ರಾಜ್ಯದ ಸಿಂಹಾಸನವನ್ನು ಕೊಡಿಸುವುದಾಗಿ ಅಭಿ ವಚನವಿತ್ತು ಇಲ್ಲಿಗೆ ಕರೆತಂದಿರಿ. ನಾನು ಪಾಳೆಯಗಾರರ ಮೇಲೆ ಭರವಸೆಯನ್ನು ಇಡಲೂ ಇಲ್ಲ. ಬಂಧನದಲ್ಲಿದ್ದ ಮಂತ್ರಿ ರಾಮಕೃಷ್ಣರ ಮೇಲೆ ಯಾವ ನಂಬಿಕೆಯನ್ನು ಇಡಲೂ ಇಲ್ಲ. ಇಡೀ ಭರತ ಖಂಡದಲ್ಲಿ ಮೊಳಗುತ್ತಿದ್ದ ತಮ್ಮ ಖ್ಯಾತಿಯನ್ನು ಕೇಳಿ ಬಂದೆ. ತಮ್ಮ ಪರಾಕ್ರಮದ ಮೇಲೆ ಭರವಸೆಯಿಟ್ಟು ಬಂದೆ. ಈಗೇನು ಹೇಳುವಿರಿ. ನನಗಾಗಿ ನಗರದ ಮೇಲೆ ಯುದ್ಧಮಾಡುವಿರಾ? ನನ್ನನ್ನು ಪರಿತ್ಯಜಿಸಿ ಹೊರಟುಹೋಗುವಿರಾ? ಹೇಳಿರಿ. ನಗರವು ಛಿನ್ನಭಿನ್ನವಾಗಿದ್ದುದು

ನಿಜ. ಭವಾನೀರಾಣಿಯವರು ಎಲ್ಲರನ್ನೂ ಒಟ್ಟುಗೂಡಿಸಿ ಆ ನಗರವನ್ನು ಪುನರುಜ್ಜೀವನಗೊಳಿಸಿ ನಿಲ್ಲಿಸಿದ್ದಾರೆ" ಎಂದನು.

ಹೈದರನು ಸಣ್ಣ ನಗುವನ್ನು ನಕ್ಕು, "ಯುವರಾಜರೇ ಚೆನ್ನಾಗಿ ಮಾತನಾಡುವಿರಿ. ಬ್ರಾಹ್ಮಣರಂತೆ ನೀವು ಮಾತುಗಾರರಾಗಿದ್ದೀರಿ. ನಿಮ್ಮಲ್ಲಿ ಇಷ್ಟೇ ಶಕ್ತಿಯಿದೆಯೋ, ರಣಕ್ಷೇತ್ರದಲ್ಲಿ ನಿಂತು ಶೂರರಂತೆ ಯುದ್ಧಮಾಡುವಿರೋ?" ಎಂದು ಕೇಳಿದನು.

ಯುವರಾಜನು "ಹೌದು ನವಾಬರವರೇ, ನಿಮ್ಮ ಸೇನಾಧಿಪತಿಗಳು ಹಿಂದೆ ನಿಲ್ಲಲಿ. ನಾನು ಮುಂದೆ ನಿಂತು ಯುದ್ಧಮಾಡುವೆನು" ಎಂದು ಹೇಳಿದನು.

ಹೈದರನು "ಯುವರಾಜರೇ ಆಮಾತು ಹಾಗಿರಲಿ. ನಾವು ಯುದ್ಧಕ್ಕೆ ಬಂದಿದ್ದೇವೆ, ಯುದ್ಧಮಾಡುತ್ತೇವೆ. ನಿಮಗೆ ವಚನಕೊಟ್ಟಿದ್ದೇವೆ. ಆದ್ದರಿಂದ ನಗರದ ಪಟ್ಟಕಟ್ಟುತ್ತೇವೆ. ಆ ನಿಮ್ಮ ಯುವರಾಣಿಯವರೆಲ್ಲಿಹೋದರು. ಅವರೇಕೆ ಹಿಂತಿರುಗಿ ಬರಲಿಲ್ಲ. ಅಲ್ಲಿ ಎಲ್ಲಿಯಾದರೂ ಹೋಗಿ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಾರೇನು ಎಂದು ನಮ್ಮ ಮನಸ್ಸು ಅಳುಕುತ್ತಿದೆ. ಅವರೇಕೆ ಹಿಂತಿರುಗಿ ಬರಲಿಲ್ಲ" ಎಂದು ಕೇಳಿ ಸಣ್ಣ ನಗುವನ್ನು ನಕ್ಕನು.

ಚೆನ್ನಬಸಪ್ಪನಾಯಕನು "ಹುಜೂರ್, ಆ ಭೈರವೀರಾಣಿಯದು ಒಂದು ವಿಚಿತ್ರ ಕಥೆ. ಅದನ್ನು ಕೇಳಿದರೆ ಕರುಣಾಜನಕವಾಗಿರುತ್ತದೆ. ಒಂದೊಂದು ಬಾರಿ ಭಯವಾಗುತ್ತದೆ. ಈ ಯುದ್ಧವನ್ನು ಎತ್ತಿಕಟ್ಟಿದವಳೇ ಅವಳು. ನಗರದಲ್ಲಿ ಅವಳಿಗೆ ಸ್ವಲ್ಪವೂ ಭಯವಿಲ್ಲ. ಏಕೆಂದರೆ ನಗರದ ಸಾಮಾನ್ಯ ಜನರೆಲ್ಲರೂ ಅವಳು ರಾಣಿಯವರ ಸಹೋದರಿಯೆಂದೇ ಭಾವಿಸಿದ್ದಾರೆ. ಪ್ರತಿಯೊಬ್ಬ ಪಾಳೆಯಗಾರರ ಮತ್ತು ಸರದಾರರುಗಳ ವಿಶ್ವಾಸವು ಅವಳ ಮೇಲಿದೆ. ಭವಾನೀರಾಣಿಯವರ ಶಿಷ್ಯಳು ಅವಳು. ಸಾಕುಮಗಳೆಂದರೂ ಸಲ್ಲುವಂತಿದೆ. ಅವಳ ಭೈರವಿಯ ವೇಷವು ಎಲ್ಲರನ್ನೂ ಮೋಸಮಾಡುತ್ತದೆ. ಆದರೆ ನಗರದ ರಾಜ್ಯದಲ್ಲಿ ಹೆಂಗಸರಾಗಲೀ ಗಂಡಸರಾಗಲೀ ಯಾರೇ ಆಗಲಿ ಯಾರು ಕಾಷಾಯ

ವಸನಗಳನ್ನೂ ವಿಭೂತಿ ರುದ್ರಾಕ್ಷಿಗಳನ್ನೂ ಧರಿಸಿದ್ದಾರೆಯೋ ಅವರಿಗೆ ಯಾವ ಭಯವೂ ಇಲ್ಲವೆಂದು ವಂಶಪಾರಂಪರ್ಯವಾಗಿ ನಗರದ ಸಿಂಹಾಸನದ ಅಭಯ ಪ್ರದಾನವಿದೆ. ಅದರಲ್ಲಿಯೂ ಭೈರವಿಯು ನಿಜವಾಗಿ ದೀಕ್ಷೆಯನ್ನು ಕೈಗೊಂಡಿದ್ದಾಳೆಂದು ಎಲ್ಲರೂ ನಂಬಿದ್ದಾರೆ. ಅಭಿರಾಮ ಸ್ವಾಮಿಗಳು ಕೂಡಾ ಅವಳು ನಿಜವಾದ ಭೈರವಿಯೆಂದೇ ಭಾವಿಸಿದ್ದಾರೆ" ಎಂದನು.

ಹೈದರನು ಮಧ್ಯದಲ್ಲಿ ಮಾತನಾಡಿದನು. "ಯುವರಾಜರೇ, ಹಾಗಾದರೆ ಭೈರವಿಯು ನಿಜವಾದ ಭೈರವಿಯಲ್ಲವೇನು?" ಚೆನ್ನಬಸಪ್ಪ ನಾಯಕನು "ಇಲ್ಲ ಹುಜೂರ್. ಅವಳು ಭೈರವಿಯಲ್ಲ. ಅವಳು ನಿಜವಾದ ಭೈರವಿಯಾಗಿದ್ದರೆ ತಾವು ಯುವರಾಣಿ ಎಂದು ಹೇಗೆ ಸಂಬೋಧನ ಮಾಡುತ್ತಿದ್ದಿರಿ. ಅವಳು ನಿಜವಾದ ಭೈರವಿಯಲ್ಲ ವೆಂಬುದನ್ನು ನಾನು ಬಲ್ಲೆ. ನಗರದ ರಾಣಿಯವರು ಬಲ್ಲರು" ಎಂದನು.

ಹೈದರನು ನಗುತ್ತಾ, "ನಮಗೇನು ಗೊತ್ತು ಆ ಕಥೆ. ನಿಮ್ಮ ಹಿಂದೂಜನರಲ್ಲಿ ಬೇಕಾದಾಗ ಸನ್ಯಾಸಿಗಳಾಗುವುದನ್ನೂ, ಬೇಡಾದಾಗ ಸಂಸಾರಿಗಳಾಗಿ ಓಡಿಹೋಗುವುದನ್ನೂ ನೋಡಿದ್ದೇನೆ" ಎಂದು ನಕ್ಕನು. ಯುವರಾಜನ ಮುಖವು ಕೆಂಪೇರಿತು. ಮುಂದೆ ಮಾತನಾಡತೊಡಗಿದನು. "ನವಾಬರಿಗೆ ನಮ್ಮ ಧರ್ಮಸಂಪ್ರದಾಯಗಳ ಅರಿವಿಲ್ಲ. ಆದುದರಿಂದಲೇ ಹೀಗೆ ಮಾತನಾಡುತ್ತೀರಿ. ಭೈರವ ದೀಕ್ಷೆಯನ್ನು ವಹಿಸಿದ ಸನ್ಯಾಸಿನಿಯರನ್ನು ಭೈರವಪಂಥದವರು ಕಾಯುತ್ತಲೇ ಇರುತ್ತಾರೆ. ನಡೆನುಡಿಗಳಲ್ಲಿ ಸ್ವಲ್ಪ ವ್ಯತ್ಯಾಸವು ಕಂಡರೆ ಕತ್ತರಿಸಿ ಹಾಕುತ್ತಾರೆ. ಭೈರವಪಂಥವು ಬಹಳ ಕಟ್ಟುನಿಟ್ಟಿನ ಪಂಥ. ಕಠಿಣವಾದ ಮಾರ್ಗ" ಎಂದನು.

ಹೈದರನು "ಹಾಗಾದರೆ ಈ ಭೈರವಿಯನ್ನೇಕೆ ತಲೆ ಕಡಿದು ಹಾಕಿಲ್ಲ" ಎಂದು ಕೇಳಿದನು.

ಯುವರಾಜನು "ಹುಜೂರ್, ಭೈರವಪಂಥದವರಿಗೆ ಇವಳು ದೀಕ್ಷೆಯನ್ನು ಸ್ವೀಕರಿಸಿದವಳಲ್ಲವೆಂದೂ ಏನೋ ವಿರಕ್ತ ಭಾವದಿಂದ

ಕಾಷಾಯಧಾರಿಣಿಯೆಂದೂ ಗೊತ್ತಾಗಿದೆ. ಹೈದರನು "ಯುವರಾಜರೇ ನಾನು ಹಿಂದೂ ಧರ್ಮವನ್ನು ಅಲ್ಲಗಳೆಯುತ್ತಿಲ್ಲ ನನಗೆ ನಿಮ್ಮ ಧರ್ಮ ದಲ್ಲಿಯೂ, ವಿದ್ವಾಂಸರಲ್ಲಿಯೂ, ವಿರಕ್ತರಲ್ಲಿಯೂ, ಸನ್ಯಾಸಿಗಳಲ್ಲಿಯೂ ಬಹಳ ಗೌರವವಿದೆ ಈ ನಿಮ್ಮ ಭೈರವಿಯ ಬುದ್ಧಿಕೌಶಲ್ಯ, ರಾಜ ನೀತಿ ನೈಪುಣ್ಯ ಇವುಗಳನ್ನು ಕಂಡು ಬೆರಗಾಗಿ ಎಷ್ಟೋಬಾರಿ "ಇವಳಿ ಗೇಕೆ ಭೈರವಿಯ ವೇಷ" ಎಂದುಕೊಂಡಿದ್ದೇನೆ. ಅವಳೇಕೆ ಹಿಂತಿರುಗಿ ಬರಲಿಲ್ಲ, ನೀವು ಬಲ್ಲಿರಾ ?" ಎಂದನು.

ಯುವರಾಜನು ಸ್ಖಲಿತವಾಣಿಯಿಂದ "ಹುಜೂರ್ ಬಲ್ಲೆ. ಅರಿಕೆ ಮಾಡುವುದಕ್ಕೆ ಭಯವಾಗುತ್ತದೆ." ಎಂದು ತಲೆಬಾಗಿಸಿದನು.

ಹೈದರನು "ಯುವರಾಜರೇ, ಭಯಪಡಬೇಡಿರಿ. ಹೇಳಿರಿ ನೋಡೋಣ" ಎಂದನು.

ಯುವರಾಜನು ಗಂಟಲನ್ನು ಸರಿಪಡಿಸಿಕೊಳ್ಳುತ್ತಾ ತುಟಿಗಳನ್ನು ನಾಲಿಗೆಯಿಂದ ಸವರುತ್ತಾ ಹೇಳತೊಡಗಿದನು. "ನವಾಬರೇ ಯುದ್ಧದಲ್ಲಿ ಜಯಾಪಜಯಗಳು ಯಾರ ಅಧೀನ. ಏನಾದರೂ ವಿಷಮ ಘಟನೆ ಗಳಿಂದ ಯುದ್ಧದಲ್ಲಿ ಮೈಸೂರಿನ ಸೈನ್ಯಗಳು ಹಿಮ್ಮೆಟ್ಟುವ ಪ್ರಸಂಗವು ಬಂದರೆ ಒಂದು ತಂತ್ರದಿಂದ ರಾಣಿಯವರನ್ನು ಕೊಲೆಮಾಡಿಸುವ ಹೊಂಚುಹಾಕಿಕೊಂಡು ಆ ಭೈರವಿಯು ನಗರದಲ್ಲಿ ಕುಳಿತಿದ್ದಾಳೆ."

ಹೈದರನು ಗಹಗಹಿಸಿ ನಕ್ಕು, "ಯುವರಾಜರೇ, ಎಷ್ಟಾದರೂ ಹೆಣ್ಣಿಗೆ ಹೆಣ್ಣಿನಬುದ್ಧಿಯೇ ಇರುತ್ತದೆ. ರಾಣಿಯನ್ನು ಕೊಲೆ ಮಾಡು ವುದರಿಂದ ಕಾರ್ಯಸಿದ್ಧಿಯಾಗುವುದಾದರೆ ಭೈರವಿಯು ಶ್ರೀರಂಗ ಪಟ್ಟಣಕ್ಕೆ ಏಕೆ ಬರಬೇಕು? ಇಷ್ಟೊಂದು ಕಷ್ಟಗಳೇಕೆ? ನಾವೇಕೆ ಈ ಮಹಾಸೈನ್ಯವನ್ನು ಎತ್ತಿಕೊಂಡು ಇಲ್ಲಿಯವರೆಗೆ ಬರಬೇಕು ? ಈ ಯುದ್ಧದಲ್ಲಿ ನಮಗೆ ಸೋಲಾದರೆ, ರಾಣಿಯವರು ಕೊಲೆಯಾಗಿಹೋದರೆ, ಮಂತ್ರಿ ರಾಮಕೃಷ್ಣನೂ ಗೋಪಾಲನಾಯಕರೂ ನಿಮಗೆ ಪಟ್ಟಕಟ್ಟುವ ರೇನು? ಎಂಥಾ ಅಜ್ಞಾನವಿದು. ಇರಲಿ. ಆದರಿಂದ ಹಾನಿಯೇನೂ

ಇಲ್ಲ. ಭೈರವಿಯು ಎಲ್ಲಿಯಾದರೂ ಇರಲಿ. ಮಾತಿಗೆಮಾತು ಬಂದು ನಾವು ಆಕೆಯ ಯೋಗಕ್ಷೇಮವನ್ನು ವಿಚಾರಿಸಿದೆವು. ನೀವು ಹೊರಡ ಬಹುದು. ನಿಮ್ಮ ಬಿಡಾರಕ್ಕೆ ಹೋಗಬಹುದು. ನಾಳೆಯದಿನ ನಮ್ಮ ಸೈನ್ಯವು ನಗರದಮೇಲೆ ಏರಿ ಹೊರಡುತ್ತದೆ" ಎಂದು ಹೇಳಿದನು.

ಯುವರಾಜನು ನವಾಬರಿಗೆ ಕುರ್ನಿಸಾತ್‌ಮಾಡಿ ಆ ಡೇರೆ ಯಿಂದ ಹೊರಟು ತನ್ನ ಡೇರೆಗೆ ಹೋದನು.

ಯುವರಾಜನು ತನ್ನ ಡೇರೆಯಲ್ಲಿ ಏಕಾಂತವಾಗಿ ಕುಳಿತು ಆಲೋಚಿಸತೊಡಗಿದನು. "ನಗರಕ್ಕೆ ಯುದ್ಧವೇನೋ ಸನ್ನಿಹಿತವಾಗಿದೆ. ಭೈರವಿಯು ನನ್ನನ್ನು ಉದ್ರೇಕಗೊಳಿಸಿ ಈ ಸಿಂಹಾಸನದ ಹುಚ್ಚನ್ನು ಪುನಃ ನನ್ನ ತಲೆಗೆ ಹಚ್ಚಿದಳು. ಅವಳೇ ನನ್ನನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದು ಹೈದರಲ್ಲೀಖಾನರನ್ನು ಒಪ್ಪಿಸಿ ಯುದ್ಧಕ್ಕೆ ಕರೆತಂದಳು. ಈಗ ನನ್ನನ್ನು ಏಕಾಕಿಯಾಗಿ ಬಿಟ್ಟುಹೋಗಿ ನಗರದಲ್ಲಿ ಏನೋ ತಂತ್ರ ಮಾಡುತ್ತಿದ್ದಾಳೆ. ನಾನು ಈ ಶಿಬಿರದಲ್ಲಿ ಸುರಕ್ಷಿತನಾಗಿದ್ದೇನೇನು? ಯಾವಾಗ ಈ ಸ್ಥಳವು ನನಗೆ ವಿಷದ ಹಾಸಿಗೆಯಂತೆ ಶತ್ರುಶಿಬಿರವಾಗಿ ಪರಿಣಮಿಸುತ್ತದೋ ಎಂದು ಶಂಕೆಯಾಗುತ್ತದೆ, ಭಯವಾಗುತ್ತದೆ. ನಾವು ಹೈದರಲ್ಲೀಖಾನರೊಡನೆ ಹೇಳಿದ ಮಾತುಗಳೆಲ್ಲಾ ಸುಳ್ಳಾದವು. ನಾನು ಸುಳ್ಳು ಹೇಳಿದನೇ? ಭೈರವಿಯು ಸುಳ್ಳು ಹೇಳಿದಳೇ? ನಾವು ನಗರವನ್ನು ಬಿಟ್ಟು ಹೊರಡುವಾಗ ಪಾಳೆಯಗಾರರೆಲ್ಲರೂ ರಾಣಿಯ ಮೇಲೆ ಕೃದ್ಧರಾಗಿದ್ದರು. ಮಂತ್ರಿಗಳ ಬಂಧನದಿಂದಲೂ ಮಹಾರಾಣಿ ಭವಾನೀರಾಣಿಯವರ ಮೇಲೆ ರಾಣಿಯವರು ನಡೆಸಿದ ದೌರ್ಜನ್ಯ ದಿಂದಲೂ ಪ್ರಜಾವರ್ಗದಲ್ಲಿ ಪ್ರಬಲವಾದ ಕ್ಷೋಭೆಯಿತ್ತು. ರಾಣಿ ಯವರ ಕೀರ್ತಿಗೆ ಮಸಿಬಳಿದಂತಾಗಿ ನಗರವೆಲ್ಲವೂ ಅಂಧಕಾರವು ಕವಿದುಕೊಂಡಂತೆ ಇದ್ದಿತು. ಇಲ್ಲದಿದ್ದರೆ ನಾವೇಕೆ ಈ ಆಸೆಯನ್ನು ಬೆಳೆಸಿಕೊಳ್ಳುತ್ತಿದ್ದೆವು! ಇಂದು ಎಂಥಾ ಪರಿವರ್ತನೆಯಾಗಿಹೋಗಿದೆ. ಇದಕ್ಕೆಲ್ಲಾ ಕಾರಣಭೂತರಾರು? ದೈವವೇ ಕಾರಣ. ಈಗ ನಾನು ಈ ಶಿಬಿರದಿಂದ ತಪ್ಪಿಸಿಕೊಂಡು ಹೊರಟು ಹೋಗಬಹುದು. ಆದರಿಂದ

ಏನು ಸುಖವಾದೀತು. ಎಲ್ಲಿಗೆ ಹೋಗಬೇಕು. ನಗರದ ರಾಜ್ಯಕ್ಕೆ ಹೋದರೆ ನಾನೇ ಮೈಸೂರು ಸೈನ್ಯವನ್ನು ಕರೆತಂದ ದೇಶದ್ರೋಹಿ ಯೆಂದು ಯಾವನಾದರೊಬ್ಬ ಗೌಡನು ತಲೆ ಕತ್ತರಿಸಿ ಎಸೆಯಲಾರನೆ ? ಈ ಶಿಬಿರದಿಂದ ತಪ್ಪಿಸಿಕೊಂಡು ಬೇರೆ ದೇಶಕ್ಕೆ ಹೋಗುವದೆಂತು ? ಗೋದಾವರಿಯವರೆಗೆ ಹೈದರನ ರಾಜ್ಯವಿದೆ. ಸೂರ್ಯಾಸ್ತಮಾನದೊಳಗಾಗಿ ನನ್ನನ್ನು ಪತ್ತೆಹಚ್ಚಿಸಿ ಹಿಡತರಿಸಿ ಆನೆಯ ಕಾಲಿನಿಂದ ತುಳಿಸುವನು. ಹೈದರನೇನು ಸಾಮಾನ್ಯನೇ ? ಎಂತಹ ಪರಿಸ್ಥಿತಿಯು ಪ್ರಾಪ್ತವಾಗಿದೆ. ನೋಡೋಣ, ಈಗಲೂ ನನ್ನನ್ನು ರಕ್ಷಿಸಬಲ್ಲವಳು ಭೈರವಿಯೊಬ್ಬಳೇ ಈ ಜಗತ್ತಿನಲ್ಲಿದ್ದಾಳೆ" ಎಂಬುದಾಗಿ ಚಿಂತಿಸುತ್ತಿದ್ದನು. ಅವನ ಮನಸ್ಸಿನ ಮೇಲೆ ಭಯ, ಸಂಶಯ, ಕ್ರೋಧ, ಉದ್ವೇಗ, ಹಟ, ಚಾಂಚಲ್ಯ, ಅಧೀರತೆ, ಭರವಸೆ ಇತ್ಯಾದಿ ಭಾವಗಳು ಮಲೆನಾಡಿನ ಮಳೆಗಾಲದ ಮೇಘ ಘರ್ಜನೆಯಂತೆ, ಭೋರೆಂದು ಕರೆಯುವ ಮಳೆಯಂತೆ, ಸುಯ್ಯೆಂದು ಬೀಸುವ ಬಿರುಗಾಳಿಯಂತೆ, ಕಿಂಚಿತ್ ಪ್ರಕಾಶಿಸುವ ಸೂರ್ಯ ಕಿರಣಗಳಂತೆ ಆಂದೋಳನವಾಗುತ್ತಿದ್ದವು.

---

## ೩೭

## ಸೈತಾನೀ ಯುದ್ಧವೆ !

ಮೈಸೂರಿನ ಸೈನ್ಯಗಳು ಶಿಬಿರದಿಂದ ಮುಂದಕ್ಕೆ ಹೊರಡಲು ಅನುವಾದವು. ಮಹಮುದಾಲಿಯವರು ಸೇನಾಧಿಪತಿಗಳನ್ನು ಕರೆಸಿ ಸೈನ್ಯಗಳೆಲ್ಲಾ ಶಿಸ್ತಿನಿಂದ ಮುಂದಕ್ಕೆ ಹೊರಡಬೇಕೆಂದೂ ದಾರಿಯಲ್ಲಿ ಯಾವ ಕ್ಷಣದಲ್ಲಿಯಾದರೂ ಯುದ್ಧವು ಸಂಭವಿಸಬಹುದೆಂದೂ ದಾರಿಯಲ್ಲಿ ಬಂದ ಎಡರುಗಳನ್ನು ದಾಟಿಕೊಂಡು ಮುಂದಕ್ಕೆ ನುಗ್ಗಬೇಕೆಂದೂ ಅಪ್ಪಣೆಯಿತ್ತರು ಕೆಲವು ಆನೆಗಳ ಸೈನ್ಯವು ಮುಂದೆ ಹೊರಟಿತು. ಕಾವಲಿನ ಸೈನ್ಯದವರು ಹತ್ತು ಹತ್ತು ಜನರು ಒಂದೊಂದು ಗುಂಪಾಗಿ

ಮುಂದೆ ಮುಂದೆ ದಾರಿಯನ್ನು ನೋಡುತ್ತಾ ಹೊರಟರು. ಆನೆಗ
ಸೈನ್ಯದ ಹಿಂದೆ ಪದಾತಿ ಸೈನ್ಯವು ಹೊರಟಿತು. ಅದರ ಹಿಂದೆ ಕುದುರೆಯ
ರಾವುತರುಗಳು ಹೊರಟರು. ಆ ರಾವುತ ಸೈನ್ಯದ ಹಿಂದುಗ
ಮಹಮುದಾಲಿಯವರು ಹೊರಟರು. ಅವರ ಹಿಂದೆ ಒಂಟೆಗಳ ಸೈನ್ಯ
ಹೊರಟಿತು. ಒಂಟೆಗಳ ಸೈನ್ಯದ ಹಿಂದೆ ಫಿರಂಗಿಗಾಡಿಗಳು ಹೊರಟವು
ಹೀಗೆ ಮೈಸೂರು ಸೈನ್ಯದ ಒಂದು ಭಾಗ ಸೈನ್ಯವು ಮುಂದೆ ಹೊರಟಿತು
ಈ ಸೈನ್ಯದಲ್ಲಿ ಕಾಲಾಳುಗಳೂ, ಮಾವುತರೂ, ರಾವುತರೂ ಎಲ್ಲರ
ಸೇರಿ ಆರುಸಾವಿರ ಸೈನಿಕರು ಇದ್ದರು. ಅವರ ಜಯಘೋಷಗಳ
ನಭೋಮಂಡಲವನ್ನು ತುಂಬುತ್ತಿದ್ದವು. ಹೀಗೆಯೇ ಎಂಟು ಸೈನ್ಯ
ಗುಂಪುಗಳು ಒಂದರ ಹಿಂದೊಂದು ಐದುಮೈಲಿಗಳ ದೂರದಲ್ಲಿ ಮುಂದ
ವರೆಯುತ್ತಿದ್ದವು. ಈ ಶಿಬಿರವನ್ನೆಲ್ಲಾ ಎತ್ತಿ ಮುಂದಕ್ಕೆ ಹೊರಡಿಸಲ
ರಾತ್ರೀಹಗಲೂ ಮೂರುದಿವಸಗಳಾಯಿತು. ಹತ್ತುಸಾವಿರ ಸೈನ್ಯ
ವ್ಯೂಹದಲ್ಲಿ ಹೈದರಾಲಿಯವರು ಹೊರಟಿದ್ದರು. ಅವರು ಮ್ಯಾನಾದ
ಕುಳಿತಿದ್ದರು. ಬೋಯಿಗಳು ಮ್ಯಾನಾವನ್ನು ಹೊತ್ತುಕೊಂಡು ನ
ಯುತ್ತಿದ್ದರು. ಪಕ್ಕದಲ್ಲಿ ಅವರ ಕುದುರೆಯನ್ನು ಸಜ್ಜುಗೊಳಿಸಿ ಖಾಸ
ಖಾಸ್‌ದಾರರುಗಳು ನಡೆಸಿಕೊಂಡು ಹೋಗುತ್ತಿದ್ದರು. ಹಿಂದುಗ
ಆನೆಯಮೇಲೆ ಅಂಬಾರಿಯನ್ನು ಹಾಕಿ ಎರಡಾನೆಗಳು ನಡೆತ
ತ್ತಿದ್ದವು. ಹೀಗೆ ಸೈನ್ಯಗಳು ನಗರದ ಗಡಿಯನ್ನು ಪ್ರವೇಶಮಾಡಿದ

ಈ ಸೈನ್ಯಕ್ಕೆ ಸುಸೂತ್ರವಾಗಿ ಮುಂದೆಸಾಗಲು ಆಸ್ಪದವಿರಲಿ
ಪಾಳೆಯಗಾರರ ಸೈನಿಕರು ದಾರಿಯುದ್ದಕ್ಕೂ ಎಡರುಗಳನ್ನು ತಂದ
ಡ್ಡುತ್ತಿದ್ದರು. ಸಂಧರ್ಭಬಿದ್ದಾಗ ಹಿಂಬದಿಯಿಂದಲೂ, ಪಕ್ಕಗಳಿಂದಲ
ಬಂದು ಬಿದ್ದು ಮೈಸೂರು ಸೈನಿಕರನ್ನು ಕೊಲೆಮಾಡಿ ಓಡಿಹೋಗು
ದ್ದರು. ದಾರಿಗಳಲ್ಲಿ ಕಾಡುಮರಗಳನ್ನು ಬೀಳುಗಳನ್ನು ತಂದೊ
ಟ್ಟು ಬೆಂಕಿಯನ್ನೆಬ್ಬಿಸಿ ಸೈನ್ಯಗಳು ಮುಂದಕ್ಕೆ ನಡೆಯದಂತೆ ಅ
ಪಡಿಸುತ್ತಿದ್ದರು. ದಾರಿಯ ಸಮೀಪದಲ್ಲಿ ಇರುವ ಕೊಳಗಳಲ್ಲಿಯ
ಬಾವಿಗಳಲ್ಲಿಯೂ ವಿಷವನ್ನು ಹಾಕಿ ಕುಡಿಯುವುದಕ್ಕೆ ನೀರಿಲ್ಲದ

ಮಾಡಿದ್ದರು. ಸೈನಿಕರು ಒಂಟೆಗಳಮೇಲೆ ಹೇರಿದ್ದ ನೀರನ್ನು ಕುಡಿ
ಯುತ್ತಿದ್ದರೇ ಹೊರತು ಒಳ್ಳೆಯ ಬಿಸಿಲಿನಲ್ಲಿಯೂ ದಾರಿಯ ಪಕ್ಕದಲ್ಲಿ
ಕಣ್ಣಿಗೆ ಸೊಗಸಾಗಿ ಕಾಣುವ ಆಕರ್ಷಣೀಯವಾದ ಕೊಳಗಳಲ್ಲಿದ್ದ
ನೀರನ್ನು ಕುಡಿಯುತ್ತಿರಲಿಲ್ಲ. ಮೈಸೂರು ಸೈನ್ಯದಲ್ಲಿ ಅನೇಕ ಸಾಕಿದ
ಕೋತಿಗಳಿದ್ದವು. ಅವುಗಳನ್ನು ತಂದು ಕೊಳದ ಸಮೀಪದಲ್ಲಿ ಬಿಟ್ಟರೆ
ಅವು ನೀರು ಕುಡಿಯುತ್ತಿರಲಿಲ್ಲ. ಆಕಸ್ಮಾತ್ ಒಂದೆರಡು ಗುಟುಕು
ನೀರನ್ನು ಕುಡಿದರೆ ಸತ್ತುಬೀಳುತ್ತಿದ್ದವು.

ದಾರಿಯಲ್ಲಿ ಸಣ್ಣಸಣ್ಣ ಪಾಳೆಯಗಾರರ ಗುಂಪು ಮೈಸೂರು
ಸೈನ್ಯದಮೇಲೆ ನುಗ್ಗಿ ಯುದ್ಧಮಾಡುತ್ತಿದ್ದವು. ಒಂದೊಂದುಬಾರಿ
ಯುದ್ಧವು ತೀಕ್ಷ್ಣವಾಗಿ ನಡೆದುದೂ ಉಂಟು. ಸಂಧ್ಯಾಕಾಲದವರೆಗೆ
ಪಾಳೇಗಾರರ ಸೈನ್ಯಗಳು ಖಡಾಖಡಿ ಯುದ್ಧಮಾಡುತ್ತಿದ್ದವು.
ಯಾವುದೇ ಯುದ್ಧವು ಬರಲಿ ಮಹಮದಾಲಿಯವರು ಕುದುರೆಯಮೇಲೆ
ಕುಳಿತು ಮುಂದೆ ಬಂದು ನಿಲ್ಲುತ್ತಿದ್ದರು. ಅವರ ಮೈಮೇಲೆ ಕಬ್ಬಿಣದ
ಉಂಗುರಗಳ ಅಂಗಿಯಿರುತ್ತಿತ್ತು. ತಲೆಯಮೇಲೆ ಕಬ್ಬಿಣದ ಮಕುಟವು
ಇರುತ್ತಿತ್ತು. ಕೈಯಲ್ಲಿ ಉದ್ದವಾದ ಹಿರಿದ ಕತ್ತಿಯು ಇರುತ್ತಿತ್ತು.
ಮತ್ತೊಂದು ಕೈಲಿ ಉದ್ದವಾದ ಭಲ್ಯವು, ಗುರಾಣಿಯೂ ಇರುತ್ತಿದ್ದವು.
ಒಂದೊಂದುಬಾರಿ ಗುರಾಣಿಯನ್ನು ಕುದುರೆಯ ಬೆನ್ನಿನಮೇಲೆ ಸಿಕ್ಕಿಸಿ
ರುತ್ತಿದ್ದರು. ಶತ್ರುಸೈನ್ಯದ ಮಧ್ಯದಲ್ಲಿ ನುಗ್ಗುವಾಗ ಆ ಗುರಾಣಿಯನ್ನು
ಬೆನ್ನಿಗೆ ಕಟ್ಟಿಕೊಳ್ಳುತ್ತಿದ್ದರು. ಎಡಗೈಯಲ್ಲಿ ಹಿಡಿಯುತ್ತಿದ್ದ ಭಲ್ಯದ
ಕೊನೆಯು ವಿಷಪೂರಿತವಾಗಿದ್ದಿತು. ಮಹಮದಾಲಿಯವರು ಸೈನ್ಯ
ಮಧ್ಯದಿಂದ ಕುದುರೆಯನ್ನು ಚಿಮ್ಮಿಸಿ ಶತ್ರುಸೈನ್ಯದಮೇಲೆ ನುಗ್ಗಿದರೆ
ಒಂದೇಟಿಗೆ ಹತ್ತು ಸೈನಿಕರ ತಲೆಬುರುಡೆಗಳು ಉರುಳುತ್ತಿದ್ದವು.
ಕ್ಷಣಾರ್ಧದಲ್ಲಿ ಕುದುರೆಯನ್ನು ಒಂದುಸುತ್ತು ತಿರುಗಿಸುವುದರೊಳಗೆ
ನೂರು ಸೈನಿಕರನ್ನು ಭೂಮಿಗೆ ಕೆಡವುತ್ತಿದ್ದರು. ಆ ಯುದ್ಧನೈಪುಣ್ಯ
ವನ್ನು ಕಂಡು ಎಂತಹ ವೀರರಾದರೂ ಆ ಕಾಲದಲ್ಲಿ ಆಶ್ಚರ್ಯಪಡುತ್ತಿ
ದ್ದರು. ಮಹಮದಾಲಿಯವರಿಗೆ ಒಂದೆರಡು ಅಂಶಗಳಲ್ಲಿ ನಗರದ

ಸೀಮೆಯು ಆಶ್ಚರ್ಯವನ್ನುಂಟುಮಾಡಿತು. ಪಾಳೆಯಗಾರರ ಸೈನ್ಯಗಳು ಎಲ್ಲಿಂದಲೋ ನುಗ್ಗಿಬಂದು ಮೈಸೂರುಸೈನ್ಯವನ್ನು ಘಾತಿಸಿ ಓಡಿಹೋಗುತ್ತಿದ್ದವು. ಆ ಸೈನಿಕರು ಎಲ್ಲಿಂದ ಬರುತ್ತಾರೆ, ಹೇಗೆ ತಪ್ಪಿಸಿಕೊಂಡು ಹೊರಟುಹೋಗುತ್ತಾರೆ ಎಂಬ ಕಲ್ಪನೆಯೇ ಆಗುತ್ತಿರಲಿಲ್ಲ. ಒಬ್ಬ ಪಾಳೆಯಗಾರನು ಸೈನ್ಯಸಮೇತವಾಗಿ ಯುದ್ಧಕ್ಕೆ ಬಂದರೆ ಕೊನೆಯವರೆಗೂ ನಿಂತು ಖಡಾಖಡಿ ಯುದ್ಧಮಾಡುತ್ತಿದ್ದನು. ಅವನ ಸೈನ್ಯವೆಲ್ಲವೂ ನೆಲಕ್ಕುರುಳಿ ಅವನೂ ಸತ್ತುಬಿದ್ದಮೇಲೆ ಉಳಿದ ಸೈನ್ಯಗಳು ಮಾತ್ರ ಓಡಿಹೋಗುತ್ತಿದ್ದವು ಹೀಗೆ ಯುದ್ಧಕ್ಕೆ ಬಂದ ಪಾಳೆಯಗಾರರು ನೂರಾರು ಸೈನಿಕರನ್ನು ಕೊಂದು ರಣಕ್ಷೇತ್ರದಲ್ಲಿ ಮಡಿದು ಬಿದ್ದುದನ್ನು ಮಹಮದಾಲಿಯವರು ನೋಡುತ್ತಿದ್ದರು. ಈ ಪಾಳೆಯಗಾರರ ಸೈನಿಕರು ಎಂತಹ ಧೀರರು, ಎಷ್ಟು ಕೆಚ್ಚಿದೆಯಿಂದ ಹೋರಾಡುತ್ತಾರೆ. ಒಬ್ಬ ಪಾಳೆಯಗಾರನಾದರೂ ಹೇಡಿಯಂತೆ ಓಡಿಹೋಗುವುದಿಲ್ಲವಲ್ಲಾ ಎಂದು ಮಹಮದಾಲಿಯವರು ಆಶ್ಚರ್ಯಪಡುತ್ತಿದ್ದರು. ಹೀಗೆ ಒಂದುವಾರವು ಮೈಸೂರುಸೈನ್ಯಗಳು ಮುಂದುವರೆದಾಗ್ಯೂ ಎರಡುಗಾವುದಗಳ ದಾರಿಯು ಸವೆದಿರಲಿಲ್ಲ. ಒಂದು ವಾರದೊಳಗಾಗಿ ಹತ್ತು ಯುದ್ಧಗಳಾಗಿದ್ದವು. ನೂರಿಪ್ಪತ್ತುಜನ ಪಾಳೆಯಗಾರರಿದ್ದಾರೆಂದು ಮಹಮದಾಲಿಯವರಿಗೆ ವರದಿಯಾಗಿತ್ತು. ಹೀಗೆ ಯುದ್ಧವು ನಡೆಯುತ್ತಿದ್ದರೆ ಒಂದು ವರ್ಷವಾದಾಗ್ಯೂ ನಗರದ ಯುದ್ಧವು ಮುಗಿಯುವುದಿಲ್ಲವೆಂದು ಅವರು ಮನಗಂಡರು. ಎಷ್ಟೇ ಭಾರೀ ಯುದ್ಧವಾದಾಗ್ಯೂ ಎರಡು ತಿಂಗಳಿಗಿಂತ ಹೆಚ್ಚಾಗಿ ಯುದ್ಧವು ಮುಂದುವರಿಯಕೂಡದೆಂದು ಮಹಮದಾಲಿಯವರ ಸಂಕಲ್ಪವಾಗಿದ್ದಿತು. ಮಳೆಗಾಲವು ಆರಂಭವಾಗಿಬಿಟ್ಟರೆ ಈ ಸೈನ್ಯಗಳೆಲ್ಲವೂ ಕಷ್ಟಕ್ಕೆ ಗುರಿಯಾಗಿ ನೊಂದು ನಷ್ಟವಾಗುತ್ತದೆಂದು ಅವರು ಅರಿತಿದ್ದರು. ಪಾಳೆಯಗಾರರು ಒಬ್ಬೊಬ್ಬರಾಗಿ ಯುದ್ಧಕ್ಕೆ ಬರುತ್ತಿದ್ದರು. ಇವರೆಲ್ಲರೂ ಒಟ್ಟಿಗೆ ಏಕೆ ಯುದ್ಧಕ್ಕೆ ಬರುವುದಿಲ್ಲ ಎಂದು ಮಹಮದಾಲಿಯವರು ಚಿಂತಿಸುತ್ತಿದ್ದರು. ಮುಂದಿನ ಸೈನ್ಯವು ಎದುರು ಬಿದ್ದ ಪಾಳೆಯಗಾರರೊಡನೆ ಯುದ್ಧ

ಮಾಡುತ್ತಿರಲಿ. ಹಿಂದಿನ ಸೈನ್ಯಗಳು ಮುಂದಕ್ಕೆ ಸರಿಯಲಿ ಎಂದು ಆಜ್ಞೆಯಿತ್ತರು ಹಾಗೆ ಮುಂದಿನ ಸೈನ್ಯಗಳು ಹಿಂದಕ್ಕೂ ಹಿಂದಿನ ಸೈನ್ಯಗಳು ಮುಂದಕ್ಕೂ ನುಗ್ಗುವುದರಿಂದ ಬೇಗ ಬೇಗ ಮುಂದುವರಿಯಲು ಸಾಧ್ಯವಾಗುತ್ತದೆಂದು ಮಹಮುದಾಲಿಯುವರು ಭಾವಿಸಿದ್ದರು. ವಸ್ತುತಃ ಅಷ್ಟೇನೂ ಅದು ಫಲಕಾರಿಯಾಗಲಿಲ್ಲ. ಹಿಂದಿನ ಸೈನ್ಯಗಳು ಮುಂದಕ್ಕೆ ಹೋಗುತ್ತ ಹೋಗುತ್ತ ಇದ್ದಹಾಗೂ ಪಾಳೆಯಗಾರರು ಮೇಲೆ ಬಿದ್ದು ಎದುರಿಸುತ್ತಲೇ ಇದ್ದರು. ಹಳ್ಳಗಳನ್ನು ದಾಟುವಾಗ, ಬೆಟ್ಟದ ಸಾಲುಗಳ ಮಧ್ಯದಲ್ಲಿ ಹೋಗುವಾಗ ಮೈಸೂರು ಸೈನ್ಯಕ್ಕೆ ಬಹಳ ದಿಗಿಲು ಬಡಿದಂತಾಗುತ್ತಿದ್ದಿತು. ಹೀಗೆ ಇಡೀ ಮೈಸೂರು ಸೈನ್ಯದ ಮೇಲೆ ಪಾಳೆಯಗಾರರು ಬಿದ್ದು ಯುದ್ಧಮಾಡುತ್ತಿದ್ದರು.

ರಾಮಪುರವು ಇನ್ನೂ ಒಂದು ಹರಿದಾರಿ ದೂರವಿತ್ತು. ಅಲ್ಲಿ ತುಂಗಾನದಿಯನ್ನು ದಾಟಬೇಕು. ನದಿಯಲ್ಲಿ ನೀರೇನೂ ಹೆಚ್ಚಾಗಿಲ್ಲ. ನದಿಯನ್ನು ಸೈನ್ಯಗಳು ದಾಟಿಹೋಗಬೇಕು. ಎದುರುಗಡೆ ಗೋಪಾಲನಾಯಕರ ಬ್ರಹ್ಮಾಂಡವಾದ ಸೈನ್ಯವಿದೆಯೆಂದು ಸಮಾಚಾರವು ಬಂದಿತು. ಮಹಮುದಾಲಿಯುವರು ಇಲ್ಲಿ ದೊಡ್ಡ ಯುದ್ಧವು ಪ್ರಾಪ್ತವಾಗುತ್ತದೆಂದು ಊಹಿಸಿದರು. ನದಿಯ ಈಚೆಯ ದಂಡೆಯಲ್ಲಿಯೇ ಬೀಡುಬಿಡುವಂತೆ ಆಜ್ಞೆಯಿತ್ತರು. ಮೂರುದಿನಗಳು ಅಲ್ಲಿ ಸೈನ್ಯದ ಬೀಡುಬಿಟ್ಟಿತು. ಹೈದರಲ್ಲೀಖಾನರು ಒಂದು ಗಾವುದ ಹಿಂದಿದ್ದರು. ಅವರಿಗೆ ಮಹಮುದಾಲಿಯುವರ ಸೈನ್ಯದ ಸನ್ನಿವೇಶವು ಎದುರು ದಂಡೆಯಲ್ಲಿ ಗೋಪಾಲನಾಯಕರ ಸೈನ್ಯವಿದೆಯೆಂದು ತಿಳಿಯಬಂದಿತು. ಹೈದರಾಲಿಯುವರು ತಮ್ಮ ಸೈನ್ಯವನ್ನು ತಿರುಗಿಸಿ ಬೇರೆಕಡೆಯಿಂದ ತುಂಗಾನದಿಯನ್ನು ದಾಟಲು ಪ್ರಯತ್ನಿಸಿದರು. ದಾರಿಯಲ್ಲಿ ಸಣ್ಣಪುಟ್ಟ ಸೈನ್ಯದಳಗಳನ್ನು ಎದುರಿಸಬೇಕಾಗಿ ಬಂದರೂ ಹೈದರಾಲಿಯುವರ ಆಲೋಚನೆ ಫಲಕಾರಿಯಾಯಿತು. ಅವರು ಅತ್ತಕಡೆ ಮಹತ್ತರವಾದ ಸೈನ್ಯದೊಂದಿಗೆ ತುಂಗಾನದಿಯನ್ನು ದಾಟಿಯೇಬಿಟ್ಟಿದ್ದರು. ಇತ್ತ ಮಹಮುದಾಲಿಯುವರು ತುಂಗಾನದಿಯ ದಂಡೆಯಲ್ಲಿ ಸೈನ್ಯವನ್ನು

ನಿಲ್ಲಿಸಿಕೊಂಡು ನಾಲ್ಕಾರು ಕಡೆಗಳಿಂದ ನದಿಯನ್ನು ದಾಟುವಂತೆ ಸೈನಿಕರಿಗೆ ಅಪ್ಪಣೆಯಿತ್ತರು. ಸ್ವಯಂ ಮಹಮದಾಲಿಯವರ ಸೈನ್ಯವು ಆ ಸ್ಥಳದಲ್ಲಿಯೇ ನದಿಯನ್ನು ದಾಟುವ ಏರ್ಪಾಡುಮಾಡಿಕೊಂಡಿದ್ದಿತು. ಮುಂದುಗಡೆ ಆನೆಗಳು ಹೊರಟವು. ಗೋಪಾಲನಾಯಕರ ಸೈನ್ಯದಲ್ಲಿ ಆನೆಗಳಿರಲಿಲ್ಲ. ಕಾಲಾಳುಗಳು ಮೇಲೆ ಬಿದ್ದು ತಡೆಯುತ್ತಿದ್ದರು. ಆದರೆ ಆನೆಗಳನ್ನು ಮಾವುತರು ರಭಸದಿಂದ ಮುಂದೆ ನುಗ್ಗಿಸುತ್ತಿದ್ದಾಗ ಪಾಳೆಯಗಾರರ ಪದಾತಿಸೈನ್ಯಗಳು ಚೆದುರಿಹೋಗುತ್ತಿದ್ದವು. ಮಹಮದಾಲಿಯವರ ಸೈನ್ಯಗಳೆಲ್ಲವೂ ಈ ಉಪಾಯದಿಂದ ಆ ಗಡಿಯನ್ನು ದಾಟಿದಾಗ್ಯೂ ಸಾವಿರಾರುಜನ ಸೈನಿಕರು ಮೃತಿ ಹೊಂದಿದರು. ಬಲು ಪ್ರಯಾಸದಿಂದ ಮಹಮದಾಲಿಯವರ ಸೈನ್ಯಗಳು ಈ ಗಡುವನ್ನು ದಾಟಿದವು.

ತುಂಗಾನದಿಯ ಉತ್ತರಭಾಗದಲ್ಲಿ ಮಹಮಾದಲಿಯವರು ತಮ್ಮ ಸೈನ್ಯದ ವ್ಯೂಹವನ್ನು ರಚಿಸಿದರು. ಪೂರ್ವಭಾಗದಲ್ಲಿ ಹೈದರಾಲಿಯವರ ಸೈನ್ಯಗಳು ಬೀಡುಬಿಟ್ಟವು. ಇಲ್ಲಿ ಮಹಮದಾಲಿಯವರು ಆಕಾಲದ ಆ ಸನ್ನಿವೇಶದ ಯುದ್ಧವಿದ್ಯೆಯ ಒಂದು ತಂತ್ರವನ್ನು ಹೂಡಿದರು. ತಾವೇ ಮುಂದುಮುಂದಕ್ಕೆ ನುಗ್ಗಿಹೋಗುವುದಕ್ಕಿಂತಲೂ, ತಮ್ಮ ಸೈನ್ಯವನ್ನೆಲ್ಲಾ ಘಟ್ಟಿ ವ್ಯೂಹವಾಗಿ ರಚಿಸಿಟ್ಟರೆ ಗೋಪಾಲನಾಯಕರು ಆ ಸೈನ್ಯದಮೇಲೆ ಬಂದುಬಿದ್ದರೆ ಮಹಾರಣ್ಯದಲ್ಲಿ ಬಲೆಯನ್ನು ಬೀಸಿ ಹುಲಿಯನ್ನು ಹಿಡಿದಂತಾಗುತ್ತದೆಂದು ಅವರು ಭಾವಿಸಿದ್ದರು. ಅದುವರೆವಿಗೆ ಮೈಸೂರು ಸೈನ್ಯದಮೇಲೆ ಬಿದ್ದಂಥ ಹತ್ತಾರು ಪಾಳೆಯಗಾರರು ಪ್ರಾಣವು ಹಾರಿಹೋಗುವವರೆಗೂ ಹೋರಾಡಿ ರಣಭೂಮಿಯಲ್ಲಿ ಸತ್ತು ವೀರಸ್ವರ್ಗವನ್ನು ಹೊಂದಿದ್ದರೇ ಹೊರತು, ಒಬ್ಬರಾದರೂ ಹಿಂತಿರುಗಿ ಪಲಾಯನಮಾಡಿರಲಿಲ್ಲ. ಮಹಮದಾಲಿಯವರು, "ಈ ಪಾಳೆಯಗಾರರೆಲ್ಲರೂ ಘೋರಸಂಕಲ್ಪಮಾಡಿದ್ದಾರೆ. ರಣದಲ್ಲಿ ಪ್ರಾಣಹೋಗುವವರೆವಿಗೂ ಕಾದಾಡಿ ಮೃತ್ಯುವನ್ನಾಲಂಗಿಸಬೇಕೆಂದು ಶಪಥ ತೊಟ್ಟಿದ್ದಾರೆ. ಈ ಯುದ್ಧದಲ್ಲಿ ಅವರಿಗೆ ಅಪಜಯವಾದರೂ

ಅವರ ಘೋರಸಂಕಲ್ಪ ಮತ್ತು ಶಪಥಗಳನ್ನು ಸಾಧಿಸಿ ವಿಜಯವನ್ನೇ ಗಳಿಸುತ್ತಾರೆ. ಈ ಗೋಪಾಲನಾಯಕರು ಮಾತ್ರ ಸಾಯಕೂಡದು. ಅವರನ್ನು ಸೆರೆ ಹಿಡಿಯಬೇಕು. ನನ್ನ ಕಣ್ಣಿನ ದೃಷ್ಟಿಯಲ್ಲಿ ಅವರು ಇರುವವರೆಗೂ ಅವರ ಶಿರವು ನೆಲಕ್ಕುರುಳದಂತೆ ನಾನು ನೋಡಿಕೊಳ್ಳ ಬಲ್ಲೆ. ಗೋಪಾಲನಾಯಕರು ಮೃತಿಹೊಂದಿದರೆ ಯುದ್ಧದಲ್ಲಿ ಅವರಿಗೆ ಜಯವಾದಂತೆ. ಸೆರೆಸಿಕ್ಕಿದರೆ ಈ ಯುದ್ಧದ ಸಂಪೂರ್ಣ ವಿಜಯವು ನನಗೆ ಲಭಿಸಿದಂತೆ ಎಂದು ಯೋಚನೆಮಾಡುತ್ತಿದ್ದರು.

ವ್ಯೂಹರಚನೆಮಾಡಿ ಎರಡು ಹಗಲು ಎರಡು ರಾತ್ರಿಗಳು ಕಳೆದಾಗ್ಯೂ ಗೋಪಾಲನಾಯಕರ ಸೈನ್ಯವಾಗಲೀ ಇತರ ಪಾಳೆಯ ಗಾರರ ಸೈನ್ಯಗಳಾಗಲೀ ಅತ್ತ ಸುಳಿಯಲೇ ಇಲ್ಲ. ಇದು ಮಹಮದಾಲಿ ಯವರಿಗೆ ಆಶ್ಚರ್ಯವನ್ನುಂಟುಮಾಡಿತು. ಮೂರನೆಯದಿನ ನಸುಕಿ ನಲ್ಲಿಯೇ ಐವತ್ತು ಜನ ಕಟ್ಟಾಳುಗಳ ಸಣ್ಣ ಸೈನ್ಯದ ಗಂಪನ್ನು ಜೊತೆ ಯಲ್ಲಿ ಕರೆದುಕೊಂಡು ಬಹುಜಾಗರೂಕತೆಯಿಂದ ಕುದುರೆಗಳನ್ನು ನಡೆಸುತ್ತಾ ಹೈದರಾಲಿಯವರ ಶಿಬಿರಕ್ಕೆ ಹೋಗಿ ಸೇರಿದರು. ಆ ಶಿಬಿರ ವನ್ನೆಲ್ಲಾ ಒಂದು ಸುತ್ತು ಕಟ್ಟಿ ಎಲ್ಲ ಸೇನಾನಾಯಕರಿಗೂ ಎಚ್ಚರಿಕೆ ಯನ್ನಿತ್ತು "ನೀವುಗಳು ಸರ್ವದಾ ಯುದ್ಧಸನ್ನದ್ಧರಾಗಿರಬೇಕು. ಶತ್ರು ಸೈನಿಕರ ಸುಳುವಿಲ್ಲವೆಂದು ಪ್ರಮತ್ತರಾಗಿರಕೂಡದು. ಇಲ್ಲಿನ ಯುದ್ಧವು ಸಾಮಾನ್ಯವಾದುದಲ್ಲ. ಯಾವ ನಿಮಿಷದಲ್ಲಿ ಎತ್ತ ಕಡೆಯಿಂದ ಶತ್ರುಗಳು ಬಂದು ನುಗ್ಗುವರೋ ಅದನ್ನು ಊಹಿಸುವುದು ದುಸ್ತರ. ಎಂಥಾ ವೇಗದಿಂದ ಬರುವರೋ ಅರಿಯುವುದು ಕಷ್ಟ" ಎಂದು ಎಚ್ಚರಿಕೆಯನ್ನು ಕೊಟ್ಟು ನವಾಬರವರ ಗುಡಾರದ ಬಳಿಗೆ ಹೋಗಿ ಬಾಗಿಲನವನ ಮೂಲಕ ಹೇಳಿಕಳುಹಿಸಿದರು. ಬಾಗಿಲಿನವನು ಡೇರೆಯೊಳಗೆ ಹೋಗಿ ಆಲೋಚನಾಮಗ್ನರಾಗಿಕುಳಿತಿದ್ದ ನವಾಬರಿಗೆ ನೆಲಮುಟ್ಟಿ ಸಲಾಂ ಮಾಡಿ ಬಾಯಿಗಡ್ಡಲಾಗಿ ಕೈ ಇಟ್ಟುಕೊಂಡು ಸಣ್ಣ ದನಿಯಿಂದ "ಹುಜೂರ್ ! ದೊಡ್ಡ ದಿವಾನರವರು ಬಂದು ಖಾವಿಂದರವರ ಭೇಟಿಗಾಗಿ ಹೊರಗೆ ಕಾದಿದ್ದಾರೆ" ಎಂದು ಬಿನ್ನಹ ಮಾಡಿದನು. ಹೈದರಾಲಿಯವರು

ಅವನ ಕಡೆಗೆ ತಿರುಗಿ ಆತುರರಾಗಿ "ಒಳಗೆ ಬರಮಾಡು" ಎಂದು ಅಪ್ಪಣೆ ಯಿತ್ತರು. ದಿವಾನ್ ಮಹಮದಾಲಿಯವರು ಒಳಗೆ ಬಂದು ಕುರ್ನಿಸಾತ್ ಮಾಡುವಷ್ಟರಲ್ಲಿ ಹೈದರಾಲಿಯವರು ಜಗ್ಗನೆದ್ದು ಪರ್ಯಂಕದಿಂದಿಳಿದು ಹಸ್ತಲಾಘವವನ್ನಿತ್ತು ಮಹಮದಾಲಿಯವರನ್ನು ಪರ್ಯಂಕದ ಮೇಲೆ ಸಮಾಸನದ ಮೇಲೆ ಕುಳ್ಳಿರಿಸಿಕೊಂಡು ಯೋಗಕ್ಷೇಮವನ್ನು ವಿಚಾರಿಸ ಲಾರಂಭಿಸಿದರು.

ಹೈದರಾಲಿಯವರು "ದಿವಾನರವರೇ, ಏನು ಸಮಾಚಾರ?" ಎಂದು ಕೇಳಿದರು. ದಿವಾನರು ವಿಸ್ಮಯದಿಂದ "ಹುಜೂರ್, ಸಮಾಚಾರವೇ ಇಲ್ಲದೆ ಅಪ್ರತಿಭನಾಗಿದ್ದೇನೆ. ಪಾಳೆಯಗಾರರ ಸಮಾಚಾರವೂ ಇಲ್ಲ. ಸುಳಿವೂ ಇಲ್ಲ. ಈ ಗೋಪಾಲನಾಯಕರ ಪರಾಕ್ರಮವನ್ನು ಬಹಳವಾಗಿ ಕೇಳಿದ್ದೇನೆ. ಅವುಗಳೆಲ್ಲಾ ಕಥೆಗಳೋ ಎನ್ನಿಸುತ್ತಿವೆ ನನಗೆ" ಎಂದರು. ಹೈದರಾಲಿಯವರು ಗಹಗಹಿಸಿ ನಕ್ಕು, "ದಿವಾನರ ಬುದ್ಧಿಗೆ ಮಂಕು ಕವಿದಿದೆ. ಹುಚ್ಚು ಹಿಡಿದಿದೆ. ನಾನು ಹೇಳುತ್ತೇನೆ ಕೇಳಿರಿ. ನಾನು ಮರಾಟರೊಡನೆ ಯುದ್ಧಮಾಡಿದ್ದೇನೆ. ಅವರೂ ಗಟ್ಟಿಗರೇನೋ ಹೌದು. ಆದರೆ ನುಸುಳಿಕೊಳ್ಳುವ ಉಪಾಯಗಾರರು. ಗೋಪಾಲನಾಯಕರು ಮಹಾಪರಾಕ್ರಮಿಗಳು. ಎಂತಹ ಅಪಾಯದ ಪರಿಸ್ಥಿತಿಯಲ್ಲಾದರೂ ಎದೆಗೊಟ್ಟುನಿಲ್ಲುವ ಧೀರ ಮಲಬಾರಿಗಳನ್ನು ನೋಡಿದ್ದೇನೆ. ಕಡುಗಲಿ ಗಳಾಗಿ ಯುದ್ಧ ಮಾಡುತ್ತಾರೆ. ಸೋಲುಬಂದಾಗ ಹೇಡಿಗಳಂತೆ ಓಡಿಹೋಗುತ್ತಾರೆ. ಗೋಪಾಲನಾಯಕನು ಕಡುಗಲಿಗಳಲ್ಲಿ ಗಂಡುಗಲಿ. ಸೋಲನ್ನು ಕಂಡಾಗ ಅವನ ಪರಾಕ್ರಮವು ನೂರುಮಡಿಯಾಗುತ್ತದೆ. ತಮಿಳರು ಯುದ್ಧಮಾಡುವುದನ್ನು ಬಲ್ಲೆ. ಚಾತುರ್ಯದಿಂದಲೇ ರಣದಲ್ಲಿ ಹೋರಾಡುತ್ತಾರೆ. ಗೆದ್ದಾಗ ವಿಜೃಂಭಿಸುತ್ತಾರೆ. ಸೋತಾಗ ಸತ್ತಂತಾಗುತ್ತಾರೆ. ಈ ನಗರದ ವೀರರು ಚಾತುರ್ಯದ ಮಾಯೆಯನ್ನೇ ಅರಿಯರು. ಎದುರುನಿಂತರೆ ಕಲ್ಲುಬಂಡೆಯಂತೆ ನಿಲ್ಲುತ್ತಾರೆ. ಮೇಲೆ ಬಿದ್ದರೆ ಸಿಡಿಲಿನಂತೆ ಬೀಳುತ್ತಾರೆ. ಸೋತರೆ ವೀರಸ್ವರ್ಗದಮೇಲೆ ಏರಿ ನಿಂತು ನಗುತ್ತಾರೆ. ಅವರಲ್ಲೆಲ್ಲಾ ಗೋಪಾಲನಾಯಕನು ಮುಕುಟ

ಮಣಿ. ಆಂಧ್ರರು ಯುದ್ಧ ಮಾಡುವುದನ್ನು ಕಂಡಿದ್ದೇನೆ. ವೀರರಂತೆ ಯುದ್ಧ ಮಾಡುತ್ತಾರೆ. ಆದರೆ ಅವರ ಪರಾಕ್ರಮದಲ್ಲಿ ತೀಕ್ಷ್ಣತೆಯಿಲ್ಲ. ಮುಂಡು ಪರಾಕ್ರಮ. ಎದ್ದಾಗ ಬಿರುಗಾಳಿಯಂತೆ ಏಳುತ್ತಾರೆ. ಬಿದ್ದಾಗ ಆನೆಯು ಗಂಪು ಹಳ್ಳದಲ್ಲಿ ಬಿದ್ದು ನೊಂದು ಅರಚುವಂತೆ ಅರಚುತ್ತಾರೆ. ನಗರದ ಪಾಳೆಯಗಾರರದು ತೀಕ್ಷ್ಣಪರಾಕ್ರಮ. ಸಿಂಹಗಳಂತೆ ಪರಾಕ್ರಮದಿಂದ ನುಗ್ಗುತ್ತಾರೆ. ಸಿಂಹಗಳು ಆನೆಗಳಮೇಲೆ ಆಕ್ರಮಣ ಮಾಡಿ ಆನೆಗಳ ತಲೆಯನ್ನು ಸೀಳುವಂತೆ ಶತೃಸೈನ್ಯವನ್ನು ಸೀಳುತ್ತಾರೆ. ಇಂಥಾ ಪಾಳೆಯಗಾರರ ಸೈನ್ಯವಿದ್ದರೆ ಒಂದೇ ವರ್ಷದಲ್ಲಿ ದೆಹಲಿಯ ಮೇಲೆ ಮೈಸೂರು ಬಾವುಟನ್ನು ಹಾರಿಸಬಲ್ಲೆ. ದೆಹಲಿಯನ್ನು ಮೈಸೂರಿಗೆ ಅಧೀನವಾಗಿ ಮಾಡಬಲ್ಲೆ" ಎಂದರು.

ದಿವಾನ್ ಮಹಮದಾಲಿಯರು, "ನವಾಬರೇ, ಮಾಫ್‌ಮಾಡ ಬೇಕು. ತಮ್ಮ ಬಾಯಿಯಲ್ಲಿ ಇಂತಃ ಹೊಗಳಿಕೆಯ ಅಗ್ಗಳಿಯನ್ನು ನಾನೆಂದೂ ಕೇಳಿಲ್ಲ. ತಮ್ಮ ಮನಸ್ಸಿನಲ್ಲಿ ಇಷ್ಟೊಂದು ಪ್ರೀತಿಗೌರವ ಈ ನಗರದಮೇಲೆ ಇದ್ದರೆ ಮಹಾಪ್ರಭುಗಳು ದಂಡೆತ್ತಿ ಬಂದುದು ತಪ್ಪೆಂದು ನಾನು ಹೇಳುತ್ತೇನೆ. ಇವರನ್ನು ಸಾಮ, ದಾನಗಳಿಂದ ಖಾವಂದರವರು ವಲಿಸಿಕೊಂಡು ತಮ್ಮ ಅಧೀನಮಾಡಿಕೊಳ್ಳಬಹುದಾ ಗಿದ್ದಿತು. ಈ ಪ್ರಯಾಸವೇಕೆ? ಈ ಸಾಹಸವೇಕೆ? ಈ ಘನಸಂಗ್ರಾಮ ವೇಕೆ? ಇಷ್ಟು ಜನ ವೀರರ ಹತಾಹತಿಗಳೇಕೆ?" ಎಂದರು.

ಹೈದರಾಲಿಯವರು ದೊಡ್ಡದಾಗಿ ಕಣ್ಣರಳಿಸಿ "ಸಾಮ, ದಾನಗಳೆ! ಸಾಮದಾನಗಳಿಗೆ ವಶರಾಗಲು ಈ ಜನರು ಬಕರಾಗಳೆಂದು ಭಾವಿ ಸಿದ್ದೀರಾ? ಗೋಪಾಲನಾಯಕನಲ್ಲಿಗೆ ನಾವು ಸಂಧಿಗೆ ಹೇಳಿಕಳುಹಿಸಿ ದಾಗ ಅವನು ಕೊಟ್ಟ ಉತ್ತರವನ್ನು ನೀವು ಕೇಳಲಿಲ್ಲವೇ? ಗೋಪಾಲ ನಾಯಕನು ಯಾವಾಗಲೂ ಮುಸಲ್ಮಾನರೊಡನೆ ಸಂಧಿಗೆ ಒಡಂಬಡು ವುದೇ ಇಲ್ಲ." ಎಂದರು.

ದಿವಾನರು "ಹಾಗಾದರೇನುಮಾಡಬೇಕು?" ಎಂದರು.

ಹೈದರಾಲಿಯವರು "ಏನುಮಾಡಬೇಕೋ ಅದನ್ನು ಮಾಡುವು ದಕ್ಕೆ ನಾವು ಇಲ್ಲಿಗೆ ಬಂದಿದ್ದೇವೆ." ಎಂದರು.

ಅನಂತರ ಹೇಗೆ ಹೇಗೆ ಯುದ್ಧಮಾಡಬೇಕು. ಯಾವ ಯಾವ ಸೇನಾಧಿಪತಿಗಳು ಮುಂದೆ ನುಗ್ಗಬೇಕು. ಯಾರು ಯಾರು ಹಿಂದಿರಬೇಕು—ಎಂಬ ಮಾತುಕಥೆಗಳನ್ನಾಡಿದರು. ಇನ್ನೂ ಎರಡು ದಿವಸಗಳು ನಿರೀಕ್ಷಣೆ ಮಾಡತಕ್ಕದ್ದೆಂದೂ ಗೋಪಾಲನಾಯಕರು ಯುದ್ಧಕ್ಕೆ ಬಾರದಿದ್ದರೆ, ಮಹಮುದಾಲಿಯವರೇ ಸೈನ್ಯವನ್ನು ಮುಂದುವರೆಸಿ ಗೋಪಾಲನಾಯಕರ ಸೈನ್ಯದಮೇಲೆಬಿದ್ದು ಕೆಣಕಬೇಕೆಂದೂ ಅವರನ್ನು ಮುಂದು ಮುಂದಕ್ಕೆ ಒತ್ತರಿಸುತ್ತಾ ಬಂದು ಹೈದರಾಲಿಯವರ ಸೈನ್ಯಕ್ಕೆ ಢಿಕ್ಕಿ ಹೊಡೆಯುವಂತೆಮಾಡಬೇಕೆಂದೂ, ವುಭಯ ಪಾರ್ಶ್ವಗಳಲ್ಲಿಯೂ ಸೈನ್ಯವನ್ನು ಸುತ್ತುಗಟ್ಟಿ ಪಾಳೆಯಗಾರರ ಸೈನ್ಯವನ್ನು ಸದೆಬಡಿಯಬೇಕೆಂದೂ ತೀರ್ಮಾನಮಾಡಿದರು.

ಗೋಪಾಲನಾಯಕರ ಸೈನ್ಯಗಳು ಬಂದು ಶಿಬಿರದಮೇಲೆ ಆಕ್ರಮಣಮಾಡಿದರೆ ಮತ್ತೊಂದು ದಂಡನ್ನು ಎತ್ತಿತಂದು ಪಾಳೆಯಗಾರರನ್ನು ಆಕ್ರಮಣಮಾಡಬೇಕೆಂದೂ ನಿರ್ಧರಿಸಿದರು. ಮಹಮುದಾಲಿಯವರು ನವಾಬರ ಅಪ್ಪಣೆಪಡೆದು ಎರಡು ಶಿಬಿರಗಳಿಗೂ ಸಮಾಚಾರಗಳನ್ನು ಅತಿ ತ್ವರಿತವಾಗಿ ತಲಪಿಸುವಂಥಾ ಏರ್ಪಾಡುಗಳನ್ನು ಮಾಡಿ ತಮ್ಮ ಶಿಬಿರಕ್ಕೆ ಹಿಂತಿರುಗಿಬಂದು ಭೋಜನವನ್ನು ತೀರಿಸುವವೇಳೆಗೆ ಅಪರಾಹ್ಣವು ಸಮೀಪಿಸುತ್ತಿದ್ದಿತು.

ಗೋಪಾಲನಾಯಕರು ಮೈಸೂರು ಸೈನ್ಯಗಳು ತುಂಗಾನದಿಯನ್ನು ದಾಟಿ ಬಂದ ಸಮಾಚಾರವನ್ನು ತಿಳಿದುಕೊಂಡರು. ಮೈಸೂರು ಸೈನ್ಯಗಳು ಎರಡುಕಡೆ ಬೀಡುಬಿಟ್ಟುದುದನ್ನು ಅರಿತಿದ್ದರು. ಬ್ರಹ್ಮಾಂಡವಾದ ಯುದ್ಧಸನ್ನಾಹಗಳನ್ನು ಎಸೆಗಿದ್ದರು. ಗೋಪಾಲನಾಯಕರು ಮಾಡಿದ್ದಂಥಾ ಯುದ್ಧಸನ್ನಾಹಗಳು ದಕ್ಷಿಣಾಪಥದಲ್ಲಿ "ನಭೂತೋ ನಭವಿಷ್ಯತಿ" ಎಂಬಂತೆ ಆಗಿದ್ದಿತು. ಪೂರ್ವಭಾಗದಲ್ಲಿ ತರೀಕೆರೆಯ ಪಾಳೆಯಗಾರರಾದ ಕೃಷ್ಣಪ್ಪನಾಯಕರು ತಮ್ಮ ಸೈನ್ಯಸಮೇತರಾಗಿ ಆಕ್ರಮಣಮಾಡತಕ್ಕದ್ದೆಂದೂ, ಮಧ್ಯಭಾಗದಲ್ಲಿ ಹರಪನಹಳ್ಳಿಯ ರುದ್ರನಾಯಕರು ನಿಲ್ಲತಕ್ಕದ್ದೆಂದೂ, ಮತ್ತೊಂದುಕಡೆಯಿಂದ ತಾವು

ಮಹಮುದಾಲಿಯವರ ಸೈನ್ಯವನ್ನು ಆಕ್ರಮಿಸಬೇಕೆಂದೂ ನಿರ್ಧಾರ ಮಾಡಿದರು. ಯುದ್ಧವು ರಾತ್ರಿಯಲ್ಲಿ ಆರಂಭವಾಗತಕ್ಕದ್ದೆಂದು ಸಂಕೇತ ಮಾಡಲ್ಪಟ್ಟಿತ್ತು. ಇದಕ್ಕೆ ಒಂದು ವಿಶೇಷ ಕಾರಣವಿತ್ತು. ರಾತ್ರಿಯು ಕೃಷ್ಣಪಕ್ಷದ ಕರಾಳರಾತ್ರಿ, ಬೆಟ್ಟಗುಡ್ಡಗಳ ಸೀಮೆ. ಯುದ್ಧವು ಮೈಸೂರು ಸೈನ್ಯಗಳಿಗೆ ಅಪರಿಚಿತವಾದ ನಮೂನೆಯ ಯುದ್ಧ.

ಏಳನೆಯ ದಿನ ರಾತ್ರಿ ಇದ್ದಕ್ಕಿದ್ದಂತೆ ಯುದ್ಧವು ಆರಂಭವಾಯಿತು. ತರೀಕೆರೆ ಪಾಳೆಯಗಾರರಾದ ಕೃಷ್ಣಪ್ಪನಾಯಕರು ಸೈನಿಕರಿಗೆಲ್ಲಾ ದೊಂದಿಗಳನ್ನು ಕೊಟ್ಟು ಮುಂದೆನುಗ್ಗಬೇಕೆಂದು ಆಜ್ಞೆಯಿತ್ತರು. ಏಕ ಕಾಲದಲ್ಲಿ ಐದು ಮೈಲಿಗಳ ಸುತ್ತುವಳೆಯದಲ್ಲಿ ಹೈದರನ ಶಿಬಿರದಮೇಲೆ ಸಾವಿರಸಾವಿರ ಸಂಖ್ಯೆಯ ದೊಂದಿಗಳನ್ನು ಹಿಡಿದುಕೊಂಡು ಸೈನಿಕರು ನುಗ್ಗಲಾರಂಭಿಸಿದರು. ಸುತ್ತಲೂ ಕಾಡುಮರಗಳನ್ನೂ ಒಣಗಿದ ಪೊದೆಗಳನ್ನು ತಂದುಹಾಕಿ ಅಗ್ನಿಜ್ವಾಲೆಗಳನ್ನು ಹತ್ತಿಸಿದರು. ಮಧ್ಯಭಾಗದಿಂದ ರುದ್ರನಾಯಕರು ಸೈನ್ಯವನ್ನು ಮುಂದೆ ತಳ್ಳಿದರು. ಪಂಜುಗಳ ಸೈನ್ಯಗಳ ಹಿಂದೆ ಶಸ್ತ್ರಸಜ್ಜಿತವಾದ ಸೈನ್ಯಗಳು ನುಗ್ಗಿಬರುತ್ತಿದ್ದವು. ಮತ್ತೊಂದು ಕಡೆ ಸ್ವಯಂ ಗೋಪಾಲನಾಯಕರು ತಮ್ಮ ಸೈನ್ಯವನ್ನು ಹೆಜ್ಜೆಹೆಜ್ಜೆಯಾಗಿ ಮುಂದುವರೆಸುತ್ತ ಬಂದರು.

ಮೈಸೂರು ಸೈನ್ಯದಲ್ಲಿ ಯಾವಾಗಲೂ ಯುದ್ಧಕ್ಕೆ ತಯಾರಿ ಇದ್ದೇ ಇತ್ತು. ಆದರೆ ಈ ರೀತಿಯಾಗಿ ಸುತ್ತಲೂ ಅಗ್ನಿಜ್ವಾಲೆಗಳನ್ನೆಬ್ಬಿಸಿ ಪೊಂಜಿನ ಸೈನಿಕರು ತಮ್ಮ ಸೈನ್ಯಗಳಮೇಲೆ ನುಗ್ಗುವರೆಂಬ ನಿರೀಕ್ಷಣೆಯೇ ಮೈಸೂರು ಸೈನಿಕರಿಗೆ ಇರಲಿಲ್ಲ. ಅಂದಿನ ಆ ಘೋರ ಯುದ್ಧದ ಭೀಕರ ಸ್ವರೂಪವನ್ನು ವರ್ಣಿಸಲು ನಮ್ಮ ಲೇಖನಿಯಲ್ಲಿ ಸತ್ವಯಿಲ್ಲ. ಹೈದರಾಲಿಯವರು ಸೈತಾನೀ ಯುದ್ಧ ಎಂದು ಇದನ್ನು ಎಷ್ಟೋ ದಿವಸಗಳವರೆಗೆ ಹೇಳುತ್ತಿದ್ದರು. ಕೃಷ್ಣಪ್ಪನಾಯಕರ ಆಕಾರವು ಭೀಷಣಾಕಾರ. ದೊಡ್ಡ ಎತ್ತರವಾದ ಕುದುರೆಯನ್ನೇರಿ ಸೈನ್ಯವನ್ನು ಭೇದಿಸಿಕೊಂಡು ಮುಂದೆ ನುಗ್ಗಿ ಬರುತ್ತಿದ್ದರು. ಆ ರಾತ್ರಿ ಆ ಪೊಂಜುಗಳ ಬೆಳಕಿನಲ್ಲಿ ಆ ಮಹಾಶ್ವದಮೇಲೆ ಭೀಷಣಾಕಾರನಾದ ವೀರನು ಕತ್ತಿಯನ್ನು ಝಳಪಿ

ಸುತ್ತಾ ಸೈನ್ಯದ ಮಧ್ಯದಲ್ಲಿ ನುಗ್ಗುವುದನ್ನು ಕಂಡವರಿಗೆ ಸಾಕ್ಷಾತ್ ಯಮಧರ್ಮರಾಜನು ಬರುತ್ತಿರುವಂತೆ ಭಾಸವಾಗುತ್ತಿತ್ತು. ಹೈದರಾಲಿ ಯವರು ಆನೆಯಮೇಲೆ ಅಂಬಾರಿಯನ್ನೇರಿ ಬಹು ದೂರದಲ್ಲಿ ಈ ಯುದ್ಧವನ್ನು ನೋಡುತ್ತಿದ್ದರು. ಮೈಸೂರಿನ ಸೈನಿಕರು ರೋಷಾ ವೇಶದಿಂದ ಆ ಅಗ್ನಿಜ್ವಾಲೆಗಳ ಮಧ್ಯದಲ್ಲಿಯೇ ನುಗ್ಗಿ ಶತ್ರುಗಳನ್ನು ಆಕ್ರಮಣಮಾಡಲು ಸಾಹಸಮಾಡುತ್ತಿದ್ದರು. ಆದರೆ ಆ ಅಗ್ನಿಜ್ವಾಲೆ ಗಳಮುಂದೆ ಕಾಲಾಳುಗಳು ನುಗ್ಗಲಾರದೇ ಹೋದರು. ಕುದುರೆಗಳು ಎರಡು ಹೆಜ್ಜೆ ಮುಂದಿಟ್ಟು ಮೂಗು ಬಾಯಿ ಕಣ್ಣುಗಳಲ್ಲಿ ಹೊಗೆ ತುಂಬಿ ಕೊಳ್ಳುತ್ತಲೇ ಝೇಂಕಾರವನ್ನು ಮಾಡಿಕೊಂಡು ಹಿಂದಕ್ಕೆ ಚಿಮ್ಮಿ ಬರುತ್ತಿದ್ದವು. ಹಿಂದಿನ ಪಡೆಯವರು ಕುದುರೆಗಳಿಗೆ ಖಾರವಾದ ಮದ್ಯವನ್ನು ಕುಡಿಸಿ ಬೆಂಕಿಯಮೇಲೆ ಹಾದು ಹೋಗಲು ಮುಂದೆ ನುಗ್ಗಿ ಬರುತ್ತಿದ್ದರು. ಅಷ್ಟರಲ್ಲಿ ಸೇನಾಧಿಪತಿಗಳಾದ ರಹಿದುಲ್ಲಾ ಖಾನರು ಒಂದು ಬುದ್ಧಿವಂತಿಕೆಯನ್ನು ಮಾಡಿದರು. ಸಾಲಿಗೆ ಇಪ್ಪತ್ತು ಫಿರಂಗಿ ಗಾಡಿಗಳನ್ನು ತಂದು ಮುಂದೆ ನಿಲ್ಲಿಸಿದರು. ಇಷ್ಟುಹೊತ್ತಿಗೆ ಎರಡು ಘಂಟೆಗಳಕಾಲ ಅತಿಕ್ರಮಿಸಿಹೋಗಿತ್ತು. ಮೈಸೂರು ಸೈನ್ಯಗಳು ಬಸವಳಿಯಲು ಆರಂಭಿಸಿದ್ದವು ಮುಂದುಗಡೆ ಫಿರಂಗಿಯಗಾಡಿಗಳನ್ನು ಕಂಡು ಪುನಃ ಮೈಸೂರು ಸೈನಿಕರು ಉತ್ತೇಜಿತರಾದರು.

ಫಿರಂಗಿಗಳು ಹಾರಲಾರಂಭವಾಗುತ್ತಲೇ ಪಾಳೆಯಗಾರರ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಆದರೆ ಮೇಲು ಭಾಗದಿಂದ ರುದ್ರನಾಯಕರ ಸೈನ್ಯಗಳು ಹೈದರಾಲಿಯ ಸೈನ್ಯದಮೇಲೆ ಬೀಳ ಲಾರಂಭಿಸಿದವು. ಅತ್ತಕಡೆ ಗೋಪಾಲನಾಯಕರ ಸೈನ್ಯಗಳು ಮೈಸೂರು ಸೈನ್ಯದಮೇಲೆ ವೇಗವಾಗಿ ಆಕ್ರಮಿಸಿದವು. ಆದಿನದ ಯುದ್ಧದಲ್ಲಿ ಮೈಸೂರಿನವರಿಗೆ ಬಹಳ ನಷ್ಟವಾಯಿತು. ಆದರೆ ಮೂರು ಕಡೆ ಗಳಿಂದಲೂ ಫಿರಂಗಿಗಳು ಹಾರಲು ಮೊದಲಿಟ್ಟಾಗ ಪಾಳೆಯಗಾರರ ಸೈನ್ಯಗಳು ಹಿಮ್ಮೆಟ್ಟಿದವು. ಹೀಗೆ ಯುದ್ಧವು ಆರಂಭವಾಯಿತು. ನಾವು ಬರೆಯುತ್ತಿರುವುದು ಯುದ್ಧದ ಕಥೆಯಲ್ಲ. ಆದಾಗ್ಯೂ ಈಗಲೂ

ಹೆಂಗಸರು ರಾಗಿಬೀಸುವಾಗ ಗಂಡಸರು ಭತ್ತವನ್ನು ತೂರಿ ಒಕ್ಕುವಾಗ ಈ ಯುದ್ಧದ ಹಾಡುಗಳನ್ನು ಅಮೂಲಗ್ರವಾಗಿ ಹಾಡುತ್ತಾರೆ.

---

೩೩

## ಅಗ್ನಿಕುಂಡದಲ್ಲಿ ಆತ್ಮಸಮರ್ಪಣೆ

ನಗರಕ್ಕೂ ಯುದ್ಧ ನಡೆಯುತ್ತಿರುವ ರಾಮಪುರದ ಗಡುವಿಗೂ ಮೂವತ್ತು ಮೈಲಿ ದೂರವಿದ್ದಿತು. ಆದರೆ ಸೂರ್ಯೋದಯವಾಗುವುದರೊಳಗೆ ಯುದ್ಧಕ್ಕೆ ಆರಂಭವಾಗಿದೆಯೆಂದು ನಗರಕ್ಕೆ ಸಮಾಚಾರವು ಮುಟ್ಟಿತು. ರಾಮಕೃಷ್ಣರವರು ಬೆಳಗಿನಝಾವದಲ್ಲಿಯೇ ಬಿದನೂರಿನ ರಕ್ಷಣೆಗೆ ಬಲವಾದ ಸೈನ್ಯವನ್ನು ಇರಿಸಿದರು. ಕೆಳದಿ ಮತ್ತು ನಗರದ ಅರಮನೆಗಳನ್ನು ಪಟ್ಟಣವನ್ನು ರಕ್ಷಿಸಲು ಸೇನೆಗಳನ್ನು ನೇಮಿಸಿದರು. ಬೇರೆ ಬೇರೆ ಅಧಿಕಾರಿಗಳನ್ನು ರಕ್ಷಣೆಯ ಕಾರ್ಯಕ್ಕೆ ನಿಯೋಜಿಸಿದರು. ನಗರದ ಸೈನ್ಯಗಳು ಪಾಳೆಯಗಾರರ ಸೈನ್ಯಗಳಿಗೆ ಸಹಾಯಕ್ಕೆ ಹೋಗುವಂತೆ ಅಪ್ಪಣೆಯನ್ನಿತ್ತು ಕಳುಹಿಸಿದರು ಸೇನಾಧಿಪತಿಗಳು ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ರಾಮಕೃಷ್ಣರವರು ಆ ದಿನ ಬೆಳಗಿನ ಝಾವದಲ್ಲಿ ಕೆಳದಿಯ ಅರಮನೆಗೆ ಪ್ರವೇಶಮಾಡಿದಾಗ ಯಾರೋ ಹೆಂಗಸರು ಮಾತನಾಡುವ ಸದ್ದು ಕೇಳಿಸಿತು. ಅವರು ಗಾಬರಿಯಿಂದ ಕಾವಲುಗಾರರನ್ನು ಕರೆದು ಅರಮನೆಯಲ್ಲಿ ಯಾರು ಇದ್ದಾರೆಂದು ವಿಚಾರಿಸಿದರು. ಬಾಗಿಲುಗಳನ್ನು ತೆರೆಯಿಸಿ ಒಳಗೆ ಹೋಗಿ. ಅಂತಃಪುರದಲ್ಲಿ ನೋಡಲಾಗಿ ಅಲ್ಲಿ ಒಬ್ಬ ರಾಜಸ್ತ್ರೀಯು ಬಂಧನದಲ್ಲಿ ಇಡಲ್ಪಟ್ಟಿದ್ದಂತೆ ಅವರಿಗೆ ತಿಳಿಯಬಂತು. ಅಲ್ಲಿದ್ದ ಮೂವರು ನಾಲ್ವರು ಪರಿಚಾರಿಕೆಯರನ್ನು ಕರೆಸಿ ವಿಚಾರಿಸಿದರು. ಅವರುಗಳು ಭಯದಿಂದ ಯಾವ ಸಮಾಚಾರಗಳನ್ನೂ ತಿಳಿಸಲಿಲ್ಲ. ಮಂತ್ರಿಗಳ ಕುತೂಹಲವು ಮತ್ತೂ ಅಧಿಕವಾಯಿತು. ಅವರು ಬಾಗಿಲುಗಳನ್ನು ತೆರೆಸಿ ಆ ಅಂತಃ

ಪುರದೊಳಗೆ ಪ್ರವೇಶಮಾಡಿದರು. ಅವರನ್ನು ನೋಡುತ್ತಲೇ ರಾಜ ಸ್ತ್ರೀಯೊಬ್ಬಳು ಎದುರಿಗೆ ಬಂದು ನಿಂತಳು. ಅವಳನ್ನು ಮಂತ್ರಿಗಳು ಅನೇಕ ಪ್ರಶ್ನೆಗಳಿಂದ ಮಾತನಾಡಿಸಿದರು ಅವಳು ಮಾತನಾಡಲು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಂತ್ರಿಗಳು ಕರುಣೆಯಿಂದ ಆಕೆಗೆ ಧೈರ್ಯವನ್ನು ಹೇಳುತ್ತಾ, ತಾವು ಮಹಾಮಂತ್ರಿಗಳಾದ ರಾಮಕೃಷ್ಣ ರೆಂದೂ, ತಮ್ಮಲ್ಲಿ ಏನು ಹೇಳಿದರೂ ಭಯವಿಲ್ಲವೆಂದೂ ಅರುಹಿದಳು. ಆ ರಾಜಸ್ತ್ರೀಯು ರಾಮಕೃಷ್ಣರ ಹೆಸರು ಕೇಳುತ್ತಲೇ ಅವಳ ಮೈಯ್ಯೆ ಲ್ಲವೂ ರೋಮಾಂಚನವಾಯಿತು. ತಕ್ಷಣ ನೆಲದಮೇಲೆ ಬಿದ್ದು ನಮಸ್ಕರಿಸಿದಳು. ರಾಮಕೃಷ್ಣರನ್ನು ಆಸನದಮೇಲೆ ಕುಳಿತುಕೊಳ್ಳು ವಂತೆ ಪ್ರಾರ್ಥನೆಮಾಡಿದಳು. ರಾಮಕೃಷ್ಣರವರು ನೀರವವಾಗಿ ಕುಳಿತುಬಿಟ್ಟರು. ಆ ರಾಜಸ್ತ್ರೀಯು ಪುನಃ ನಮಸ್ಕರಿಸಿ ತಾನು ಯುವ ರಾಣಿಯೆಂದೂ, ಇಲ್ಲಿ ಬಂಧನದಲ್ಲಿ ಇಡಲ್ಪಟ್ಟಿದ್ದಾಳೆಂದೂ, ಊಟ ಉಪ ಚಾರಗಳಿಗೂ, ದೇವರ ಪೂಜೆಗೂ ಬೇಕಾದ ಅನುಕೂಲಗಳು ಇವೆ ಯೆಂದೂ ತಿಳಿಸಿದಳು. ತಾನು ಇಲ್ಲಿರುವ ನಾಲ್ವರು ಪರಿಜನರು ಹೊರತಾಗಿ ಮತ್ತಾವ ಮನುಷ್ಯರ ಮುಖವನ್ನು ಕಂಡಿಲ್ಲವೆಂದೂ ಅಳುತ್ತಾ ಅರುಹಿದಳು. ನಿಧಾನವಾಗಿ ಯುವರಾಜರವರ ಕೊಲೆಪಾತ ಕದ ಕಥೆಯನ್ನು ಅರ್ಧಅರ್ಧ ಮಾತುಗಳಿಂದ ತಿಳಿಸಿದಳು. ಉಳಿದ ಕಥೆಯನ್ನು ಅಳುವಿನಿಂದ ಪೂರೈಸಿದಳು. ಬಿದನೂರಿನ ಅರಮನೆಗೆ ಕರೆದುಕೊಂಡು ಹೋದುದು ತನಗೆ ನೆನಪಿದೆಯೆಂದೂ, ಅಂದು ರಾಣಿ ಯವರ ಸಂಮುಖದಲ್ಲಿ ನಿಲ್ಲಿಸಲ್ಪಟ್ಟಿದ್ದುದು ಸ್ವಪ್ನದಂತೆ ನೆನಪಿದೆ ಯೆಂದೂ ಹೇಳಿದಳು. ಆ ಅರಮನೆಯಲ್ಲಿಯೇ ಬಂಧನದಲ್ಲಿ ಇಡಲ್ಪಟ್ಟಿ ದ್ದುದು ನೆನಪಿದೆಯೆಂದೂ ಈ ಅರಮನೆಗೆ ಹೇಗೆ ಕರೆತಂದರೋ ನನಗೆ ಸ್ಮರಣೆ ಇಲ್ಲವೆಂದೂ ವಿವರಿಸಿದಳು. ಒಂದಾನೊಂದು ಕಾಲದಲ್ಲಿ ಈ ಅರಮನೆಯಲ್ಲಿ ಯುವರಾಜರೊಡನೆ ತಾನು ಸುಖದಿಂದ ಇದ್ದ ನೆನಪು ಗಳು ಇವೆಯೆಂದು ಹೇಳಿ ಅಳಲಾರಂಭಿಸಿದಳು. ರಾಮಕೃಷ್ಣರ ಕಣ್ಣು ಗಳಲ್ಲಿಯೂ ಹನಿ ಇಕ್ಕಿದವು. ಅವರು ಯುವರಾಜರವರು ಹೇಗೆ

ಸತ್ತರೆಂಬ ಕಥೆಯನ್ನು ಇಂದೇ ಇಷ್ಟು ಪ್ರತ್ಯಕ್ಷಪ್ರಮಾಣದಿಂದ ಕೇಳಿದ್ದು. ರಾಮಕೃಷ್ಣರು ಬಹಳಹೊತ್ತು ಸುಮ್ಮನಿದ್ದು "ತಾಯೇ, ಯುವ ರಾಣಿಯವರೇ, ಚಿನ್ನಬಸಪ್ಪನಾಯಕರು ಬದುಕಿರುವರೆಂದು ಕೇಳಿದ್ದೇನೆ. ಹೈದರಾಲಿಯವರ ಸೈನ್ಯದಲ್ಲಿ ಇದ್ದಾರೆಂದೂ ಗುಪ್ತಚಾರರು ಹೇಳುತ್ತಾರೆ" ಎಂದು ಮೃದು ಧ್ವನಿಯಿಂದ ಹೇಳಿದರು.

ಮಲ್ಲಿಗಮ್ಮನು "ಸುಳ್ಳು, ಸುಳ್ಳು! ಯುವರಾಜರು ಅಂದೇ ಸತ್ತು ಹೋದರು. ನನ್ನ ಕಣ್ಣೆದುರಿಗೇ ರುಂಡಮುಂಡಗಳು ಕಳಚಿಬಿದ್ದವು. ನನ್ನ ಕಣ್ಣುಗಳು ಸಾಕ್ಷಿ" ಎಂದು ಘಟ್ಟಿಯಾಗಿ ಚೀರುತ್ತಾ ಮೈ ಸೆಟೆತುಕೊಂಡು ನೆಲದಮೇಲೆ ಬಿದ್ದಳು. ಪರಿಚಾರಕೆಯರು ಓಡಿಬಂದು ಉಪಚರಿಸಿದರು. ಮಂತ್ರಿಗಳು ಗಾಬರಿಯಿಂದ "ಇದೇಕೆ ಹೀಗಾಗುತ್ತದೆ?" ಎಂದು ಕೇಳಿದರು. ಪರಿಚಾರಿಕೆಯರು ಆಗಾಗ ಈ ಯುವರಾಣಿಯವರು ಹೀಗೆ ಕೂಗುತ್ತಾರೆಂದೂ, ಕೊನೆಯಲ್ಲಿ ಮೂರ್ಛಿತರಾಗುತ್ತಾರೆಂದೂ, ಈ ಉದ್ರೇಕದ ಸಮಯದಲ್ಲಿ ಇವರ ಹುಚ್ಚು ಮೇರೆ ಮೀರುತ್ತದೆಂದೂ, ಮೂರ್ಛೆಹೋಗಿ ಏಳುವವರೆಗೆ ಸತ್ತುಹೋಗಿರುವಂತೆ ತಮಗೆ ಭಾಸವಾಗುತ್ತದೆಂದೂ ತಿಳಿಸಿದರು.

ಮಂತ್ರಿ ರಾಮಕೃಷ್ಣರು ಸುಮ್ಮನೆ ಆಲೋಚನೆಮಾಡುತ್ತಾ ಕುಳಿತುಕೊಂಡರು. ಸ್ವಲ್ಪ ಹೊತ್ತಿನೊಳಗಾಗಿ ಮಲ್ಲಿಗಮ್ಮನಿಗೆ ಜ್ಞಾನಬಂದಿತು. ಮಂತ್ರಿಗಳು ಸಮಾಧಾನೋಕ್ತಿಗಳನ್ನು ನುಡಿದು "ನಿಮಗೇನುಬೇಕು ?" ಎಂದು ಯುವರಾಣಿಯವರನ್ನು ಕೇಳಿದರು. ಮಲ್ಲಿಗಮ್ಮನು "ನನಗೇನೂ ಬೇಡ. ಸತ್ತವರನ್ನು ತಂದುಕೊಡಬಲ್ಲವರಾರು ? ನನ್ನನ್ನು ಈ ಬಂಧನದಿಂದ ಬಿಡಿಸಿಬಿಡಿರಿ" ಎಂದಳು. ಮಂತ್ರಿಗಳು "ರಾಣಿಯವರೇ ನೀವೆಲ್ಲಿಗೆ ಹೋಗುವಿರಿ ?" ಎಂದು ಕೇಳಿದರು. ಮಲ್ಲಿಗಮ್ಮನು ಹುಚ್ಚು ನಗುವನ್ನು ನಕ್ಕು, "ಎಲ್ಲಿಗೆ ಬೇಕಾದರೂ ಹೋಗುವೆ. ಹುಚ್ಚಳಂತೆ ಬೀದಿಯಲ್ಲಿ ಅಲೆಯುವೆ. ಭಿಕಾರಿಣಿಯಂತೆ ಭಿಕ್ಷೆಬೇಡಿ ತಿನ್ನುವೆ. ಸ್ಮಶಾನದಲ್ಲಿ ಹುಡುಕಿ ನನ್ನ ಪತಿದೇವನ ಶರೀರವನ್ನು ಪತ್ತೆಹಚ್ಚುವೆನು. ಅದಕ್ಕಾಗಿ ಸ್ಮಶಾನಗಳಲ್ಲಿ

ಅಲೆದಾಡುವೆ. ತಾವು ಕೃಪೆಯಿಟ್ಟು ನನ್ನನ್ನು ಬಿಡುಗಡೆಮಾಡಿರಿ” ಎಂದು ಅಳಲಾರಂಭಿಸಿದಳು. ರಾಮಕೃಷ್ಣರವರು ಏನೊಂದು ಮಾತನ್ನೂ ಉಸುರದೆ ಪಲ್ಲಕ್ಕಿಯನ್ನು ತರಿಸಿ ಯುವರಾಣಿಯನ್ನು ಅದರಲ್ಲಿ ಕೂಡಿಸಿ ಬಿದನೂರಿನಲ್ಲಿದ್ದ ತಮ್ಮ ವಾಸಸ್ಥಾನಕ್ಕೆ ಕಳುಹಿಸಿಕೊಟ್ಟರು. ಸೂರ್ಯೋದಯದೊಳಗಾಗಿ ಯುವರಾಣಿಯು ಮಂತ್ರಿಗಳ ಮಹಲಿನಲ್ಲಿದ್ದಳು. ಮಂತ್ರಿಗಳು ಹಿಂತಿರುಗಿ ತಮ್ಮ ಮನೆಗೆ ಬರುವ ಹೊತ್ತಿಗೆ ಮಧ್ಯಾಹ್ನ ಮೂರು ಘಂಟೆಯ ಹೊತ್ತಾಗಿದ್ದಿತು. ಮಂತ್ರಿಗಳ ಮನೆಯ ಒಳಗೆ ಈ ಹೊಸ ಹೆಂಗಸಾರೆಂದು ಗೊತ್ತಾಗಿರಲಿಲ್ಲ. ಮಲ್ಲಿಗಮ್ಮನು ಅಳುತ್ತಲೇ ಇದ್ದಳು. ರಾಮಕೃಷ್ಣರವರ ಧರ್ಮಪತ್ನಿಯವರಿಗೆ ಇವಳನ್ನು ಸಂತೈಸಲು ಅಸಾಧ್ಯವಾಗಿದ್ದಿತು. ಬಲುಪ್ರಯಾಸದಿಂದ ಅವಳಿಗೆ ಸ್ನಾನಾದಿಗಳನ್ನು ಮಾಡಿಸಿದರು. ಉಪಚರಿಸಿ ಬಲಾತ್ಕರಿಸಿ ಆಹಾರವನ್ನು ತಿನಿಸಿದರು. ರಾಮಕೃಷ್ಣರವರು ಮನೆಗೆ ಬರುತ್ತಲೇ ಆಕೆಯ ಯೋಗಕ್ಷೇಮಗಳನ್ನು ವಿಚಾರಿಸಿದರು. ಆಕೆಯ ಕಥೆಯನ್ನೆಲ್ಲಾ ತಮ್ಮ ಪತ್ನಿಯವರೊಂದಿಗೆ ಸಂಗ್ರಹವಾಗಿ ತಿಳಿಸಿದರು. ಅವರು ಸ್ನಾನಾಹ್ನಿಕಗಳನ್ನು ಪೂರೈಸಿ ಭೋಜನಮಾಡುವ ಹೊತ್ತಿಗೆ ಸಂಧ್ಯಾ ಕಾಲವು ಸಮೀಪಿಸುತ್ತಲಿದ್ದಿತು. ಅವರು ಭೋಜನೋತ್ತರ ಅಂತಃಪುರ ದಲ್ಲಿದ್ದ ಮಲ್ಲಿಗಮ್ಮನಿಗೆ ದರ್ಶನವಿತ್ತರು. ತಾವು ಬಂಧನದಲ್ಲಿದ್ದರೆಂದೂ ಈ ರಾಜ್ಯದಲ್ಲಿ ಇದ್ದಿದ್ದರೆ ಇಂಥಾ ದುರಂತಪ್ರಸಂಗವು ನಡೆಯುತ್ತಿರಲಿಲ್ಲ ವೆಂದೂ ಮಲ್ಲಿಗಮ್ಮನಿಗೆ ಸಂಗ್ರಹವಾಗಿ ತಿಳಿಸಿದರು. ಮಲ್ಲಿಗಮ್ಮನು ಮಂತ್ರಿಗಳೊಡನೆ ತಾನು ಸ್ವತಂತ್ರವಾಗಿ ಎಲ್ಲಿಗಾದರೂ ಹೊರಟು ಹೋಗಲು ಅಪ್ಪಣೆಯನ್ನು ಬೇಡಿದಳು. ಮಂತ್ರಿಗಳು “ಯುವರಾಣಿ ಯವರೇ, ತಾವು ಈಗ ಸರ್ವ ಸ್ವತಂತ್ರರಾಗಿದ್ದೀರಿ. ನಗರದಲ್ಲಿ ಮಹಾ ಯುದ್ಧವು ಪ್ರಾಪ್ತವಾಗಿದೆ. ತಾವು ಹೊರಗೆ ಓಡಾಡುವುದು ಯುಕ್ತವಲ್ಲ. ಅಡಿಗಡಿಗೂ ಅಪಾಯಗಳುಂಟು. ತಮ್ಮನ್ನು ನನ್ನ ಮಗಳಂತೆ ರಕ್ಷಿಸುತ್ತೇನೆ. ಯುದ್ಧಾನಂತರ ತಕ್ಕ ವ್ಯವಸ್ಥೆಮಾಡಿಸುತ್ತೇನೆ” ಎಂದು ಹೇಳಿದರು.

ಮಲ್ಲಿಗಮ್ಮನು, "ಮಂತ್ರಿಗಳೇ ನಾನು ಈ ದೊಡ್ಡ ಕುಟುಂಬದಲ್ಲಿ ಇರುವುದುಯುಕ್ತವಲ್ಲ. ನಾನು ಸದಾ ದುಃಖಿನಿ. ನನ್ನ ದುಃಖೋದ್ವೇಗದಲ್ಲಿ ಹುಚ್ಚಿಯಾದಂತಾಗುತ್ತೇನೆ. ದುಃಖದ ಆವೇಶವು ಮೀರಿದಾಗ ಮೂರ್ಛಿತಳಾಗುತ್ತೇನೆ. ನನ್ನ ಪರಿಚಾರಿಕೆಯರು ನನಗೆ ಹುಚ್ಚು, ಅಪಸ್ಮಾರ ಎಂದು ಮಾತನಾಡಿಕೊಂಡುದನ್ನು ಅಪ್ರತ್ಯಕ್ಷವಾಗಿ ಕೇಳಿದ್ದೇನೆ. ನಾನು ಇಂಥಾ ತುಂಬಿದ ಸಂಸಾರದಲ್ಲಿ ಇರಬಾರದು. ನನಗೆ ಹೀಗಿರುವುದೂ ಮನವೊಪ್ಪುವುದಿಲ್ಲ. ಎಲ್ಲೆಲ್ಲಿಯೂ ವಿಶಾಲ ಪ್ರಪಂಚದಲ್ಲಿ ಅಲೆದಾಡಬೇಕೆನ್ನಿಸುತ್ತದೆ" ಎಂದಳು.

ಮಂತ್ರಿಗಳು ಎಷ್ಟೋ ವಿಧವಾಗಿ ಸಮಾಧಾನಗಳನ್ನು ಹೇಳಿ ಮಲ್ಲಿಗಮ್ಮನನ್ನು ತಮ್ಮ ಮನೆಯಲ್ಲಿರಲು ಒಪ್ಪಿಸಿದರು. ನಗರದಲ್ಲಿ ಎಲ್ಲೆಲ್ಲಿಯೂ ಯುದ್ಧದ ಸಡಗರಗಳೇ ನಡೆಯುತ್ತಿದ್ದವು. ಮಹಾರಾಣಿ ಚೆಲುವಮ್ಮಣ್ಣಿಯವರು ಸ್ಥೈರ್ಯಗಾಂಭೀರ್ಯಗಳಿಂದ ಇದ್ದರು. ಅವರ ಮನೋವೃತ್ತಿಯೇ ಯಾರಿಗೂ ತಿಳಿಯುತ್ತಿರಲಿಲ್ಲ. ರಾಜ್ಯಾಡಳಿತವೂ ಯುದ್ಧದ ಭಾರವೂ ರಾಮಕೃಷ್ಣರವರ ಮೇಲೆ ಇದ್ದಿತು. ರಾಣಿಯವರು ಪ್ರತಿದಿನವೂ ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಚಂಡೀಶಾಲೆಗೆ ಹೋಗಿ ಅಲ್ಲಿ ನಡೆಯುತ್ತಿದ್ದ ಜಪ ಹೋಮಾದಿಗಳನ್ನು ನೋಡಿ ಬ್ರಾಹ್ಮಣವೃಂದವನ್ನು ಸಂದರ್ಶಿಸಿ ಅಭಿರಾಮಸ್ವಾಮಿಗಳವರ ಆಶೀರ್ವಾದವನ್ನು ಪಡೆದು ಬರುತ್ತಿದ್ದರು. ಈ ನಡುವೆ ಮಲ್ಲಿಗಮ್ಮನನ್ನು ಮಂತ್ರಿಗಳು ಭೇಟಿಮಾಡಿದ ವಿಚಾರ, ಅವಳನ್ನು ಮಂತ್ರಿಗಳು ಆವಾಸಸ್ಥಾನಕ್ಕೆ ಕರೆತಂದಿರುವ ವಿಚಾರ ಇವುಗಳೆಲ್ಲವೂ ರಾಣಿಯವರಿಗೆ ವರದಿಯಾಗಿದ್ದಿತು. ಅದರಿಂದ ರಾಣಿಯವರು ಉದ್ವಿಗ್ನರಾಗಲಿಲ್ಲ. ಏತಕ್ಕೆಂದರೆ ಅವರು ಯುದ್ಧವೆಲ್ಲಾ ಪೂರೈಸಿದ ನಂತರ ಯುವರಾಜರ ಕೊಲೆಯು ಅಚಾತುರ್ಯದಿಂದ ನಡೆದುದೆಂದೂ ಅದರ ಕಥೆಯನ್ನು ಸವಿಸ್ತಾರವಾಗಿ ಹೇಳಿ ಆ ಪಾಪವೆಲ್ಲವೂ ತಮಗೆ ಸೇರಿದ್ದೆಂದೂ ಮಂತ್ರಿಗಳಲ್ಲಿ ಒಪ್ಪಿಕೊಳ್ಳಬೇಕೆಂದು ಸ್ಥಿರಮಾಡಿದ್ದರು. ಅಷ್ಟೇ ಅಲ್ಲ. ಒಬ್ಬ ರಾಜವಂಶೀಯ ಕುಮಾರನನ್ನು ಹುಡುಕಿ

ಯುವರಾಣಿಗೆ ದತ್ತುಕೊಡಿಸಿ ಈ ರಾಜ್ಯದ ಪಟ್ಟವನ್ನು ಆ ಹುಡುಗನಿಗೆ ಕಟ್ಟಿಸಬೇಕೆಂದು ಸಂಕಲ್ಪಿಸಿದ್ದರು. ಪ್ರಪಂಚದ ರೀತಿಯೇ ಹೀಗೆ. ಜನರೆಲ್ಲರೂ ಯಾರನ್ನು ಮಹಾಪಾಪಿಗಳೆಂದು ಕರೆಯುತ್ತಾರೆಯೋ ಅವರ ಹೃದಯದಲ್ಲಿ ಸದ್ವಿಷಯಗಳೂ ಸದ್ಭಾವನೆಗಳೂ ಉದಯಿಸುತ್ತಿರುತ್ತವೆ. ಇದನ್ನೆಲ್ಲಾ ವಿವೇಚನೆಮಾಡಿ ನೋಡಿದರೆ ಯಾರು ಪುಣ್ಯವಂತರು, ಯಾರು ಪಾಪಿಗಳು ಎಂದು ನಿರ್ಧರಿಸಿ ಹೇಳಬಲ್ಲವರಾರು ? ಪುಣ್ಯಪಾಪಗಳ ಜಗತ್ತು ಜಟಿಲವಾಗಿದೆ ಮತ್ತು ವಿಚಿತ್ರವಾಗಿದೆ. ಪುಣ್ಯವಂತರೆಂದು ಪ್ರಪಂಚದಲ್ಲೆಲ್ಲಾ ಹೊಗಳಿಸಿಕೊಳ್ಳುತ್ತಿರುವ ಮಹನೀಯರು ಇತರರ ಪಾಪಗಳನ್ನು ಹುಡುಕುತ್ತಾ ಪಾಪಮಾರ್ಗಗಳಲ್ಲಿ ಮನಸ್ಸನ್ನು ಓಡಿಸುತ್ತಾ ಪುಣ್ಯಕರ್ಮಗಳನ್ನು ಅನುಷ್ಠಾನ ಮಾಡುತ್ತಾ ಇರುವುದನ್ನೇ ಕಾಣುತ್ತಿದ್ದೇವೆ. ಮಹಾಪಾಪಿಗಳೆಂದು ದೂಷಣೆಗೆ ಗುರಿಯಾಗಿರುವವರ ಮನಸ್ಸಿನಲ್ಲಿ ಪುಣ್ಯದ ಕಿರಣಗಳು ಪ್ರಕಾಶಮಾನವಾಗುವುದು ಯಾರಿಗೂ ಗೋಚರವಾಗುವುದಿಲ್ಲ. ಇದೇ ಪುಣ್ಯಪಾಪಗಳ ಸಮಸ್ಯೆ. ಆದುದರಿಂದಲೇ ಮಹಾಪುರುಷರು ಪುಣ್ಯಪಾಪಗಳ ಸ್ಮರಣೆಯನ್ನು ಕೂಡಾ ಮಾಡುವುದಿಲ್ಲ.

ನಗರದರಾಣಿಯ ಮನಸ್ಸು ಪ್ರಸನ್ನಭಾವದಿಂದ ಇದ್ದಿತೆಂದು ಹೇಳಲಾಗುವುದಿಲ್ಲ. ಆದರೆ ಅವಳ ಮನಸ್ಸಿನಲ್ಲಿ ದುಃಖದ ಛಾಯೆಯೇ ಇರಲಿಲ್ಲ. ಗಾಂಭೀರ್ಯವಿದ್ದಿತು. ಕಾಠಿಣ್ಯವಿದ್ದಿತು. ಈ ಯುದ್ಧದಲ್ಲಿ ನಗರಕ್ಕೆ ಸೋಲಾಗುವುದಿಲ್ಲವೆಂದು ದೃಢನಂಬಿಕೆಯಿದ್ದಿತು. ಭೈರವಿಯು ರಾಜಧಾನಿಯ ಸುತ್ತುಮುತ್ತಲೂ ಅಲೆದಾಡುತ್ತಿದ್ದಾಳೆಂದೂ, ತೋರಿದಂತೆ ಮಾತನಾಡುತ್ತಿದ್ದಾಳೆಂದೂ ಸಮಾಚಾರವನ್ನು ಕೇಳಿದ್ದಳು. ಹೈದರನಿಗೇ ಜಯವಾಗುತ್ತದೆಂದು ಭೈರವಿಯು ಎಷ್ಟೋ ಸ್ಥಳಗಳಲ್ಲಿ ಬಹಿರಂಗವಾಗಿ ವಾದಿಸುತ್ತಿದ್ದಾಳೆಂದು ಅವಳಿಗೆ ಸಮಾಚಾರವು ಮುಟ್ಟಿದ್ದಿತು. ಇದರಿಂದ ರಾಣಿಯ ಮನಸ್ಸು ಕೊಂಚವೂ ಚಲಿಸಿರಲಿಲ್ಲ. ಆದರೆ ಒಂದುಭಾರಿ ಆ ಭೈರವಿಯನ್ನು ಕಂಡು ಮಾತನಾಡಬೇಕೆಂದು ರಾಣಿಯ ಮನಸ್ಸು ಬಯಸುತ್ತಿದ್ದಿತು. ತಾನಾಗಿ ಭೈರವಿಯನ್ನು

ಕರೆಸುವುದೇ? ಅವಳಾಗಿ ಬರುವಳೇ ಎಂಬ ಆಂಶದಲ್ಲಿ ರಾಣಿಯ ಮನಸ್ಸು ಡೋಲಾಯಮಾನವಾಗಿದ್ದಿತು.

ಅದೇದಿನ ಸಂಧ್ಯಾಕಾಲದಲ್ಲಿ ರಾಣಿಯು ಮಲ್ಲಿಕಾರ್ಜುನಕ್ಷೇತ್ರದಿಂದ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ಹಿಂತಿರುಗಿ ಬರುತ್ತಿರುವಾಗ ಭೈರವಿಯು ಹಿಂಬಾಲಿಸಿ ಬಂದಳು. ಮಹಾರಾಣಿಯ ಪಲ್ಲಕ್ಕಿಯು ಅಂತಃಪುರದ ಬಾಗಿಲಿನಲ್ಲಿ ಇಳಿಯಿತು. ರಾಣಿಯುವರು ಪಲ್ಲಕ್ಕಿಯಿಂದ ಹೊರಗೆ ಇಳಿಯುವಾಗ ಎದುರಿಗೆ ಭೈರವಿಯು ನಿಂತಿರುವುದನ್ನು ಕಂಡರು. ರಾಣಿಯುವರ ಮುಖದಲ್ಲಿ ಕಿರುನಗೆಯು ಬೆಳಗಿತು. ಅದೇ ಸ್ನೇಹಮಯವಾದ ದೃಷ್ಟಿಗಳಿಂದ ಭೈರವಿಯನ್ನು ನೋಡಿದರು. ಅದೇ ಮಧುರಧ್ವನಿಯಿಂದ ಭೈರವಿಯನ್ನು ಮಾತನಾಡಿಸಿದರು. "ಗಿರಿಜೆ, ಇಷ್ಟು ದಿನಗಳು ಎಲ್ಲಿ ಮಾಯವಾಗಿ ಹೋಗಿದ್ದೆ. ನೀನೇಕೆ ಅರಮನೆಗೆ ಬರಲಿಲ್ಲ?" ಎಂದು ಪ್ರಶ್ನೆಮಾಡಿದರು.

ಭೈರವಿಯು "ರಾಣಿಯುವರೇ, ನಾನು ಗಿರಿಜೆಯಲ್ಲ. ಆ ಗಿರಿಜೆಯು ಸತ್ತು ಸುಟ್ಟು ಬೂದಿಯಾಗಿಹೋದಳು! ಈಗ ನಿಮ್ಮ ಮುಂದೆ ನಿಂತಿರುವವಳು ಉನ್ಮತ್ತಭೈರವಿ! ರಾಜದ್ರೋಹಿ! ಧರ್ಮಭ್ರಷ್ಟಳು! ಪಾಪಿ!" ಹೀಗೆ ಹುಚ್ಚುಹುಚ್ಚಾಗಿ ಮಾತನಾಡತೊಡಗಿದಳು.

ರಾಣಿಯುವರು ವಿಷಣ್ಣವದನರಾಗಿ ಅಂತಃಪುರದೊಳಗೆ ಹೊರಟು ಹೋದರು. ಹೋಗಿ ಪರಿಚಾರಕಳೊಬ್ಬಳನ್ನು ಕರೆದು ಆ ಭೈರವಿಯನ್ನು ಅಂತರ್ಗೃಹದೊಳಕ್ಕೆ ಕರೆತರುವಂತೆ ಅಪ್ಪಣೆಮಾಡಿದರು.

ಭೈರವಿಯು ರಾಣಿಯ ಅಂತರ್ಗೃಹವನ್ನು ಪ್ರವೇಶಿಸುವಾಗ ರಾಣಿಯ ಕಣ್ಣುಗಳಲ್ಲಿ ಧಾರಾಕಾರವಾಗಿ ಕಂಬನಿ ಸುರಿಯುತ್ತಿದ್ದಿತು. ಇದನ್ನು ನೋಡಿ ಭೈರವಿಯು ನಗುತ್ತಾ ಮಾತನಾಡಿದಳು. "ರಾಣಿಯವರೇ, ಈಗ ಸರಿಯಾಗಿದೆ. ನೀವು ಅಳುತ್ತಿದ್ದರೆ ನಾನು ನಗುತ್ತಿರುತ್ತೇನೆ" ಎಂದು ನಕ್ಕಳು. ರಾಣಿಯು ಸಣ್ಣದನಿಯಿಂದ "ಗಿರಿಜೆ, ನಿನಗೆ ನನ್ನಮೇಲೆ ಅಷ್ಟು ದ್ವೇಷವಿದೆಯೇ" ಎಂದು ಕೇಳಿದಳು.

ಭೈರವಿಯು ರಾಣಿಯ ಸಮೀಪಕ್ಕೆ ಬಂದು ಪರ್ಯಂಕದಮೇಲೆ

ಕುಳಿತುಕೊಂಡು ಹೇಳತೊಡಗಿದಳು. "ರಾಣಿಯುವರೇ, ನನಗೆ ದ್ವೇಷ ವಿಲ್ಲ! ಆದರೆ ಕೋಪವಿದೆ! ಛಲವಿದೆ!" ಎಂದು ಹೇಳಿದಳು.

ರಾಣಿಯು "ಏಕೆ ನನ್ನಮೇಲೆ ಕೋಪ ಗಿರಿಜೆ. ನಾನು ನಿನ್ನನ್ನು ಯಾವಾಗಲೂ ಸೋದರಿಯಂತೆ ಪ್ರೀತಿಸುತ್ತೇನೆ. ನಿನಗೆಲ್ಲಿಂದ ಈ ಕೋಪದ ಪಿಶಾಚಿಯು ಹಿಡಿಯಿತು" ಎಂದಳು.

ಭೈರವಿಯು "ರಾಣಿಯುವರೇ ಆ ಪಿಶಾಚಿಯು ನಿಮ್ಮಿಂದಲೇ ನನ್ನನ್ನು ಹಿಡಿದಿದೆ. ನಾವಿಬ್ಬರೂ ಸೋದರಿಯರಂತೆ ಇದ್ದುದೇ ಈ ಅನರ್ಥಕ್ಕೆ ಕಾರಣವಾಯಿತು" ಎಂದಳು.

ರಾಣಿಯು ಭೈರವಿಯನ್ನು ಸಂತೈಸುತ್ತಾ ಕೈಹಿಡಿದುಕೊಂಡು ತಲೆಸವರುತ್ತಾ, "ಗಿರಿಜೆ, ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ಹೇಳು. ನಾನು ಮಾಡಿಕೊಡುತ್ತೇನೆ" ಎಂದಳು.

ಭೈರವಿಯು "ಹೇಳುತ್ತೇನೆ ಕೇಳಿರಿ ರಾಣಿಯುವರೇ, ಇನ್ನು ಹೆಚ್ಚು ಸಮಯುವು ಉಳಿದಿಲ್ಲ. ಈ ನಗರದಲ್ಲಿ ಭಗವದಿಚ್ಛೆಯಿಂದ ಅನರ್ಥಪರಂಪರೆಗಳು ಜರುಗುತ್ತಿವೆ. ಮೊದಲಿನ ಅನರ್ಥಗಳೆಲ್ಲಾ ನಿಮ್ಮಿಂದ ನಡೆದುವು. ಈಗಿನ ಅನರ್ಥಗಳೆಲ್ಲಾ ನನ್ನಿಂದ ನಡೆಯು ತ್ತಿವೆ. ಮುಂದಿನ ಅನರ್ಥಗಳು ನಮ್ಮಿಬ್ಬರ ಕರ್ಮಫಲವಾಗಿ ಈಶ್ವರ ನಿಂದ ನಡೆಸಲ್ಪಡುತ್ತವೆ. ರಾಣಿಯುವರೇ, ನಾನು ಶ್ರೀರಂಗಪಟ್ಟಣಕ್ಕೆ ಹೋಗಿ ಹೈದರಾಲಿಯುವರನ್ನು ಉತ್ತೇಜನಗೊಳಿಸಿ, ಈ ನಗರದಮೇಲೆ ಮಹಾಸೈನ್ಯಸಮೇತರಾಗಿ ಅವರು ಯುದ್ಧಕ್ಕೆ ಬರುವಂತೆ ಮಾಡಿದ್ದೇನೆ. ಈಗ ನಗರದ ರಾಜ್ಯದಲ್ಲಿ ಮಹಾಯುದ್ಧವು ನಡೆಯುತ್ತಿದೆ. ಈಗ ನೀವೇನು ಮಾಡುವಿರಿ ? ಇದ್ದದ್ದನ್ನು ಇದ್ದಹಾಗೆ ನಿಮಗೆ ಹೇಳಿದ್ದೇನೆ. ನನ್ನನ್ನು ಬಂದೀಖಾನೆಯಲ್ಲಿಡುವಿರಾ ? ಅದು ಫಲವಿಲ್ಲ. ನಿಮಗೆ ಇನ್ನು ನಾಲ್ಕೈದು ದಿವಸಗಳಿಗಿಂತಲೂ ಹೆಚ್ಚು ಅವಕಾಶವಿಲ್ಲ. ನಿಮ್ಮ ರಾಜ್ಯಾಧಿಕಾರವು ಅಪ್ಪರೊಳಗಾಗಿ ಮಣ್ಣುಪಾಲಾಗುತ್ತದೆ. ನನಗೆ ಮತ್ತಾವ ಶಿಕ್ಷೆಯನ್ನು ವಿಧಿಸುತ್ತೀರಿ ? ವಿಷವನ್ನು ಕುಡಿಸುತ್ತೀರಾ ? ಅದಕ್ಕೆ ನೀವು ಕಷ್ಟಪಡಬೇಕಾಗಿಲ್ಲ. ನನ್ನ ಈ ಜೋಳಿಗೆಯಲ್ಲಿ

ಭಯಂಕರವಾದ ವಿಷದ ಗುಳಿಗೆಗಳಿವೆ. ಅಥವಾ ಕೊಲೆಗಡುಕರಿಂದ ನನ್ನನ್ನು ಕಡಿಸಿಹಾಕುತ್ತೀರಾ? ನನ್ನ ಮೈಮೇಲೆ ಬೀಳುವ ಪ್ರತಿಯೊಂದು ಕತ್ತಿಯುಪೆಟ್ಟಿಗೂ ಹರ್ಷವನ್ನು ಸೂಸುತ್ತಾ ಪ್ರಾಣಬಿಡುತ್ತೇನೆ. ಅಥವಾ ಈ ಅರಮನೆಯ ಎದುರಿನಲ್ಲಿ ಗಲ್ಲಿನಮರವನ್ನು ಕಟ್ಟಿಸಿ ಬಹಿರಂಗವಾಗಿ ನನ್ನನ್ನು ಗಲ್ಲಿಗೇರಿಸಿರಿ. ಅದೊಂದು ಪಾತಕವು ನಿಮಗೆ ಕೊರತೆಯಾಗಿದೆ. ಸ್ತ್ರೀಹತ್ಯ! ಭಯಂಕರವಾದ ಸ್ತ್ರೀಹತ್ಯವು ನಿಮಗೆ ಬರುತ್ತದೆ. ಆಗ ನಿಮ್ಮ ಪಾಪದ ಭಾಂಡವು ತುಂಬುತ್ತದೆ" ಎಂದು ಅಳತೊಡಗಿದಳು.

ರಾಣಿಯು ಭೈರವಿಯನ್ನು ಸಂತೈಸುತ್ತಾ, "ಗಿರಿಜೆ, ಸಮಾಧಾನ ಮಾಡಿಕೋ, ನೀನೇಕೆ ಇಷ್ಟು ಉದ್ವಿಗ್ನಳಾಗಿರುವೆ. ನಿನ್ನನ್ನು ಕೊಲ್ಲಿಸಿದರೆ ನನಗೆ ಬರುವ ಭಾಗ್ಯವೇನು? ನೀನು ಸಂಧಾನಮಾಡಿ ಹೈದರನನ್ನು ಕರೆತಂದಿರುವುದಾಗಿ ಹೇಳುತ್ತಿರುವೆ. ಹತ್ತು, ಹದಿನೈದುವರ್ಷಗಳಿಂದಲೂ ಹೈದರನು ಈ ರಾಜ್ಯವನ್ನು ಕಬಳಿಸಬೇಕೆಂದು ಆತುರಗೊಳ್ಳುತ್ತಿರುವನು. ಇಂದು ನಗರದಲ್ಲಿ ಎಷ್ಟು ಶಕ್ತಿಯಿದೆಯೋ ಅಷ್ಟೂ ಆವಾಹಿತವಾಗಿ ರಣಕ್ಷೇತ್ರದಲ್ಲಿ ನಿಂತಿದೆ. ಇಂದು ನಗರವು ಹೈದರನನ್ನು ಜಯಿಸಿದರೆ ಸಮಗ್ರ ದಕ್ಷಿಣದೇಶವು ಮಲ್ಲಿಕಾರ್ಜುನನ ಕಾಣಿಕೆಯಾಗುತ್ತದೆ. ಒಂದುಪಕ್ಷ ನಗರವು ಸೋತರೆ ಅಲ್ಲಿಗೆ ಈ ರಾಜ್ಯವು ಮುಕ್ತಾಯವಾಗುತ್ತದೆ. ನೀನು ಶಾಂತಳಾಗು. ನನ್ನೊಡನೆ ಈ ಅರಮನೆಯಲ್ಲಿರು. ಸಾಯುವುದಾದರೆ ಒಟ್ಟಿಗೆ ಸಾಯೋಣ. ನಿನ್ನ ಸಾನ್ನಿಧ್ಯದಲ್ಲಿ ಸಾಯುವುದಕ್ಕಿಂತಲೂ ಆನಂದವು ನನಗೆ ಮತ್ತಾವುದಿದೆ. ಶತೃಗಳು ಜಯಿಸಿದರೆ ನಾವಿಬ್ಬರೂ ಸಾಯೋಣ. ನಗರವು ಗೆದ್ದರೆ ನಾವಿಬ್ಬರೂ ನಿಜವಾದ ಸನ್ಯಾಸ ಧರ್ಮವನ್ನು ಸ್ವೀಕರಿಸಿ ವಾರಣಾಸಿಗೆ ಯಾತ್ರೆಮಾಡೋಣ" ಎಂದು ಹೇಳಿದಳು. ಈ ಮಾತುಗಳು ಭೈರವಿಗೆ ಕೇಳಿಸುತ್ತಿದ್ದವೋ ಇಲ್ಲವೋ ಹೇಳಲಾಗುವುದಿಲ್ಲ. ಅವಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಹಲ್ಲುಗಳನ್ನು ಕಟಕಟನೆ ಕಡಿಯುತ್ತಿದ್ದಳು. ಅವಳ ಮುಖದಲ್ಲಿ ಎಷ್ಟೋ ಉನ್ಮಾದದ ಚಿನ್ಹೆಗಳು ಕಾಣುತ್ತಿದ್ದವು. "ಇಲ್ಲ

ರಾಣಿಯವರೇ, ನಾನು ನಿಮ್ಮ ಸಾನ್ನಿಧ್ಯದಲ್ಲಿ ಇರಲಾರೆ, ಬೆಂಕಿಯಲ್ಲಿ ಬಿದ್ದು ಉರಿಯುತ್ತಿರುವಂತೆ ನನಗೆ ಬೋಧೆಯಾಗುತ್ತದೆ. ಈ ಅರಮನೆ ಯಲ್ಲಿ ಒಂದುಕ್ಷಣವೂ ನಿಲ್ಲಲಾರೆ. ಇಂದು ರಾತ್ರಿ ನಾನು ಬದುಕಿರು ವೆನೋ ಇಲ್ಲವೋ ಸಂದೇಹ. ನಾನು ಬದುಕಿದ್ದರೆ ಮತ್ತೊಂದುಬಾರಿ ಬಂದು ನಿಮ್ಮನ್ನು ದರ್ಶನಮಾಡುತ್ತೇನೆ. ಇಲ್ಲದಿದ್ದರೆ ಇದೇ ಕಡೆಯ ವಂದನೆಗಳು. ನಿಮ್ಮ ಪಾಪಕೂಪವು ತುಂಬಿ ಹರಿಯಲಿ" ಎಂದು ಹೇಳುತ್ತಾ, ಅಳುತ್ತಾ, ಚೀತ್ಕರಿಸುತ್ತಾ ಅರಮನೆಯನ್ನು ಬಿಟ್ಟು ಹೊರಟು ಹೋದಳು. ರಾಣಿಯು ದುಃಖಿಸುತ್ತಾ ಪರ್ಯಂಕದಲ್ಲಿ ಬಿದ್ದು ಹೊರಳಲಾರಂಭಿಸಿದಳು. ಬೆಳಗಾಯಿತು. ಪ್ರಪಂಚವೆಲ್ಲವೂ ಎದ್ದು ಕಾರ್ಯತತ್ಪರವಾಯಿತು. ಬಿದನೂರಿನಲ್ಲಿ ಮಾತ್ರ ಈಗ ರಾತ್ರಿ ಹಗಲು ಗಳೆಂಬ ಭೇದವಿಲ್ಲ. ಎಲ್ಲರೂ ಯುದ್ಧದ ಮಾತನ್ನಾಡುವವರೇ. ಎಲ್ಲರೂ ಯುದ್ಧಕಾರ್ಯಗಳಲ್ಲಿ ತತ್ಪರರಾದವರೇ. ಈ ಸಂದರ್ಭದಲ್ಲಿ ಮತ್ತೊಂದು ಸಣ್ಣ ಅಂಶವನ್ನು ಮಾತ್ರ ವಾಚಕರು ಅರಿತುಕೊಳ್ಳಬೇಕಾಗಿದೆ.

ಭೈರವಿಯು ನಗರದ ರಾಜ್ಯಕ್ಕೆ ಬಂದಂದಿನಿಂದಲೂ ರಾಮಕೃಷ್ಣ ರವರಿಗೆ ಅವಳ ಚಲನವಲನಗಳೆಲ್ಲವೂ ತಿಳಿದಿದ್ದವು. ಹೈದರನ ಸೈನ್ಯ ದಿಂದ ನಗರಕ್ಕೆ ಅವಳು ಬಂದಿದ್ದಾಳೆಂದೂ, ನಗರದ ರಾಜ್ಯದಲ್ಲಿ ನಾನಾ ವಿಧವಾದ ಪ್ರಚಾರಗಳನ್ನು ಕೈಗೊಂಡಿರುವಳೆಂದೂ ಅವರಿಗೆ ವರದಿ ಯಾಗಿದ್ದಿತು. ರಾಮಕೃಷ್ಣರವರು ಅವಳಮೇಲೆ ಬಲವಾದ ಕಾವಲ ನ್ನಿಟ್ಟಿದ್ದರು. ಬೃಂದೆಯು ಯಾವಾಗಲೂ ಅವಳ ಜೊತೆಯಲ್ಲಿಯೇ ಇರುತ್ತಿದ್ದಳು. ಅರಮನೆಗೆ ಅವಳು ಹೋಗಿ ರಾಣಿಯವರ ಭೇಟಿ ಮಾಡುವುದನ್ನು ಮಂತ್ರಿಗಳು ಅರಿತಿದ್ದರು. ಭೈರವಿಯು ರಾಣಿಯ ವರನ್ನು ಕೊಲೆಮಾಡುವ ಹಟತೊಟ್ಟದ್ದಾಳೆಂಬುದು ಮಂತ್ರಿಗಳಿಗೆ ವರದಿಯಾಗಿದ್ದಿತು. ಭೈರವಿಯು ಅರ್ಧರಾತ್ರಿಯಲ್ಲಿ ದುಃಖೋದ್ವೇಗ ದಿಂದ ಹೊರಗೆಬರುತ್ತಲೇ ಆ ಕತ್ತಲೆಯಲ್ಲಿ ರಾಜಭಟರು ಅವಳನ್ನು ಹಿಡಿದು ಬಂದೀಖಾನೆಯಲ್ಲಿ ಬಂಧಿಸಿದರು. ಭೈರವಿಯು ಹೆದರಲಿಲ್ಲ.

ಅವರನ್ನು ನೋಡಿ ಏಕೆ ಹಿಡಿದಿರಿ? ಎಲ್ಲಿಗೆ ತಂದಿಟ್ಟಿದ್ದೀರಿ? ಯಾರ ಅಪ್ಪಣೆ" ಎಂದು ಕೇಳಿದಳು.

ದಫೇದಾರನು, "ಭೈರವಿತಾಯಿ, ಇದು ರಾಜಬಂಧಿಗಳನ್ನಿಡುವ ಬಂದೀಖಾನೆ. ಮಹಾಮಂತ್ರಿಗಳ ಆಜ್ಞೆಯಂತೆ ನಿನ್ನನ್ನು ಬಂಧನದಲ್ಲಿಟ್ಟಿದ್ದೇನೆ" ಎಂದನು.

ಭೈರವಿಯು ಗಟ್ಟಿಯಾಗಿ ನಕ್ಕಳು. "ಮಂತ್ರಿಯು ಸರಿಯಾದ ಕೆಲಸವನ್ನು ಮಾಡಿದ್ದಾನೆ. ನಾನು ಹೊರಗಿದ್ದರೆ ಅವನು ನಗರದ ರಾಜ್ಯವನ್ನು ಉಳಿಸಬಲ್ಲನೇ" ಎಂದು ನಕ್ಕು ಭೂಮಿಯಮೇಲೆ ಮಲಗಿದಳು.

ಪ್ರಾತಃಕಾಲದ ಸಮಯಕ್ಕೆ ರಣಕ್ಷೇತ್ರದಲ್ಲಿ ಪಾಳೆಯಗಾರರ ಸೈನ್ಯಕ್ಕೆ ಬಹಳ ನಷ್ಟವಾಗಿದೆಯೆಂದೂ ಕೃಷ್ಣಪ್ಪನಾಯಕರು ರಣಕ್ಷೇತ್ರದಲ್ಲಿ ಮಡಿದರೆಂದೂ, ರುದ್ರನಾಯಕರನ್ನು ಸೆರೆಹಿಡಿದಿದ್ದಾರೆಂದೂ, ಗೋಪಾಲನಾಯಕರು ಒಂದೆರಡು ದಿವಸಗಳಲ್ಲಿ ಮತ್ತೊಂದು ಯುದ್ಧವನ್ನು ಕೊಡುವರೆಂದೂ ಈಗ ನಗರದ ರಾಜ್ಯದ ಸೈನ್ಯಗಳು ಅಪ್ರತಿಹತವಾಗಿ ಹೋರಾಡುತ್ತಿದೆಯೆಂದೂ ಮಂತ್ರಿಗಳಿಗೆ ಸಮಾಚಾರವು ಬಂದಿತು. ಮಂತ್ರಿಗಳು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ವಿರೂಪಾಕ್ಷ ಕ್ಷೇತ್ರಕ್ಕೆ ಹೋಗಿ ದೇವರ ದರ್ಶನಮಾಡಿ ಚಂಡೀಶಾಲೆಯಲ್ಲಿ ಅಭಿರಾಮಸ್ವಾಮಿಗಳ ದರ್ಶನಮಾಡಿ ತಾವು ರಣಕ್ಷೇತ್ರಕ್ಕೆ ಹೊರಡುವುದಾಗಿ ತಿಳಿಸಿದರು. ಅಭಿರಾಮಸ್ವಾಮಿಗಳು ಮಂತ್ರಿಗಳಿಗೆ ಜಯವಾಗುವುದೆಂದು ಆಶೀರ್ವದಿಸಿ ಪ್ರಸಾದವನ್ನು ಕೊಟ್ಟರು. ಮಂತ್ರಿಗಳು ಮನೆಗೆ ಬಂದು ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಟ್ಟು ಅರಮನೆಗೆ ಹೋಗಿ ಮಹಾರಾಣಿಯವರನ್ನು ವಂದಿಸಿ ತಾವು ರಣಕ್ಷೇತ್ರಕ್ಕೆ ಹೊರಡುವುದಾಗಿ ತಿಳಿಸಿದರು. ರಾಣಿಯವರಿಗೆ ಯುದ್ಧಕ್ಷೇತ್ರದ ಸಮಾಚಾರಗಳೆಲ್ಲವೂ ವಿಶದವಾಗಿ ತಿಳಿದಿದ್ದವು. ರಾಣಿಯವರು ಭಯಗ್ರಸ್ತರಾಗಿರಬಹುದೆಂದು ಮಂತ್ರಿಗಳ ಮನಸ್ಸಿನಲ್ಲಿ ಅಳುಕಿದ್ದಿತು. ಮಂತ್ರಿಗಳು ರಾಣಿಯವರೊಡನೆ ತಾವೇ ಸ್ವತಃ ಯುದ್ಧಕ್ಷೇತ್ರಕ್ಕೆ ತೆರಳುವುದಾಗಿ ಹೇಳುತ್ತಲೇ ರಾಣಿ

ಯವರು ವೀಳಯವನ್ನು ತರಿಸಿ ಮಂತ್ರಿಗಳ ಮುಂದಿಟ್ಟು "ತಾವು
ವೀಳಯವನ್ನು ತೆಗೆದುಕೊಂಡು ರಣಕ್ಷೇತ್ರಕ್ಕೆ ಹೊರಡಿರಿ. ನಾನು ಈ
ರಾಜಧಾನಿಯವನ್ನು ರಕ್ಷಿಸುತ್ತೇನೆ" ಎಂದು ಧೈರ್ಯದಿಂದ ಹೇಳಿದರು.
ಇದನ್ನು ಕೇಳಿ ಮಂತ್ರಿಗಳಿಗೆ ಪರಮಾನಂದವಾಯಿತು. ಅವರು
ಅರಮನೆಯ ಮುಂದೆ ಸಿದ್ಧವಾಗಿ ನಿಂತಿದ್ದ ಆನೆಯಮೇಲೆ ಹತ್ತಿ
ಅಂಬಾರಿಯಲ್ಲಿ ಕುಳಿತು ರಣಕ್ಷೇತ್ರಾಭಿಮುಖವಾಗಿ ಹೊರಟರು.
ಮಧ್ಯಾಹ್ನದ ಸಮಯಕ್ಕೆ ಮಂತ್ರಿ ರಾಮಕೃಷ್ಣರವರು ರಣಕ್ಷೇತ್ರವನ್ನು
ಮುಟ್ಟಿದರು. ದಾರಿಯುದ್ದಕ್ಕೂ ನಗರದ ಸೈನ್ಯಗಳು ಜಯಜಯಕಾರ
ಮಾಡುತ್ತಿದ್ದವು. ರಣಕ್ಷೇತ್ರದಲ್ಲಿ ಮಂತ್ರಿಗಳು ಹೋಗಿ ನೋಡವಾಗ
ರಾಮರಾಯನ ಪರಾಕ್ರಮವು ಮೊಳಗುತ್ತಿದ್ದಿತು. ಹೈದರಲ್ಲೀಖಾನನು
ಎರಡುಬಾರಿ ರಾಮರಾಯನ ಸೈನ್ಯದಮುಂದೆ ನಿಂತು ಹೋರಾಡಿ ಹತ್ತು
ಮೈಲಿಗಳು ಹಿಮ್ಮೆಟ್ಟಿದ್ದನೆಂದೂ, ತುಂಗಾನದಿಯನ್ನು ದಾಟಿ ವಾಪಸು
ಹೋಗಿ ಆಚೆ ದಡದಲ್ಲಿ ಶಿಬಿರವನ್ನು ಬಿಟ್ಟುಕೊಂಡಿದ್ದನೆಂದೂ ತಿಳಿಯಿತು.
ಪಾಳೆಯಗಾರರ ಸೈನ್ಯವು ಪೂರ್ವದಕಡೆ ಇದ್ದಿತು. ಮಂತ್ರಿಗಳು
ರಾಮರಾಯನನ್ನು ಕಾಣಲು ಸಾಧ್ಯವಾಗಲಿಲ್ಲ. ಅವರು ಕುದುರೆ
ಯನ್ನೇರಿ ಪಾಳೆಯಗಾರರ ದಂಡಿನ ಪ್ರದೇಶದಕಡೆಗೆ ತೆರಳಿದರು.
ಕಡುಗಲಿಗಳಾದ ನಗರದ ರಾಜಭಟರು ಅವರ ಮೈಗಾವಲಿನಲ್ಲಿ ಕುದುರೆ
ಗಳಮೇಲೆ ನಡೆದು ಹೋಗುತ್ತಿದ್ದರು. ಪಾಳೆಯಗಾರರ ದಂಡು ಮಡಿದು
ಹೋಗಿದ್ದಿತು. ಅನೇಕ ಪಾಳೆಯಗಾರರು ಸತ್ತುಹೋದರೆಂದು
ಮಂತ್ರಿಗಳು ಕಿವಿಯಾರ ಕೇಳಿದರು. ಪಾಳೆಯಗಾರರ ದಂಡಿನಲ್ಲಿ ಸತ್ವ
ವಿರಲಿಲ್ಲವೆಂದು ಅವರಿಗೆ ಪ್ರತ್ಯಕ್ಷವಾಗಿ ಕಂಡಿತು. ಗೋಪಾಲನಾಯಕರ
ಸಮಾಚಾರವು ಖಚಿತವಾಗಿ ತಿಳಿಯಲಿಲ್ಲ. ಆದಿನ ಮಧ್ಯಾಹ್ನದವರೆಗೆ
ಯುದ್ಧಕ್ಷೇತ್ರದಲ್ಲಿ ಇದ್ದರೆಂದು ಸಂಧ್ಯಾಕಾಲದ ಸಮಯದಲ್ಲಿ ಮಹಮ
ದಾಲಿಯವರು ಅವರನ್ನು ಸೆರೆಹಿಡಿದರೆಂದೂ, ಕೆಲವರು ಸೈನಿಕರು
ಅದನ್ನು ಕಣ್ಣಾರ ನೋಡಿದರೆಂದೂ ಹೇಳಿದರು. ಮತ್ತೆ ಕೆಲವರು ರಣ
ಕ್ಷೇತ್ರದಿಂದ ಪಾಳೆಯಗಾರರ ಕಡೆಯವರೇ ಗೋಪಾಲನಾಯಕರನ್ನು

ಎಲ್ಲಿಗೋ ಸಾಗಿಸಿಕೊಂಡುಹೋದರೆಂದೂ, ಗೋಪಾಲನಾಯಕರಿಗೆ ಶರೀರದಮೇಲೆ ಅರಿವು ಇರಲಿಲ್ಲವೆಂದೂ ಮತ್ತೆ ಕೆಲವರು ತಿಳಿಸಿದರು. ಮಂತ್ರಿಗಳು ಎಷ್ಟು ಪ್ರಯತ್ನಪಟ್ಟಾಗ್ಯೂ ಗೋಪಾಲನಾಯಕರ ವಿಚಾರದಲ್ಲಿ ನಿಖರವಾದ ಸಮಾಚಾರವೊಂದೂ ತಿಳಿಯದೇ ನಗರದ ಸೈನ್ಯದ ಶಿಬಿರಕ್ಕೆ ಮಂತ್ರಿ ರಾಮಕೃಷ್ಣರವರು ಹಿಂತಿರುಗಿದರು.

ಪ್ರಾತಃಕಾಲ ಸೂರ್ಯೋದಯವಾಗುವದರೊಳಗಾಗಿ ಗೋಪಾಲನಾಯಕರು ಎರಡುಸಹಸ್ರ ಗೋಲಂದಾಜ ಸೈನ್ಯದೊಡನೆ ಹೈದರಾಲಿಯವರ ಸೈನ್ಯದಮೇಲೆ ರಭಸದಿಂದ ಬಂದುಬಿದ್ದರು. ಗೋಪಾಲನಾಯಕರ ಸೈನ್ಯಗಳು ಬರುವಾಗ ರಣಭೇರಿಗಳನ್ನೂ, ಕಹಳೆತಮಟೆಗಳನ್ನೂ ಬಾರಿಸುತ್ತಲೇ ಬಂದವು. ಹೈದರಾಲಿಯವರ ಸೈನ್ಯಗಳು ಎಚ್ಚತ್ತುನಿಂತವು. ರಾಮರಾಯನ ಸೈನ್ಯಗಳು ಮಹಮದಾಲಿಯವರ ಸೈನ್ಯವನ್ನು ಆಕ್ರಮಣಮಾಡಿದವು. ಅಂದಿನ ಯುದ್ಧದಲ್ಲಿ ಹೈದರಾಲಿಯವರು ನಿಜವಾಗಿಯೂ ಜಯಾಪಜಯಗಳನ್ನು ತೂಕಮಾಡಲಾರದೇ ಇದ್ದರು. ಮಧ್ಯಾನ್ಹ ಮೂರುಘಂಟೆಯ ಸಮಯದಲ್ಲಿ ಗೋಪಾಲನಾಯಕರ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಮಂತ್ರಿ ರಾಮಕೃಷ್ಣರವರು ಗೋಪಾಲನಾಯಕರ ಸೈನ್ಯದ ಹಿಂಬದಿಯಲ್ಲಿದ್ದರು. ವೀರಾವೇಶದಿಂದ ಯುದ್ಧಮಾಡುತ್ತಿದ್ದ ನಗರದ ಸೈನ್ಯಕ್ಕೂ, ಮಂತ್ರಿ ರಾಮಕೃಷ್ಣರವರಿಗೂ ಬಹುದೂರವಿದ್ದಿತು. ಸುಮಾರು ಸಂಧ್ಯಾಕಾಲ ನಾಲ್ಕು ಘಂಟೆಯ ಸಮಯದಲ್ಲಿ ಗೋಪಾಲನಾಯಕರಮೇಲೆ ಬಿದ್ದ ಕತ್ತಿಯ ಪೆಟ್ಟಿನಿಂದ ಅವರು ಕುದುರೆಯಿಂದ ಕೆಳಗುರುಳಿದರು. ಆ ಸೈನ್ಯದಲ್ಲೆಲ್ಲಾ ಹಾಹಾಕಾರವೆದ್ದಿತು. ರಾಮಕೃಷ್ಣರವರು ಕುದುರೆಯನ್ನು ದೌಡಾಯಿಸುತ್ತಾ ತಂದು ಕೆಳಗಿಳಿದು ಅತಿಕಷ್ಟದಿಂದ ಗೋಪಾಲನಾಯಕರ ಶರೀರವು ಬಿದ್ದಿದ್ದೆಡೆ ಬಗ್ಗಿನೋಡಿದರು. ನಾಯಕರು ಉತ್ತಮಣಾವಸ್ಥೆಯಲ್ಲಿದ್ದರು. ಮಂತ್ರಿ ರಾಮಕೃಷ್ಣರವರನ್ನು ನೋಡುತ್ತಲೇ ಗೋಪಾಲನಾಯಕರು ಕಣ್ಣನ್ನರಳಿಸಿ ಬಿರುಗಣ್ಣಿನಿಂದ ನೋಡಿ ಒಂದು ನಗುವನ್ನು ನಕ್ಕರು. ಆ ನಗುವಿನಲ್ಲಿ ಸಮಾಧಾನ ಮತ್ತು

ಪ್ರಶಾಂತಭಾವಗಳಿದ್ದವು. ಆ ನಗುವಿನೊಡನೆಯೇ ಪ್ರಾಣವು ಹಾರಿ ಹೋಗಿದ್ದಿತು.

ಮಂತ್ರಿ ರಾಮಕೃಷ್ಣರವರು ಒಂದೆರಡುಕ್ಷಣಗಳು ಗೋಪಾಲ ನಾಯಕರ ಮುಖವನ್ನು ನೋಡುತ್ತಾ ಕಣ್ಣುಗಳಲ್ಲಿ ಕಂಬನಿ ಚೆಲ್ಲಿದರು. ಕೊಂಚಹೊತ್ತು ಮಂತ್ರಿ ರಾಮಕೃಷ್ಣರವರಿಗೆ ಆ ದುಃಖೋದ್ವೇಗದಿಂದ ವೈಮರವು ಬಂದಂತಾಗಿದ್ದಿತು. ಹಿಂತಿರುಗುವಷ್ಟರಲ್ಲಿ ಯಾರೋ ಬಂದು ಮಂತ್ರಿ ರಾಮಕೃಷ್ಣರ ಎರಡು ತೋಳುಗಳನ್ನು ಬಲವಾಗಿ ಹಿಡಿದುಕೊಂಡರು. ರಾಮಕೃಷ್ಣರವರು ಎಚ್ಚತ್ತು ನೋಡುವಷ್ಟರಲ್ಲಿ ತಾವು ಶತೃಗಳಿಂದ ಬಂಧಿತರಾಗಿದ್ದೇವೆಂದು ಅರಿತುಕೊಂಡರು. ರಾಜ ಭಟರು ಅವರನ್ನು ಶಿಬಿರಕ್ಕೆಎತ್ತಿಕೊಂಡುಹೋಗಿ ಬಂಧನದಲ್ಲಿಡಿಸಿದರು. ಆದಿನ ರಾತ್ರಿಯಲ್ಲಾ ನಗರದ ಸೈನ್ಯಗಳು ವೀರಾವೇಶದಿಂದ ಯುದ್ಧ ಮಾಡುತ್ತಲೇ ಇದ್ದವು.

ಮಾರನೆಯ ದಿನ ಪ್ರಾತಃಕಾಲ ರಾಮರಾಯನ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಸೂರ್ಯಾಸ್ತಮಾನದೊಳಗಾಗಿ ಮೈಸೂರು ಸೈನ್ಯಗಳು ಬಿದನೂರಿನ ಸಮೀಪಗತವಾಗುತ್ತಬಂದವು. ರಾಮ ರಾಯನು ಪ್ರತಿಯೊಂದು ಹೆಜ್ಜೆಯಲ್ಲಿಯೂ ತನ್ನ ಸೈನ್ಯವನ್ನು ಉತ್ತೇ ಜನಗೊಳಿಸುತ್ತಾ ಯುದ್ಧವನ್ನು ಕೊಡುತ್ತಲೇ ಇದ್ದನು. ಸಂಧ್ಯಾಕಾಲ ದೊಳಗಾಗಿ ನಗರದ ಸೈನ್ಯಗಳಿಗೆ ಅಪಜಯವಾಗುತ್ತಿದೆಯೆಂದು ಸಮಾ ಚಾರವು ಬಿದನೂರಿಗೆ ಬಂದು ಗೋಪಾಲನಾಯಕರು ರಣಕ್ಷೇತ್ರದಲ್ಲಿ ಮಡಿದು ವೀರಸ್ವರ್ಗನ್ನೇರಿದರೆಂದೂ, ಮಂತ್ರಿ ರಾಮಕೃಷ್ಣರವರು ಬಂಧಿತರಾದರೆಂದೂ ರಾಣಿಯವರಿಗೆ ನಿವೇದಿಸಲಾಯಿತು. ರಾಣಿಯು ದುಃಖದಿಂದ ಉತ್ತೇಜಿತಳಾದಳು. ಯುದ್ಧದ ದಿರಸುಗಳನ್ನು ಧರಿಸಿ ಕೊಂಡು ಕೋಟೆಯಲ್ಲಿದ್ದ ಸೈನ್ಯಗಳನ್ನು ಮುಂದಕ್ಕೆ ಹಾಯಿಸಿ ಯುದ್ಧಕ್ಕೆ ಸಿದ್ಧಳಾಗಿ ಹೊರಟಳು. ಕೋಟೆಯ ರಕ್ಷಣೆಗೆ ಬಲವಾದ ಸನ್ನಾಹಗಳನ್ನು ಮಾಡಿದಳು. ಅಂದು ರಾತ್ರಿ ಯುದ್ಧವು ಸನ್ನಿಹಿತವಾಗುತ್ತದೆಂದೂ

ತಾನು ಬಿದನೂರಿನ ಕೋಟೆಯಲ್ಲಿ ಪ್ರಾಣವನ್ನೊಪ್ಪಿಸುವುದಾಗಿಯೂ ಮನಸ್ಸಿನಲ್ಲಿ ಸಿದ್ಧಮಾಡಿಕೊಂಡು ಹೊರಟಳು.

ಇತ್ತ ಕಡೆ ಮಂತ್ರಿಗಳ ಬಂಧನವಾದ ಸುದ್ದಿಯು ರಾಮಕೃಷ್ಣರವರ ಮಹಲಿಗೆ ತಲುಪಿತು. ರಾಮಕೃಷ್ಣರವರ ಧರ್ಮಪತ್ನಿಯವರಾದ ಗೌರಮ್ಮನವರು ಚಲಿಸಲಿಲ್ಲ. ಸ್ನಾನವನ್ನು ಮಾಡಿ ಹೊಸ ಬಟ್ಟೆಗಳನ್ನು ಧರಿಸಿ ಬ್ರಾಹ್ಮಣರನ್ನು ಕರೆಸಿ ದಾನಧರ್ಮವನ್ನು ಮಾಡಿ ಪೂಜಾಗೃಹದಲ್ಲಿ ತುಪ್ಪದ ದೀಪಗಳನ್ನು ಹಚ್ಚಿಟ್ಟು ಗೌರೀಪೂಜೆಗೆ ಆರಂಭಮಾಡಿದರು. ಅದೇ ಮಂತ್ರಿಗಳ ಮಹಲಿನಲ್ಲಿದ್ದ ಮಲ್ಲಿಗಮ್ಮನಿಗೂ ಈ ಸಮಾಚಾರವು ಮುಟ್ಟಿತು. ಅವಳು ಹುಚ್ಚಿಯಂತೆ ಕಿರುಚುತ್ತಾ ಮಂತ್ರಿಗಳ ಧರ್ಮಪತ್ನಿಯವರು ಪೂಜೆಮಾಡುತ್ತಿದ್ದ ಪೂಜಾಗೃಹಕ್ಕೆ ಬಂದು ಗೌರಮ್ಮನವರಿಗೆ ನಮಸ್ಕರಿಸಿ, "ನಾನೂ ರಣಕ್ಷೇತ್ರಕ್ಕೆ ಹೋಗುತ್ತೇನೆ. ಮಂತ್ರಿಗಳನ್ನು ಬಿಡಿಸಿಕೊಂಡು ಬರುತ್ತೇನೆ. ಅಪ್ಪಣೆ ಕೊಡಿರಿ" ಎಂದು ಕೇಳಿದಳು. ಗೌರಮ್ಮನವರಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ಅವರು ದೇವಿಯ ಪ್ರೇರಣೆಯು ಹೇಗಿದೆಯೋ ಎಂಬುದಾಗಿ ಆಶ್ಚರ್ಯಚಕಿತರಾಗಿ "ನೀವು ಯುವರಾಣಿಯವರು. ವೀರ ರಮಣಿ. ಯುದ್ಧಕ್ಕೆ ಹೋಗುತ್ತೇನೆಂದರೆ ನಾನು ತಡೆಯುವದೆಂತು? ಹೋಗಿ ಬನ್ನಿರಿ, ಶುಭವಾಗಲಿ" ಎಂದು ಆಶೀರ್ವದಿಸಿದರು. ಮಲ್ಲಿಗಮ್ಮನು ಮಂತ್ರಿಗಳ ಗೃಹವನ್ನು ಬಿಟ್ಟು ರಾಜಬೀದಿಗಳಲ್ಲಿ ಹೊರಟರು. ಪುರಜನರೆಲ್ಲರೂ ಗಾಬರಿಗೊಂಡು ಅಲೆದಾಡುತ್ತಿದ್ದರು. ಮಲ್ಲಿಗಮ್ಮನು ವೇಗದಿಂದ ಮಲ್ಲಿಕಾರ್ಜುನಕ್ಷೇತ್ರಕ್ಕೆ ಹೋಗಿ ದೇವರನ್ನು ನಮಸ್ಕರಿಸಿ ಪ್ರಾರ್ಥನೆ ಮಾಡಿದಳು. ಸಮೀಪದಲ್ಲಿದ್ದ ಯಾಗಶಾಲೆಯಿಂದ ಮಂತ್ರಘೋಷಣೆಗಳು ಕೇಳಿಬಂದವು. ಮಲ್ಲಿಗಮ್ಮನು ದೇವಾಲಯದಿಂದ ಆ ಮಂತ್ರಘೋಷಣೆಗಳು ಕೇಳಿಬರುತ್ತಿದ್ದ ಯಾಗಶಾಲೆಯ ಕಡೆಗೆ ಧಾವಿಸಿ ಹೋದಳು. ಬ್ರಾಹ್ಮಣರು ಮಹಾಯಜ್ಞಕುಂಡದಲ್ಲಿ ಆಹುತಿಗಳನ್ನು ಕೊಟ್ಟು ಪೂರ್ಣಾಹುತಿಗೆ ಸಿದ್ಧಮಾಡಿದ್ದರು. ಮಲ್ಲಿಗಮ್ಮನು ಹೋಗಿ ಅಭಿರಾಮಸ್ವಾಮಿಗಳನ್ನು ವಂದಿಸಿ ಯಜ್ಞಕುಂಡದ ಸಮೀಪದಲ್ಲಿ ಕೈ

ಮುಗಿದು ನಿಂತುಕೊಂಡಳು. ಯಜ್ಞೇಶ್ವರನು ಜಾಜ್ವಲ್ಯಮಾನವಾಗಿ ಸಪ್ತ ಜಿಹ್ವೆಗಳನ್ನು ಚಾಚಿ ಉರಿಯುತ್ತಿದ್ದನು. ಬ್ರಾಹ್ಮಣರು ದುರ್ಗಾ ಮಂತ್ರಗಳನ್ನು ಉಚ್ಛಕಂಠದಿಂದಪಠಿಸಿ ಪೂರ್ಣಾಹುತಿಯನ್ನು ಸಮರ್ಪಿಸಿದರು. ಅಭಿರಾಮಸ್ವಾಮಿಯು ಧ್ಯಾನಮಗ್ನನಾಗಿ ವ್ಯಾಘ್ರಾಸನದ ಮೇಲೆ ಕುಳಿತಿದ್ದನು. ಮಲ್ಲಿಗಮ್ಮನ ಕಂಠದಿಂದ ಮಾತುಗಳು ಹೊರಡಲಾರಂಭವಾದವು. "ಬ್ರಾಹ್ಮಣೋತ್ತಮರುಗಳಿರಾ, ನಿಮ್ಮ ಮಂತ್ರಗಳಲ್ಲಿ ಸತ್ವವಿಲ್ಲ. ನೀವುಗಳೆಲ್ಲರೂ ಅಜ್ಞಾನಿಗಳು. ಗಿಣಿಯಂತೆ ಮಂತ್ರಗಳನ್ನು ಪಠಿಸುತ್ತೀದ್ದೀರಿ. ಮಹಾಗುರುವಾದ ಅಭಿರಾಮಸ್ವಾಮಿಗೂ ಅಜ್ಞಾನವು ಆವರಿಸಿಕೊಂಡಿದೆ. ನಗರದರಾಜ್ಯದ ಧರ್ಮವು ಅಳಿದುಹೋಗಿ ಅಧರ್ಮದ ಪ್ರತಿಷ್ಠಾಪನೆಯಾಗಿದೆ. ಈಗ ನಗರದ ರಾಜ್ಯಕ್ಕೆ ಜಯವಾಗುವುದು ಮಹಾದೇವಿಯ ಸಂಕಲ್ಪದಲ್ಲಿಲ್ಲ. ಅಧರ್ಮಕ್ಕೆ ಜಯವಾದರೆ ಈ ಪ್ರಪಂಚದಲ್ಲಿ ನಾಳೆ ಪ್ರಾತಃಕಾಲ ಸೂರ್ಯೋದಯವಾಗದೆ ಹೋದೀತು. ಗಾಳಿಯು ಬೀಸದೆ ಘನೀಭೂತವಾದೀತು. ಜಲವು ಮರುಭೂಮಿಯಾದೀತು. ಅಧರ್ಮವು ನಾಶವಾಗಲೇಬೇಕು. ನಿಮ್ಮ ಈ ದುಷ್ಕೃತ್ಯಗಳನ್ನು ನಾನು ನೋಡಿ ಸಹಿಸಲಾರೆ" ಎಂದು ಘರ್ಜಿಸುತ್ತಾ ಅಗ್ನಿಕುಂಡದಲ್ಲಿ ಧುಮುಕಿಬಿಟ್ಟಳು. ಯಜ್ಞೇಶ್ವರನ ಜ್ವಾಲಮಾಲೆಗಳು ಅದ್ಭುತವಾಗಿ ಉರಿಯಲಾರಂಭಿಸಿದವು. ಋತ್ವಿಕ್ಕುಗಳೆಲ್ಲಾ ಹಾಹಾಕಾರ ಮಾಡಿದರು. ಕೆಲವರು ಅಗ್ನಿಕುಂಡದಲ್ಲಿಳಿದು ಆ ಸ್ತ್ರೀಯನ್ನು ಮೇಲಕ್ಕೆತ್ತಲು ಪ್ರಯತ್ನಿಸಿದರು. ಅಷ್ಟರಲ್ಲಿ ಅಭಿರಾಮಸ್ವಾಮಿಯು ಕಣ್ಣುತೆರೆದು ನೋಡಿದನು. ಅವನು ಗಾಬರಿಗೊಳ್ಳಲಿಲ್ಲ. ದುಃಖಿತನಾಗಲೂ ಇಲ್ಲ. ಎದ್ದುನಿಂತು ಗಂಭೀರಧ್ವನಿಯಿಂದ ಯಜ್ಞೇಶ್ವರನನ್ನು ಮುಟ್ಟಬೇಡಿರಿ ದೂರಸರಿಯಿರಿ" ಎಂದು ಆಜ್ಞಾಪಿಸಿದನು. ಬ್ರಾಹ್ಮಣರೆಲ್ಲರೂ ಅವಾಕ್ಕಾಗಿ ಹಿಂದೆ ಸರಿದು ನಿಂತರು. ಅಭಿರಾಮಸ್ವಾಮಿಯು ಯಾಗವು ಪೂರ್ತಿಯಾಯಿತು. ಆದರೆ ನಮ್ಮ ಯಜ್ಞವು ಭಂಗವಾಗಿ ಹೋಯಿತು. ಈ ಯಜ್ಞಕುಂಡದಿಂದ ಜಯಲಕ್ಷ್ಮಿಯು ಉದ್ಭವಿಸುವಳೆಂದು ನಾನು ಸಂಕಲ್ಪಮಾಡಿದ್ದೆ. ಮೃತ್ಯುದೇವತೆಯು ಯಜ್ಞಕುಂಡ

ದಲ್ಲಿ ದರ್ಶನವಿತ್ತಳು. ಭಗವದಿಚ್ಛೆಯು ಹಾಗಿದೆ. ನೀವುಗಳೆಲ್ಲರೂ ಯಜ್ಞಶಾಲೆಯನ್ನು ಬಿಟ್ಟು ತೆರಳಿರಿ" ಎಂದು ಆಜ್ಞಾಪಿಸಿ, ದೇವಾಲಯದ ಬೊಕ್ಕಸದ ಖಜಾಂಚಿಯನ್ನು ಕುರಿತು ಈ ಬ್ರಾಹ್ಮಣೋತ್ತಮರಿಗೆಲ್ಲರಿಗೂ ಭೂರಿ ದಾನ, ದಕ್ಷಿಣೆಗಳನ್ನು ಕೊಟ್ಟು ಕಳುಹಿಸಬೇಕೆಂದೂ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಒಂದು ಕಿಲುಬು ಕಾಸನ್ನೂ ಉಳಿಸಕೂಡ ದೆಂದೂ ಈ ದಾನದಕ್ಷಿಣೆಗಳನ್ನು ಪೂರೈಸಿ ಬಂದು ತಮಗೆ ತಿಳಿಸ ಬೇಕೆಂದೂ ಆಜ್ಞೆಯಿತ್ತನು. ಬ್ರಾಹ್ಮಣರು ವಿಷಣ್ಣವದನರಾಗಿ ದೇವಾಲಯದಕಡೆಗೆ ತೆರಳಿದರು.

ಅಭಿರಾಮಸ್ವಾಮಿಯು ಆಸನದಲ್ಲಿ ಕುಳಿತು ಧ್ಯಾನಮಗ್ನನಾದನು. ಅಭಿರಾಮಸ್ವಾಮಿಯು ಈ ಜಗತ್ತಿನ ಸುಖದುಃಖಗಳನ್ನೆಲ್ಲಾ ದಾಟಿದ ಮಹಾಪುರುಷ. ಅವನಿಗೆ ಈ ಯಜ್ಞವು ಈ ರೀತಿಯಾಗಿ ಭಗ್ನವಾಗ ಬಹುದೆಂಬ ಊಹೆಯೇಯಿರಲಿಲ್ಲ. ದೇವಿಯು ಈ ಕರ್ಮವನ್ನು ಒಪ್ಪ ಲಿಲ್ಲವೆಂದು ಆ ವಿಧಗ್ಧ ಬಾಲೆಯ ಬಾಯಿಯಲ್ಲಿ ಹೊರಟಮಾತುಗಳು ಸತ್ಯವಾದವುಗಳೆಂದು ಭಾವಿಸಿದನು. ಈ ಜಗತ್ತಿನಲ್ಲಿ ಅಭಿರಾಮ ಸ್ವಾಮಿಗೆ ಉಳಿದಿದ್ದ ಕರ್ತವ್ಯವೇನೂ ಇರಲಿಲ್ಲ. ನಗರದ ಯುದ್ಧವು ಏನಾಗಿರಬಹುದೆಂದು ಅವನ ಮನಃಫಲಕದ ಮೇಲೆ ಚಿಂತೆಯು ಉತ್ಪನ್ನವಾಯಿತು. ಯಾಗಶಾಲೆಯ ಬಾಗಿಲುಗಳಲ್ಲಿ ಕಾವಲುಕಾಯು ತ್ತಿದ್ದ ಹರಿಕಾರರನ್ನು ಕರೆದು ಯುದ್ಧದ ಸಮಾಚಾರವೇನೆಂದು ಪ್ರಶ್ನೆ ಮಾಡಿದನು. ಅವರುಗಳು ಆದ್ಯೋಪಾಂತವಾಗಿ ಇಪ್ಪತ್ತುನಾಲ್ಕು ದಿನ ಗಳ ಯುದ್ಧದ ಕಥೆಯನ್ನು ವರ್ಣಿಸಿ ರಾಣಿಯು ಕೋಟೆಯಬಾಗಿಲಿನಲ್ಲಿ ಯುದ್ಧಮಾಡುತ್ತಿದ್ದಾಳೆಂದು ಅರಿಕೆಮಾಡಿದರು. ಆ ಸಮಾಚಾರವನ್ನು ಅಭಿರಾಮಸ್ವಾಮಿಯು ಸಾವಧಾನವಾಗಿ ಕೇಳಿದನು. ಸಂಕಲ್ಪಮಾಡಿ ಗಟ್ಟಿಯಾಗಿ ದುರ್ಗಾಮಂತ್ರಗಳನ್ನು ಪಠಿಸುತ್ತಾ ಯಜ್ಞಕುಂಡಕ್ಕೆ ಮೂರು ಪ್ರದಕ್ಷಿಣೆಗಳನ್ನುಮಾಡಿ ನಮಸ್ಕರಿಸಿ ಎದ್ದುನಿಂತು ಆ ಯಜ್ಞೇಶ್ವರನಲ್ಲಿ ಆತ್ಮಸಮರ್ಪಣೆಮಾಡಿದನು. ಸುತ್ತಲೂ ಇದ್ದ ಹರಿ ಕಾರರುಗಳು ಹೀಗಾಗುವುದೆಂದು ಭಾವಿಸಿರಲಿಲ್ಲ. ಅವರೆಲ್ಲರೂ ಚೀತ್ಕಾರ

ಮಾಡಲಾರಂಭಿಸಿದರು. ಈ ಆರ್ತನಾದವು ದೇವಾಲಯಕ್ಕೆ ಕೇಳಿ ಬಂದಿತು. ಅಲ್ಲಿ ನೆರದಿದ್ದ ಬ್ರಾಹ್ಮಣರೆಲ್ಲರೂ ಧಾವಿಸಿ ಯಜ್ಞಶಾಲೆಗೆ ಬಂದರು. ಎಲ್ಲರೂ ಗೋಳಿಡಲಾರಂಭಿಸಿದರು. ಅಷ್ಟರಲ್ಲಿ ಬ್ರಾಹ್ಮಣರು ಎಚ್ಚತ್ತು ಆ ಮಹಾಪುರುಷನು ಸಂಕಲ್ಪಸಿದ್ಧಿಯನ್ನು ಮಾಡಿಕೊಂಡನು. ನಾವು ರೋಧಿಸಲೇಕೆ? ಎಂಬುದಾಗಿ ಪರಸ್ಪರ ಸಮಾಧಾನಮಾಡಿದರು. ಅಲ್ಲಿ ನೆರದಿದ್ದ ಬ್ರಾಹ್ಮಣರೆಲ್ಲರೂ ತಾವು ಪಡೆದಿದ್ದ ಭೂರಿದಕ್ಷಿಣೆಗಳನ್ನು ವಸ್ತ್ರಾಭರಣಗಳನ್ನೂ ಆ ಯಜ್ಞಕುಂಡದಲ್ಲಿ ಸಮರ್ಪಣೆಮಾಡಿದರು. ಯಜ್ಞೇಶ್ವರನು ಸರ್ವವನ್ನೂ ಭಕ್ಷಿಸುತ್ತಾ ಧಗಧಗನೆ ಜ್ವಲಿಸುತ್ತಿದ್ದನು. ಬ್ರಾಹ್ಮಣರೆಲ್ಲರೂ ಮುಂದಿನ ಕರ್ತವ್ಯವನ್ನು ಚಿಂತಿಸದೆ ಎಲ್ಲರೂ ಅಭಿರಾಮಸ್ವಾಮಿಯ ಗುಣಗಾನಮಾಡುತ್ತಾ ಆ ಯಜ್ಞಶಾಲೆಯಲ್ಲಿಯೇ ಯಜ್ಞಕುಂಡದ ಸುತ್ತಲೂ ಕುಳಿತುಬಿಟ್ಟರು.

---

೩೪

## ನಗರದ ದುರಂತ

ಮಹಮುದಾಲಿಯವರು ಮೈಸೂರು ಸೈನ್ಯವನ್ನು ಮುಂದಕ್ಕೆ ನುಗ್ಗಿಸುತ್ತಾ ಕೋಟೆಯ ಮಹಾದ್ವಾರದಲ್ಲಿ ಬಂದು ನಿಂತು ಬಾಗಿಲುಗಳನ್ನು ಒಡೆಯತೊಡಗಿದರು. ಸ್ವಲ್ಪ ಹೊತ್ತಿನೊಳಗಾಗಿ ಬಾಗಿಲುಗಳು ಕೀಲುಕಳಚಿ ಢಬಾರನೆ ಬಿದ್ದವು. ಸೈನ್ಯಗಳು ಕೋಟೆಯೊಳಗೆ ನುಗ್ಗಲಾರಂಭಿಸಿದವು. ರಾಣಿಯ ಸೈನ್ಯಗಳು ಜಯ ಜಯ ಮಹಾದೇವ ಎಂದು ಘೋಷಣೆಮಾಡುತ್ತಾ ಶತ್ರುಸೈನ್ಯದಮೇಲೆ ನುಗ್ಗಿದವು.

ಹೈದರಾಲಿಯು ಕೋಟೆಯ ಮರ್ಮವನ್ನು ತಿಳಿದಂಥಾ ನಗರದ ರಾಜಪುರುಷನೊಬ್ಬನ ಸಹಾಯದಿಂದ ದಿಡ್ಡಿಯ ಬಾಗಿಲನ್ನು ಒಡೆದು ಕೊಂಡು ಬಿದನೂರು ಕೋಟೆಯನ್ನು ಪ್ರವೇಶಮಾಡಿದನು. ಈ ಸಮಾಚಾರವು ಪೂರ್ವಭಾಗದ ಕೋಟೆಯ ಮಹಾದ್ವಾರದ ಬಳಿ

ಯುದ್ಧಮಾಡುತ್ತಿದ್ದ ರಾಣಿಗೆ ತಿಳಿಯಿತು. ರಾಣಿಯು ಹಟಾತ್ತನೆ ಕುದುರೆಯನ್ನು ಹಿಂದಕ್ಕೆ ತಿರುಗಿಸಿ ಅರಮನೆಯನ್ನು ಪ್ರವೇಶಿಸಿದಳು. ಅತ್ತಕಡೆ ಹೈದರನು ದಿಡ್ಡೀಬಾಗಿಲಿನಿಂದ ಒಳಹೊಕ್ಕದ್ದನ್ನು ರಾಮ ರಾಯನು ಹಿಡಿದು ತನ್ನ ಉಳಿದ ಸೈನ್ಯವನ್ನು ಪಶ್ಚಿಮದ ಕೋಟೆಯ ಬಾಗಿಲಿನಿಂದ ತಂದು ಹೈದರಾಲಿಗೆ ಎದುರಾಗಿ ಯುದ್ಧವನ್ನು ಹೂಡಿ ದನು. ಕೋಟೆಯಲ್ಲೆಲ್ಲಾ ಎಲ್ಲೆಲ್ಲಿಯೂ ಸಣ್ಣ ಸಣ್ಣ ಗುಂಪುಗಳಿಗೆ ಯುದ್ಧಗಳು ಆಗುತ್ತಲೇಯಿದ್ದವು. ಪೂರ್ವದ್ವಾರದಿಂದ ಪ್ರವೇಶ ಮಾಡಿದ ದಿವಾನ್ ಮಹಮುದಾಲಿಯುವರಾಗಲೀ ದಿಡ್ಡಿಯಬಾಗಲಿನಿಂದ ಪ್ರವೇಶಿಸಿದ ಹೈದರಲ್ಲೀಖಾನನಾಗಲೀ ಅರಮನೆಯ ಸಮೀಪಕ್ಕೆ ಬರು ವುದು ಬಹಳ ಕಷ್ಟವಾಗಿತ್ತು. ಇಷ್ಟುಹೊತ್ತಿಗೆ ಮಧ್ಯರಾತ್ರಿ ಹನ್ನೆರಡು ಘಂಟೆಯಾಗಿತ್ತು. ರಾಣಿಯು ಅರಮನೆಗೆ ಹಿಂತಿರುಗತ್ತಲೇ ಪರಿಜನರಿಗೂ ರಾಜಭಟರಿಗೂ ತಮಗೆ ಬೇಕುಬೇಕಾದ ಧನಕನಕಗಳನ್ನು ಅರಮನೆ ಯಿಂದ ಹೊತ್ತುಕೊಂಡು ತಕ್ಷಣ ಹೊರಟುಹೋಗಬೇಕೆಂದು ಆಜ್ಞಾಪಿ ಸಿದಳು. ಅರಮನೆಯ ನಾಲ್ಕು ದಿಕ್ಕುಗಳಲ್ಲಿಯೂ ತೈಲಭಾಂಡಗಳನ್ನೂ ಮದ್ದುಗುಂಡುಗಳನ್ನೂ ಇಡಿಸಿ ನಾಲ್ಕೂ ಕಡೆಯಿಂದ ತಾನೇ ತನ್ನ ಕೈಯ್ಯಿಂದ ಬೆಂಕಿಯನ್ನು ಹತ್ತಿಸಿ ಕುದುರೆಯನ್ನೇರಿ ದಕ್ಷಿಣದ್ವಾರದ ಕಡೆಗೆ ಹೋಗಿ ದೂರದಲ್ಲಿ ನಿಂತು ನೋಡಲಾರಂಭಿಸಿದಳು. ಸ್ವಲ್ಪ ಹೊತ್ತಿನೊಳಗಾಗಿ ಅರಮನೆಯು ಧಗಧಗನೆ ಉರಿಯಲಾರಂಭಿಸಿತು. ಅಗ್ನಿಜ್ವಾಲೆಗಳು ಆಕಾಶವನ್ನು ಅಡರುತ್ತಿದ್ದವು. ಆ ರಾಜಧಾನಿಯೆಲ್ಲವೂ ಧೂಮಾವೃತವಾಯಿತು. ಚಟಚಟ ಪಟಪಟ ಶಬ್ದಗಳು ಕೇಳಲಾರಂಭ ವಾದವು. ಪುರಜನರೆಲ್ಲರೂ ಅರಮನೆಯಕಡೆಗೆ ಧಾವಿಸಲಾರಂಭಿಸಿದರು. ಸೈನಿಕರು ಅರಮನೆಯಕಡೆಗೆ ಓಡಿದರು. ಮಹಮುದಾಲಿಯುವರು ತಮ್ಮ ಕುದುರೆಯನ್ನು ಅರಮನೆಯಕಡೆಗೆ ತಿರುಗಿಸಿದರು. ಅವರ ಸೈನ್ಯವು ಅವರನ್ನು ಹಿಂಬಾಲಿಸಿತು. ಹೈದರಾಲಿಯುವರು ಅರಮನೆಯ ಪ್ರಾಂಗಣಕ್ಕೆ ಸೈನ್ಯಸಮೇತರಾಗಿ ಪ್ರವೇಶಮಾಡಿದರು. ರಾಮರಾಯನು ಏಕಾಕಿಯಾಗಿ ತನ್ನ ಕುದುರೆಯನ್ನು ಅರಮನೆಯಕಡೆಗೆ ಓಡಿಸಿದನು.

ರಾಣಿಯು ಅರಮನೆಯಲ್ಲಿ ಬೆಂದುಹೋಗುತ್ತಿರಬಹುದೆಂದೂ ಆರ್ತನಾದ ಮಾಡುತ್ತಿರಬಹುದೆಂದೂ ತಲ್ಲಣಿಸತೊಡಗಿದನು. ಸೈನಿಕರು ಬಂದೀಖಾನೆಯ ಬಾಗಿಲುಗಳನ್ನೆಲ್ಲಾ ತೆರೆದುಬಿಟ್ಟರು. ಬಂದಿಗಳೆಲ್ಲರೂ ಹೊರಗೆ ಬಂದು ಆ ಅದ್ಭುತದೃಶ್ಯವನ್ನು ನೋಡುತ್ತಲಿದ್ದರು. ಈ ಬಂದೀಖಾನೆಯಿಂದ ಭೈರವಿಯು ಮುಕ್ತಳಾದಳೆಂದು ಬರೆಯುವ ಅಗತ್ಯವಿಲ್ಲ.

ಭೈರವಿಯು ಮಾತ್ರ ಎಲ್ಲರಂತೆ ಬಾಯಿಬಿಟ್ಟು ನೋಡುತ್ತ ನಿಂತಿರಲಿಲ್ಲ. ಅವಳು ಬೇಗಬೇಗ ಓಡಾಡುತ್ತಾ ಆದಷ್ಟು ವಿಷಯಗಳನ್ನು ಸಂಗ್ರಹಮಾಡಿದಳು. ಹೈದರಾಲಿಯುವರ ಸೈನ್ಯಗಳು ಬಿದನೂರನ್ನು ಪೂರ್ತಿಯಾಗಿ ಆಕ್ರಮಿಸಿವೆಯೆಂದೂ ತಿಳಿದುಕೊಂಡಳು. ರಾಣಿಯು ಮಡಿದಿದ್ದಾಳೆಯೋ ಬದುಕಿದ್ದಾಳೆಯೋ ಎಂಬುದನ್ನುಮಾತ್ರ ನಿರ್ಧರಿಸಲಾರದೇ ಹೋದಳು. ಬೇಗಬೇಗ ಮಲ್ಲಿಕಾರ್ಜುನ ಕ್ಷೇತ್ರದ ಕಡೆಗೆ ಹೊರಟಳು. ಆ ನಿಶರಾತ್ರಿಯಲ್ಲಿ ಎಷ್ಟೋ ಜನರು ಮಕ್ಕಳು ಮರಿಗಳನ್ನೂ ಹೆಂಗಸರನ್ನೂ ಕರೆದುಕೊಂಡು ಮಲ್ಲಿಕಾರ್ಜುನ ಕ್ಷೇತ್ರದಕಡೆಗೆ ಪರಿಧಾವಿಸುತ್ತಿದ್ದರು. ಅವರುಗಳು ಯುದ್ಧದ ವಿಚಾರಗಳನ್ನು ನಾನಾವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ಆ ಮಾತುಗಳಲ್ಲಿ ಎಷ್ಟೋ ನಿಜ, ಎಷ್ಟೋ ಸುಳ್ಳು ಸೇರಿಕೊಂಡಿದ್ದಿತು. ಭೈರವಿಯು ಕೇಳುತ್ತ ಕೇಳುತ್ತ ಆ ಮಾತುಗಳಿಂದ ಎಷ್ಟು ನಿಜಾಂಶಗಳನ್ನು ಗ್ರಹಿಸಬಹುದೋ ಅಷ್ಟನ್ನು ಗ್ರಹಿಸಿಕೊಂಡಳು. ಮಹಾಮಂತ್ರಿ ರಾಮಕೃಷ್ಣರು ಸೆರೆಸಿಕ್ಕಿದ್ದಾರೆ. ಆದರೂ ಜೀವಂತರಾಗಿದ್ದಾರೆ. ಹೈದರಲ್ಲೀಖಾನನು ಅವರನ್ನೇನೂ ಮಾಡುವುದಿಲ್ಲ ಎಂದುಕೊಂಡಳು. ಮಲ್ಲಿಕಾರ್ಜುನ ಕ್ಷೇತ್ರವನ್ನು ಪ್ರವೇಶಮಾಡುತ್ತಲೇ ಚಂಡೀಶಾಲೆಯ ದುರಂತ ಕಥಾನಕವನ್ನು ಯಥಾವತ್ತಾಗಿ ಕೇಳಿದಳು. ಬಹುದಿನಗಳಿಂದ ಅಗ್ನಿಜ್ವಾಲೆಗಳಂತೆ ಕುದಿಯುತ್ತಿದ್ದ ಅವಳ ಕಣ್ಣುಗಳು ಕಂಬನಿತುಂಬಿದವು. ಅಭಿರಾಮಸ್ವಾಮಿಯ ದೇಹಪರಿತ್ಯಾಗವನ್ನು ನೆನೆನೆನೆದು ಹಸುಮಗಳಂತೆ ಅತ್ತಳು. ಕೊನೆಗೆ ಬಹುದೂರದಲ್ಲಿ ಒಂದು ಮರದಡಿಯಲ್ಲಿ ಹೋಗಿ ಕುಳಿತುಕೊಂಡು ದುಃಖಿಸಲಾರಂಭಿಸಿದಳು.

ಹೈದರಾಲೀಖಾನರೂ ದಿವಾನ್ ಮಹಮದಾಲಿಯವರೂ ಅರಮನೆಯ ಮುಂಭಾಗದಲ್ಲಿ ಪರಸ್ಪರ ಸಂಧಿಸಿದರು. ಸೈನಿಕರು ಬೆಂಕಿಯನ್ನಾರಿಸಲು ಪ್ರಯತ್ನಿಸುತ್ತಿದ್ದರು. ಹೈದರಾಲಿಯವರು "ಅರಮನೆಯು ಬುಡದಿಂದ ಶಿಖರದವರೆಗೆ ಹತ್ತಿಕೊಂಡು ಉರಿಯು ತ್ತಿದೆ. ಇನ್ನು ಅದನ್ನಾರಿಸುವುದು ದುಃಸಾಧ್ಯವೇ ಸರಿ. ಆ ಅಗ್ನಿಜ್ವಾಲೆ ಗಳನ್ನು ಆರಿಸುವುದಕ್ಕೆ ಪ್ರಯತ್ನಿಸುವುದು ವೃಥಾ ಶ್ರಮ" ಎಂದು ಹೇಳಿ ಎಲ್ಲ ಜನಗಳನ್ನೂ ದೂರಕ್ಕೆ ಕಳುಹಿಸುವಂತೆ ಅಪ್ಪಣೆಮಾಡಿದರು. ಅರಮನೆಯ ಸುತ್ತಲೂ ಸೈನಿಕರ ಕಾವಲನ್ನಿಟ್ಟರು. ತಮ್ಮ ಶಿಬಿರ ವನ್ನು ಪೂರ್ವಭಾಗದ ಕೋಟೆಯ ಬಾಗಿಲಿನ ಒಳಾಂಗಣದಲ್ಲಿ ಏರ್ಪಡಿ ಸುವಂತೆ ಅಪ್ಪಣೆಯಿತ್ತು ಅಲ್ಲಿಂದ ತೆರಳಿದರು. ಮಹಮದಾಲಿಯವರು ಕೋಟೆಯ ಒಳಗಡೆಯೂ, ಕೋಟೆಯ ಮೇಲೆಯೂ ತಮ್ಮ ಸೈನ್ಯ ಗಳನ್ನು ಕಾವಲಿಟ್ಟರು. ಮೈಸೂರಿನ ಸೈನಿಕರಾರೂ ನಗರವನ್ನು ಕೊಳ್ಳೆ ಹೊಡೆಯಕೂಡದೆಂದು ಕಟ್ಟಪ್ಪಣೆಮಾಡಿದರು. ಹೀಗೆ ಏರ್ಪಾಡು ಗಳನ್ನು ಮಾಡುತ್ತಿದ್ದಂತೆಯೇ ಬೆಳಗಾಗಿಹೋಯಿತು. ಮಹಮದಾಲಿ ಯವರು ವಿಶ್ರಾಂತಿಯನ್ನು ಪಡೆಯಲೇ ಇಲ್ಲ. ಕುದುರೆಯಿಂದ ಕೆಳಗಿಳಿ ಯಲೇ ಇಲ್ಲ. ರಾಜಧಾನಿಯಲ್ಲೆಲ್ಲಾ ಹೆಂಗಸರು ಮಕ್ಕಳಿಗೆ ಭಯವಿಲ್ಲ ವೆಂದೂ, ಪುರಜನರಿಗೆ ನೋವನ್ನುಂಟುಮಾಡುವುದಿಲ್ಲವೆಂದೂ ಡಂಗೂರ ವನ್ನು ಹೊಡೆಸಿದರು. ಅರಮನೆಯು ಉರಿಯುತ್ತಲೇ ಇದ್ದಿತು. ಇಪ್ಪತ್ತು ದಿನಗಳು ಆ ಬೆಂಕಿಯು ಹಾಗೆಯೇ ಇದ್ದಿತೆಂದು ಪೂರ್ವಿಕರು ದುಃಖದ ಗಾದೆಗಳನ್ನು ಹೇಳುತ್ತಿದ್ದರು. ಮೂರುದಿವಸಗಳು ರಾಜ ಧಾನಿಯಲ್ಲಿ ಗಲಿಬಿಲಿಯಾಗುತ್ತಲೇ ಇದ್ದಿತು. ಮೂರುದಿವಸಗಳನಂತರ ರಾಜಧಾನಿಯು ಶಾಂತವಾಯಿತು. ಊರುಬಿಟ್ಟು ಓಡಿಹೋಗಿದ್ದ ಪುರಜನರು ರಾಜಧಾನಿಯಲ್ಲಿರುವ ತಮ್ಮತಮ್ಮ ಮನೆಗಳಿಗೆ ಬಂದು ಸೇರಿಕೊಳ್ಳಲಾರಂಭಿಸಿದರು.

ಆ ಘೋರರಾತ್ರಿಯಲ್ಲಿ ಮಹಾರಾಣಿ ಚೆಲುವಮ್ಮಣ್ಣಿಯು ಅರಮನೆ ಯನ್ನು ಯಜ್ಞೇಶ್ವರನಿಗೆ ಆಹುತಿಕೊಟ್ಟು ಕೋಟೆಯ ದಕ್ಷಿಣದ್ವಾರದ

ಬಳಿ ಆ ಅಗ್ನಿಜ್ವಾಲೆಗಳನ್ನು ಒಂದೇ ದೃಷ್ಟಿಯಿಂದ ನೋಡುತ್ತಿದ್ದಳು. ತಾನು ಆ ಅರಮನೆಗೆ ಬಂದಾಗಿನಿಂದ ಇಂದಿನವರೆಗಿನ ವೃತ್ತಾಂತವೆಲ್ಲ ವನ್ನೂ ನೆನೆದುಕೊಂಡಳು. ಅವಳ ಹೃದಯವು ಶೂನ್ಯವಾಗಿತ್ತು. ತಲೆಯು ತಿರುಗುತ್ತಿತ್ತು. ಆ ಕ್ಷಣದಲ್ಲಿ ಮಹಾರಾಣಿಯು ಅನಾಥಳಾ ಗಿದ್ದಳು. ಅವಳ ಹೃದಯದಲ್ಲಿ ದುಃಖಸಾಗರವು ತುಂಬಿ ಅಲೆಗಳನ್ನೆಬ್ಬಿ ಸುತ್ತಿದ್ದಿತು. ಪುನಃ ಅರಮನೆಯ ಕಡೆಗೆ ದೃಷ್ಟಿಸಿ ನೋಡಿದಳು. ಒಂದು ಘಳಿಗೆಯ ಮುಂಚೆ ಇದ್ದುದಕ್ಕಿಂತಲೂ ದ್ವಿಗುಣೀಭೂತವಾಗಿ ಅಗ್ನಿಜ್ವಾಲೆಗಳು ಮೇಲಕ್ಕೆ ಎದ್ದು ಉರಿಯುತ್ತಿದ್ದವು. ಆ ಅಗ್ನಿಮಧ್ಯ ದಲ್ಲಿ ತಾನು ಪ್ರವೇಶಮಾಡಿಬಿಟ್ಟರೆ ತನ್ನದೆಲ್ಲವೂ ಪರಿಸಮಾಪ್ತಿಯಾಗು ವುದೆಂದು ಅವಳ ಮನಸ್ಸು ಪ್ರೇರೇಪಿಸುತ್ತಿದ್ದಿತು. ಆ ಮನಸ್ಸಿನಲ್ಲಿ ಕೋಪ, ದ್ವೇಷ, ಪ್ರೀತಿ, ಆಸೆ, ಭಯ, ಸಂತೋಷ ಈ ಭಾವಗಳೇ ಇಲ್ಲದೆ ಶೂನ್ಯವಾಗಿದ್ದಿತು. ಹಾಗೆಯೇ ರಾಣಿಯು ನೋಡುತ್ತಿರು ವಂತೆಯೇ ಹಿಂದುಗಡೆ ಯಾವುದೋ ಒಂದು ಧ್ವನಿಯು ಕೇಳಿಸಿತು. "ರಾಣಿಯವರೇ, ನೀವು ಇಲ್ಲಿರಕೂಡದು. ಶತೃಗಳ ಕೈಗೆ ಸಿಕ್ಕಿಬೀಳು ತ್ತೀರಿ" ಎಂಬ ಮಾತುಗಳು ಕೇಳಿಬಂದವು. ರಾಣಿಯು ವ್ಯಗ್ರತೆಯಿಂದ ನಕ್ಕು, "ಶತೃಗಳ ಕೈಗೆ ಸಿಕ್ಕಿದರೇನು? ನನ್ನನ್ನು ಯಾರೇನು ಮಾಡ ಬಲ್ಲರು?" ಎಂದು ಹೇಳಿ ಕುದುರೆಯ ಬೆನ್ನು ತಟ್ಟಿ ಹಿಂದಕ್ಕೆ ತಿರುಗಿ ಸಿದಳು. ಎದುರಿಗೆ ಅಶ್ವಾರೋಹಿ ಪುರುಷನೊಬ್ಬನು ನಿಂತಿದ್ದನು. ಕ್ಷಣಹೊತ್ತು ರಾಣಿಯು ತಲೆಬಾಗಿದಳು. ಮರುಕ್ಷಣವೇ ಹೆಣ್ಣುಸಿಂಹ ದಂತೆ ತಲೆಯೆತ್ತಿ, "ಓಹೋ! ಸೇನಾಧಿಪತಿಗಳು ಬದುಕಿರುವಿರಾ? ನಾನಿಲ್ಲದ್ದರೆ ರಕ್ಷಿಸಲಾರಿರಾ?" ಎಂದು ಕೇಳಿದಳು. ರಾಮರಾಯನು ತನ್ನ ಕುದುರೆಯನ್ನಿಳಿದು ರಾಣಿಯ ಸಮೀಪಕ್ಕೆ ಬಂದು ಪಾದವನ್ನು ಮುಟ್ಟಿ ಕೈಮುಗಿದು "ಮಹಾರಾಣಿಯವರೇ, ಇಲ್ಲಿ ಒಂದುಕ್ಷಣವೂ ಇರಲು ನಮಗೆ ಅವಕಾಶವಿಲ್ಲ ನಡೆಯಿರಿ. ಈ ಕೋಟೆಯನ್ನು ದಾಟ ಹೊರಗೆ ಹೋಗೋಣ" ಎಂದನು. ರಾಣಿಯು ತಿರಸ್ಕಾರದ ನಗುವನ್ನು ನಕ್ಕು "ಪುರುಷರಿಗೆ ಅಪಜಯವು ಬಂದಾಗ ಧೈರ್ಯವಿಲ್ಲವೆಂದು ನಾನು

ಚೆನ್ನಾಗಿ ಬಲ್ಲೆ. ನಮಗೆ ಇಲ್ಲಿ ಭಯವೇಂದರೇನು? ನಿಮಗೆ ಧೈರ್ಯ ವಿದ್ದರೆ ನನ್ನ ಜೊತೆಯಲ್ಲಿ ಬನ್ನಿರಿ. ನಾವಿಬ್ಬರೂ ಅಗೋ, ಅಲ್ಲಿ ಉರಿ ಯುತ್ತಿರುವ ಯಜ್ಞೇಶ್ವರನ ಗರ್ಭದಲ್ಲಿ ಹೋಗಿ ಸೇರೋಣ. ಅಲ್ಲಿ ನಮಗೆ ಶಾಶ್ವತವಾದ ನಿರ್ಭಯವಾದ ಸ್ಥಾನವಿದೆ. ಅದೋ! ಅಲ್ಲಿ ನೋಡಿರಿ. ಆ ಅಗ್ನಿ ಶಿಖೆಗಳು ಆಕಾಶವನ್ನು ಮುಟ್ಟುತ್ತಿವೆ. ಆ ಆಕಾಶ ದಲ್ಲಿ ಈ ಘೋರ ರಾತ್ರಿಯಲ್ಲಿಯೂ ಕಿಲಕಿಲನೆ ನಗುತ್ತಾ ಪ್ರಕಾಶಿಸು ತ್ತಿರುವ ಅಸಂಖ್ಯ ನಕ್ಷತ್ರಗಳನ್ನು ನೋಡಿರಿ. ಆ ಅಗ್ನಿ ಗರ್ಭವನ್ನು ನಾವಿಬ್ಬರೂ ಪ್ರವೇಶಮಾಡಿ ಆ ಮುಗಿಲು ಮುಟ್ಟುತ್ತಿರುವ ಅಗ್ನಿಜ್ವಾಲೆ ಗಳ ಮಾರ್ಗವಾಗಿ ಅಂತರಿಕ್ಷವನ್ನೇರಿಹೋಗಿ ನಕ್ಷತ್ರಲೋಕದಲ್ಲಿ ನಾವೂ ನಕ್ಷತ್ರಗಳಾಗುವ" ಎಂದು ಹೇಳಿದಳು. ಈ ಮಾತುಗಳನ್ನು ಉಚ್ಚರಿಸುವಾಗ ರಾಣಿಯ ಮಸ್ತಿಷ್ಕದಲ್ಲಿ ಪ್ರಜ್ಞೆಯು ಹಾರಿಹೋಗು ತ್ತಿತ್ತು. ರಾಣಿಯು ಬಿಟ್ಟ ಕಣ್ಣು ಬಿಟ್ಟಂತೆಯೇ ಜ್ಞಾನ ಶೂನ್ಯಳಾಗಿ ನೆಲದ ಮೇಲೆ ಬೀಳುತ್ತಿದ್ದಳು. ರಾಮರಾಯನು ಆ ಶರೀರವನ್ನು ಎರಡು ತೋಳುಗಳಿಂದಲೂ ಎತ್ತಿಕೊಂಡನು. ಮುಖದ ಹತ್ತಿರ ಮುಖ ವಿಟ್ಟು ನೋಡಿದನು. ಪ್ರಾಣವು ಹಾರಿಹೋಗಿದೆ ಎಂದೂ ಉದ್ವೇಗದಿಂದ ಶರೀರವು ಮಾತ್ರ ಕಂಪಿಸುತ್ತಿದೆ ಎಂದೂ ಈ ಕಂಪನವು ನಿಂತರೆ ಈ ದಿವ್ಯಜ್ಯೋತಿಯು ನಂದಿಹೋಯಿತೆಂದೂ ಬೋಧೆಯಾಯಿತು. ಅವನು ಮತ್ತಾವುದನ್ನೂ ಚಿಂತಿಸಲಿಲ್ಲ. ಶತೃಗಳ ಕೈಗೆ ಈ ರಾಣಿಯ ಶರೀರ ವನ್ನು ಸಿಕ್ಕಗೊಡಬಾರದೆಂದೂ ಈ ಕಳೇಬರವನ್ನು ಈ ನಗರದ ರಾಜ್ಯ ದಲ್ಲಿ ಯಾರೂ ಕಾಣಬಾರದೆಂದೂ ಧೃಢನಿಶ್ಚಯವನ್ನುಮಾಡಿ ರಾಣಿಯ ನ್ನೆತ್ತಿಕೊಂಡು ತನ್ನ ಕುದರೆಯನ್ನೇರಿ ಧಕ್ಷಿಣದ್ವಾರದಿಂದ ಹೊರಗೆ ದಾಟಿ ಬಹುದೂರ ಹೊರಟುಹೋದನು.

---

## ೩೬

# ಹೈದರನ ಉದಾತ್ತ ರಾಜನೀತಿ

ರಾಜಧಾನಿಯು ಶಾಂತಸ್ಥಿತಿಗೆ ಬರುತ್ತಲೇ ಹೈದರಾಲಿಯು ಮುಂದಿನ ವ್ಯವಸ್ಥೆಯನ್ನು ಮಾಡಲು ಆಲೋಚಿಸತೊಡಗಿದನು. ನಗರವೇನೋ ಪೂರ್ಣವಾಗಿ ನಮ್ಮ ವಶವಾಗಿದೆ. ಆದರೆ ಈ ರಾಜ್ಯದಲ್ಲಿ ಭವಾನೀರಾಣಿ ಎಂಬ ಒಬ್ಬ ಯೋಗಿನಿಯಿದ್ದಾಳೆ. ಅವಳಿಗೆ ರಾಜಕೀಯದಲ್ಲಿ ಏನೋ ವಿಶೇಷ ಸಂಬಂಧವಿರುವಂತಿದೆ. ಮಹಾಮಂತ್ರಿ ರಾಮಕೃಷ್ಣರು ಬಂಧಿತರಾಗಿ ನಮ್ಮ ಶಿಬಿರದಲ್ಲಿದ್ದಾರೆ. ನಮ್ಮ ಶಿಬಿರದಲ್ಲಿ ಯುವರಾಜನು ಇದ್ದಾನೆ. ಈಗ ಅವನನ್ನು ಬಂಧನದಲ್ಲಿ ಇಡಿಸಿದ್ದೇವೆ. ಅವನು ಯುವರಾಜನಲ್ಲವೆಂದೂ ಯಾರೋ ನಾಮಾಂತರದಿಂದ ಬಂದು ನಮ್ಮಲ್ಲಿ ಸೇರಿಕೊಂಡಿದ್ದಾನೆಂದೂ ಕೆಲವರು ಹೇಳುವುದನ್ನು ಕೇಳಿದ್ದೇವೆ. ನಮ್ಮ ಶಿಬಿರದಲ್ಲಿರುವ ಮಂತ್ರಿ ಲಿಂಗಣ್ಣನು ನಗರದರಾಜ್ಯದಲ್ಲಿ ಹಿಂದೆ ಪರಾಭೂತನಾಗಿ ಈ ಯುದ್ಧದಲ್ಲಿ ನಮಗೆ ಬಹಳ ಸಹಾಯ ಮಾಡಿದ್ದಾನೆ. ಸೇನಾಧಿಪತಿ ರಾಮರಾಯನು ಜೀವಂತನಾಗಿಯೇ ಇದ್ದಾನೆ. ಅವನು ರಣಭೂಮಿಯಲ್ಲಿ ಮೃತಿಯನ್ನೈದಲೂ ಇಲ್ಲ. ನಮಗೆ ಸೆರೆಸಿಕ್ಕಲೂ ಇಲ್ಲ. ನಮ್ಮ ರಾಜಧಾನಿಗೆ ಬಂದು ಸಂಧಾನವನ್ನು ನಡಿಸಿದ ಭೈರವೀರಾಣಿಯು ಈ ರಾಜ್ಯದಲ್ಲಿಯೇ ಇದ್ದಾಳೆ. ಬಹುಮಂದಿ ಪಾಳೆಯಗಾರರು ಈ ಯುದ್ಧದಲ್ಲಿ ಮರಣಹೊಂದಿದ್ದಾರೆ. ರುದ್ರನಾಯಕರೊಬ್ಬರು ಮಾತ್ರಾ ನಮ್ಮ ಬಂಧನದಲ್ಲಿದ್ದಾರೆ. ಇವರೆಲ್ಲರೂ ಒಟ್ಟು ಕೂಡಿದರೆ ನಮಗೆ ವಿರೋಧವಾಗಿ ಒಂದು ಮಹಾಶಕ್ತಿಯು ಹುಟ್ಟುವುದರಲ್ಲೇನೂ ಸಂದೇಹವಿಲ್ಲ. ಈ ಮೈಸೂರಿನ ಮಹಾಸೈನ್ಯವು ಇಲ್ಲಿ ನೆಲಸಿರುವವರೆಗೆ ಈ ಶಕ್ತಿಗಳೆಲ್ಲವೂ ಅಡಗಿರುತ್ತವೆ. ನಾವು ನಮ್ಮ ಶಿಬಿರವನ್ನು ಎತ್ತುತ್ತಲೇ ನಗರವು ನಗರಕ್ಕೆ ಸೇರಿಹೋಗುತ್ತದೆ. ನಗರದ ರಾಜ್ಯವನ್ನು ನಾವು ಗೆದ್ದಂತಾದರೂ ನಗರದ ಶಕ್ತಿಗಳನ್ನು ನಾಶಮಾಡಿದಂತೆ ಆಗಲಿಲ್ಲ.

ಮಹಾರಾಣಿ ಚೆಲುವಮ್ಮಣ್ಣಿಯು ಅಂದಿನ ರಾತ್ರಿ ಆ ಅರಮನೆಯಲ್ಲಿ ಉರಿದುಹೋಗಿದ್ದಾಳೆ. ಇದು ನಮ್ಮ ಕಡೆಯವರ ಕಾರ್ಯವಲ್ಲ. ಇಲ್ಲೇ ಯಾರೋ ಅಂತರಂಗ ಶತೃಗಳಿದ್ದು ಈ ಕಾರ್ಯವನ್ನು ನಡೆಸಿದ್ದಾರೆ. ಅನ್ಯಾಯವಾಯಿತು. ಆ ಅರಮನೆಯು ನಮ್ಮ ಕೈಗೆ ಸಿಕ್ಕಿದ್ದರೆ ಮೈಸೂರಿಗೆ ಅಪಾರವಾದ ಲಾಭವಾಗುತ್ತಿದ್ದಿತು. ಅದಕ್ಕೆ ಆಸ್ಪದವಿಲ್ಲದೇ ಹೋಯಿತು. ನಮ್ಮ ಶಿಬಿರದಲ್ಲಿ ಕೆಲವು ದಿನಗಳಿದ್ದ ಭೈರವೀರಾಣಿಗೆ ಈ ನಗರದ ರಾಣಿಯಮೇಲೆ ಬಹಳ ದ್ವೇಷವಿದ್ದಿತು. ಅವಳು ರಾಣಿಯನ್ನು ಕೊಲೆಮಾಡಿಸುವುದಾಗಿ ನಮ್ಮಮುಂದೆ ಪ್ರತಿಜ್ಞೆಮಾಡಿ ಹೋಗಿದ್ದಳು. ಹುಚ್ಚು ಹೆಣ್ಣು. ಇಂಥಾ ಸೊಗಸಾದ ಸಂಪದ್ಯುಕ್ತವಾದ ಅರಮನೆಗೆ ಅವಳೇ ಬೆಂಕಿಯನ್ನು ಹಚ್ಚಿರಬೇಕು. ಬಹಳ ಸಾಹಸದ ಹೆಣ್ಣು. ಅಂತೂ ನಾವು ಇಷ್ಟು ವ್ಯವಸ್ಥೆಯನ್ನು ಮಾಡದೇ ಈ ರಾಜ್ಯವನ್ನು ಬಿಟ್ಟುಹೋಗುವಂತಿಲ್ಲ ಎಂದು ಹೈದರಾಲಿಯು ಆಲೋಚನೆ ಮಾಡುತ್ತಿದ್ದನು. ಮಹಮದಾಲಿಯವರನ್ನು ಕರೆಸಿ ಈ ವಿಷಯಗಳನ್ನೆಲ್ಲಾ ಅವರೊಡನೆ ಸಮಾಲೋಚನೆ ಮಾಡಿದನು.

ಮಹಮದಾಲಿಯವರು, "ಹುಜೂರ್ ನಮ್ಮ ಸೈನ್ಯಗಳು ಇಲ್ಲಿ ಒಂದುವರ್ಷಕಾಲ ಠಾಣ್ಯವನ್ನು ಮಾಡಬೇಕು. ಇಲ್ಲಿ ಮಹಾಬಲಿಷ್ಠರಾದ ಅಧಿಕಾರಿಗಳು ಈ ರಾಜ್ಯಭಾರವನ್ನು ವಹಿಸಿಕೊಂಡು ರಕ್ಷಣೆ ಮಾಡಬೇಕು" ಎಂದು ಹೇಳಿದರು. ಹೈದರಾಲಿಯವರು, "ಹೌದು ದಿವಾನರವರೇ, ಆ ಮಾತನ್ನು ಅಕ್ಷರಶಃ ನಾನು ಒಪ್ಪುತ್ತೇನೆ. ಈ ರಾಜ್ಯಭಾರವನ್ನು ಯಾರಿಗೆ ಒಪ್ಪಿಸಬೇಕು" ಎಂದು ಪ್ರಶ್ನೆಮಾಡಿದರು. ದಿವಾನರವರು "ಮತ್ತಾರಿದ್ದರೂ ಈ ರಾಜ್ಯವು ನಮ್ಮ ಕರಗತವಾಗುವುದಿಲ್ಲ. ಒಂದುವರ್ಷಕಾಲ ಚಿಕ್ಕ ನವಾಬರವರು ಇಲ್ಲಿ ಅಧಿಕಾರವನ್ನು ವಹಿಸಿಕೊಳ್ಳಬೇಕು. ಮಂಗಳೂರು ಈ ನಗರಕ್ಕೆ ಸೇರಿದೆ. ಆ ಕರಾವಳಿಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಇಂಗ್ಲೀಷರು ಆತುರಪಡುತ್ತಿದ್ದಾರೆ. ಈ ನಗರದ ರಾಜ್ಯವನ್ನು ಕೆಣಕಲು ಧೈರ್ಯವಿಲ್ಲದೇ ಅವರು ಸುಮ್ಮನಿದ್ದರು. ಈಗ ನಾಳೆಯಿಂದಲೇ ನಾವು ಯುದ್ಧಕ್ಕೆ ಸಿದ್ಧ

ರಾಗಬೇಕು. ಆದುದರಿಂದ ಚಿಕ್ಕ ನವಾಬರನ್ನು ಇಲ್ಲಿಯೇ ಇರಿಸ ಬೇಕು ಹುಜೂರ್" ಎಂದು ಸಲಹೆ ಹೇಳಿದರು.

ಹೈದರಾಲಿಯವರು ತಲೆದೂಗಿ "ದಿವಾನರವರ ಸಲಹೆಯನ್ನು ಮನ್ನಿಸ ಬೇಕಾದುದೇನೋ ಸತ್ಯ. ಟಿಪ್ಪೂಸುಲ್ತಾನರು ಈ ರಾಜ್ಯಭಾರಕ್ಕೆಸರಿ ಯಾದ ಮನುಷ್ಯರಲ್ಲ. ಅವರಿಗೆ ಧೈರ್ಯ ಪರಾಕ್ರಮಗಳಿವೆ. ಆದರೂ ಹಿಂದೂಜನರಲ್ಲಿ ತಿರಸ್ಕಾರ ಭಾವವಿದೆ. ಈ ರಾಜ್ಯದಲ್ಲಿ ಹಿಂದೂ ಸತ್ವವು ಸಜೀವವಾಗಿದೆ. ಇಲ್ಲಿಗೆ ಟಿಪ್ಪೂಸುಲ್ತಾನರು ಅನರ್ಹರು." ಎಂದರು. ದಿವಾನರವರು ತಲೆಬಾಗಿ "ಹಾಗಾದರೆ ಈ ರಾಜ್ಯಾಡಳಿತಕ್ಕೆ ಯಾರನ್ನು ನೇಮಿಸಬೇಕೆಂದು ಖಾವಂದರವರ ಅನುಗ್ರಹವಿದೆ" ಎಂದು ಕೇಳಿದರು. ನವಾಬರು ಕಿರುನಗುವನ್ನು ನಗುತ್ತಾ "ಸ್ವಯಂ ದಿವಾನರು ಈ ಅಧಿಕಾರ ವನ್ನು ಸ್ವೀಕರಿಸಬೇಕು" ಎಂದು ಹೇಳಿದರು. ದಿವಾನರು ವ್ಯಗ್ರರಾಗಿ, "ಜಹಾಪನಾ, ಮಾಫ್ ಮಾಡಬೇಕು. ನಾನು ಖಾವಂದರವರ ಸಮೀಪ ದಲ್ಲಿದ್ದು ಸೇವೆಮಾಡಲು ಅರ್ಹನು. ರಾಜ್ಯಾಡಳಿತಕ್ಕೆ ಲಾಯಕ್ಕಾದವ ನಲ್ಲ. ಮಹಾಸ್ವಾಮಿಯವರು ದೂರಮಾಡಿದರೆ ಮಕ್ಕಾಯಾತ್ರೆಗೆ ಹೊರಟು ಹೋಗುತ್ತೇನೆ" ಎಂದು ಹೇಳಿದರು. ಅಲ್ಲಿಗೆ ಆಮಾತು ನಿಂತುಹೋಯಿತು.

ಹೈದರಾಲಿಯವರು ದಿವಾನರನ್ನು ಕುರಿತು, "ದಿವಾನರವರೇ, ನಮ್ಮ ಶಿಬಿರದಲ್ಲಿರುವ ಯುವರಾಜ ಚೆನ್ನಬಸಪ್ಪನಾಯಕರಿಗೆ ಈ ರಾಜ್ಯದ ಪಟ್ಟಕಟ್ಟಿಸುವುದಾಗಿ ವಚನಕೊಟ್ಟು ಕರತಂದಿದ್ದೇವೆಲ್ಲವೇ. ಆ ವಚನವನ್ನು ನಾವು ಪೂರ್ಣವಾಗಿ ಪಾಲಿಸಬೇಕಷ್ಟೇ" ಎಂದರು.

ದಿವಾನರವರು ಸಣ್ಣನಗುವನ್ನು ನಕ್ಕು, "ಹುಜೂರ್, ಇನ್ನೂ ತಮ್ಮ ಕಿವಿಗೆ ಬಿದ್ದಿಲ್ಲವೇನು ? ನಮ್ಮ ಶಿಬಿರದಲ್ಲಿರುವವನು ಯುವರಾಜ ನಲ್ಲ. ಹುಜೂರ್, ಅವನೊಬ್ಬ ತಲೆತಿರುಕ. ಬುದ್ಧಿವಂತನೆಂದು ಕಾಣುತ್ತದೆ. ಈ ರಾಜ್ಯದ ರಾಜಕೀಯವನ್ನೆಲ್ಲಾ ಅರಿತವನೆಂದು ತೋರುತ್ತದೆ. ಅವನು ಯುವರಾಜನಾಗಿದ್ದರೆ ಈ ಯುದ್ಧವೇ

ನಡೆಯುತ್ತಿರಲಿಲ್ಲ. ಇಷ್ಟು ಪ್ರಾಣಹಾನಿಯಾಗುತ್ತಿರಲಿಲ್ಲ. ಇದೆಲ್ಲಾ ಅಂದೇ ಇತ್ಯರ್ಥವಾಗಿ ಹೋಗುತ್ತಿದ್ದಿತು" ಎಂದರು.

ಹೈದರಾಲಿಯುವರು "ಅವನನ್ನೇ ನಮ್ಮ ಸಮ್ಮುಖಕ್ಕೆ ಕರೆತರಿಸಿರಿ. ಅವನೇನು ಹೇಳುತ್ತಾನೋ ನೋಡೋಣ" ಎಂದು ಹೇಳಿದರು.

ದಿವಾನರವರು, "ಹುಜೂರ್, ನನ್ನ ಬಿನ್ನಹವನ್ನು ಸ್ವಲ್ಪ ಲಾಲಿಸೋಣವಾಗಲಿ. ಮಹಾಮಂತ್ರಿ ರಾಮಕೃಷ್ಣರವರು ನಮ್ಮ ಶಿಬಿರದಲ್ಲಿ ಬಂದಿಗಳಾಗಿದ್ದಾರೆ. ಐದು ದಿನಗಳಾದವು, ಅವರನ್ನು ನಾವು ಹಾಗೆ ಬಂಧನದಲ್ಲಿಟ್ಟಿರುವುದು ಸರ್ವಥಾ ಯೋಗ್ಯವಲ್ಲ. ಮಹಾಮಂತ್ರಿಗಳನ್ನು ತಮ್ಮ ಸನ್ನಿಧಾನಕ್ಕೆ ಕರೆತರಿಸಿ, ಅವರನ್ನು ಗೌರವಿಸಿ ಅನಂತರ ಇತರ ರಾಜಕಾರ್ಯಗಳನ್ನು ಸಮಾಲೋಚನೆ ಮಾಡಬೇಕು. ಅವರನ್ನು ಒಂದು ಕ್ಷಣವೂ ಬಂಧನದಲ್ಲಿಡಕೂಡದು" ಎಂದು ಹೇಳಿದರು.

ಹೈದರಾಲಿಯುವರು, "ಹೌದು, ಹೌದು. ಬಹಳ ತೂಕವಾದ ಸಲಹೆ. ನಾನು ತಪ್ಪುಮಾಡಿದೆ. ಈ ರಾಜಧಾನಿಯು ನಮ್ಮ ಸ್ವಾಧೀನವಾದ ದಿನವೇ ಯುದ್ಧವು ಪೂರ್ತಿಯಾಯಿತು. ಅಂದೇ ನಾನು ಖುದ್ದಾಗಿ ಹೋಗಿ ಅವರ ಭೇಟಿಯನ್ನು ತೆಗೆದುಕೊಳ್ಳಬೇಕಾಗಿದ್ದಿತು. ಮೂರುದಿನ ಮಹಾಮಂತ್ರಿಗಳನ್ನು ಬಂಧನದಲ್ಲಿಟ್ಟ ಅಪರಾಧವು ನನ್ನದು. ನೀವೇ ಖುದ್ದುಹೋಗಿ ಅವರನ್ನು ಜೊತೆಯಲ್ಲಿ ಕರೆತರತಕ್ಕದ್ದು" ಎಂದು ಆಜ್ಞೆ ಮಾಡಿದರು.

ಮಹಮದಾಲಿಯುವರು ನವಾಬರವರ ಡೇರೆಯಿಂದ ತಾವೇ ನಡೆದುಹೋಗಿ ಬಂಧನದಲ್ಲಿಟ್ಟಿದ್ದ ಮಂತ್ರಿಯುವರನ್ನು ಭೇಟಿಮಾಡಿ, ತಾವು ಮೈಸೂರಿನ ದಿವಾನರಾದ ಮಹಮದಾಲಿಯುವರೆಂದು ಹೇಳಿಕೊಂಡರು.

ಮಂತ್ರಿಗಳು ಕೈಜೋಡಿಸಿ ಅಭಿವಂದನಮಾಡಿದರು. ಅನಂತರ ಸಾಮಾನ್ಯವಾಗಿ ಕುಶಲಪ್ರಶ್ನೆಗಳಾದ ತರುವಾಯ ಮಂತ್ರಿಗಳು "ನವಾಬರ ಭೇಟಿಗೆ ಬರಬೇಕೆಂದು ನವಾಬರವರ ಪ್ರಾರ್ಥನೆಯಿದ್ದೆ" ಎಂದು ತಿಳಿಸಿದರು. ಮಂತ್ರಿಗಳು ತಾವಿದ್ದ ಡೇರೆಯಿಂದ ಹೊರಹೊರಟು

ನವಾಬರವರ ಡೇರೆಯ ಕಡೆಗೆ ನಡೆದರು. ಮಹಮದಾಲಿಯವರು ಮುಂದೆ ಮುಂದೆ ದಾರಿತೋರುತ್ತಾ ನಡೆದರು. ಆ ಶಿಬಿರದಲ್ಲಿದ್ದ ಸೇನಾಧಿಪತಿಗಳೂ ಸೈನಿಕರೂ, ಮಂತ್ರಿಗಳಿಗೂ ದಿವಾನರವರಿಗೂ ಸಲಾಂ ಮಾಡಿ ಮರ್ಯಾದೆಯನ್ನು ತೋರುತ್ತಿದ್ದರು. ಮಂತ್ರಿಗಳು ದಿವಾನರೊಡನೆ ನವಾಬರ ಡೇರೆಯೊಳಗೆ ಪ್ರವೇಶಮಾಡುತ್ತಲೇ ಹೈದರಾಲಿಯವರು ಎದ್ದು ಮಂತ್ರಿಗಳಿಗೆ ಹಸ್ತಲಾಘವವನ್ನು ಕೊಟ್ಟು ಆಸನದಲ್ಲಿ ಕುಳ್ಳಿರಿಸಿ, ತಾವೂ ಸಮೀಪದಲ್ಲಿ ಕುಳಿತುಕೊಂಡರು. ಹೈದರಾಲಿಯವರು ಮಹಾಮಂತ್ರಿಗಳನ್ನು ಭೇಟಿಮಾಡಿದ್ದು ಇದೇ ಮೊದಲು ಆದಾಗ್ಯೂ ಚಿರಪರಿಚಿತರಂತೆ ಕುಶಲಪ್ರಶ್ನೆಗಳನ್ನು ಮಾಡಿದರು. ನವಾಬರವರು, "ಮಹಾಮಂತ್ರಿಗಳೇ, ತಮ್ಮನ್ನು ಐದುದಿನಗಳಿಂದ ಬಂಧನದಲ್ಲಿಟ್ಟಿದ್ದು ಅಪರಾಧ ಮಾಡಿದ್ದೇವೆ. ಅದಕ್ಕಾಗಿ ಕ್ಷಮಾಪಣೆಯನ್ನು ಬೇಡುತ್ತೇವೆ" ಎಂದು ಹೇಳಿದರು.

ಆದಕ್ಕೆ ಮಂತ್ರಿಗಳು ತಲೆತಗ್ಗಿಸಿ "ಸೇನಾಧಿಪತಿಗಳೇ, ಅದು ಸಂಗ್ರಾಮಧರ್ಮ. ರಣಕ್ಷೇತ್ರದಲ್ಲಿ ನೀವು ನನ್ನನ್ನು ಸೆರೆಹಿಡಿದಿರಿ. ಬಂಧನದಲ್ಲಿಡುವುದು ನಿಮ್ಮ ಅಧಿಕಾರಕ್ಕೆ ಸೇರಿದ್ದು" ಎಂದರು.

ನವಾಬರು "ಮಂತ್ರಿಗಳೇ ಒಳ್ಳೆಯಮಾತು ಕಾರಣಾಂತಗಳಿಂದ ನಾವು ಈ ನಗರದ ಮೇಲೆ ಯುದ್ಧಕೆ ಬರಬೇಕಾಯಿತು ಯಾವಾಗಲೂ ನಮ್ಮ ಅಪಾರ ಗೌರವಕ್ಕೆ ತಾವು ಪಾತ್ರರಾಗಿದ್ದೀರಿ. ಆದರೆ ಮೈಸೂರು ದಂಡು ನಗರದಮೇಲೆ ಎದ್ದುಬಂದಾಗ ನಗರದ ಮಹಾರಾಣಿಯವರು ತಮ್ಮನ್ನು ಬಂಧನದಲ್ಲಿಡಿಸಿದ್ದರು. ಆಗ ತಮ್ಮೊಡನೆ ನಾವು ಸಂಧಾನವನ್ನು ನಡೆಸಲು ಆಸ್ಪದವಿರಲಿಲ್ಲ. ಆದ್ದರಿಂದ ಯುದ್ಧವನ್ನು ಮಾಡಲೇಬೇಕಾಯಿತು" ಎಂದು ಹೇಳಿದರು. ಮಂತ್ರಿಗಳು, "ನವಾಬರವರೇ, ಒಂದು ರಾಜ್ಯದಮೇಲೆ ಮತ್ತೊಂದು ರಾಜ್ಯದವರು ಯುದ್ಧಮಾಡುವುದು ಸಹಜವಾಗಿಯೇ ಇದೆ. ಯುದ್ಧವು ಮುಗಿದುಹೋದಮೇಲೆ ಆ ಮಾತುಗಳನ್ನು ಆಡುವುದರಿಂದ ಫಲವೇನಿದೆ" ಎಂದರು.

ಹೈದರಲ್ಲೀಖಾನರು, "ಮಂತ್ರಿಗಳೇ, ಅದು ಯುಕ್ತವಾದ ಮಾತು.

ಮುಂದೇನು ಮಾಡಬೇಕು. ಅಪ್ಪಣೆಕೊಡಿಸೋಣವಾಗಲೀ" ಎಂದರು. ಮಂತ್ರಿಗಳು, "ನವಾಬರವರೇ, ನಗರದ ರಾಜ್ಯವನ್ನು ನೀವು ಗೆದ್ದಿದ್ದೀರಿ. ಈ ರಾಜ್ಯವು ನಿಮ್ಮದು. ಚಿತ್ತಕ್ಕೆ ತೋರಿದಂತೆ ಮಾಡಬಹುದು" ಎಂದರು.

ನವಾಬರು, "ಮಂತ್ರಿಗಳೇ, ವಿಶೇಷವಾತನಾಡುವುದರಿಂದ ಫಲವೇನು. ಈ ನಗರದ ರಾಜ್ಯವು ಅನಾಯಕವಾಗಿದೆ. ನಾವು ನಿಮಗೆ ಈ ರಾಜ್ಯದ ಪಟ್ಟಕಟ್ಟಬೇಕೆಂದು ಸಂಕಲ್ಪಿಸಿದ್ದೇವೆ. ತಾವು ಈ ನಮ್ಮ ಸಂಕಲ್ಪವನ್ನು ಈಡೇರಿಸಿಕೊಡಬೇಕೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ" ಎಂದರು. ಮಂತ್ರಿಗಳು ಮೌನದಿಂದ ತಲೆಬಾಗಿದರು.

ನವಾಬರು, "ಮಂತ್ರಿಗಳೇ, ಮಾತನಾಡುವುದಿಲ್ಲವೇಕೆ? ಮೌನವು ಅರ್ಧ ಅಂಗೀಕಾರವಲ್ಲವೇ ?" ಎಂದರು.

ಮಂತ್ರಿಗಳು ಎದ್ದುನಿಂತು, "ನವಾಬರವರೇ, ನಾನು ಯುದ್ಧದ ಬಂದಿಯಾಗಿದ್ದೇನೆ. ತಮ್ಮನ್ನು ತಿರಸ್ಕರಿಸುವುದು ಧರ್ಮವಲ್ಲವೆಂದು ಮೌನವನ್ನು ವಹಿಸಿದೆ. ಈ ರಾಜ್ಯವನ್ನು ಸ್ವೀಕರಿಸುವ ಅಧಿಕಾರವು ನನಗೆಲ್ಲಿದೆ? ನಾನು ಬ್ರಾಹ್ಮಣ. ವಂಶಪಾರಂಪರ್ಯವಾಗಿ ಈ ರಾಜ್ಯದ ಉಪ್ಪನ್ನುಂಡಿರುವ ಸೇವಕ. ತಮ್ಮ ಅನುಗ್ರಹದಿಂದಲೇ ಆಗಲೀ, ಸ್ವಪರಾಕ್ರಮದಿಂದಲೇ ಆಗಲೀ ಸಿಂಹಾಸನವನ್ನು ಬಯಸುವುದು ಸ್ವಾಮಿದ್ರೋಹ, ರಾಜದ್ರೋಹ, ದೇಶದ್ರೋಹ. ನಾನು ಬ್ರಾಹ್ಮಣ. ನನಗೆ ಸಿಂಹಾಸನವನ್ನೇರುವ ಅಧಿಕಾರವು ಶಾಸ್ತ್ರೋಕ್ತವಾಗಿ ಇಲ್ಲವೇ ಇಲ್ಲ. ನಾನು ವೇದಶಾಸ್ತ್ರಗಳನ್ನು ನಂಬಿರುವ ಆಸ್ತಿಕ. ತಮಗೆ ನನ್ನಲ್ಲಿ ನಂಬಿಕೆಯಿದ್ದರೆ ನನ್ನನ್ನು ಬಂಧನದಿಂದ ಬಿಟ್ಟುಬಿಡಿರಿ. ಇಲ್ಲದಿದ್ದರೆ ಪಂಜರದಲ್ಲಿ ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಗೆ ಸಾಗಿಸಿರಿ. ರಾಮಕೃಷ್ಣನನ್ನು ಪ್ರಲೋಭಮಾಡುವ ಯಾವ ಶಕ್ತಿಯೂ ಈ ಪ್ರಪಂಚದಲ್ಲಿ ಇಲ್ಲವೆಂದು ನಾನು ಎದೆತಟ್ಟಿ ಹೇಳುತ್ತೇನೆ" ಎಂದು ಹೇಳಿದರು. ನವಾಬರು ಆಸನದಿಂದೆದ್ದು ಮಂತ್ರಿಗಳನ್ನು ವಂದಿಸಿ "ಮಾಫ್ ಮಾಡಬೇಕು. ನನ್ನ ಅಪರಾಧವನ್ನು ಕ್ಷಮಿಸಬೇಕು. ತಾವು ಬಂಧನದಲ್ಲಿಲ್ಲ. ಈ ಕೋಟೆಯು ನಮ್ಮ ವಶವಾಗುತ್ತಲೇ ಬಂಧನವು ಕಡಿಯಲ್ಪಟ್ಟಿದೆ.

ತಾವು ಸ್ವತಂತ್ರರಾಗಿದ್ದೀರಿ. ತಮ್ಮ ಮಹಲಿಗೆ ಚಿತ್ತೈಸಬಹುದು. ನಾವು ನಿಮಗೆ ಸ್ವಲ್ಪವೂ ಅಪರಾಧವಮಾಡಿಲ್ಲವೆಂದು ತ್ರಿಕರಣಪೂರ್ವಕವಾಗಿ ನಂಬಿದ್ದೇನೆ. ತಮ್ಮ ಮಾತಿನಿಂದಲೂ ಆ ವಚನವನ್ನು ಕೇಳಿದರೆ ಧನ್ಯರಾಗುತ್ತೇವೆ" ಎಂದರು.

ಮಂತ್ರಿಗಳು "ನವಾಬರವರೇ ಕ್ಷಮಿಸಬೇಕು. ತಾವು ನನಗಾಗಲೀ ಈ ರಾಜ್ಯಕ್ಕಾಗಲೀ ಏನೂ ಅಪರಾಧವಮಾಡಿಲ್ಲ. ಈ ನಗರದ ಧರ್ಮವು ಪೂರೈಸಿ ಬರಿದಾಗಿಹೋಗಿತ್ತು. ನಾವೆಲ್ಲರೂ ಆಟದ ಬೊಂಬೆಗಳಂತೆ ಓಡಾಡುತ್ತಿದ್ದೆವು. ಅಂದು ಸದಾಶಿವನಾಯಕರು ಸ್ಥಾಪಿಸಿದ ಧರ್ಮರಾಜ್ಯವು ಎಂದೋ ಅಳಿದುಹೋಯಿತು. ನೀವು ಆ ಪ್ರಭುತ್ವವನ್ನು ನೆಲಕ್ಕುರುಳಿಸಿದಿರಿ. ಇದು ಶಿವಪ್ಪನಾಯಕರ ನಗರವಲ್ಲ. ಇನ್ನು ಮೇಲೆ ಇದು ಹೈದರ್ ನಗರ. ನನ್ನ ಮನಸ್ಸಿನಲ್ಲಿ ತಮ್ಮ ವಿಷಯದಲ್ಲಿ ಯಾವ ವಿರೋಧಭಾವವೂ ಉಳಿದಿಲ್ಲ. ತಾವು ವೀರಪುರುಷರೆಂದು ನಾನು ತಮ್ಮನ್ನು ಆಮರಣಾಂತ ಗೌರವಿಸುತ್ತೇನೆ. ಆದರೆ ನಾನು ತಮ್ಮಲ್ಲಿ ಬೇಡುವ ಭಿಕ್ಷೆಯೊಂದುಂಟು" ಎಂದು ಹೇಳಿದರು.

ಹೈದರಾಲಿಯವರು "ಮಂತ್ರಿಗಳೇ ತಮ್ಮ ಅಪೇಕ್ಷೆಯನ್ನು ಅಪ್ಪಣೆ ಕೊಡಿಸೋಣವಾಗಲಿ." ಎಂದು ಕೇಳಿದರು.

ಮಂತ್ರಿಗಳು "ನವಾಬರವರೇ ತಾವು ಮುಸಲ್ಮಾನರು. ಅವರವರ ಧರ್ಮವು ಅವರವರಿಗೆ ಪವಿತ್ರವಾದುದು. ಈ ರಾಜ್ಯವು ಶುದ್ಧ ಹಡಿನಾರಾಣೆಯ ಹಿಂದೂ ಧರ್ಮದ ನೆಲಬೀಡಾಗಿದೆ. ಈ ರಾಜ್ಯದಲ್ಲಿ ಪುರಾತನ ದೇವಾಲಯಗಳೂ, ಮಠಗಳೂ, ಧರ್ಮ ಸಂಸ್ಥೆಗಳೂ ಬಹುಕಾಲದಿಂದ ನೆಲಸಿವೆ. ತಮ್ಮ ಆಗ್ರಹದಿಂದ ಹಿಂದೂ ಧರ್ಮವು ಪದದಳಿತವಾಗದಂತೆ ಅಭಯಪ್ರದಾನವಮಾಡಬೇಕು. ಹಿಂದೂ ಸ್ತ್ರೀಯರ ಮೇಲೆ ಅಪಚಾರವಾಗದಂತೆ ನೋಡಿಕೊಳ್ಳಬೇಕು. ಇದೇ ನಾನು ತಮ್ಮಲ್ಲಿ ಬೇಡುವ ಭಿಕ್ಷೆ. ನಾನು ಸಂತೋಷದಿಂದ ಈ ರಾಜ್ಯವನ್ನು ತೊರೆದು ಹೋಗುತ್ತೇನೆ. ಒಂದು ಕಿಲುಬು ಕಾಸನ್ನೂ ತೆಗೆದುಕೊಂಡು ಹೋಗುವುದಿಲ್ಲ. ನಾನು ವಾರಣಾಸಿಗೆ ಹೊರಟುಹೋಗುತ್ತೇನೆ. ಅಲ್ಲಿ

ಗಂಗೆಯಲ್ಲಿ ಈ ದೇಹವನ್ನು ಪರಿತ್ಯಾಗಮಾಡುತ್ತೇನೆ. ಅಪ್ಪಣೆಕೊಡಿರಿ" ಎಂದು ಕೈ ಜೋಡಿಸಿದರು.

ಹೈದರಾಲಿಯವರು ತಮ್ಮ ಎರಡು ಕೈಗಳಿಂದಲೂ ಮಂತ್ರಿಗಳ ಕೈಯನ್ನು ಹಿಡಿದುಕೊಂಡು ಅವರ ಹಸ್ತಗಳಿಂದ ತಮ್ಮ ಕಣ್ಣನ್ನೊತ್ತಿಕೊಂಡು ಎರಡು ಹಸ್ತಗಳನ್ನೂ ಚುಂಬಿಸಿ, "ಮಂತ್ರಿಗಳೇ ದೇವರಾಣೆಗೂ ನಾನು ಪ್ರಮಾಣಮಾಡಿ ಹೇಳುತ್ತೇನೆ. ನಾನು ಮುಸಲ್ಮಾನನೆಂಬುದು ನಿಜ. ಆದರೆ ಹಿಂದೂಧರ್ಮದ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ಅಪಾರ ಗೌರವ ಬುದ್ಧಿಯಿದೆ. ನಾನು ಸ್ವತಂತ್ರರಾಜನಲ್ಲ. ಮೈಸೂರು ರಾಜರ ಸೇವಕನಾಗಿದ್ದೇನೆ. ಮೈಸೂರಿನ ರಾಜರು ಧರ್ಮರಕ್ಷಕರೆಂದು ಬಿರುದು ಹೊತ್ತಿದ್ದಾರೆ. ತಮ್ಮ ಹಿಂದೂ ಧರ್ಮವೂ ಅವರ ಹಿಂದೂ ಧರ್ಮವೂ ಬೇರೆಬೇರೆಯಲ್ಲ. ಇಂದು ಈ ಶಿಬಿರದಮೇಲೆ ಹಾರುತ್ತಿರುವುದು ಮೈಸೂರಿನ ಧ್ವಜ. ನಾನು ಮೈಸೂರಿನ ಸೇನಾಧಿಪತಿ. ನನ್ನಿಂದ ಈ ರಾಜ್ಯದಲ್ಲಿ ಎಳ್ಳಷ್ಟೂ ದುರಾಗತವು ನಡೆಯದಂತೆ ನೋಡಿಕೊಳ್ಳುವುದು ನನ್ನ ಧರ್ಮ. ಆ ವಿಷಯದಲ್ಲಿ ತಾವು ಸಂದೇಹವಿಡಬೇಡಿರಿ. ಈ ರಾಜ್ಯದಲ್ಲಿಯೇ ತಾವು ನೆಲಸಬೇಕೆಂದು ನಮ್ಮ ಆಸೆಯಿದೆ" ಎಂದು ಹೇಳಿ ಮತ್ತೊಮ್ಮೆ ಸಲಾಂಮಾಡಿ ಅವರನ್ನು ಮಹಲಿಗೆ ರಾಜಮರ್ಯಾದೆಗಳೊಡನೆ ಕಳುಹಿಸಿಕೊಟ್ಟರು.

ಮಂತ್ರಿಗಳು ತಮ್ಮ ಮಹಲಿಗೆ ಹೋಗಿ ಏಕಾಂತದಲ್ಲಿ ಕುಳಿತು ಎಲ್ಲ ಸಮಾಚಾರಗಳನ್ನೂ ವಿಚಾರಿಸಿದರು. ಅಭಿರಾಮಸ್ವಾಮಿಗಳ ಶರೀರ ಪರಿತ್ಯಾಗವನ್ನು ಕೇಳಿ ಅವರಿಗೆ ಬಹಳ ದುಃಖವಾಯಿತು. ಮರುಕ್ಷಣದಲ್ಲಿಯೇ, "ಮಾನವನು ಎಂದಾದರೊಂದುದಿನ ಸಾಯಲೇಬೇಕು. ಸರಿಯಾದ ಸಮಯದಲ್ಲಿ ಸರಿಯಾದ ಪವಿತ್ರ ಮರಣವು ಅವರಿಗೆ ಪ್ರಾಪ್ತವಾಗಿದೆ. ಅದಕ್ಕಾಗಿ ದುಃಖಿಸಲೇಕೆ" ಎಂದು ಸಮಾಧಾನ ಮಾಡಿಕೊಂಡರು. ಮಹಾರಾಣಿ ಚೆಲುವಮ್ಮಣ್ಣಿಯ ಸಮಾಚಾರವು ಏನೆಂದು ವಿಚಾರಿಸಿದರು. ಎಷ್ಟೋ ವಿಚಾರಣೆಗಳಿಂದ ಅರಮನೆಯ ಅಗ್ನಿಯಲ್ಲಿ ಮಹಾರಾಣಿಯವರು ಭಸ್ಮವಾಗಿ ಹೋಗಿರಬೇಕೆಂದು

ನಿಶ್ಚಯಿಸಿದರು. ಕಟ್ಟಕಡೆಯಲ್ಲಿಯೂ ಮಹಾರಾಣಿಯವರು ವೈಭವೋ
ಪೇತವಾದ ಮರಣವನ್ನು ಹೊಂದಿದರೆಂದು ಸಮಾಧಾನ ಮಾಡಿಕೊಂಡರು.
ಇನ್ನು ಈ ನಗರದ ರಾಜ್ಯದಲ್ಲಿ ಅವರು ವಿಚಾರಿಸಬೇಕಾದದ್ದು ಏನಿದೆ ?
ಭವಾನೀರಾಣಿಯವರ ವೃತ್ತಾಂತವನ್ನು ತಿಳಿಯಲು ಅವರಿಗೆ ಕುತೂಹಲ
ವಿದ್ದಿತು. ಆದರೆ ಆ ವಿಷಯವಾಗಿ ಯಾವ ಸಮಾಚಾರಗಳೂ ತಿಳಿಯ
ಲಿಲ್ಲ. ಭವಾನೀರಾಣಿಯವರಿಗಾಗಿ ಮಂತ್ರಿಗಳು ಹಂಬಲಿಸಬೇಕಾದು
ದೇನೂ ಇರಲಿಲ್ಲ. ಭವಾನೀರಾಣಿಯವರು ಸರ್ವಸಂಗ ಪರಿತ್ಯಾಗ
ಮಾಡಿದ ಕರ್ಮಯೋಗಿನಿ. ಅವರಿಗೆ ಲಾಭಾಲಾಭಗಳ, ಜಯಾಜಯ
ಗಳ ಎಣಿಕೆಯೇ ಇಲ್ಲ. ಅವರಿಗಾಗಿ ಮಂತ್ರಿಗಳು ಚಿಂತಿಸಬೇಕಾದು
ದೇನಿದೆ ! ಇಷ್ಟೆಲ್ಲಾ ಯೋಚನೆಮಾಡಿ ತಮ್ಮ ಆಸ್ತಿಪಾಸ್ತಿಗಳನ್ನೂ
ದ್ರವ್ಯಾಭರಣಗಳನ್ನೂ ವಿದ್ವಾಂಸರುಗಳಾದ ವೈದೀಕರುಗಳಿಗೆ ದಾನಮಾಡಿ
ಬಿಡಬೇಕೆಂದು ಸಂಕಲ್ಪಿಸಿದರು. ಮಾರನೆಯದಿನ ಮಂತ್ರಿಗಳು
ಸ್ನಾನಾಹ್ನಿಕಗಳನ್ನು ಪೂರೈಸಿ ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಿ ಅಲ್ಲಿ
ಬ್ರಾಹ್ಮಣರನ್ನೆಲ್ಲಾ ಕರೆಸಿ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲಾ ಧಾರಾದತ್ತ
ಮಾಡಿದರು. ಅಲ್ಲಿಂದ ತಮ್ಮ ಮನೆಗೆ ಬಂದು ಭೋಜನವನ್ನು ತೀರಿಸಿ
ಹೊರಗೆ ಬರುವಷ್ಟರಲ್ಲಿ ಮೈಸೂರಿನ ನವಾಬರಾದ ಹೈದರಲ್ಲೀಖಾನರಿಂದ
ಕರೆಯು ಬಂದಿತ್ತು. ಪಲ್ಲಕ್ಕಿಯು ಸಿದ್ಧವಾಗಿದ್ದಿತು. ಅದರಲ್ಲಿ ಕುಳಿತು
ರಾಮಕೃಷ್ಣರವರು ಹೈದರಾಲಿಯವರ ಶಿಬಿರಕ್ಕೆ ತೆರಳಿದರು. ಆ
ಶಿಬಿರದಲ್ಲಿ ಸೈನ್ಯವ್ಯೂಹದ ಮಧ್ಯದಲ್ಲಿ ಹೈದರಾಲಿಯವರ ದರಬಾರು
ಸೇರಿಸಲ್ಪಟ್ಟಿದ್ದಿತು. ಮಂತ್ರಿಗಳು ಆ ದರಬಾರವನ್ನು ಪ್ರವೇಶಿಸುತ್ತಲೇ
ಎಲ್ಲರೂ ಎದ್ದು ಅಭಿವಾದನ ಮಾಡಿದರು. ನವಾಬರ ಪಕ್ಕದಲ್ಲಿ ಸಿದ್ಧ
ವಾಗಿದ್ದ ಆಸನದಮೇಲೆ ಹಸ್ತಲಾಘವನ್ನು ಕೊಟ್ಟು ಮಂತ್ರಿಗಳನ್ನು
ದರಬಾರಿನ ಮೊಸ್ತೇಸರರು ಕುಳ್ಳಿರಿಸಿದರು.

ಹೈದರಾಲಿಯವರು, "ಮಂತ್ರಿಗಳೇ ನಮಗೆ ಈ ರಾಜ್ಯದ
ಸಂಪ್ರದಾಯಾನುಸಾರವಾಗಿ ಕೆಲವು ಸಲಹೆಗಳನ್ನು ಕೊಡಬೇಕೆಂದು
ತಮ್ಮನ್ನು ಕರೆಸಿದ್ದೇವೆ. ಈ ರಾಜ್ಯದಲ್ಲಿ ನೂರಿಪ್ಪತ್ತು ಪಾಳೆಯಪಟ್ಟು

ಗಳಿವೆ. ಅವರಲ್ಲಿ ಬಹುಮಂದಿ ಈ ಯುದ್ಧದಲ್ಲಿ ಮಡಿದುಹೋಗಿದ್ದಾರೆ. ಆ ಪಾಳೆಯಪಟ್ಟುಗಳಿಗೆ ಮುಂದೇನುಮಾಡಬೇಕು" ಎಂದು ನವಾಬರು ಪ್ರಶ್ನೆಮಾಡಿದರು.

ಮಂತ್ರಿಗಳು ಎದ್ದುನಿಂತು "ನವಾಬರವರೇ ಅದಕ್ಕೆ ನಾನು ಸಲಹೆಕೊಡುವ ಅಗತ್ಯವಿಲ್ಲ. ಅವರೆಲ್ಲರೂ ಹಿಂದೂ ಧರ್ಮಿಗಳು. ಹಿಂದೂ ಧರ್ಮದ ಪ್ರಕಾರ ಅವರ ಮಕ್ಕಳು, ಮಕ್ಕಳಿಲ್ಲದಿದ್ದರೆ ದಾಯಾದಿಗಳು ಆಯಾ ಪಾಳೆಯ ಪಟ್ಟುಗಳಿಗೆ ಅಧಿಕಾರಿಗಳು. ಅವರ ವರುಗಳು ಆಯಾ ಪಾಳೆಯಪಟ್ಟುಗಳ ಅಧಿಕಾರವನ್ನು ಸ್ವೀಕರಿಸಲು ಅಪ್ಪಣೆ ಕೊಡಬೇಕು. ಈ ಪಾಳೆಯಗಾರರಿಗೆ ಒಬ್ಬ ಯಜಮಾನರನ್ನೂ ನಿಯಮಿಸುವ ಸಂಪ್ರದಾಯವುಂಟು. ಪಾಳೆಯಗಾರರಲ್ಲಿ ಯಾರು ಐಶ್ವರ್ಯವಂತರೋ, ಯಾರು ಧನಕನಕ ಸಮೃದ್ಧಿಯುಳ್ಳವರೋ ಅವರು ಯಜಮಾನರೆಂದು ಪರಿಗಣಿಸಲ್ಪಡುವುದಿಲ್ಲ. ಯಾರು ಜ್ಞಾನ ವೃದ್ಧರೋ ಯಾರು ವಯೋವೃದ್ಧರೋ, ಯಾರು ಧರ್ಮನಿಷ್ಠರೋ ಅವರಿಗೇ ಆ ಯಾಜಮಾನ್ಯದ ಪಟ್ಟವನ್ನು ಕಟ್ಟಬೇಕು. ಅದು ಈ ರಾಜ್ಯದಲ್ಲಿ ಕುಲಕ್ರಮಾಗತವಾಗಿ ಬಂದಿರುವ ಸಂಪ್ರದಾಯ. ಗೋಪಾಲ ನಾಯಕರು ರಣಕ್ಷೇತ್ರದಲ್ಲಿ ಮಡಿದುಹೋಗಿದ್ದಾರೆ. ಈಗ ಬಂಧನ ದಲ್ಲಿರುವ ರುದ್ರನಾಯಕರಿಗೆ ಯಜಮಾನ್ಯ ಪಟ್ಟವನ್ನು ಕಟ್ಟುವುದು ಉಚಿತವಾಗಿದೆ" ಎಂದು ಹೇಳಿದರು.

ನವಾಬರವರು ಆ ಎಲ್ಲ ವಿಷಯಗಳಿಗೂ ಆಗಲೇ ಆಜ್ಞೆಯನ್ನು ಕಳುಹಿಸುವಂತೆ ಅಪ್ಪಣೆಯಿತ್ತರು. ಇಂದು ನವಾಬರವರ ದರಬಾರು ಸೇರಿರುವುದು ಇಷ್ಟಕ್ಕೋಸ್ಕರವೇ ಅಲ್ಲ. ಒಂದು ಮಹತ್ಕಾರ್ಯವು ಉಳಿದಿತ್ತು. ಆ ಸಭೆಗೆ ಬಂಧನದಲ್ಲಿರುವ ಯುವರಾಜನನ್ನು ಕರೆತರಿಸಿ ದರು. ಅವನ ಕೈಗೂ ಕಾಲಿಗೂ ಸರಪಣಿಯ ಬೇಡಿಗಳು ಹಾಕಲ್ಪಟ್ಟಿ ದ್ದವು. ಅವನು ಬಂದು ತಲೆಬಾಗಿ ನವಾಬರ ಎದುರಿನಲ್ಲಿ ನಿಂತು ಕೊಂಡನು.

ದಿವಾನ್ ಮಹಮದಾಲಿಯವರು ಅವನನ್ನು ಕುರಿತು, "ನೀನು

ಈಗ ಅಪರಾಧಿಯೆಂಬುದನ್ನು ಬಲ್ಲೆಯೋ? ನೀನು ಚಿನ್ನಬಸಪ್ಪನಾಯಕ ನಲ್ಲವೆಂದು ಒಪ್ಪಿಕೊಳ್ಳುತ್ತೀಯೋ" ಎಂದು ಪ್ರಶ್ನೆ ಮಾಡಿದರು. ಆ ಬಂದಿಯು ಹುಚ್ಚನಂತೆ ಕೂಗುತ್ತಾ, "ನಾನು ಚಿನ್ನಬಸಪ್ಪನಾಯಕ ನಲ್ಲವೆಂದು ಹೈದರಾಲಿಯವರು ಸುಳ್ಳು ಹೇಳುತ್ತಿದ್ದಾರೆ. ನಾನು ಚಿನ್ನಬಸಪ್ಪನಾಯಕನಲ್ಲವೆಂದೂ, ಈ ರಾಜ್ಯದ ಯುವರಾಜನಲ್ಲವೆಂದೂ ಈ ನಗರದ ರಾಜ್ಯದ ಅಧಿಕಾರಿಯು ನಾನಲ್ಲವೆಂದೂ ದಾವೆ ಮಾಡುವರು ಇಲ್ಲಿ ಯಾರಿದ್ದಾರೆ ? ರಾಣಿ ಚೆಲುವಮ್ಮಣ್ಣಿಯವರಿದ್ದರೆ ಅವರು ಬಂದು ಸಾಬೀತು ಮಾಡಿಕೊಡಲಿ. ಹೈದರಾಲಿಯವರು ನನಗೆ ವಾಗ್ದಾನವಿತ್ತು ನನ್ನ ಹೆಸರಿನಲ್ಲಿ ಯುದ್ಧಮಾಡಿ ಗೆದ್ದಿರುವ ಈ ರಾಜ್ಯವನ್ನು ತಾವೇ ಉಳಿಸಿಕೊಳ್ಳಬೇಕೆಂಬ ದುರಾಸೆಯಿಂದ ಈ ಸುಳ್ಳು ಪ್ರವಾದವನ್ನು ಹುಟ್ಟಿಸಿದ್ದಾರೆ" ಎಂದು ಕೂಗಿಕೊಂಡನು. ಆ ಸಭೆಯಲ್ಲಿದ್ದವರ ಹೃದಯಗಳು ನಡುಗಿದವು.

ಮಹಮದಾಲಿಯವರು ಮಂತ್ರಿಗಳ ಕಡೆ ತಿರುಗಿ "ಮಂತ್ರಿಗಳೇ ತಾವು ಸ್ವಯಂ ಅಪ್ಪಣೆ ಕೊಡಿಸೋಣವಾಗಲಿ. ಈ ಮನುಷ್ಯನು ಈ ರಾಜ್ಯದ ಯುವರಾಜನೇ ? ಚಿನ್ನಬಸಪ್ಪನಾಯಕನೇ ?" ಎಂದು ಕೇಳಿದರು.

ಮಂತ್ರಿಗಳು ವಿಷಾದದಿಂದ ತಲೆತೂಗುತ್ತಾ "ಛೇ! ಛೇ! ಯುವ ರಾಜನು ಕಾಲವನ್ನೈದಿ ಎಷ್ಟೋ ದಿನಗಳಾಗಿಹೋದವು. ಇವನೊಬ್ಬ ವಂಚಕ. ಪಾಷಂಡ. ದೇಶದ್ರೋಹಿ" ಎಂದು ಹೇಳಿದರು. ಅಪರಾಧಿಯು ಕಿರುಚಲಾರಂಭಿಸಿದನು. ಮಂತ್ರಿಗಳನ್ನು ವಾಚಾಮಗೋಚರವಾಗಿ ಬೈಯ್ಯುವುದಕ್ಕೆ ಆರಂಭಿಸಿದನು ಹೈದರಾಲಿಯವರು "ಆ ದ್ರೋಹಿಯನ್ನು ಊರಿನಲ್ಲೆಲ್ಲಾ ಮೆರವಣಿಗೆ ಮಾಡಿಸಿ ಎಳೆತಂದು ತೋಪಿನ ಬಾಯಿಗೆ ಕಟ್ಟಿಸಿರಿ" ಎಂದು ಆಜ್ಞೆಯಿತ್ತರು. ಅಂದಿನ ಸಭೆಯು ಹೀಗೆ ಬರಖಾಸ್ತಾಯಿತು. ಮಂತ್ರಿಗಳು ಮಹಲಿಗೆ ಹೊರಟು ಹೋದರು. ಆ ದಿನವೇ ಬಂಧನದಲ್ಲಿದ್ದ ರುದ್ರನಾಯಕರನ್ನು ನವಾಬರು ಸಮ್ಮುಖಕ್ಕೆ ಕರೆತರಿಸಿ ಖಿಲ್ಲತ್ತುಗಳನ್ನು ಕೊಡಿಸಿ ಅವರ ಪಾಳೆಯದಟ್ಟಿಗೆ ಆನೆಯ

ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ ಮರ್ಯಾದೆಯಿಂದ ಕಳುಹಿಸಿ ಕೊಟ್ಟರು.

ಮಾರನೆಯ ದಿನವೇ ಮಂತ್ರಿ ರಾಮಕೃಷ್ಣರವರು ಹೈದರಲ್ಲೀ ಖಾನರ ಭೇಟಿಯನ್ನು ತೆಗೆದುಕೊಂಡರು. ತಾವು ಪತ್ನೀಸಮೇತರಾಗಿ ಕಾಶೀಯಾತ್ರೆಗೆ ಹೊರಡಲು ಅಪ್ಪಣೆ ಈಯಬೇಕೆಂದು ಕೇಳಿದರು. ನವಾಬರು ಎಷ್ಟೋ ವಿಧವಾಗಿ ಪ್ರಾರ್ಥಿಸಿದರೂ ಮಂತ್ರಿಗಳು ಗಂಗಾ ಯಾತ್ರೆಯ ಸಂಕಲ್ಪದಿಂದ ಹಿಂತೆಗೆಯಲು ಒಪ್ಪಲಿಲ್ಲ. ಹೈದರಾಲಿ ಯವರು ಅತ್ಯಂತ ಖಿನ್ನರಾಗಿ ಮಂತ್ರಿಗಳಿಗೆ ಕಾಶೀಯಾತ್ರೆಗೆ ಅಪ್ಪಣೆ ಯನ್ನಿತ್ತರು. ಕಾಶಿಯವರೆಗೂ ಮಂತ್ರಿ ದಂಪತಿಗಳು ಪಲ್ಲಕ್ಕಿಯಲ್ಲಿಯೇ ಪ್ರಯಾಣಮಾಡಬೇಕೆಂದೂ ಅದಕ್ಕೆ ಬೇಕಾದ ವ್ಯವಸ್ಥೆಗಳನ್ನು ಮಾಡಲು ತಮಗೆ ಅನುಮತಿಕೊಡಬೇಕೆಂದೂ ಹೈದರಾಲಿಯವರು ಪ್ರಾರ್ಥನೆಮಾಡಿ ಮಂತ್ರಿಗಳನ್ನು ಒಪ್ಪಿಸಿದರು. ಮಾರನೆಯ ಪ್ರಾತಃಕಾಲ ಮಂತ್ರಿಗಳು ಸ್ನಾನಾಹ್ನಿಕಗಳನ್ನು ಪೂರೈಸಿ ಪತ್ನೀಸಮೇತರಾಗಿ ಮಲ್ಲಿಕಾರ್ಜುನಕ್ಷೇತ್ರಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಯಾತ್ರಾದಾನಗಳನ್ನು ಕೊಟ್ಟು ಪಲ್ಲಕ್ಕಿಯಲ್ಲಿ ಕುಳಿತು ನಗರದ ರಾಜ್ಯ ವನ್ನು ಪರಿತ್ಯಜಿಸಿ ಹೊರಟು ಹೋದರು.

---

## ೩೭

## ರಾಣಿಯು ಬದುಕಿರುವಳೇ !

ಮಂತ್ರಿಗಳು ಹೊರಟು ಹೋದಮೇಲೆ ನವಾಬರು ನಗರದ ಅರಮನೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಬಿಡಾರಮಾಡಲು ಆರಂಭಿಸಿದರು. ಸಮೀಪದಲ್ಲಿದ್ದ ಪಾಳೆಯಪಟ್ಟುಗಳಿಗೆಲ್ಲಾ ತಾವೇ ಖುದ್ದಾಗಿ ಹೋಗಿ ಅವರೆಲ್ಲರನ್ನೂ ಹೈದರಾಲಿಯವರು ಸಂತೈಸಿ ಸ್ನೇಹ ಮಾಡಿಕೊಂಡು ಬರುತ್ತಿದ್ದರು. ರಾಜ್ಯಾಡಳಿತಗಳನ್ನೆಲ್ಲಾ ವ್ಯವಸ್ಥೆ

ಮಾಡುವಂತೆ ದಿವಾನ ಮಹಮದಾಲಿಯವರಿಗೆ ಅಪ್ಪಣೆಯಿತ್ತರು. ಒಂದು ತಿಂಗಳಕಾಲ ಕಳೆದುಹೋಯಿತು. ಒಂದುದಿನ ನಗರದ ಅರಮನೆಯ ಬಾಗಿಲಿನಲ್ಲಿ ಭೈರವಿಯು ಬಂದು ಭಾವಡಿಯ ಕಛೇರಿಯಲ್ಲಿದ್ದ ಅಧಿಕಾರಿಗಳೊಡನೆ ತಾನು ನವಾಬರ ಭೇಟಿಮಾಡಬೇಕೆಂದು ಹೇಳಿದಳು.

ಈ ಸಮಾಚಾರವನ್ನು ಬಾಗಿಲಿನವರು ನವಾಬರಿಗೆ ಅರಿಕೆಮಾಡುತ್ತಲೇ, ಅವರು ಅಚ್ಚರಿಗೊಂಡರು. ಈ ಭೈರವಿಯು ಏತಕ್ಕೆ ಬಂದಿದ್ದಾಳೆ? ಇಷ್ಟುದಿನಗಳು ಇವಳೆಲ್ಲಿಗೆ ಹೋಗಿದ್ದಳು. ಇವಳು ಯುವರಾಜನಿಗೆ ರಾಜ್ಯವನ್ನು ಕೇಳುವುದಕ್ಕೆ ಬಂದಿದ್ದಾಳೇನು? ಅಥವಾ ಯುವರಾಜನನ್ನು ನಾವು ಕೊಲ್ಲಿಸಿದ ಸಮಾಚಾರವನ್ನು ಕೇಳಿ ಕ್ರೋಧದಿಂದ ರೇಗಿ ನಮ್ಮೊಡನೆ ಜಗಳವಾಡಲು ಬಂದಿರಬಹುದೇ. ನಮ್ಮಲ್ಲಿ ಇವಳಿಗೇನು ಕೆಲಸವಿದೆ. ಯುವರಾಜನಿಗೆ ಶಿಕ್ಷೆಯಾದದ್ದು ಇವಳಿಗೆ ತಿಳಿದೇಯಿರಬೇಕಷ್ಟೆ. ಅವನಜೊತೆಯಲ್ಲಿ ಇವಳೂ ಅಪರಾಧಿನಿಯೆಂದೂ ನಾವು ಇವಳನ್ನೂ ಶಿಕ್ಷಿಸಬಹುದೆಂದೂ ಭಯಪಡದೇ ಇಲ್ಲಿಗೆ ಹೇಗೆ ಬಂದಳು? ಇವಳು ಅವಳೇನೋ ಅಥವಾ ಬೇರೊಬ್ಬ ಭೈರವಿಯೋ ನೋಡೋಣ ಎಂದುಕೊಂಡು ಅವಳನ್ನು ಒಳಗೆ ಕರತರುವಂತೆ ಅಪ್ಪಣೆಯಿತ್ತರು. ಭೈರವಿಯು ಹೈದರಾಲಿಯವರ ಸಮೀಪಕ್ಕೆ ಬಂದು ಸಲಾಂ ಮಾಡಿದಳು.

ನವಾಬರವರು, "ಬನ್ನಿರಿ ಭೈರವೀರಾಣಿಯವರೇ, ಆಸನದಲ್ಲಿ ಕುಳಿತುಕೊಳ್ಳಿರಿ" ಎಂದು ಆಸನದಕಡೆಗೆ ಕೈತೋರಿದರು.

ಭೈರವಿಯು ಕುಳಿತುಕೊಳ್ಳುತ್ತಾ "ರಾಣಿಯೆಂದರೇನು? ನೀವು ಪರಿಹಾಸ್ಯಮಾಡುವಿರೇನು? ನಾನು ಭೈರವಿ. ಅಷ್ಟೇ ನನ್ನ ಹೆಸರು" ಎಂದಳು.

ಹೈದರಾಲಿಯವರು ನಗುತ್ತಾ, "ನೀವು ಯುವರಾಜರವರ ಧರ್ಮಪತ್ನಿಯವರಲ್ಲವೇನು?" ಎಂದರು.

ಭೈರವಿಯು, "ಯುವರಾಜನೆಂದರೇನು? ಅವನ ಪತ್ನಿಯು

ಯಾರು? ಅನ್ಯಾಯವಾಗಿ ಆ ಬಡಪಾಯಿಯನ್ನು ತೋಪಿನ ಬಾಯಿಗೆ ಕಟ್ಟಿಸಿ ಕೊಲ್ಲಿಸಿದಿರಿ. ಅದರಿಂದ ನಿಮಗೆ ಬಂದ ಭಾಗ್ಯವೇನು?" ಎಂದಳು.

ಹೈದರಾಲಿಯವರು, "ಓಹೋ, ನೀವು ಎಲ್ಲವನ್ನೂ ಅರಿತಿರುವಿರಿ, ಎಲ್ಲವನ್ನೂ ಬಲ್ಲಿರಿ. ಹಾಗಾದರೆ ಅವನನ್ನು ನೀವು ಯುವರಾಜನೆಂದು ಹೇಳಿ ನಮ್ಮಲ್ಲಿ ಕರೆತಂದುದೇಕೆ? ಸುಳ್ಳುಹೇಳಿ ಈ ಯುದ್ಧವನ್ನು ಎತ್ತಿ ಕಟ್ಟಿದುದೇಕೆ?" ಎಂದರು.

ಭೈರವಿಯು ಅಲಕ್ಷ್ಯದಿಂದ ನಗುತ್ತಾ, "ನಾವು ಸುಳ್ಳುಹೇಳಿದರೆ ನಿಮಗಾದ ನಷ್ಟವೇನು? ಲಾಭವೇ ಆಯಿತಷ್ಟೆ? ನಗರದ ರಾಜ್ಯವು ನಿಮ್ಮ ಕೈಗೆ ಸಿಕ್ಕಿತಷ್ಟೆ? ಸುಳ್ಳುಹೇಳಿದವರು ನೀವು" ಎಂದು ಮೂದಲಿಸಿದಳು.

ಅವಳ ಧೈರ್ಯವನ್ನು ನೋಡಿ ಅಪ್ರತಿಭರಾಗಿ, "ಸುಳ್ಳುಹೇಳಿದವರು ನಾವು. ನಾವೇನು ಸುಳ್ಳುಹೇಳಿದೆವು" ಎಂದರು.

ಭೈರವಿಯು "ನಾನು ಕರೆತಂದ ಚೆನ್ನಬಸಪ್ಪನಾಯಕನಿಗೆ ಪಟ್ಟ ಕಟ್ಟುವುದಾಗಿ ವಚನವಿತ್ತು ಮೋಸಮಾಡಲಿಲ್ಲವೇ?" ಎಂದಳು. ಹೈದರಾಲಿಯವರು "ಯುವರಾಜನೆಂದು ಅವನೂ ಸುಳ್ಳುಹೇಳಿದನು. ನೀವೂ ಸುಳ್ಳುಹೇಳಿದಿರಿ. ಅವನಿಗೆ ತಕ್ಕ ಶಿಕ್ಷೆಯಾಯಿತು. ನಿಮಗೆ ಶಿಕ್ಷೆಯಾಗಬೇಕು" ಎಂದರು.

ಭೈರವಿಯು, "ನವಾಬರೇ, ನನಗೇಕೆ ಶಿಕ್ಷೆಯಾಗಬೇಕು. ಅವನು ಯುವರಾಜನಾದರೇನು? ಯಾರಾದರೇನು? ಯುವರಾಜನಾಗಿದ್ದರೆ ನಿಮಗೆ ಏನು ಭಾಗ್ಯ ಬರುತ್ತಿತ್ತು? ನನಗೆ ಅದರಿಂದ ಆಗಬೇಕಾದುದೇನು? ನಿಮಗೆ ಒಂದು ಅತಿಮುಖ್ಯವಾದ ಸಮಾಚಾರವನ್ನು ಹೇಳಿ ಹೋಗಲು ಬಂದಿದ್ದೇನೆ" ಎಂದಳು.

"ಅದೇನು ಹೇಳಿರಿ ನೋಡೋಣ. ಅದರಿಂದ ನಿಮಗೆ ಲಾಭವೋ ನಮಗೆ ಲಾಭವೋ?"

ಭೈರವಿಯು, "ಅಯ್ಯೋ ನವಾಬರೇ, ಈ ನಿಮ್ಮ ಲಾಭನಷ್ಟಗಳ

ಮಾತು ಯಾರಿಗೆಬೇಕು. ನನಗೆ ಲಾಭದ ಆಸೆಯಿದ್ದಿದ್ದರೆ ನಾನೊಂದು ರಾಜ್ಯವನ್ನೇ ಸಂಪಾದಿಸುತ್ತಿದ್ದೆ. ಲಾಭದ ಆಸೆಯಿರುವುದು ನಿಮಗೆ. ನಿಮ್ಮಲ್ಲಿ ಒಂದು ಸಮಾಚಾರವನ್ನು ವಿಕ್ರಯಿಸಲು ಬಂದಿದ್ದೇನೆ" ಎಂದಳು.

ಹೈದರಾಲಿಯವರು ಆಶ್ಚರ್ಯದಿಂದ, "ಭೈರವೀ, ನಿಮ್ಮ ಕ್ರಯ ವಿಕ್ರಯದ ವ್ಯಾಪಾರವಾವುದು" ಎಂದು ಕೇಳಿದರು. ಭೈರವಿಯು "ಕೇಳಿ, ನವಾಬರೇ, ನಗರವು ನಿಮ್ಮ ಕೈಗೆ ಸಿಕ್ಕಿತು. ಪಾಳೆಯಗಾರರೆಲ್ಲರೂ ಸತ್ತು ನಿಮ್ಮ ರಾಜ್ಯವು ನಿಷ್ಕಂಟಕವಾಯಿತು. ಮಂತ್ರಿ ರಾಮಕೃಷ್ಣರು ತೀರ್ಥಯಾತ್ರೆಗೆ ಹೋದರು. ರಾಣಿಯು ಮಾತ್ರ ಬದುಕಿದ್ದಾಳೆ" ಎಂದಳು.

ಹೈದರಾಲಿಯವರು, "ಸುಳ್ಳು. ಅದಕ್ಕೆ ಸಾಕ್ಷಿಯೇನು? ಮತ್ತೊಮ್ಮೆ ಸುಳ್ಳು ಹೇಳಲು ಬಂದಿದ್ದೀರಾ?" ಎಂದು ಗದ್ದರಿಸಿದರು. ಭೈರವಿಯು ನಗುತ್ತಾ, "ನಿಮ್ಮ ಬೆದರಿಕೆಗೆ ನಾನು ಹೆದರುವೆನೇ? ರಾಣಿಯು ಬದುಕಿರುವುದಕ್ಕೆ ಸಾಕ್ಷಿಯು ಬೇಕೇ? ನಾನು ಸಾಕ್ಷಿ ನನ್ನ ಕಣ್ಣುಗಳು ಸಾಕ್ಷಿ" ಎಂದಳು.

ಹೈದರಾಲಿಯವರು, "ಒಳ್ಳೆಯದು. ಬದುಕಿದ್ದರೆ ನಮಗೇನು? ಅವರೇನು ಮಾಡಬಲ್ಲರು" ಎಂದರು.

ಭೈರವಿಯು, "ಓಹೋ ನವಾಬರೇ, ಇಲ್ಲಿ ನಿಮ್ಮ ಬುದ್ಧಿಯು ಮೊಂಡಾಗಿ ಹೋಗಿದೆ. ರಾಣಿಯು ಬದುಕಿದ್ದರೆ ನೀವು ನಗರದ ರಾಜ್ಯವನ್ನು ಗೆದ್ದಿದ್ದೇ ಸುಳ್ಳು. ಈ ರಾಜ್ಯದಲ್ಲಿ ಜನರೆಲ್ಲರನ್ನೂ ಅವಳು ಎತ್ತಿಕಟ್ಟುತ್ತಾಳೆ. ಹೊರಗಡೆ ಮರಾಟರೊಡನೆಯೂ, ಇಂಗ್ಲೀಷರೊಡನೆಯೂ ಸಂಧಿಮಾಡಿ ನಿಮ್ಮಮೇಲೆ ಯುದ್ಧಕ್ಕೆಬರುವಂತೆ ಮಾಡುತ್ತಾಳೆ. ಅವಳಲ್ಲಿ ಬೇಕಾದಷ್ಟು ಚಿನ್ನವಿದೆ. ಅವಳು ಏನುಬೇಕಾದರೂ ಮಾಡಬಲ್ಲಳು" ಎಂದಳು. ಹೈದರಾಲಿಯವರು, "ಭೈರವೀರಾಣೀ, ಆ ನಗರದ ರಾಣಿಯವರು ಸತ್ತುಹೋಗಲಿಲ್ಲವೇನು. ಆ ಅರಮನೆಗೆ ಬೆಂಕಿಹತ್ತಿದ ದಿನ ಅದರೊಳಗೆ ಅವರು ಸುಟ್ಟುಹೋಗಲಿಲ್ಲವೇನು?" ಎಂದರು.

ಭೈರವಿಯು, "ಅರಮನೆಗೆ ಬೆಂಕಿಹಚ್ಚಿದವಳಾರು ? ಆ ರಾಣಿಯೇ ಬೆಂಕಿ ಹಚ್ಚಿದಳು" ಎಂದಳು. ಹೈದರಾಲಿಯವರು ಆಶ್ಚರ್ಯದಿಂದ "ಆ ರಾಣಿಯಮೇಲಿನ ಛಲದಿಂದ ನೀವು ಆ ಅರಮನೆಗೆ ಬೆಂಕಿಯನ್ನು ಹಚ್ಚಿ ರಾಣಿಯನ್ನು ಕೊಂದುಹಾಕಿದಿರೆಂದು ನಮ್ಮ ಭಾವನೆಯಿತ್ತು" ಎಂದರು.

ಭೈರವಿಯು "ನಾನು ಬೆಂಕಿಹಚ್ಚಿ ಆ ಅರಮನೆಯಲ್ಲಿ ಆ ರಾಣಿಯನ್ನು ಕೊಂದುಹಾಕಿದ್ದರೆ ನನ್ನ ಕೈಗಳಿಂದಲೇ ನನ್ನ ಛಲವನ್ನು ತೀರಿಸಿಕೊಂಡಂತೆ ಆಗುತ್ತಿದ್ದಿತು ಹಾಗಾಗಿದ್ದರೆ ನಾನು ಈ ಪ್ರಪಂಚದಲ್ಲಿ ಮತ್ತಾರನ್ನೂ ಬಂದು ಕೇಳಬೇಕಾದ ಪ್ರಸಂಗವೇ ಇರುತ್ತಿರಲಿಲ್ಲ. ಸ್ವಯಂ ನಗರದರಾಣಿಯೇ ಆ ಅರಮನೆಗೆ ಬೆಂಕಿಹಚ್ಚಿ ಓಡಿಹೋಗಿದ್ದಾಳೆ" ಎಂದಳು.

ಹೈದರಾಲಿಯವರು "ಒಳ್ಳೆಯದು ರಾಣಿಯವರೇ,' ನಾವು ಪತ್ತೆ ಮಾಡಿಸುತ್ತೇವೆ. ನಿಮಗೇನು ಬೇಕು ಕೇಳಿರಿ, ಕೊಡಿಸುತ್ತೇನೆ. ನನಗೆ ನಿಮ್ಮಮೇಲೆ ಬಹಳ ಅಭಿಮಾನವಿದೆ" ಎಂದು ಹೇಳಿದರು. ಭೈರವಿಯು ಗಹಗಹಿಸಿ ನಕ್ಕಳು. "ಅಯ್ಯೋ ನವಾಬರೇ, ನಿಮಗೆ ಹುಚ್ಚು ಹಿಡಿದಿದೆ. ರಾಣಿಯನ್ನು ನೀವು ಪತ್ತೆಹಚ್ಚಬಲ್ಲಿರಾ ? ಅದು ಭ್ರಾಂತಿ! ನನಗೆ ಪುರಸ್ಕಾರ ಕೊಡುವಿರಾ! ಪುರಸ್ಕಾರವು ಬೇಕಾಗಿದ್ದರೆ ನನಗೆ ರಾಣಿಯೇ ಕೊಡುತ್ತಿದ್ದಳು. ಸಕಲ ಸೌಭಾಗ್ಯಗಳನ್ನೂ ಕೊಡುತ್ತಿದ್ದಳು. ಅದರಿಂದ ನಾನೆಷ್ಟು ಲಾಭ ಪಡೆಯಬಹುದಿತ್ತೋ ಅದರಲ್ಲಿ ಶತಾಂಶದಲ್ಲಿ ಒಂದಂಶವನ್ನು ನೀವು ಕೊಡಲಾರಿರಿ. ಇಂದಿಗೂ ರಾಣಿಯ ವಶದಲ್ಲಿರುವ ಐಶ್ವರ್ಯದಲ್ಲಿ ಒಂದಾಣೆಯ ಭಾಗವೂ ತಮ್ಮಲ್ಲಿಲ್ಲ. ಪುರಸ್ಕಾರವು ಬೇಕಾಗಿದ್ದರೆ ಇಂದಿಗೂ ರಾಣಿಯು ತಮಗಿಂತಲೂ ಹೆಚ್ಚಾಗಿ ಕೊಡಬಲ್ಲಳು. ನಾನು ಅವಳಿಗೆ ಸಹಾಯ ಮಾಡಿದರೆ ನಿಮ್ಮಮೇಲೆ ಮತ್ತೊಂದು ಭಯಂಕರವಾದ ಯುದ್ಧವನ್ನು ತಂದು ಒಡ್ಡಬಲ್ಲೆ. ನನಗೆ ಪುರಸ್ಕಾರವೇತಕ್ಕೆ. ನಿಮಗೆ ರಾಣಿಯನ್ನು ಹಿಡಿಯುವ ಶಕ್ತಿ ಇಲ್ಲ. ನಾನು ಹಿಡಿದುಕೊಡಬಲ್ಲೆ. ಅಲ್ಲಿಗೆ ನನ್ನ ಸಂಕಲ್ಪವು ಪೂರ್ತಿಯಾ

ಅನಂತರ ಹೇಗೆ ಹೇಗೆ ಯುದ್ಧಮಾಡಬೇಕು. ಯಾವ ಯಾವ ಸೇನಾಧಿಪತಿಗಳು ಮುಂದೆ ನುಗ್ಗಬೇಕು. ಯಾರು ಯಾರು ಹಿಂದಿರ ಬೇಕು—ಎಂಬ ಮಾತುಕಥೆಗಳನ್ನಾಡಿದರು. ಇನ್ನೂ ಎರಡು ದಿವಸ ಗಳು ನಿರೀಕ್ಷಣೆ ಮಾಡತಕ್ಕದ್ದೆಂದೂ ಗೋಪಾಲನಾಯಕರು ಯುದ್ಧಕ್ಕೆ ಬಾರದಿದ್ದರೆ, ಮಹಮುದಾಲಿಯುವರೇ ಸೈನ್ಯವನ್ನು ಮುಂದುವರೆಸಿ ಗೋಪಾಲನಾಯಕರ ಸೈನ್ಯದಮೇಲೆಬಿದ್ದು ಕೆಣಕಬೇಕೆಂದೂ ಅವರನ್ನು ಮುಂದು ಮುಂದಕ್ಕೆ ಒತ್ತರಿಸುತ್ತಾ ಬಂದು ಹೈದರಾಲಿಯುವರ ಸೈನ್ಯಕ್ಕೆ ಥಿಕ್ಕಿ ಹೊಡೆಯುವಂತೆಮಾಡಬೇಕೆಂದೂ, ವುಭಯ ಪಾರ್ಶ್ವಗಳಲ್ಲಿಯೂ ಸೈನ್ಯವನ್ನು ಸುತ್ತುಗಟ್ಟಿ ಪಾಳೆಯಗಾರರ ಸೈನ್ಯವನ್ನು ಸದೆಬಡಿಯ ಬೇಕೆಂದೂ ತೀರ್ಮಾನಮಾಡಿದರು.

ಗೋಪಾಲನಾಯಕರ ಸೈನ್ಯಗಳು ಬಂದು ಶಿಬಿರದಮೇಲೆ ಆಕ್ರಮಣಮಾಡಿದರೆ ಮತ್ತೊಂದು ದಂಡನ್ನು ಎತ್ತಿತಂದು ಪಾಳೆಯ ಗಾರರನ್ನು ಆಕ್ರಮಣಮಾಡಬೇಕೆಂದೂ ನಿರ್ಧರಿಸಿದರು. ಮಹಮು ದಾಲಿಯುವರು ನವಾಬರ ಅಪ್ಪಣೆಪಡೆದು ಎರಡು ಶಿಬಿರಗಳಿಗೂ ಸಮಾಚಾರಗಳನ್ನು ಅತಿ ತ್ವರಿತವಾಗಿ ತಲಪಿಸುವಂಥಾ ಏರ್ಪಾಡು ಗಳನ್ನು ಮಾಡಿ ತಮ್ಮ ಶಿಬಿರಕ್ಕೆ ಹಿಂತಿರುಗಿಬಂದು ಭೋಜನವನ್ನು ತೀರಿಸುವವೇಳೆಗೆ ಅಪರಾಹ್ಣವು ಸಮಿಾಪಿಸುತ್ತಿದ್ದಿತು.

ಗೋಪಾಲನಾಯಕರು ಮೈಸೂರು ಸೈನ್ಯಗಳು ತುಂಗಾನದಿಯನ್ನು ದಾಟಿ ಬಂದ ಸಮಾಚಾರವನ್ನು ತಿಳಿದುಕೊಂಡರು. ಮೈಸೂರು ಸೈನ್ಯ ಗಳು ಎರಡುಕಡೆ ಬೀಡುಬಿಟ್ಟುದುದನ್ನು ಅರಿತಿದ್ದರು. ಬ್ರಹ್ಮಾಂಡ ವಾದ ಯುದ್ಧಸನ್ನಾಹಗಳನ್ನು ಎಸೆಗಿದ್ದರು. ಗೋಪಾಲನಾಯಕರು ಮಾಡಿದ್ದಂಥಾ ಯುದ್ಧಸನ್ನಾಹಗಳು ದಕ್ಷಿಣಾಪಥದಲ್ಲಿ "ನಭೂತೋ ನಭವಿಷ್ಯತಿ" ಎಂಬಂತೆ ಆಗಿದ್ದಿತು. ಪೂರ್ವಭಾಗದಲ್ಲಿ ತರೀಕೆರೆಯ ಪಾಳೆಯಗಾರರಾದ ಕೃಷ್ಣಪ್ಪನಾಯಕರು ತಮ್ಮ ಸೈನ್ಯಸಮೇತರಾಗಿ ಆಕ್ರಮಣಮಾಡತಕ್ಕದೆಂದೂ, ಮಧ್ಯಭಾಗದಲ್ಲಿ ಹರಪನಹಳ್ಳಿಯ ರುದ್ರನಾಯಕರು ನಿಲ್ಲತಕ್ಕದ್ದೆಂದೂ, ಮತ್ತೊಂದುಕಡೆಯಿಂದ ತಾವು

ಮಹಮುದಾಲಿಯವರ ಸೈನ್ಯವನ್ನು ಆಕ್ರಮಿಸಬೇಕೆಂದೂ ನಿರ್ಧಾರ ಮಾಡಿದರು. ಯುದ್ಧವು ರಾತ್ರಿಯಲ್ಲಿ ಆರಂಭವಾಗತಕ್ಕದ್ದೆಂದು ಸಂಕೇತ ಮಾಡಲ್ಪಟ್ಟಿತ್ತು. ಇದಕ್ಕೆ ಒಂದು ವಿಶೇಷ ಕಾರಣವಿತ್ತು. ರಾತ್ರಿಯು ಕೃಷ್ಣಪಕ್ಷದ ಕರಾಳರಾತ್ರಿ, ಬೆಟ್ಟಗುಡ್ಡಗಳ ಸೀಮೆ. ಯುದ್ಧವು ಮೈಸೂರು ಸೈನ್ಯಗಳಿಗೆ ಅಪರಿಚಿತವಾದ ನಮೂನೆಯ ಯುದ್ಧ.

ಏಳನೆಯ ದಿನ ರಾತ್ರಿ ಇದ್ದಕ್ಕಿದ್ದಂತೆ ಯುದ್ಧವು ಆರಂಭವಾಯಿತು. ತರೀಕೆರೆ ಪಾಳೆಯಗಾರರಾದ ಕೃಷ್ಣಪ್ಪನಾಯಕರು ಸೈನಿಕರಿಗೆಲ್ಲಾ ದೊಂದಿಗಳನ್ನು ಕೊಟ್ಟು ಮುಂದೆನುಗ್ಗಬೇಕೆಂದು ಆಜ್ಞೆಯಿತ್ತರು. ಏಕ ಕಾಲದಲ್ಲಿ ಐದು ಮೈಲಿಗಳ ಸುತ್ತುವಳೆಯದಲ್ಲಿ ಹೈದರನ ಶಿಬಿರದಮೇಲೆ ಸಾವಿರಸಾವಿರ ಸಂಖ್ಯೆಯ ದೊಂದಿಗಳನ್ನು ಹಿಡಿದುಕೊಂಡು ಸೈನಿಕರು ನುಗ್ಗಲಾರಂಭಿಸಿದರು. ಸುತ್ತಲೂ ಕಾಡುಮರಗಳನ್ನೂ ಒಣಗಿದ ಪೊದೆಗಳನ್ನು ತಂದುಹಾಕಿ ಅಗ್ನಿಜ್ವಾಲೆಗಳನ್ನು ಹತ್ತಿಸಿದರು. ಮಧ್ಯಭಾಗದಿಂದ ರುದ್ರನಾಯಕರು ಸೈನ್ಯವನ್ನು ಮುಂದೆ ತಳ್ಳಿದರು. ಪಂಜುಗಳ ಸೈನ್ಯಗಳ ಹಿಂದೆ ಶಸ್ತ್ರಸಜ್ಜಿತವಾದ ಸೈನ್ಯಗಳು ನುಗ್ಗಿಬರುತ್ತಿದ್ದವು. ಮತ್ತೊಂದು ಕಡೆ ಸ್ವಯಂ ಗೋಪಾಲನಾಯಕರು ತಮ್ಮ ಸೈನ್ಯವನ್ನು ಹೆಜ್ಜೆಹೆಜ್ಜೆಯಾಗಿ ಮುಂದುವರೆಸುತ್ತ ಬಂದರು.

ಮೈಸೂರು ಸೈನ್ಯದಲ್ಲಿ ಯಾವಾಗಲೂ ಯುದ್ಧಕ್ಕೆ ತಯಾರಿ ಇದ್ದೇ ಇತ್ತು. ಆದರೆ ಈ ರೀತಿಯಾಗಿ ಸುತ್ತಲೂ ಅಗ್ನಿಜ್ವಾಲೆಗಳನ್ನೆಬ್ಬಿಸಿ ಪೊಂಜಿನ ಸೈನಿಕರು ತಮ್ಮ ಸೈನ್ಯಗಳಮೇಲೆ ನುಗ್ಗುವರೆಂಬ ನಿರೀಕ್ಷಣೆಯೇ ಮೈಸೂರು ಸೈನಿಕರಿಗೆ ಇರಲಿಲ್ಲ. ಅಂದಿನ ಆ ಘೋರ ಯುದ್ಧದ ಭೀಕರ ಸ್ವರೂಪವನ್ನು ವರ್ಣಿಸಲು ನಮ್ಮ ಲೇಖನಿಯಲ್ಲಿ ಸತ್ವಯಿಲ್ಲ. ಹೈದರಾಲಿಯವರು ಸೈತಾನೀ ಯುದ್ಧ ಎಂದು ಇದನ್ನು ಎಷ್ಟೋ ದಿವಸಗಳವರೆಗೆ ಹೇಳುತ್ತಿದ್ದರು. ಕೃಷ್ಣಪ್ಪನಾಯಕರ ಆಕಾರವು ಭೀಷಣಾಕಾರ. ದೊಡ್ಡ ಎತ್ತರವಾದ ಕುದುರೆಯನ್ನೇರಿ ಸೈನ್ಯವನ್ನು ಭೇದಿಸಿಕೊಂಡು ಮುಂದೆ ನುಗ್ಗಿ ಬರುತ್ತಿದ್ದರು. ಆ ರಾತ್ರಿ ಆ ಪೊಂಜುಗಳ ಬೆಳಕಿನಲ್ಲಿ ಆ ಮಹಾಶ್ವದಮೇಲೆ ಭೀಷಣಾಕಾರನಾದ ವೀರನು ಕತ್ತಿಯನ್ನು ಝಳಪಿ

ಸುತ್ತಾ ಸೈನ್ಯದ ಮಧ್ಯದಲ್ಲಿ ನುಗ್ಗುವುದನ್ನು ಕಂಡವರಿಗೆ ಸಾಕ್ಷಾತ್
ಯಮಧರ್ಮರಾಜನು ಬರುತ್ತಿರುವಂತೆ ಭಾಸವಾಗುತ್ತಿತ್ತು. ಹೈದರಾಲಿ
ಯವರು ಆನೆಯಮೇಲೆ ಅಂಬಾರಿಯನ್ನೇರಿ ಬಹು ದೂರದಲ್ಲಿ ಈ
ಯುದ್ಧವನ್ನು ನೋಡುತ್ತಿದ್ದರು. ಮೈಸೂರಿನ ಸೈನಿಕರು ರೋಷಾ
ವೇಶದಿಂದ ಆ ಅಗ್ನಿಜ್ವಾಲೆಗಳ ಮಧ್ಯದಲ್ಲಿಯೇ ನುಗ್ಗಿ ಶತೃಗಳನ್ನು
ಆಕ್ರಮಣವಾಡಲು ಸಾಹಸವಾಡುತ್ತಿದ್ದರು ಆದರೆ ಆ ಅಗ್ನಿಜ್ವಾಲೆ
ಗಳಮುಂದೆ ಕಾಲಾಳುಗಳು ನುಗ್ಗಲಾರದೇ ಹೋದರು. ಕುದುರೆಗಳು
ಎರಡು ಹೆಜ್ಜೆ ಮುಂದಿಟ್ಟು ಮೂಗು ಬಾಯಿ ಕಣ್ಣುಗಳಲ್ಲಿ ಹೊಗೆ ತುಂಬಿ
ಕೊಳ್ಳುತ್ತಲೇ ಝೇಂಕಾರವನ್ನು ಮಾಡಿಕೊಂಡು ಹಿಂದಕ್ಕೆ ಚಿಮ್ಮಿ
ಬರುತ್ತಿದ್ದವು. ಹಿಂದಿನ ಪಡೆಯವರು ಕುದುರೆಗಳಿಗೆ ಖಾರವಾದ
ಮದ್ಯವನ್ನು ಕುಡಿಸಿ ಬೆಂಕಿಯಮೇಲೆ ಹಾದು ಹೋಗಲು ಮುಂದೆ ನುಗ್ಗಿ
ಬರುತ್ತಿದ್ದರು. ಅಷ್ಟರಲ್ಲಿ ಸೇನಾಧಿಪತಿಗಳಾದ ರಹಿದುಲ್ಲಾಖಾನರು
ಒಂದು ಬುದ್ಧಿವಂತಿಕೆಯನ್ನು ಮಾಡಿದರು. ಸಾಲಿಗೆ ಇಪ್ಪತ್ತು ಫಿರಂಗಿ
ಗಾಡಿಗಳನ್ನು ತಂದು ಮುಂದೆ ನಿಲ್ಲಿಸಿದರು. ಇಷ್ಟುಹೊತ್ತಿಗೆ ಎರಡು
ಘಂಟೆಗಳಕಾಲ ಅತಿಕ್ರಮಿಸಿಹೋಗಿತ್ತು. ಮೈಸೂರು ಸೈನ್ಯಗಳು
ಬಸವಳಿಯಲು ಆರಂಭಿಸಿದ್ದವು ಮುಂದುಗಡೆ ಫಿರಂಗಿಯಗಾಡಿಗಳನ್ನು
ಕಂಡು ಪುನಃ ಮೈಸೂರು ಸೈನಿಕರು ಉತ್ತೇಜಿತರಾದರು.

ಫಿರಂಗಿಗಳು ಹಾರಲಾರಂಭವಾಗುತ್ತಲೇ ಪಾಳೆಯಗಾರರ
ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಆದರೆ ಮೇಲು ಭಾಗದಿಂದ
ರುದ್ರನಾಯಕರ ಸೈನ್ಯಗಳು ಹೈದರಾಲಿಯ ಸೈನ್ಯದಮೇಲೆ ಬೀಳ
ಲಾರಂಭಿಸಿದವು. ಅತ್ತಕಡೆ ಗೋಪಾಲನಾಯಕರ ಸೈನ್ಯಗಳು ಮೈಸೂರು
ಸೈನ್ಯದಮೇಲೆ ವೇಗವಾಗಿ ಆಕ್ರಮಿಸಿದವು. ಆದಿನದ ಯುದ್ಧದಲ್ಲಿ
ಮೈಸೂರಿನವರಿಗೆ ಬಹಳ ನಷ್ಟವಾಯಿತು. ಆದರೆ ಮೂರು ಕಡೆ
ಗಳಿಂದಲೂ ಫಿರಂಗಿಗಳು ಹಾರಲು ಮೊದಲಿಟ್ಟಾಗ ಪಾಳೆಯಗಾರರ
ಸೈನ್ಯಗಳು ಹಿಮ್ಮೆಟ್ಟಿದವು. ಹೀಗೆ ಯುದ್ಧವು ಆರಂಭವಾಯಿತು. ನಾವು
ಬರೆಯುತ್ತಿರುವುದು ಯುದ್ಧದ ಕಥೆಯಲ್ಲ. ಆದಾಗ್ಯೂ ಈಗಲೂ

ಹೆಂಗಸರು ರಾಗಿಬೀಸುವಾಗ ಗಂಡಸರು ಭತ್ತವನ್ನು ತೂರಿ ಒಕ್ಕುವಾಗ ಈ ಯುದ್ಧದ ಹಾಡುಗಳನ್ನು ಅವಮೂಲಗ್ರವಾಗಿ ಹಾಡುತ್ತಾರೆ.

---

## ೩೩

## ಅಗ್ನಿಕುಂಡದಲ್ಲಿ ಆತ್ಮಸಮರ್ಪಣೆ

ನಗರಕ್ಕೂ ಯುದ್ಧ ನಡೆಯುತ್ತಿರುವ ರಾಮಪುರದ ಗಡುವಿಗೂ ಮೂವತ್ತು ಮೈಲಿ ದೂರವಿದ್ದಿತು. ಆದರೆ ಸೂರ್ಯೋದಯವಾಗುವುದರೊಳಗೆ ಯುದ್ಧಕ್ಕೆ ಆರಂಭವಾಗಿದೆಯೆಂದು ನಗರಕ್ಕೆ ಸಮಾಚಾರವು ಮುಟ್ಟಿತು. ರಾಮಕೃಷ್ಣರವರು ಬೆಳಗಿನಝಾವದಲ್ಲಿಯೇ ಬಿದನೂರಿನ ರಕ್ಷಣೆಗೆ ಬಲವಾದ ಸೈನ್ಯವನ್ನು ಇರಿಸಿದರು. ಕೆಳದಿ ಮತ್ತು ನಗರದ ಅರಮನೆಗಳನ್ನು ಪಟ್ಟಣವನ್ನು ರಕ್ಷಿಸಲು ಸೇನೆಗಳನ್ನು ನೇಮಿಸಿದರು. ಬೇರೆ ಬೇರೆ ಅಧಿಕಾರಿಗಳನ್ನು ರಕ್ಷಣೆಯ ಕಾರ್ಯಕ್ಕೆ ನಿಯೋಜಿಸಿದರು. ನಗರದ ಸೈನ್ಯಗಳು ಪಾಳೆಯಗಾರರ ಸೈನ್ಯಗಳಿಗೆ ಸಹಾಯಕ್ಕೆ ಹೋಗುವಂತೆ ಅಪ್ಪಣೆಯನ್ನಿತ್ತು ಕಳುಹಿಸಿದರು ಸೇನಾಧಿಪತಿಗಳು ಉತ್ಸಾಹದಿಂದ ಯುದ್ಧಕ್ಕೆ ಹೊರಟರು ರಾಮಕೃಷ್ಣರವರು ಆ ದಿನ ಬೆಳಗಿನ ಝಾವದಲ್ಲಿ ಕೆಳದಿಯ ಅರಮನೆಗೆ ಪ್ರವೇಶಮಾಡಿದಾಗ ಯಾರೋ ಹೆಂಗಸರು ಮಾತನಾಡುವ ಸದ್ದು ಕೇಳಿಸಿತು. ಅವರು ಗಾಬರಿಯಿಂದ ಕಾವಲುಗಾರರನ್ನು ಕರೆದು ಅರಮನೆಯಲ್ಲಿ ಯಾರು ಇದ್ದಾರೆಂದು ವಿಚಾರಿಸಿದರು. ಬಾಗಿಲುಗಳನ್ನು ತೆರೆಯಿಸಿ ಒಳಗೆ ಹೋಗಿ. ಅಂತಃಪುರದಲ್ಲಿ ನೋಡಲಾಗಿ ಅಲ್ಲಿ ಒಬ್ಬ ರಾಜಸ್ತ್ರೀಯು ಬಂಧನದಲ್ಲಿ ಇಡಲ್ಪಟ್ಟಿದ್ದಂತೆ ಅವರಿಗೆ ತಿಳಿಯಬಂತು. ಅಲ್ಲಿದ್ದ ಮೂವರು ನಾಲ್ವರು ಪರಿಚಾರಿಕೆಯರನ್ನು ಕರೆಸಿ ವಿಚಾರಿಸಿದರು. ಅವರುಗಳು ಭಯದಿಂದ ಯಾವ ಸಮಾಚಾರಗಳನ್ನೂ ತಿಳಿಸಲಿಲ್ಲ. ಮಂತ್ರಿಗಳ ಕುತೂಹಲವು ಮತ್ತೂ ಅಧಿಕವಾಯಿತು. ಅವರು ಬಾಗಿಲುಗಳನ್ನು ತೆರೆಸಿ ಆ ಅಂತಃ

ಪುರದೊಳಗೆ ಪ್ರವೇಶಮಾಡಿದರು. ಅವರನ್ನು ನೋಡುತ್ತಲೇ ರಾಜ ಸ್ತ್ರೀಯೊಬ್ಬಳು ಎದುರಿಗೆ ಬಂದು ನಿಂತಳು. ಅವಳನ್ನು ಮಂತ್ರಿಗಳು ಅನೇಕ ಪ್ರಶ್ನೆಗಳಿಂದ ಮಾತನಾಡಿಸಿದರು. ಅವಳು ಮಾತನಾಡಲು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಂತ್ರಿಗಳು ಕರುಣೆಯಿಂದ ಆಕೆಗೆ ಧೈರ್ಯವನ್ನು ಹೇಳುತ್ತಾ ತಾವು ಮಹಾಮಂತ್ರಿಗಳಾದ ರಾಮಕೃಷ್ಣ ರೆಂದೂ, ತಮ್ಮಲ್ಲಿ ಏನು ಹೇಳಿದರೂ ಭಯವಿಲ್ಲವೆಂದೂ ಅರುಹಿದಳು. ಆ ರಾಜಸ್ತ್ರೀಯು ರಾಮಕೃಷ್ಣರ ಹೆಸರು ಕೇಳುತ್ತಲೇ ಅವಳ ಮೈಯ್ಯೆ ಲ್ಲವೂ ರೋಮಾಂಚನವಾಯಿತು. ತಕ್ಷಣ ನೆಲದಮೇಲೆ ಬಿದ್ದು ನಮಸ್ಕರಿಸಿದಳು. ರಾಮಕೃಷ್ಣರನ್ನು ಆಸನದಮೇಲೆ ಕುಳಿತುಕೊಳ್ಳು ವಂತೆ ಪ್ರಾರ್ಥನೆಮಾಡಿದಳು. ರಾಮಕೃಷ್ಣರವರು ನೀರವವಾಗಿ ಕುಳಿತುಬಿಟ್ಟರು. ಆ ರಾಜಸ್ತ್ರೀಯು ಪುನಃ ನಮಸ್ಕರಿಸಿ ತಾನು ಯುವ ರಾಣಿಯೆಂದೂ, ಇಲ್ಲಿ ಬಂಧನದಲ್ಲಿ ಇಡಲ್ಪಟ್ಟಿದ್ದಾಳೆಂದೂ, ಊಟ ಉಪ ಚಾರಗಳಿಗೂ, ದೇವರ ಪೂಜೆಗೂ ಬೇಕಾದ ಅನುಕೂಲಗಳು ಇವೆ ಯೆಂದೂ ತಿಳಿಸಿದಳು. ತಾನು ಇಲ್ಲಿರುವ ನಾಲ್ವರು ಪರಿಜನರು ಹೊರತಾಗಿ ಮತ್ತಾವ ಮನುಷ್ಯರ ಮುಖವನ್ನು ಕಂಡಿಲ್ಲವೆಂದೂ ಅಳುತ್ತಾ ಅರುಹಿದಳು. ನಿಧಾನವಾಗಿ ಯುವರಾಜರವರ ಕೊಲೆಪಾತ ಕದ ಕಥೆಯನ್ನು ಅರ್ಧಅರ್ಧ ಮಾತುಗಳಿಂದ ತಿಳಿಸಿದಳು. ಉಳಿದ ಕಥೆಯನ್ನು ಅಳುವಿನಿಂದ ಪೂರೈಸಿದಳು. ಬಿದನೂರಿನ ಅರಮನೆಗೆ ಕರೆದುಕೊಂಡು ಹೋದುದು ತನಗೆ ನೆನಪಿದೆಯೆಂದೂ, ಅಂದು ರಾಣಿ ಯವರ ಸಂಮುಖದಲ್ಲಿ ನಿಲ್ಲಿಸಲ್ಪಟ್ಟಿದ್ದುದು ಸ್ವಪ್ನದಂತೆ ನೆನಪಿದೆ ಯೆಂದೂ ಹೇಳಿದಳು. ಆ ಅರಮನೆಯಲ್ಲಿಯೇ ಬಂಧನದಲ್ಲಿ ಇಡಲ್ಪಟ್ಟಿ ದ್ದುದು ನೆನಪಿದೆಯೆಂದೂ ಈ ಅರಮನೆಗೆ ಹೇಗೆ ಕರೆತಂದರೋ ನನಗೆ ಸ್ಮರಣೆ ಇಲ್ಲವೆಂದೂ ವಿವರಿಸಿದಳು. ಒಂದಾನೊಂದು ಕಾಲದಲ್ಲಿ ಈ ಅರಮನೆಯಲ್ಲಿ ಯುವರಾಜರೊಡನೆ ತಾನು ಸುಖದಿಂದ ಇದ್ದ ನೆನಪು ಗಳು ಇವೆಯೆಂದು ಹೇಳಿ ಅಳಲಾರಂಭಿಸಿದಳು. ರಾಮಕೃಷ್ಣರ ಕಣ್ಣು ಗಳಲ್ಲಿಯೂ ಹನಿ ಇಕ್ಕಿದವು. ಅವರು ಯುವರಾಜರವರು ಹೇಗೆ

ಸತ್ತರೆಂಬ ಕಥೆಯನ್ನು ಇಂದೇ ಇಷ್ಟು ಪ್ರತ್ಯಕ್ಷಪ್ರಮಾಣದಿಂದ ಕೇಳಿದ್ದು. ರಾಮಕೃಷ್ಣರು ಬಹಳಹೊತ್ತು ಸುಮ್ಮನಿದ್ದು "ತಾಯೇ, ಯುವ ರಾಣಿಯವರೇ, ಚಿನ್ನಬಸಪ್ಪನಾಯಕರು ಬದುಕಿರುವರೆಂದು ಕೇಳಿದ್ದೇನೆ. ಹೈದರಾಲಿಯವರ ಸೈನ್ಯದಲ್ಲಿ ಇದ್ದಾರೆಂದೂ ಗುಪ್ತಚಾರರು ಹೇಳುತ್ತಾರೆ" ಎಂದು ಮೃದು ಧ್ವನಿಯಿಂದ ಹೇಳಿದರು.

ಮಲ್ಲಿಗಮ್ಮನು "ಸುಳ್ಳು, ಸುಳ್ಳು! ಯುವರಾಜರು ಅಂದೇ ಸತ್ತುಹೋದರು. ನನ್ನ ಕಣ್ಣೆದುರಿಗೇ ರುಂಡಮುಂಡಗಳು ಕಳಚಿಬಿದ್ದವು. ನನ್ನ ಕಣ್ಣುಗಳು ಸಾಕ್ಷಿ" ಎಂದು ಘಟ್ಟಿಯಾಗಿ ಚೀರುತ್ತಾ ಮೈ ಸೆಟೆತುಕೊಂಡು ನೆಲದಮೇಲೆ ಬಿದ್ದಳು. ಪರಿಚಾರಕೆಯರು ಓಡಿಬಂದು ಉಪಚರಿಸಿದರು. ಮಂತ್ರಿಗಳು ಗಾಬರಿಯಿಂದ "ಇದೇಕೆ ಹೀಗಾಗುತ್ತದೆ?" ಎಂದು ಕೇಳಿದರು. ಪರಿಚಾರಿಕೆಯರು ಆಗಾಗ ಈ ಯುವರಾಣಿಯವರು ಹೀಗೆ ಕೂಗುತ್ತಾರೆಂದೂ, ಕೊನೆಯಲ್ಲಿ ಮೂರ್ಛಿತರಾಗುತ್ತಾರೆಂದೂ, ಈ ಉದ್ರೇಕದ ಸಮಯದಲ್ಲಿ ಇವರ ಹುಚ್ಚು ಮೇರೆ ಮೀರುತ್ತದೆಂದೂ, ಮೂರ್ಛೆಹೋಗಿ ಏಳುವವರೆಗೆ ಸತ್ತುಹೋಗಿರುವಂತೆ ತಮಗೆ ಭಾಸವಾಗುತ್ತದೆಂದೂ ತಿಳಿಸಿದರು.

ಮಂತ್ರಿ ರಾಮಕೃಷ್ಣರು ಸುಮ್ಮನೆ ಆಲೋಚನೆಮಾಡುತ್ತಾ ಕುಳಿತುಕೊಂಡರು. ಸ್ವಲ್ಪ ಹೊತ್ತಿನೊಳಗಾಗಿ ಮಲ್ಲಿಗಮ್ಮನಿಗೆ ಜ್ಞಾನಬಂದಿತು. ಮಂತ್ರಿಗಳು ಸಮಾಧಾನೋಕ್ತಿಗಳನ್ನು ನುಡಿದು "ನಿಮಗೇನುಬೇಕು?" ಎಂದು ಯುವರಾಣಿಯವರನ್ನು ಕೇಳಿದರು. ಮಲ್ಲಿಗಮ್ಮನು "ನನಗೇನೂ ಬೇಡ. ಸತ್ತವರನ್ನು ತಂದುಕೊಡಬಲ್ಲವರಾರು? ನನ್ನನ್ನು ಈ ಬಂಧನದಿಂದ ಬಿಡಿಸಿಬಿಡಿರಿ" ಎಂದಳು. ಮಂತ್ರಿಗಳು "ರಾಣಿಯವರೇ ನೀವೆಲ್ಲಿಗೆ ಹೋಗುವಿರಿ?" ಎಂದು ಕೇಳಿದರು. ಮಲ್ಲಿಗಮ್ಮನು ಹುಚ್ಚು ನಗುವನ್ನು ನಕ್ಕು, "ಎಲ್ಲಿಗೆ ಬೇಕಾದರೂ ಹೋಗುವೆ. ಹುಚ್ಚಳಂತೆ ಬೀದಿಯಲ್ಲಿ ಅಲೆಯುವೆ. ಭಿಕಾರಿಣಿಯಂತೆ ಭಿಕ್ಷೆಬೇಡಿ ತಿನ್ನುವೆ. ಸ್ಮಶಾನದಲ್ಲಿ ಹುಡುಕಿ ನನ್ನ ಪತಿದೇವನ ಶರೀರವನ್ನು ಪತ್ತೆಹಚ್ಚುವೆನು. ಅದಕ್ಕಾಗಿ ಸ್ಮಶಾನಗಳಲ್ಲಿ

ಆಲೆದಾಡುವೆ. ತಾವು ಕೃಪೆಯಿಟ್ಟು ನನ್ನನ್ನು ಬಿಡುಗಡೆಮಾಡಿರಿ" ಎಂದು ಅಳಲಾರಂಭಿಸಿದಳು. ರಾಮಕೃಷ್ಣರವರು ಏನೊಂದು ಮಾತನ್ನೂ ಉಸುರದೆ ಪಲ್ಲಕ್ಕಿಯನ್ನು ತರಿಸಿ ಯುವರಾಣಿಯನ್ನು ಅದರಲ್ಲಿ ಕೂಡಿಸಿ ಬಿದನೂರಿನಲ್ಲಿದ್ದ ತಮ್ಮ ವಾಸಸ್ಥಾನಕ್ಕೆ ಕಳುಹಿಸಿಕೊಟ್ಟರು. ಸೂರ್ಯೋದಯದೊಳಗಾಗಿ ಯುವರಾಣಿಯು ಮಂತ್ರಿಗಳ ಮಹಲಿನಲ್ಲಿದ್ದಳು. ಮಂತ್ರಿಗಳು ಹಿಂತಿರುಗಿ ತಮ್ಮ ಮನೆಗೆ ಬರುವ ಹೊತ್ತಿಗೆ ಮಧ್ಯಾಹ್ನ ಮೂರು ಘಂಟೆಯ ಹೊತ್ತಾಗಿದ್ದಿತು. ಮಂತ್ರಿಗಳ ಮನೆಯ ಒಳಗೆ ಈ ಹೊಸ ಹೆಂಗಸಾರೆಂದು ಗೊತ್ತಾಗಿರಲಿಲ್ಲ. ಮಲ್ಲಿಗಮ್ಮನು ಅಳುತ್ತಲೇ ಇದ್ದಳು. ರಾಮಕೃಷ್ಣರವರ ಧರ್ಮಪತ್ನಿಯವರಿಗೆ ಇವಳನ್ನು ಸಂತೈಸಲು ಅಸಾಧ್ಯವಾಗಿದ್ದಿತು. ಬಲುಪ್ರಯಾಸದಿಂದ ಅವಳಿಗೆ ಸ್ನಾನಾದಿಗಳನ್ನು ಮಾಡಿಸಿದರು. ಉಪಚರಿಸಿ ಬಲಾತ್ಕರಿಸಿ ಆಹಾರವನ್ನು ತಿನಿಸಿದರು. ರಾಮಕೃಷ್ಣರವರು ಮನೆಗೆ ಬರುತ್ತಲೇ ಆಕೆಯ ಯೋಗಕ್ಷೇಮಗಳನ್ನು ವಿಚಾರಿಸಿದರು. ಆಕೆಯ ಕಥೆಯನ್ನೆಲ್ಲಾ ತಮ್ಮ ಪತ್ನಿಯವರೊಂದಿಗೆ ಸಂಗ್ರಹವಾಗಿ ತಿಳಿಸಿದರು. ಅವರು ಸ್ನಾನಾಹ್ನಿಕಗಳನ್ನು ಪೂರೈಸಿ ಭೋಜನಮಾಡುವ ಹೊತ್ತಿಗೆ ಸಂಧ್ಯಾ ಕಾಲವು ಸಮೀಪಿಸುತ್ತಲಿದ್ದಿತು. ಅವರು ಭೋಜನೋತ್ತರ ಅಂತಃಪುರ ದಲ್ಲಿದ್ದ ಮಲ್ಲಿಗಮ್ಮನಿಗೆ ದರ್ಶನವಿತ್ತರು. ತಾವು ಬಂಧನದಲ್ಲಿದ್ದರೆಂದೂ ಈ ರಾಜ್ಯದಲ್ಲಿ ಇದ್ದಿದ್ದರೆ ಇಂಥಾ ದುರಂತಪ್ರಸಂಗವು ನಡೆಯುತ್ತಿರಲಿಲ್ಲ ವೆಂದೂ ಮಲ್ಲಿಗಮ್ಮನಿಗೆ ಸಂಗ್ರಹವಾಗಿ ತಿಳಿಸಿದರು. ಮಲ್ಲಿಗಮ್ಮನು ಮಂತ್ರಿಗಳೊಡನೆ ತಾನು ಸ್ವತಂತ್ರವಾಗಿ ಎಲ್ಲಿಗಾದರೂ ಹೊರಟು ಹೋಗಲು ಅಪ್ಪಣೆಯನ್ನು ಬೇಡಿದಳು. ಮಂತ್ರಿಗಳು "ಯುವರಾಣಿ ಯವರೇ, ತಾವು ಈಗ ಸರ್ವ ಸ್ವತಂತ್ರರಾಗಿದ್ದೀರಿ. ನಗರದಲ್ಲಿ ಮಹಾ ಯುದ್ಧವು ಪ್ರಾಪ್ತವಾಗಿದೆ. ತಾವು ಹೊರಗೆ ಓಡಾಡುವುದು ಯುಕ್ತವಲ್ಲ. ಅಡಿಗಡಿಗೂ ಅಪಾಯಗಳುಂಟು. ತಮ್ಮನ್ನು ನನ್ನ ಮಗಳಂತೆ ರಕ್ಷಿಸುತ್ತೇನೆ. ಯುದ್ಧಾನಂತರ ತಕ್ಕ ವ್ಯವಸ್ಥೆಮಾಡಿಸುತ್ತೇನೆ" ಎಂದು ಹೇಳಿದರು.

ಮಲ್ಲಿಗಮ್ಮನು, "ಮಂತ್ರಿಗಳೇ ನಾನು ಈ ದೊಡ್ಡ ಕುಟುಂಬದಲ್ಲಿ ಇರುವುದುಯುಕ್ತವಲ್ಲ. ನಾನು ಸದಾ ದುಃಖಿನಿ. ನನ್ನ ದುಃಖೋದ್ವೇಗದಲ್ಲಿ ಹುಚ್ಚಿಯಾದಂತಾಗುತ್ತೇನೆ. ದುಃಖದ ಆವೇಶವು ಮೀರಿದಾಗ ಮೂರ್ಛಿತಳಾಗುತ್ತೇನೆ. ನನ್ನ ಪರಿಚಾರಿಕೆಯರು ನನಗೆ ಹುಚ್ಚು, ಅಪಸ್ಮಾರ ಎಂದು ಮಾತನಾಡಿಕೊಂಡುದನ್ನು ಅಪ್ರತ್ಯಕ್ಷವಾಗಿ ಕೇಳಿದ್ದೇನೆ. ನಾನು ಇಂಥಾ ತುಂಬಿದ ಸಂಸಾರದಲ್ಲಿ ಇರಬಾರದು. ನನಗೆ ಹೀಗಿರುವುದೂ ಮನವೊಪ್ಪುವುದಿಲ್ಲ. ಎಲ್ಲೆಲ್ಲಿಯೂ ವಿಶಾಲ ಪ್ರಪಂಚದಲ್ಲಿ ಅಲೆದಾಡಬೇಕೆನ್ನಿಸುತ್ತದೆ" ಎಂದಳು.

ಮಂತ್ರಿಗಳು ಎಷ್ಟೋ ವಿಧವಾಗಿ ಸಮಾಧಾನಗಳನ್ನು ಹೇಳಿ ಮಲ್ಲಿಗಮ್ಮನನ್ನು ತಮ್ಮ ಮನೆಯಲ್ಲಿರಲು ಒಪ್ಪಿಸಿದರು. ನಗರದಲ್ಲಿ ಎಲ್ಲೆಲ್ಲಿಯೂ ಯುದ್ಧದ ಸಡಗರಗಳೇ ನಡೆಯುತ್ತಿದ್ದವು. ಮಹಾರಾಣಿ ಚೆಲುವಮ್ಮಣ್ಣಿಯವರು ಸ್ಥೈರ್ಯಗಾಂಭೀರ್ಯಗಳಿಂದ ಇದ್ದರು. ಅವರ ಮನೋವೃತ್ತಿಯೇ ಯಾರಿಗೂ ತಿಳಿಯುತ್ತಿರಲಿಲ್ಲ. ರಾಜ್ಯಾಡಳಿತವೂ ಯುದ್ಧದ ಭಾರವೂ ರಾಮಕೃಷ್ಣರವರ ಮೇಲೆ ಇದ್ದಿತು. ರಾಣಿಯವರು ಪ್ರತಿದಿನವೂ ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಚಂಡೀಶಾಲೆಗೆ ಹೋಗಿ ಅಲ್ಲಿ ನಡೆಯುತ್ತಿದ್ದ ಜಪ ಹೋಮಾದಿಗಳನ್ನು ನೋಡಿ ಬ್ರಾಹ್ಮಣವೃಂದವನ್ನು ಸಂದರ್ಶಿಸಿ ಅಭಿರಾಮಸ್ವಾಮಿಗಳವರ ಆಶೀರ್ವಾದವನ್ನು ಪಡೆದು ಬರುತ್ತಿದ್ದರು. ಈ ನಡುವೆ ಮಲ್ಲಿಗಮ್ಮನನ್ನು ಮಂತ್ರಿಗಳು ಭೇಟಿಮಾಡಿದ ವಿಚಾರ, ಅವಳನ್ನು ಮಂತ್ರಿಗಳು ಆವಾಸಸ್ಥಾನಕ್ಕೆ ಕರೆತಂದಿರುವ ವಿಚಾರ ಇವುಗಳೆಲ್ಲವೂ ರಾಣಿಯವರಿಗೆ ವರದಿಯಾಗಿದ್ದಿತು. ಅದರಿಂದ ರಾಣಿಯವರು ಉದ್ವಿಗ್ನರಾಗಲಿಲ್ಲ. ಏತಕ್ಕೆಂದರೆ ಅವರು ಯುದ್ಧವೆಲ್ಲಾ ಪೂರೈಸಿದ ನಂತರ ಯುವರಾಜರ ಕೊಲೆಯು ಅಚಾತುರ್ಯದಿಂದ ನಡೆದುದೆಂದೂ ಅದರ ಕಥೆಯನ್ನು ಸವಿಸ್ತಾರವಾಗಿ ಹೇಳಿ ಆ ಪಾಪವೆಲ್ಲವೂ ತಮಗೆ ಸೇರಿದ್ದೆಂದೂ ಮಂತ್ರಿಗಳಲ್ಲಿ ಒಪ್ಪಿಕೊಳ್ಳಬೇಕೆಂದು ಸ್ಥಿರಮಾಡಿದ್ದರು. ಅಷ್ಟೇ ಅಲ್ಲ. ಒಬ್ಬ ರಾಜವಂಶೀಯ ಕುಮಾರನನ್ನು ಹುಡುಕಿ

ಯುವರಾಣಿಗೆ ದತ್ತುಕೊಡಿಸಿ ಈ ರಾಜ್ಯದ ಪಟ್ಟವನ್ನು ಆ ಹುಡುಗನಿಗೆ ಕಟ್ಟಿಸಬೇಕೆಂದು ಸಂಕಲ್ಪಿಸಿದ್ದರು. ಪ್ರಪಂಚದ ರೀತಿಯೇ ಹೀಗೆ. ಜನರೆಲ್ಲರೂ ಯಾರನ್ನು ಮಹಾಪಾಪಿಗಳೆಂದು ಕರೆಯುತ್ತಾರೆಯೋ ಅವರ ಹೃದಯದಲ್ಲಿ ಸದ್ವಿಷಯಗಳೂ ಸದ್ಭಾವನೆಗಳೂ ಉದಯಿಸುತ್ತಿರುತ್ತವೆ. ಇದನ್ನೆಲ್ಲಾ ವಿವೇಚನೆಮಾಡಿ ನೋಡಿದರೆ ಯಾರು ಪುಣ್ಯವಂತರು, ಯಾರು ಪಾಪಿಗಳು ಎಂದು ನಿರ್ಧರಿಸಿ ಹೇಳಬಲ್ಲವರಾರು? ಪುಣ್ಯಪಾಪಗಳ ಜಗತ್ತು ಜಟಿಲವಾಗಿದೆ ಮತ್ತು ವಿಚಿತ್ರವಾಗಿದೆ. ಪುಣ್ಯವಂತರೆಂದು ಪ್ರಪಂಚದಲ್ಲೆಲ್ಲಾ ಹೊಗಳಿಸಿಕೊಳ್ಳುತ್ತಿರುವ ಮಹನೀಯರು ಇತರರ ಪಾಪಗಳನ್ನು ಹುಡುಕುತ್ತಾ ಪಾಪಮಾರ್ಗಗಳಲ್ಲಿ ಮನಸ್ಸನ್ನು ಓಡಿಸುತ್ತಾ ಪುಣ್ಯಕರ್ಮಗಳನ್ನು ಅನುಷ್ಠಾನ ಮಾಡುತ್ತಾ ಇರುವುದನ್ನೇ ಕಾಣುತ್ತಿದ್ದೇವೆ. ಮಹಾಪಾಪಿಗಳೆಂದು ದೂಷಣೆಗೆ ಗುರಿಯಾಗಿರುವವರ ಮನಸ್ಸಿನಲ್ಲಿ ಪುಣ್ಯದ ಕಿರಣಗಳು ಪ್ರಕಾಶಮಾನವಾಗುವುದು ಯಾರಿಗೂ ಗೋಚರವಾಗುವುದಿಲ್ಲ. ಇದೇ ಪುಣ್ಯಪಾಪಗಳ ಸಮಸ್ಯೆ. ಆದುದರಿಂದಲೇ ಮಹಾಪುರುಷರು ಪುಣ್ಯಪಾಪಗಳ ಸ್ಮರಣೆಯನ್ನು ಕೂಡಾ ಮಾಡುವುದಿಲ್ಲ.

ನಗರದರಾಣಿಯ ಮನಸ್ಸು ಪ್ರಸನ್ನಭಾವದಿಂದ ಇದ್ದಿತೆಂದು ಹೇಳಲಾಗುವುದಿಲ್ಲ. ಆದರೆ ಅವಳ ಮನಸ್ಸಿನಲ್ಲಿ ದುಃಖದ ಛಾಯೆಯೇ ಇರಲಿಲ್ಲ. ಗಾಂಭೀರ್ಯವಿದ್ದಿತು. ಕಾಠಿಣ್ಯವಿದ್ದಿತು. ಈ ಯುದ್ಧದಲ್ಲಿ ನಗರಕ್ಕೆ ಸೋಲಾಗುವುದಿಲ್ಲವೆಂದು ದೃಢನಂಬಿಕೆಯಿದ್ದಿತು. ಭೈರವಿಯು ರಾಜಧಾನಿಯ ಸುತ್ತುಮುತ್ತಲೂ ಅಲೆದಾಡುತ್ತಿದ್ದಾಳೆಂದೂ, ತೋರಿದಂತೆ ಮಾತನಾಡುತ್ತಿದ್ದಾಳೆಂದೂ ಸಮಾಚಾರವನ್ನು ಕೇಳಿದ್ದಳು. ಹೈದರನಿಗೇ ಜಯವಾಗುತ್ತದೆಂದು ಭೈರವಿಯು ಎಷ್ಟೋ ಸ್ಥಳಗಳಲ್ಲಿ ಬಹಿರಂಗವಾಗಿ ವಾದಿಸುತ್ತಿದ್ದಾಳೆಂದು ಅವಳಿಗೆ ಸಮಾಚಾರವು ಮುಟ್ಟಿದ್ದಿತು. ಇದರಿಂದ ರಾಣಿಯ ಮನಸ್ಸು ಕೊಂಚವೂ ಚಲಿಸಿರಲಿಲ್ಲ. ಆದರೆ ಒಂದುಭಾರಿ ಆ ಭೈರವಿಯನ್ನು ಕಂಡು ಮಾತನಾಡಬೇಕೆಂದು ರಾಣಿಯ ಮನಸ್ಸು ಬಯಸುತ್ತಿದ್ದಿತು. ತಾನಾಗಿ ಭೈರವಿಯನ್ನು

ಕರೆಸುವುದೇ? ಅವಳಾಗಿ ಬರುವಳೇ ಎಂಬ ಅಂಶದಲ್ಲಿ ರಾಣಿಯ ಮನಸ್ಸು ಡೋಲಾಯಮಾನವಾಗಿದ್ದಿತು.

ಅದೇದಿನ ಸಂಧ್ಯಾಕಾಲದಲ್ಲಿ ರಾಣಿಯು ಮಲ್ಲಿಕಾರ್ಜುನಕ್ಷೇತ್ರ ದಿಂದ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ಹಿಂತಿರುಗಿ ಬರುತ್ತಿರುವಾಗ ಭೈರವಿಯು ಹಿಂಬಾಲಿಸಿ ಬಂದಳು. ಮಹಾರಾಣಿಯ ಪಲ್ಲಕ್ಕಿಯು ಅಂತಃಪುರದ ಬಾಗಿಲಿನಲ್ಲಿ ಇಳಿಯಿತು. ರಾಣಿಯವರು ಪಲ್ಲಕ್ಕಿಯಿಂದ ಹೊರಗೆ ಇಳಿಯುವಾಗ ಎದುರಿಗೆ ಭೈರವಿಯು ನಿಂತಿರುವುದನ್ನು ಕಂಡರು. ರಾಣಿಯವರ ಮುಖದಲ್ಲಿ ಕಿರುನಗೆಯು ಬೆಳಗಿತು. ಅದೇ ಸ್ನೇಹಮಯವಾದ ದೃಷ್ಟಿಗಳಿಂದ ಭೈರವಿಯನ್ನು ನೋಡಿದರು. ಅದೇ ಮಧುರಧ್ವನಿಯಿಂದ ಭೈರವಿಯನ್ನು ಮಾತನಾಡಿಸಿದರು. "ಗಿರಿಜೆ, ಇಷ್ಟು ದಿನಗಳು ಎಲ್ಲಿ ಮಾಯವಾಗಿ ಹೋಗಿದ್ದೆ. ನೀನೇಕೆ ಅರಮನೆಗೆ ಬರಲಿಲ್ಲ?" ಎಂದು ಪ್ರಶ್ನೆಮಾಡಿದರು.

ಭೈರವಿಯು "ರಾಣಿಯವರೇ, ನಾನು ಗಿರಿಜೆಯಲ್ಲ. ಆ ಗಿರಿಜೆಯು ಸತ್ತು ಸುಟ್ಟು ಬೂದಿಯಾಗಿಹೋದಳು! ಈಗ ನಿಮ್ಮ ಮುಂದೆ ನಿಂತಿರು ವವಳು ಉನ್ಮತ್ತಭೈರವಿ! ರಾಜದ್ರೋಹಿ! ಧರ್ಮಭ್ರಷ್ಟಳು! ಪಾಪಿ!" ಹೀಗೆ ಹುಚ್ಚುಹುಚ್ಚಾಗಿ ಮಾತನಾಡತೊಡಗಿದಳು.

ರಾಣಿಯವರು ವಿಷಣ್ಣವದನರಾಗಿ ಅಂತಃಪುರದೊಳಗೆ ಹೊರಟು ಹೋದರು. ಹೋಗಿ ಪರಿಚಾರಕಳೊಬ್ಬಳನ್ನು ಕರೆದು ಆ ಭೈರವಿ ಯನ್ನು ಅಂತರ್ಗೃಹದೊಳಕ್ಕೆ ಕರೆತರುವಂತೆ ಅಪ್ಪಣೆಮಾಡಿದರು.

ಭೈರವಿಯು ರಾಣಿಯ ಅಂತರ್ಗೃಹವನ್ನು ಪ್ರವೇಶಿಸುವಾಗ ರಾಣಿಯ ಕಣ್ಣುಗಳಲ್ಲಿ ಧಾರಾಕಾರವಾಗಿ ಕಂಬನಿ ಸುರಿಯುತ್ತಿದ್ದಿತು. ಇದನ್ನು ನೋಡಿ ಭೈರವಿಯು ನಗುತ್ತಾ ಮಾತನಾಡಿದಳು. "ರಾಣಿಯ ವರೇ, ಈಗ ಸರಿಯಾಗಿದೆ. ನೀವು ಅಳುತ್ತಿದ್ದರೆ ನಾನು ನಗುತ್ತಿರು ತ್ತೇನೆ" ಎಂದು ನಕ್ಕಳು. ರಾಣಿಯು ಸಣ್ಣದನಿಯಿಂದ "ಗಿರಿಜೆ, ನಿನಗೆ ನನ್ನಮೇಲೆ ಅಷ್ಟು ದ್ವೇಷವಿದೆಯೇ" ಎಂದು ಕೇಳಿದಳು.

ಭೈರವಿಯು ರಾಣಿಯ ಸಮಿಸಾಪಕ್ಕೆ ಬಂದು ಪರ್ಯಂಕದಮೇಲೆ

ಕುಳಿತುಕೊಂಡು ಹೇಳತೊಡಗಿದಳು. "ರಾಣಿಯವರೇ, ನನಗೆ ದ್ವೇಷ ವಿಲ್ಲ! ಆದರೆ ಕೋಪವಿದೆ! ಛಲವಿದೆ!" ಎಂದು ಹೇಳಿದಳು.

ರಾಣಿಯು "ಏಕೆ ನನ್ನ ಮೇಲೆ ಕೋಪ ಗಿರಿಜೆ. ನಾನು ನಿನ್ನನ್ನು ಯಾವಾಗಲೂ ಸೋದರಿಯಂತೆ ಪ್ರೀತಿಸುತ್ತೇನೆ. ನಿನಗೆಲ್ಲಿಂದ ಈ ಕೋಪದ ಪಿಶಾಚಿಯು ಹಿಡಿಯಿತು" ಎಂದಳು.

ಭೈರವಿಯು "ರಾಣಿಯವರೇ ಆ ಪಿಶಾಚಿಯು ನಿಮ್ಮಿಂದಲೇ ನನ್ನನ್ನು ಹಿಡಿದಿದೆ. ನಾವಿಬ್ಬರೂ ಸೋದರಿಯರಂತೆ ಇದ್ದುದೇ ಈ ಅನರ್ಥಕ್ಕೆ ಕಾರಣವಾಯಿತು" ಎಂದಳು.

ರಾಣಿಯು ಭೈರವಿಯನ್ನು ಸಂತೈಸುತ್ತಾ ಕೈಹಿಡಿದುಕೊಂಡು ತಲೆಸವರುತ್ತಾ, "ಗಿರಿಜೆ, ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ಹೇಳು. ನಾನು ಮಾಡಿಕೊಡುತ್ತೇನೆ" ಎಂದಳು.

ಭೈರವಿಯು "ಹೇಳುತ್ತೇನೆ ಕೇಳಿರಿ ರಾಣಿಯವರೇ, ಇನ್ನು ಹೆಚ್ಚು ಸಮಯವು ಉಳಿದಿಲ್ಲ. ಈ ನಗರದಲ್ಲಿ ಭಗವದಿಚ್ಛೆಯಿಂದ ಅನರ್ಥಪರಂಪರೆಗಳು ಜರುಗುತ್ತಿವೆ. ಮೊದಲಿನ ಅನರ್ಥಗಳೆಲ್ಲಾ ನಿಮ್ಮಿಂದ ನಡೆದುವು. ಈಗಿನ ಅನರ್ಥಗಳೆಲ್ಲಾ ನನ್ನಿಂದ ನಡೆಯು ತ್ತಿವೆ. ಮುಂದಿನ ಅನರ್ಥಗಳು ನಮ್ಮಿಬ್ಬರ ಕರ್ಮಫಲವಾಗಿ ಈಶ್ವರ ನಿಂದ ನಡೆಸಲ್ಪಡುತ್ತವೆ. ರಾಣಿಯವರೇ, ನಾನು ಶ್ರೀರಂಗಪಟ್ಟಣಕ್ಕೆ ಹೋಗಿ ಹೈದರಾಲಿಯವರನ್ನು ಉತ್ತೇಜನಗೊಳಿಸಿ, ಈ ನಗರದಮೇಲೆ ಮಹಾಸೈನ್ಯಸಮೇತರಾಗಿ ಅವರು ಯುದ್ಧಕ್ಕೆ ಬರುವಂತೆ ಮಾಡಿದ್ದೇನೆ. ಈಗ ನಗರದ ರಾಜ್ಯದಲ್ಲಿ ಮಹಾಯುದ್ಧವು ನಡೆಯುತ್ತಿದೆ. ಈಗ ನೀವೇನು ಮಾಡುವಿರಿ ? ಇದ್ದದ್ದನ್ನು ಇದ್ದಹಾಗೆ ನಿಮಗೆ ಹೇಳಿದ್ದೇನೆ. ನನ್ನನ್ನು ಬಂದೀಖಾನೆಯಲ್ಲಿಡುವಿರಾ? ಅದು ಫಲವಿಲ್ಲ. ನಿಮಗೆ ಇನ್ನು ನಾಲ್ಕೈದು ದಿವಸಗಳಿಗಿಂತಲೂ ಹೆಚ್ಚು ಅವಕಾಶವಿಲ್ಲ. ನಿಮ್ಮ ರಾಜ್ಯಾಧಿಕಾರವು ಅಷ್ಟರೊಳಗಾಗಿ ಮಣ್ಣುಪಾಲಾಗುತ್ತದೆ. ನನಗೆ ಮತ್ತಾವ ಶಿಕ್ಷೆಯನ್ನು ವಿಧಿಸುತ್ತೀರಿ ? ವಿಷವನ್ನು ಕುಡಿಸುತ್ತೀರಾ ? ಅದಕ್ಕೆ ನೀವು ಕಷ್ಟಪಡಬೇಕಾಗಿಲ್ಲ. ನನ್ನ ಈ ಜೋಳಿಗೆಯಲ್ಲಿ

ಭಯಂಕರವಾದ ವಿಷದ ಗುಳಿಗೆಗಳಿವೆ. ಅಥವಾ ಕೊಲೆಗಡುಕರಿಂದ ನನ್ನನ್ನು ಕಡಿಸಿಹಾಕುತ್ತೀರಾ? ನನ್ನ ಮೈಮೇಲೆ ಬೀಳುವ ಪ್ರತಿಯೊಂದು ಕತ್ತಿಯಪೆಟ್ಟಿಗೂ ಹರ್ಷವನ್ನು ಸೂಸುತ್ತಾ ಪ್ರಾಣಬಿಡುತ್ತೇನೆ. ಅಥವಾ ಈ ಅರಮನೆಯ ಎದುರಿನಲ್ಲಿ ಗಲ್ಲಿನಮರವನ್ನು ಕಟ್ಟಿಸಿ ಬಹಿರಂಗವಾಗಿ ನನ್ನನ್ನು ಗಲ್ಲಿಗೇರಿಸಿರಿ. ಅದೊಂದು ಪಾತಕವು ನಿಮಗೆ ಕೊರತೆಯಾಗಿದೆ. ಸ್ತ್ರೀಹತ್ಯ! ಭಯಂಕರವಾದ ಸ್ತ್ರೀಹತ್ಯವು ನಿಮಗೆ ಬರುತ್ತದೆ. ಆಗ ನಿಮ್ಮ ಪಾಪದ ಭಾಂಡವು ತುಂಬುತ್ತದೆ" ಎಂದು ಅಳತೊಡಗಿದಳು.

ರಾಣಿಯು ಭೈರವಿಯನ್ನು ಸಂತೈಸುತ್ತಾ, "ಗಿರಿಜೆ, ಸಮಾಧಾನ ಮಾಡಿಕೋ, ನೀನೇಕೆ ಇಷ್ಟು ಉದ್ವಿಗ್ನಳಾಗಿರುವೆ. ನಿನ್ನನ್ನು ಕೊಲ್ಲಿಸಿದರೆ ನನಗೆ ಬರುವ ಭಾಗ್ಯವೇನು? ನೀನು ಸಂಧಾನಮಾಡಿ ಹೈದರನನ್ನು ಕರೆತಂದಿರುವುದಾಗಿ ಹೇಳುತ್ತಿರುವೆ. ಹತ್ತು, ಹದಿನೈದುವರ್ಷಗಳಿಂದಲೂ ಹೈದರನು ಈ ರಾಜ್ಯವನ್ನು ಕಬಳಿಸಬೇಕೆಂದು ಆತುರಗೊಳ್ಳುತ್ತಿರುವನು. ಇಂದು ನಗರದಲ್ಲಿ ಎಷ್ಟು ಶಕ್ತಿಯಿದೆಯೋ ಅಷ್ಟೂ ಅವ್ಯಾಹತವಾಗಿ ರಣಕ್ಷೇತ್ರದಲ್ಲಿ ನಿಂತಿದೆ. ಇಂದು ನಗರವು ಹೈದರನನ್ನು ಜಯಿಸಿದರೆ ಸಮಗ್ರ ದಕ್ಷಿಣದೇಶವು ಮಲ್ಲಿಕಾರ್ಜುನನ ಕಾಣಿಕೆಯಾಗುತ್ತದೆ. ಒಂದುಪಕ್ಷ ನಗರವು ಸೋತರೆ ಅಲ್ಲಿಗೆ ಈ ರಾಜ್ಯವು ಮುಕ್ತಾಯವಾಗುತ್ತದೆ. ನೀನು ಶಾಂತಳಾಗು. ನನ್ನೊಡನೆ ಈ ಅರಮನೆಯಲ್ಲಿರು. ಸಾಯುವುದಾದರೆ ಒಟ್ಟಿಗೆ ಸಾಯೋಣ. ನಿನ್ನ ಸಾನ್ನಿಧ್ಯದಲ್ಲಿ ಸಾಯುವುದಕ್ಕಿಂತಲೂ ಆನಂದವು ನನಗೆ ಮತ್ತಾವುದಿದೆ. ಶತೃಗಳು ಜಯಿಸಿದರೆ ನಾವಿಬ್ಬರೂ ಸಾಯೋಣ. ನಗರವು ಗೆದ್ದರೆ ನಾವಿಬ್ಬರೂ ನಿಜವಾದ ಸನ್ಯಾಸ ಧರ್ಮವನ್ನು ಸ್ವೀಕರಿಸಿ ವಾರಣಾಸಿಗೆ ಯಾತ್ರೆಮಾಡೋಣ" ಎಂದು ಹೇಳಿದಳು. ಈ ಮಾತುಗಳು ಭೈರವಿಗೆ ಕೇಳಿಸುತ್ತಿದ್ದವೋ ಇಲ್ಲವೋ ಹೇಳಲಾಗುವುದಿಲ್ಲ. ಅವಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಹಲ್ಲುಗಳನ್ನು ಕಟಕಟನೆ ಕಡಿಯುತ್ತಿದ್ದಳು. ಅವಳ ಮುಖದಲ್ಲಿ ಎಷ್ಟೋ ಉನ್ಮಾದದ ಚಿನ್ಹೆಗಳು ಕಾಣುತ್ತಿದ್ದವು. "ಇಲ್ಲ

ರಾಣಿಯವರೇ, ನಾನು ನಿಮ್ಮ ಸಾನ್ನಿಧ್ಯದಲ್ಲಿ ಇರಲಾರೆ, ಬೆಂಕಿಯಲ್ಲಿ ಬಿದ್ದು ಉರಿಯುತ್ತಿರುವಂತೆ ನನಗೆ ಬೋಧೆಯಾಗುತ್ತದೆ. ಈ ಅರಮನೆಯಲ್ಲಿ ಒಂದುಕ್ಷಣವೂ ನಿಲ್ಲಲಾರೆ. ಇಂದು ರಾತ್ರಿ ನಾನು ಬದುಕಿರುವೆನೋ ಇಲ್ಲವೋ ಸಂದೇಹ. ನಾನು ಬದುಕಿದ್ದರೆ ಮತ್ತೊಂದುಭಾರಿ ಬಂದು ನಿಮ್ಮನ್ನು ದರ್ಶನಮಾಡುತ್ತೇನೆ. ಇಲ್ಲದಿದ್ದರೆ ಇದೇ ಕಡೆಯ ವಂದನೆಗಳು. ನಿಮ್ಮ ಪಾಪಕೂಪವು ತುಂಬಿ ಹರಿಯಲಿ" ಎಂದು ಹೇಳುತ್ತಾ, ಅಳುತ್ತಾ, ಚೀತ್ಕರಿಸುತ್ತಾ ಅರಮನೆಯನ್ನು ಬಿಟ್ಟು ಹೊರಟು ಹೋದಳು. ರಾಣಿಯು ದುಃಖಿಸುತ್ತಾ ಪರ್ಯಂಕದಲ್ಲಿ ಬಿದ್ದು ಹೊರಳಲಾರಂಭಿಸಿದಳು. ಬೆಳಗಾಯಿತು. ಪ್ರಪಂಚವೆಲ್ಲವೂ ಎದ್ದು ಕಾರ್ಯತತ್ಪರವಾಯಿತು. ಬಿದನೂರಿನಲ್ಲಿ ಮಾತ್ರಈಗ ರಾತ್ರಿ ಹಗಲುಗಳೆಂಬ ಭೇದವಿಲ್ಲ. ಎಲ್ಲರೂ ಯುದ್ಧದ ಮಾತನ್ನಾಡುವವರೇ. ಎಲ್ಲರೂ ಯುದ್ಧಕಾರ್ಯಗಳಲ್ಲಿ ತತ್ಪರರಾದವರೇ. ಈ ಸಂದರ್ಭದಲ್ಲಿ ಮತ್ತೊಂದು ಸಣ್ಣ ಅಂಶವನ್ನು ಮಾತ್ರ ವಾಚಕರು ಅರಿತುಕೊಳ್ಳಬೇಕಾಗಿದೆ.

ಭೈರವಿಯು ನಗರದ ರಾಜ್ಯಕ್ಕೆ ಬಂದಂದಿನಿಂದಲೂ ರಾಮಕೃಷ್ಣರವರಿಗೆ ಅವಳ ಚಲನವಲನಗಳೆಲ್ಲವೂ ತಿಳಿದಿದ್ದವು. ಹೈದರನ ಸೈನ್ಯದಿಂದ ನಗರಕ್ಕೆ ಅವಳು ಬಂದಿದ್ದಾಳೆಂದೂ, ನಗರದ ರಾಜ್ಯದಲ್ಲಿ ನಾನಾವಿಧವಾದ ಪ್ರಚಾರಗಳನ್ನು ಕೈಗೊಂಡಿರುವಳೆಂದೂ ಅವರಿಗೆ ವರದಿಯಾಗಿದ್ದಿತು. ರಾಮಕೃಷ್ಣರವರು ಅವಳಮೇಲೆ ಬಲವಾದ ಕಾವಲನ್ನಿಟ್ಟಿದ್ದರು. ಬೃಂದೆಯು ಯಾವಾಗಲೂ ಅವಳ ಜೊತೆಯಲ್ಲಿಯೇ ಇರುತ್ತಿದ್ದಳು. ಅರಮನೆಗೆ ಅವಳು ಹೋಗಿ ರಾಣಿಯವರ ಭೇಟಿ ಮಾಡುವುದನ್ನು ಮಂತ್ರಿಗಳು ಅರಿತಿದ್ದರು. ಭೈರವಿಯು ರಾಣಿಯವರನ್ನು ಕೊಲೆಮಾಡುವ ಹಟತೊಟ್ಟದ್ದಾಳೆಂಬುದು ಮಂತ್ರಿಗಳಿಗೆ ವರದಿಯಾಗಿದ್ದಿತು. ಭೈರವಿಯು ಅರ್ಧರಾತ್ರಿಯಲ್ಲಿ ದುಃಖೋದ್ವೇಗದಿಂದ ಹೊರಗೆಬರುತ್ತಲೇ ಆ ಕತ್ತಲೆಯಲ್ಲಿ ರಾಜಭಟರು ಅವಳನ್ನು ಹಿಡಿದು ಬಂದೀಖಾನೆಯಲ್ಲಿ ಬಂಧಿಸಿದರು. ಭೈರವಿಯು ಹೆದರಲಿಲ್ಲ.

ಅವರನ್ನು ನೋಡಿ ಏಕೆ ಹಿಡಿದಿರಿ? ಎಲ್ಲಿಗೆ ತಂದಿಟ್ಟಿದ್ದೀರಿ? ಯಾರ ಅಪ್ಪಣೆ" ಎಂದು ಕೇಳಿದಳು.

ದಫೇದಾರನು, "ಭೈರವಿತಾಯಿ, ಇದು ರಾಜಬಂಧಿಗಳನ್ನಿಡುವ ಬಂದೀಖಾನೆ. ಮಹಾಮಂತ್ರಿಗಳ ಆಜ್ಞೆಯಂತೆ ನಿನ್ನನ್ನು ಬಂಧನ ದಲ್ಲಿಟ್ಟಿದ್ದೇನೆ" ಎಂದನು.

ಭೈರವಿಯು ಗಟ್ಟಿಯಾಗಿ ನಕ್ಕಳು. "ಮಂತ್ರಿಯು ಸರಿಯಾದ ಕೆಲಸವನ್ನು ಮಾಡಿದ್ದಾನೆ. ನಾನು ಹೊರಗಿದ್ದರೆ ಅವನು ನಗರದ ರಾಜ್ಯವನ್ನು ಉಳಿಸಬಲ್ಲನೇ" ಎಂದು ನಕ್ಕು ಭೂಮಿಯಮೇಲೆ ಮಲ ಗಿದಳು.

ಪ್ರಾತಃಕಾಲದ ಸಮಯಕ್ಕೆ ರಣಕ್ಷೇತ್ರದಲ್ಲಿ ಪಾಳೆಯಗಾರರ ಸೈನ್ಯಕ್ಕೆ ಬಹಳ ನಷ್ಟವಾಗಿದೆಯೆಂದೂ ಕೃಷ್ಣಪ್ಪನಾಯಕರು ರಣಕ್ಷೇತ್ರ ದಲ್ಲಿ ಮಡಿದರೆಂದೂ, ರುದ್ರನಾಯಕರನ್ನು ಸೆರೆಹಿಡಿದಿದ್ದಾರೆಂದೂ, ಗೋಪಾಲನಾಯಕರು ಒಂದೆರಡು ದಿವಸಗಳಲ್ಲಿ ಮತ್ತೊಂದು ಯುದ್ಧ ವನ್ನು ಕೊಡುವರೆಂದೂ ಈಗ ನಗರದ ರಾಜ್ಯದ ಸೈನ್ಯಗಳು ಅಪ್ರತಿಹತ ವಾಗಿ ಹೋರಾಡುತ್ತಿದೆಯೆಂದೂ ಮಂತ್ರಿಗಳಿಗೆ ಸಮಾಚಾರವು ಬಂದಿತು. ಮಂತ್ರಿಗಳು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ವಿರೂಪಾಕ್ಷ ಕ್ಷೇತ್ರಕ್ಕೆ ಹೋಗಿ ದೇವರ ದರ್ಶನಮಾಡಿ ಚಂಡೀಶಾಲೆಯಲ್ಲಿ ಅಭಿರಾಮ ಸ್ವಾಮಿಗಳ ದರ್ಶನಮಾಡಿ ತಾವು ರಣಕ್ಷೇತ್ರಕ್ಕೆ ಹೊರಡುವುದಾಗಿ ತಿಳಿಸಿದರು. ಅಭಿರಾಮಸ್ವಾಮಿಗಳು ಮಂತ್ರಿಗಳಿಗೆ ಜಯವಾಗುವು ದೆಂದು ಆಶೀರ್ವದಿಸಿ ಪ್ರಸಾದವನ್ನು ಕೊಟ್ಟರು. ಮಂತ್ರಿಗಳು ಮನೆಗೆ ಬಂದು ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಟ್ಟು ಅರಮನೆಗೆ ಹೋಗಿ ಮಹಾರಾಣಿಯವರನ್ನು ವಂದಿಸಿ ತಾವು ರಣಕ್ಷೇತ್ರಕ್ಕೆ ಹೊರಡುವುದಾಗಿ ತಿಳಿಸಿದರು. ರಾಣಿಯವರಿಗೆ ಯುದ್ಧಕ್ಷೇತ್ರದ ಸಮಾಚಾರಗಳೆಲ್ಲವೂ ವಿಶದವಾಗಿ ತಿಳಿದಿದ್ದವು. ರಾಣಿಯವರು ಭಯಗ್ರಸ್ತರಾಗಿರಬಹುದೆಂದು ಮಂತ್ರಿಗಳ ಮನಸ್ಸಿನಲ್ಲಿ ಅಳುಕಿದ್ದಿತು. ಮಂತ್ರಿಗಳು ರಾಣಿಯವರೊಡನೆ ತಾವೇ ಸ್ವತಃ ಯುದ್ಧಕ್ಷೇತ್ರಕ್ಕೆ ತೆರಳುವುದಾಗಿ ಹೇಳುತ್ತಲೇ ರಾಣಿ

ಯವರು ವೀಳಯವನ್ನು ತರಿಸಿ ಮಂತ್ರಿಗಳ ಮುಂದಿಟ್ಟು "ತಾವು ವೀಳಯವನ್ನು ತೆಗೆದುಕೊಂಡು ರಣಕ್ಷೇತ್ರಕ್ಕೆ ಹೊರಡಿರಿ. ನಾನು ಈ ರಾಜಧಾನಿಯನ್ನು ರಕ್ಷಿಸುತ್ತೇನೆ" ಎಂದು ಧೈರ್ಯದಿಂದ ಹೇಳಿದರು. ಇದನ್ನು ಕೇಳಿ ಮಂತ್ರಿಗಳಿಗೆ ಪರಮಾನಂದವಾಯಿತು. ಅವರು ಅರಮನೆಯ ಮುಂದೆ ಸಿದ್ಧವಾಗಿ ನಿಂತಿದ್ದ ಆನೆಯಮೇಲೆ ಹತ್ತಿ ಅಂಬಾರಿಯಲ್ಲಿ ಕುಳಿತು ರಣಕ್ಷೇತ್ರಾಭಿಮುಖವಾಗಿ ಹೊರಟರು. ಮಧ್ಯಾಹ್ನದ ಸಮಯಕ್ಕೆ ಮಂತ್ರಿ ರಾಮಕೃಷ್ಣರವರು ರಣಕ್ಷೇತ್ರವನ್ನು ಮುಟ್ಟಿದರು. ದಾರಿಯುದ್ದಕ್ಕೂ ನಗರದ ಸೈನ್ಯಗಳು ಜಯಜಯಕಾರ ಮಾಡುತ್ತಿದ್ದವು. ರಣಕ್ಷೇತ್ರದಲ್ಲಿ ಮಂತ್ರಿಗಳು ಹೋಗಿ ನೋಡವಾಗ ರಾಮರಾಯನ ಪರಾಕ್ರಮವು ಮೊಳಗುತ್ತಿದ್ದಿತು. ಹೈದರಲ್ಲೀಖಾನನು ಎರಡುಬಾರಿ ರಾಮರಾಯನ ಸೈನ್ಯದಮುಂದೆ ನಿಂತು, ಹೋರಾಡಿ ಹತ್ತು ಮೈಲಿಗಳು ಹಿಮ್ಮೆಟ್ಟಿದ್ದನೆಂದೂ, ತುಂಗಾನದಿಯನ್ನು ದಾಟಿ ವಾಪಸು ಹೋಗಿ ಆಚೆ ದಡದಲ್ಲಿ ಶಿಬಿರವನ್ನು ಬಿಟ್ಟುಕೊಂಡಿದ್ದನೆಂದೂ ತಿಳಿಯಿತು. ಪಾಳೆಯಗಾರರ ಸೈನ್ಯವು ಪೂರ್ವದಕಡೆ ಇದ್ದಿತು. ಮಂತ್ರಿಗಳು ರಾಮರಾಯನನ್ನು ಕಾಣಲು ಸಾಧ್ಯವಾಗಲಿಲ್ಲ. ಅವರು ಕುದುರೆಯನ್ನೇರಿ ಪಾಳೆಯಗಾರರ ದಂಡಿನ ಪ್ರದೇಶದಕಡೆಗೆ ತೆರಳಿದರು. ಕಡುಗಲಿಗಳಾದ ನಗರದ ರಾಜಭಟರು ಅವರ ಮೈಗಾವಲಿನಲ್ಲಿ ಕುದುರೆಗಳಮೇಲೆ ನಡೆದು ಹೋಗುತ್ತಿದ್ದರು. ಪಾಳೆಯಗಾರರ ದಂಡು ಮಡಿದು ಹೋಗಿದ್ದಿತು. ಅನೇಕ ಪಾಳೆಯಗಾರರು ಸತ್ತುಹೋದರೆಂದು ಮಂತ್ರಿಗಳು ಕಿವಿಯಾರ ಕೇಳಿದರು. ಪಾಳೆಯಗಾರರ ದಂಡಿನಲ್ಲಿ ಸತ್ವವಿರಲಿಲ್ಲವೆಂದು ಅವರಿಗೆ ಪ್ರತ್ಯಕ್ಷವಾಗಿ ಕಂಡಿತು. ಗೋಪಾಲನಾಯಕರ ಸಮಾಚಾರವು ಖಚಿತವಾಗಿ ತಿಳಿಯಲಿಲ್ಲ. ಆದಿನ ಮಧ್ಯಾಹ್ನದವರೆಗೆ ಯುದ್ಧಕ್ಷೇತ್ರದಲ್ಲಿ ಇದ್ದರೆಂದು ಸಂಧ್ಯಾಕಾಲದ ಸಮಯದಲ್ಲಿ ಮಹಮದಾಲಿಯವರು ಅವರನ್ನು ಸೆರೆಹಿಡಿದರೆಂದೂ, ಕೆಲವರು ಸೈನಿಕರು ಅದನ್ನು ಕಣ್ಣಾರ ನೋಡಿದರೆಂದೂ ಹೇಳಿದರು. ಮತ್ತೆ ಕೆಲವರು ರಣಕ್ಷೇತ್ರದಿಂದ ಪಾಳೆಯಗಾರರ ಕಡೆಯವರೇ ಗೋಪಾಲನಾಯಕರನ್ನು

ಎಲ್ಲಿಗೋ ಸಾಗಿಸಿಕೊಂಡುಹೋದರೆಂದೂ, ಗೋಪಾಲನಾಯಕರಿಗೆ ಶರೀರದಮೇಲೆ ಅರಿವು ಇರಲಿಲ್ಲವೆಂದೂ ಮತ್ತೆ ಕೆಲವರು ತಿಳಿಸಿದರು. ಮಂತ್ರಿಗಳು ಎಷ್ಟು ಪ್ರಯತ್ನಪಟ್ಟಾಗ್ಯೂ ಗೋಪಾಲನಾಯಕರ ವಿಚಾರದಲ್ಲಿ ನಿಖರವಾದ ಸಮಾಚಾರವೊಂದೂ ತಿಳಿಯದೇ ನಗರದ ಸೈನ್ಯದ ಶಿಬಿರಕ್ಕೆ ಮಂತ್ರಿ ರಾಮಕೃಷ್ಣರವರು ಹಿಂತಿರುಗಿದರು.

ಪ್ರಾತಃಕಾಲ ಸೂರ್ಯೋದಯವಾಗುವದರೊಳಗಾಗಿ ಗೋಪಾಲನಾಯಕರು ಎರಡುಸಹಸ್ರ ಗೋಲಂದಾಜ ಸೈನ್ಯದೊಡನೆ ಹೈದರಾಲಿಯವರ ಸೈನ್ಯದಮೇಲೆ ರಭಸದಿಂದ ಬಂದುಬಿದ್ದರು. ಗೋಪಾಲನಾಯಕರ ಸೈನ್ಯಗಳು ಬರುವಾಗ ರಣಭೇರಿಗಳನ್ನೂ, ಕಹಳೆತಮಟೆಗಳನ್ನೂ ಬಾರಿಸುತ್ತಲೇ ಬಂದವು. ಹೈದರಾಲಿಯವರ ಸೈನ್ಯಗಳು ಎಚ್ಚತ್ತುನಿಂತವು. ರಾಮರಾಯನ ಸೈನ್ಯಗಳು ಮಹಮುದಾಲಿಯವರ ಸೈನ್ಯವನ್ನು ಆಕ್ರಮಣಮಾಡಿದವು. ಅಂದಿನ ಯುದ್ಧದಲ್ಲಿ ಹೈದರಾಲಿಯವರು ನಿಜವಾಗಿಯೂ ಜಯಾಪಜಯಗಳನ್ನು ತೂಕಮಾಡಲಾರದೇ ಇದ್ದರು. ಮಧ್ಯಾನ್ಹ ಮೂರುಘಂಟೆಯ ಸಮಯದಲ್ಲಿ ಗೋಪಾಲನಾಯಕರ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಮಂತ್ರಿ ರಾಮಕೃಷ್ಣರವರು ಗೋಪಾಲನಾಯಕರ ಸೈನ್ಯದ ಹಿಂಬದಿಯಲ್ಲಿದ್ದರು. ವೀರಾವೇಶದಿಂದ ಯುದ್ಧಮಾಡುತ್ತಿದ್ದ ನಗರದ ಸೈನ್ಯಕ್ಕೂ, ಮಂತ್ರಿ ರಾಮಕೃಷ್ಣರವರಿಗೂ ಬಹುದೂರವಿದ್ದಿತು. ಸುಮಾರು ಸಂಧ್ಯಾಕಾಲ ನಾಲ್ಕು ಘಂಟೆಯ ಸಮಯದಲ್ಲಿ ಗೋಪಾಲನಾಯಕರಮೇಲೆ ಬಿದ್ದ ಕತ್ತಿಯ ಪೆಟ್ಟಿನಿಂದ ಅವರು ಕುದುರೆಯಿಂದ ಕೆಳಗುರುಳಿದರು. ಆ ಸೈನ್ಯದಲ್ಲೆಲ್ಲಾ ಹಾಹಾಕಾರವೆದ್ದಿತು. ರಾಮಕೃಷ್ಣರವರು ಕುದುರೆಯನ್ನು ದೌಡಾಯಿಸುತ್ತಾ ತಂದು ಕೆಳಗಿಳಿದು ಅತಿಕಷ್ಟದಿಂದ ಗೋಪಾಲನಾಯಕರ ಶರೀರವು ಬಿದ್ದಿದ್ದೆಡೆ ಬಗ್ಗಿನೋಡಿದರು. ನಾಯಕರು ಉತ್ಕ್ರಮಣಾವಸ್ಥೆಯಲ್ಲಿದ್ದರು. ಮಂತ್ರಿ ರಾಮಕೃಷ್ಣರವರನ್ನು ನೋಡುತ್ತಲೇ ಗೋಪಾಲನಾಯಕರು ಕಣ್ಣನ್ನರಳಿಸಿ ಬಿರುಗಣ್ಣಿನಿಂದ ನೋಡಿ ಒಂದು ನಗುವನ್ನು ನಕ್ಕರು. ಆ ನಗುವಿನಲ್ಲಿ ಸಮಾಧಾನ ಮತ್ತು

ಪ್ರಶಾಂತಭಾವಗಳಿದ್ದವು. ಆ ನಗುವಿನೊಡನೆಯೇ ಪ್ರಾಣವು ಹಾರಿ ಹೋಗಿದ್ದಿತು.

ಮಂತ್ರಿ ರಾಮಕೃಷ್ಣರವರು ಒಂದೆರಡುಕ್ಷಣಗಳು ಗೋಪಾಲ ನಾಯಕರ ಮುಖವನ್ನು ನೋಡುತ್ತಾ ಕಣ್ಣುಗಳಲ್ಲಿ ಕಂಬನಿ ಚೆಲ್ಲಿದರು. ಕೊಂಚಹೊತ್ತು ಮಂತ್ರಿ ರಾಮಕೃಷ್ಣರವರಿಗೆ ಆ ದುಃಖೋದ್ವೇಗದಿಂದ ವೈಮರವು ಬಂದಂತಾಗಿದ್ದಿತು. ಹಿಂತಿರುಗುವಷ್ಟರಲ್ಲಿ ಯಾರೋ ಬಂದು ಮಂತ್ರಿ ರಾಮಕೃಷ್ಣರ ಎರಡು ತೋಳುಗಳನ್ನು ಬಲವಾಗಿ ಹಿಡಿದುಕೊಂಡರು. ರಾಮಕೃಷ್ಣರವರು ಎಚ್ಚತ್ತು ನೋಡುವಷ್ಟರಲ್ಲಿ ತಾವು ಶತೃಗಳಿಂದ ಬಂಧಿತರಾಗಿದ್ದೇವೆಂದು ಅರಿತುಕೊಂಡರು. ರಾಜ ಭಟರು ಅವರನ್ನು ಶಿಬಿರಕ್ಕೆಎತ್ತಿಕೊಂಡುಹೋಗಿ ಬಂಧನದಲ್ಲಿಡಿಸಿದರು. ಆದಿನ ರಾತ್ರಿಯಲ್ಲಾ ನಗರದ ಸೈನ್ಯಗಳು ವೀರಾವೇಶದಿಂದ ಯುದ್ಧ ಮಾಡುತ್ತಲೇ ಇದ್ದವು.

ಮಾರನೆಯದಿನ ಪ್ರಾತಃಕಾಲ ರಾಮರಾಯನ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ಸೂರ್ಯಾಸ್ತಮಾನದೊಳಗಾಗಿ ಮೈಸೂರು ಸೈನ್ಯಗಳು ಬಿದನೂರಿನ ಸಮೀಪಗತವಾಗುತ್ತಬಂದವು. ರಾಮ ರಾಯನು ಪ್ರತಿಯೊಂದು ಹೆಜ್ಜೆಯಲ್ಲಿಯೂ ತನ್ನ ಸೈನ್ಯವನ್ನು ಉತ್ತೇ ಜನಗೊಳಿಸುತ್ತಾ ಯುದ್ಧವನ್ನು ಕೊಡುತ್ತಲೇ ಇದ್ದನು. ಸಂಧ್ಯಾಕಾಲ ದೊಳಗಾಗಿ ನಗರದ ಸೈನ್ಯಗಳಿಗೆ ಅಪಜಯವಾಗುತ್ತಿದೆಯೆಂದು ಸಮಾ ಚಾರವು ಬಿದನೂರಿಗೆ ಬಂದು ಗೋಪಾಲನಾಯಕರು ರಣಕ್ಷೇತ್ರದಲ್ಲಿ ಮಡಿದು ವೀರಸ್ವರ್ಗನ್ನೇರಿದರೆಂದೂ, ಮಂತ್ರಿ ರಾಮಕೃಷ್ಣರವರು ಬಂಧಿತರಾದರೆಂದೂ ರಾಣಿಯವರಿಗೆ ನಿವೇದಿಸಲಾಯಿತು. ರಾಣಿಯು ದುಃಖದಿಂದ ಉತ್ತೇಜಿತಳಾದಳು. ಯುದ್ಧದ ದಿರಸುಗಳನ್ನು ಧರಿಸಿ ಕೊಂಡು ಕೋಟೆಯಲ್ಲಿದ್ದ ಸೈನ್ಯಗಳನ್ನು ಮುಂದಕ್ಕೆ ಹಾಯಿಸಿ ಯುದ್ಧಕ್ಕೆ ಸಿದ್ಧಳಾಗಿ ಹೊರಟಳು. ಕೋಟೆಯ ರಕ್ಷಣೆಗೆ ಬಲವಾದ ಸನ್ನಾಹಗಳನ್ನು ಮಾಡಿದಳು. ಅಂದು ರಾತ್ರಿ ಯುದ್ಧವ ಸನ್ನಿಹಿತವಾಗುತ್ತದೆಂದೂ

ತಾನು ಬಿದನೂರಿನ ಕೋಟೆಯಲ್ಲಿ ಪ್ರಾಣವನ್ನೊಪ್ಪಿಸುವುದಾಗಿಯೂ ಮನಸ್ಸಿನಲ್ಲಿ ಸಿದ್ಧಮಾಡಿಕೊಂಡು ಹೊರಟಳು.

ಇತ್ತ ಕಡೆ ಮಂತ್ರಿಗಳ ಬಂಧನವಾದ ಸುದ್ದಿಯು ರಾಮಕೃಷ್ಣರವರ ಮಹಲಿಗೆ ತಲುಪಿತು. ರಾಮಕೃಷ್ಣರವರ ಧರ್ಮಪತ್ನಿಯವರಾದ ಗೌರಮ್ಮನವರು ಚಲಿಸಲಿಲ್ಲ. ಸ್ನಾನವನ್ನು ಮಾಡಿ ಹೊಸ ಬಟ್ಟೆಗಳನ್ನು ಧರಿಸಿ ಬ್ರಾಹ್ಮಣರನ್ನು ಕರೆಸಿ ದಾನಧರ್ಮವನ್ನು ಮಾಡಿ ಪೂಜಾಗೃಹದಲ್ಲಿ ತುಪ್ಪದ ದೀಪಗಳನ್ನು ಹಚ್ಚಿಟ್ಟು ಗೌರೀಪೂಜೆಗೆ ಆರಂಭಮಾಡಿದರು. ಅದೇ ಮಂತ್ರಿಗಳ ಮಹಲಿನಲ್ಲಿದ್ದ ಮಲ್ಲಿಗಮ್ಮನಿಗೂ ಈ ಸಮಾಚಾರವು ಮುಟ್ಟಿತು. ಅವಳು ಹುಚ್ಚಿಯಂತೆ ಕಿರುಚುತ್ತಾ ಮಂತ್ರಿಗಳ ಧರ್ಮ ಪತ್ನಿಯವರು ಪೂಜೆಮಾಡುತ್ತಿದ್ದ ಪೂಜಾಗೃಹಕ್ಕೆ ಬಂದು ಗೌರಮ್ಮ ನವರಿಗೆ ನಮಸ್ಕರಿಸಿ, "ನಾನೂ ರಣಕ್ಷೇತ್ರಕ್ಕೆ ಹೋಗುತ್ತೇನೆ. ಮಂತ್ರಿ ಗಳನ್ನು ಬಿಡಿಸಿಕೊಂಡು ಬರುತ್ತೇನೆ. ಅಪ್ಪಣೆ ಕೊಡಿರಿ" ಎಂದು ಕೇಳಿದಳು. ಗೌರಮ್ಮನವರಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯ ವಾಯಿತು. ಅವರು ದೇವಿಯ ಪ್ರೇರಣೆಯು ಹೇಗಿದೆಯೋ ಎಂಬುದಾಗಿ ಆಶ್ಚರ್ಯಚಕಿತರಾಗಿ "ನೀವು ಯುವರಾಣಿಯವರು. ವೀರ ರಮಣಿ. ಯುದ್ಧಕ್ಕೆ ಹೋಗುತ್ತೇನೆಂದರೆ ನಾನು ತಡೆಯುವದೆಂತು ? ಹೋಗಿ ಬನ್ನಿರಿ, ಶುಭವಾಗಲಿ" ಎಂದು ಆಶೀರ್ವದಿಸಿದರು. ಮಲ್ಲಿಗಮ್ಮನು ಮಂತ್ರಿಗಳ ಗೃಹವನ್ನು ಬಿಟ್ಟು ರಾಜಬೀದಿಗಳಲ್ಲಿ ಹೊರಟರು. ಪುರ ಜನರೆಲ್ಲರೂ ಗಾಬರಿಗೊಂಡು ಅಲೆದಾಡುತ್ತಿದ್ದರು. ಮಲ್ಲಿಗಮ್ಮನು ವೇಗದಿಂದ ಮಲ್ಲಿಕಾರ್ಜುನಕ್ಷೇತ್ರಕ್ಕೆ ಹೋಗಿ ದೇವರನ್ನು ನಮಸ್ಕರಿಸಿ ಪ್ರಾರ್ಥನೆ ಮಾಡಿದಳು. ಸಮೀಪದಲ್ಲಿದ್ದ ಯಾಗಶಾಲೆಯಿಂದ ಮಂತ್ರ ಘೋಷಣೆಗಳು ಕೇಳಿಬಂದವು. ಮಲ್ಲಿಗಮ್ಮನು ದೇವಾಲಯದಿಂದ ಆ ಮಂತ್ರಘೋಷಣೆಗಳು ಕೇಳಿಬರುತ್ತಿದ್ದ ಯಾಗಶಾಲೆಯ ಕಡೆಗೆ ಧಾವಿಸಿ ಹೋದಳು. ಬ್ರಾಹ್ಮಣರು ಮಹಾಯಜ್ಞಕುಂಡದಲ್ಲಿ ಆಹುತಿಗಳನ್ನು ಕೊಟ್ಟು ಪೂರ್ಣಾಹುತಿಗೆ ಸಿದ್ಧಮಾಡಿದ್ದರು. ಮಲ್ಲಿಗಮ್ಮನು ಹೋಗಿ ಅಭಿರಾಮಸ್ವಾಮಿಗಳನ್ನು ವಂದಿಸಿ ಯಜ್ಞಕುಂಡದ ಸಮೀಪದಲ್ಲಿ ಕೈ

ಮುಗಿದು ನಿಂತುಕೊಂಡಳು. ಯಜ್ಞೇಶ್ವರನು ಜಾಜ್ವಲ್ಯಮಾನವಾಗಿ ಸಪ್ತ ಜಿಹ್ವೆಗಳನ್ನು ಚಾಚಿ ಉರಿಯುತ್ತಿದ್ದನು. ಬ್ರಾಹ್ಮಣರು ದುರ್ಗಾ ಮಂತ್ರಗಳನ್ನು ಉಚ್ಚಕಂಠದಿಂದಪಠಿಸಿ ಪೂರ್ಣಾಹುತಿಯನ್ನು ಸಮರ್ಪಿಸಿದರು. ಅಭಿರಾಮಸ್ವಾಮಿಯು ಧ್ಯಾನಮಗ್ನನಾಗಿ ವ್ಯಾಘ್ರಾಸನದ ಮೇಲೆ ಕುಳಿತಿದ್ದನು. ಮಲ್ಲಿಗಮ್ಮನ ಕಂಠದಿಂದ ಮಾತುಗಳು ಹೊರಡಲಾರಂಭವಾದವು. "ಬ್ರಾಹ್ಮಣೋತ್ತಮರುಗಳಿರಾ, ನಿಮ್ಮ ಮಂತ್ರಗಳಲ್ಲಿ ಸತ್ವವಿಲ್ಲ. ನೀವುಗಳೆಲ್ಲರೂ ಅಜ್ಞಾನಿಗಳು. ಗಿಣಿಯಂತೆ ಮಂತ್ರಗಳನ್ನು ಪಠಿಸುತ್ತೀದ್ದೀರಿ. ಮಹಾಗುರುವಾದ ಅಭಿರಾಮಸ್ವಾಮಿಗೂ ಅಜ್ಞಾನವು ಆವರಿಸಿಕೊಂಡಿದೆ. ನಗರದರಾಜ್ಯದ ಧರ್ಮವು ಅಳಿದುಹೋಗಿ ಅಧರ್ಮದ ಪ್ರತಿಷ್ಠಾಪನೆಯಾಗಿದೆ. ಈಗ ನಗರದ ರಾಜ್ಯಕ್ಕೆ ಜಯವಾಗುವುದು ಮಹಾದೇವಿಯ ಸಂಕಲ್ಪದಲ್ಲಿಲ್ಲ. ಅಧರ್ಮಕ್ಕೆ ಜಯವಾದರೆ ಈ ಪ್ರಪಂಚದಲ್ಲಿ ನಾಳೆ ಪ್ರಾತಃಕಾಲ ಸೂರ್ಯೋದಯವಾಗದೆ ಹೋದೀತು. ಗಾಳಿಯು ಬೀಸದೆ ಘನೀಭೂತವಾದೀತು. ಜಲವು ಮರುಭೂಮಿಯಾದೀತು. ಅಧರ್ಮವು ನಾಶವಾಗಲೇಬೇಕು. ನಿಮ್ಮ ಈ ದುಷ್ಕೃತ್ಯಗಳನ್ನು ನಾನು ನೋಡಿ ಸಹಿಸಲಾರೆ" ಎಂದು ಘರ್ಜಿಸುತ್ತಾ ಅಗ್ನಿಕುಂಡದಲ್ಲಿ ಧುಮುಕಿಬಿಟ್ಟಳು. ಯಜ್ಞೇಶ್ವರನ ಜ್ವಾಲಮಾಲೆಗಳು ಅದ್ಭುತವಾಗಿ ಉರಿಯಲಾರಂಭಿಸಿದವು. ಋತ್ವಿಕ್ಕುಗಳೆಲ್ಲಾ ಹಾಹಾಕಾರ ಮಾಡಿದರು. ಕೆಲವರು ಅಗ್ನಿಕುಂಡದಲ್ಲಿಳಿದು ಆ ಸ್ತ್ರೀಯನ್ನು ಮೇಲಕ್ಕೆತ್ತಲು ಪ್ರಯತ್ನಿಸಿದರು. ಅಷ್ಟರಲ್ಲಿ ಅಭಿರಾಮಸ್ವಾಮಿಯು ಕಣ್ಣುತೆರೆದು ನೋಡಿದನು. ಅವನು ಗಾಬರಿಗೊಳ್ಳಲಿಲ್ಲ. ದುಃಖಿತನಾಗಲೂ ಇಲ್ಲ. ಎದ್ದುನಿಂತು ಗಂಭೀರಧ್ವನಿಯಿಂದ ಯಜ್ಞೇಶ್ವರನನ್ನು ಮುಟ್ಟಬೇಡಿರಿ ದೂರಸರಿಯಿರಿ" ಎಂದು ಆಜ್ಞಾಪಿಸಿದನು. ಬ್ರಾಹ್ಮಣರೆಲ್ಲರೂ ಅವಾಕ್ಕಾಗಿ ಹಿಂದೆ ಸರಿದು ನಿಂತರು. ಅಭಿರಾಮಸ್ವಾಮಿಯು ಯಾಗವು ಪೂರ್ತಿಯಾಯಿತ್ತು. ಆದರೆ ನಮ್ಮ ಯಜ್ಞವು ಭಂಗವಾಗಿ ಹೋಯಿತು. ಈ ಯಜ್ಞಕುಂಡದಿಂದ ಜಯಲಕ್ಷ್ಮಿಯು ಉದ್ಭವಿಸುವಳೆಂದು ನಾನು ಸಂಕಲ್ಪಮಾಡಿದ್ದೆ. ಮೃತ್ಯುದೇವತೆಯು ಯಜ್ಞಕುಂಡ

ದಲ್ಲಿ ದರ್ಶನವಿತ್ತಳು. ಭಗವದಿಚ್ಛೆಯು ಹಾಗಿದೆ. ನೀವುಗಳೆಲ್ಲರೂ ಯಜ್ಞಶಾಲೆಯನ್ನು ಬಿಟ್ಟು ತೆರಳಿರಿ" ಎಂದು ಆಜ್ಞಾಪಿಸಿ, ದೇವಾಲಯದ ಬೊಕ್ಕಸದ ಖಜಾಂಚಿಯನ್ನು ಕುರಿತು ಈ ಬ್ರಾಹ್ಮಣೋತ್ತಮರಿಗೆಲ್ಲರಿಗೂ ಭೂರಿ ದಾನ, ದಕ್ಷಿಣೆಗಳನ್ನು ಕೊಟ್ಟು ಕಳುಹಿಸಬೇಕೆಂದೂ ಮಲ್ಲಿಕಾರ್ಜುನಕ್ಷೇತ್ರದಲ್ಲಿ ಒಂದು ಕಿಲುಬು ಕಾಸನ್ನೂ ಉಳಿಸಕೂಡ ದೆಂದೂ ಈ ದಾನದಕ್ಷಿಣೆಗಳನ್ನು ಪೂರೈಸಿ ಬಂದು ತಮಗೆ ತಿಳಿಸ ಬೇಕೆಂದೂ ಆಜ್ಞೆಯಿತ್ತನು. ಬ್ರಾಹ್ಮಣರು ವಿಷಣ್ಣವದನರಾಗಿ ದೇವಾಲಯದಕಡೆಗೆ ತೆರಳಿದರು.

ಅಭಿರಾಮಸ್ವಾಮಿಯು ಆಸನದಲ್ಲಿ ಕುಳಿತು ಧ್ಯಾನಮಗ್ನನಾದನು. ಅಭಿರಾಮಸ್ವಾಮಿಯು ಈ ಜಗತ್ತಿನ ಸುಖದುಃಖಗಳನ್ನೆಲ್ಲಾ ದಾಟಿದ ಮಹಾಪುರುಷ. ಅವನಿಗೆ ಈ ಯಜ್ಞವು ಈ ರೀತಿಯಾಗಿ ಭಗ್ನವಾಗ ಬಹುದೆಂಬ ಊಹೆಯೇಯಿರಲಿಲ್ಲ. ದೇವಿಯು ಈ ಕರ್ಮವನ್ನು ಒಪ್ಪ ಲಿಲ್ಲವೆಂದು ಆ ವಿಧಗ್ಧ ಬಾಲೆಯ ಬಾಯಿಯಲ್ಲಿ ಹೊರಟಮಾತುಗಳು ಸತ್ಯವಾದವುಗಳೆಂದು ಭಾವಿಸಿದನು. ಈ ಜಗತ್ತಿನಲ್ಲಿ ಅಭಿರಾಮ ಸ್ವಾಮಿಗೆ ಉಳಿದಿದ್ದ ಕರ್ತವ್ಯವೇನೂ ಇರಲಿಲ್ಲ. ನಗರದ ಯುದ್ಧವು ಏನಾಗಿರಬಹುದೆಂದು ಅವನ ಮನಃಫಲಕದ ಮೇಲೆ ಚಿಂತೆಯು ಉತ್ಪನ್ನವಾಯಿತು. ಯಾಗಶಾಲೆಯ ಬಾಗಿಲುಗಳಲ್ಲಿ ಕಾವಲುಕಾಯು ತ್ತಿದ್ದ ಹರಿಕಾರರನ್ನು ಕರೆದು ಯುದ್ಧದ ಸಮಾಚಾರವೇನೆಂದು ಪ್ರಶ್ನೆ ಮಾಡಿದನು. ಅವರುಗಳು ಆದ್ಯೋಪಾಂತವಾಗಿ ಇಪ್ಪತ್ತುನಾಲ್ಕು ದಿನ ಗಳ ಯುದ್ಧದ ಕಥೆಯನ್ನು ವರ್ಣಿಸಿ ರಾಣಿಯು ಕೋಟೆಯಬಾಗಿಲಿನಲ್ಲಿ ಯುದ್ಧಮಾಡುತ್ತಿದ್ದಾಳೆಂದು ಅರಿಕೆಮಾಡಿದರು. ಆ ಸಮಾಚಾರವನ್ನು ಅಭಿರಾಮಸ್ವಾಮಿಯು ಸಾವಧಾನವಾಗಿ ಕೇಳಿದನು. ಸಂಕಲ್ಪಮಾಡಿ ಗಟ್ಟಿಯಾಗಿ ದುರ್ಗಾಮಂತ್ರಗಳನ್ನು ಪಠಿಸುತ್ತಾ ಯಜ್ಞಕುಂಡಕ್ಕೆ ಮೂರು ಪ್ರದಕ್ಷಿಣೆಗಳನ್ನುಮಾಡಿ ನಮಸ್ಕರಿಸಿ ಎದ್ದುನಿಂತು ಆ ಯಜ್ಞೇಶ್ವರನಲ್ಲಿ ಆತ್ಮಸಮರ್ಪಣೆಮಾಡಿದನು. ಸುತ್ತಲೂ ಇದ್ದ ಹರಿ ಕಾರರುಗಳು ಹೀಗಾಗುವುದೆಂದು ಭಾವಿಸಿರಲಿಲ್ಲ. ಅವರೆಲ್ಲರೂ ಚೀತ್ಕಾರ

ಮಾಡಲಾರಂಭಿಸಿದರು. ಈ ಆರ್ತನಾದವು ದೇವಾಲಯಕ್ಕೆ ಕೇಳಿ ಬಂದಿತು. ಅಲ್ಲಿ ನೆರದಿದ್ದ ಬ್ರಾಹ್ಮಣರೆಲ್ಲರೂ ಧಾವಿಸಿ ಯಜ್ಞಶಾಲೆಗೆ ಬಂದರು. ಎಲ್ಲರೂ ಗೋಳಿಡಲಾರಂಭಿಸಿದರು. ಅಷ್ಟರಲ್ಲಿ ಬ್ರಾಹ್ಮಣರು ಎಚ್ಚತ್ತು ಆ ಮಹಾಪುರುಷನು ಸಂಕಲ್ಪಸಿದ್ಧಿಯನ್ನು ಮಾಡಿಕೊಂಡನು. ನಾವು ರೋಧಿಸಲೇಕೆ ? ಎಂಬುದಾಗಿ ಪರಸ್ಪರ ಸಮಾಧಾನಮಾಡಿದರು. ಅಲ್ಲಿ ನೆರದಿದ್ದ ಬ್ರಾಹ್ಮಣರೆಲ್ಲರೂ ತಾವು ಪಡೆದಿದ್ದ ಭೂರಿದಕ್ಷಿಣೆಗಳನ್ನು ವಸ್ತ್ರಾಭರಣಗಳನ್ನೂ ಆ ಯಜ್ಞಕುಂಡದಲ್ಲಿ ಸಮರ್ಪಣೆಮಾಡಿದರು. ಯಜ್ಞೇಶ್ವರನು ಸರ್ವವನ್ನೂ ಭಕ್ಷಿಸುತ್ತಾ ಧಗಧಗನೆ ಜ್ವಲಿಸುತ್ತಿದ್ದನು. ಬ್ರಾಹ್ಮಣರೆಲ್ಲರೂ ಮುಂದಿನ ಕರ್ತವ್ಯವನ್ನು ಚಿಂತಿಸದೆ ಎಲ್ಲರೂ ಅಭಿರಾಮಸ್ವಾಮಿಯ ಗುಣಗಾನಮಾಡುತ್ತಾ ಆ ಯಜ್ಞಶಾಲೆಯಲ್ಲಿಯೇ ಯಜ್ಞಕುಂಡದ ಸುತ್ತಲೂ ಕುಳಿತುಬಿಟ್ಟರು.

---

## ೩೪

## ನಗರದ ದುರಂತೆ

ಮಹಮದಾಲಿಯವರು ಮೈಸೂರು ಸೈನ್ಯವನ್ನು ಮುಂದಕ್ಕೆ ನುಗ್ಗಿಸುತ್ತಾ ಕೋಟೆಯ ಮಹಾದ್ವಾರದಲ್ಲಿ ಬಂದು ನಿಂತು ಬಾಗಿಲುಗಳನ್ನು ಒಡೆಯತೊಡಗಿದರು. ಸ್ವಲ್ಪ ಹೊತ್ತಿನೊಳಗಾಗಿ ಬಾಗಿಲುಗಳು ಕೀಲುಕಳಚಿ ಧಬಾರನೆ ಬಿದ್ದವು. ಸೈನ್ಯಗಳು ಕೋಟೆಯೊಳಗೆ ನುಗ್ಗಲಾರಂಭಿಸಿದವು. ರಾಣಿಯ ಸೈನ್ಯಗಳು ಜಯ ಜಯ ಮಹಾದೇವ ಎಂದು ಘೋಷಣೆಮಾಡುತ್ತಾ ಶತೃಸೈನ್ಯದಮೇಲೆ ನುಗ್ಗಿದವು.

ಹೈದರಾಲಿಯು ಕೋಟೆಯ ಮರ್ಮವನ್ನು ತಿಳಿದಂಥಾ ನಗರದ ರಾಜಪುರುಷನೊಬ್ಬನ ಸಹಾಯದಿಂದ ದಿಡ್ಡಿಯ ಬಾಗಿಲನ್ನು ಒಡೆದುಕೊಂಡು ಬಿದನೂರು ಕೋಟೆಯನ್ನು ಪ್ರವೇಶಮಾಡಿದನು. ಈ ಸಮಾಚಾರವು ಪೂರ್ವಭಾಗದ ಕೋಟೆಯ ಮಹಾದ್ವಾರದ ಬಳಿ

ಯುದ್ಧಮಾಡುತ್ತಿದ್ದ ರಾಣಿಗೆ ತಿಳಿಯಿತು. ರಾಣಿಯು ಹಟಾತ್ತನೆ ಕುದುರೆಯನ್ನು ಹಿಂದಕ್ಕೆ ತಿರುಗಿಸಿ ಅರಮನೆಯನ್ನು ಪ್ರವೇಶಿಸಿದಳು. ಅತ್ತಕಡೆ ಹೈದರನು ದಿಡ್ಡೀಬಾಗಿಲಿನಿಂದ ಒಳಹೊಕ್ಕದ್ದನ್ನು ರಾಮರಾಯನು ಹಿಡಿದು ತನ್ನ ಉಳಿದ ಸೈನ್ಯವನ್ನು ಪಶ್ಚಿಮದ ಕೋಟೆಯ ಬಾಗಿಲಿನಿಂದ ತಂದು ಹೈದರಾಲಿಗೆ ಎದುರಾಗಿ ಯುದ್ಧವನ್ನು ಹೂಡಿದನು. ಕೋಟೆಯಲ್ಲೆಲ್ಲಾ ಎಲ್ಲೆಲ್ಲಿಯೂ ಸಣ್ಣ ಸಣ್ಣ ಗುಂಪುಗಳಿಗೆ ಯುದ್ಧಗಳು ಆಗುತ್ತಲೇಯಿದ್ದವು. ಪೂರ್ವದ್ವಾರದಿಂದ ಪ್ರವೇಶ ಮಾಡಿದ ದಿವಾನ್ ಮಹಮದಾಲಿಯವರಾಗಲೀ ದಿಡ್ಡಿಯಬಾಗಲಿನಿಂದ ಪ್ರವೇಶಿಸಿದ ಹೈದರಲ್ಲೀಖಾನನಾಗಲೀ ಅರಮನೆಯ ಸಮೀಪಕ್ಕೆ ಬರುವುದು ಬಹಳ ಕಷ್ಟವಾಗಿತ್ತು. ಇಷ್ಟುಹೊತ್ತಿಗೆ ಮಧ್ಯರಾತ್ರಿ ಹನ್ನೆರಡು ಘಂಟೆಯಾಗಿತ್ತು. ರಾಣಿಯು ಅರಮನೆಗೆ ಹಿಂತಿರುಗತ್ತಲೇ ಪರಿಜನರಿಗೂ ರಾಜಭಟರಿಗೂ ತಮಗೆ ಬೇಕುಬೇಕಾದ ಧನಕನಕಗಳನ್ನು ಅರಮನೆಯಿಂದ ಹೊತ್ತುಕೊಂಡು ತಕ್ಷಣ ಹೊರಟುಹೋಗಬೇಕೆಂದು ಆಜ್ಞಾಪಿಸಿದಳು. ಅರಮನೆಯ ನಾಲ್ಕು ದಿಕ್ಕುಗಳಲ್ಲಿಯೂ ತೈಲಭಾಂಡಗಳನ್ನೂ ಮದ್ದುಗುಂಡುಗಳನ್ನೂ ಇಡಿಸಿ ನಾಲ್ಕೂ ಕಡೆಯಿಂದ ತಾನೇ ತನ್ನ ಕೈಯ್ಯಿಂದ ಬೆಂಕಿಯನ್ನು ಹತ್ತಿಸಿ ಕುದುರೆಯನ್ನೇರಿ ದಕ್ಷಿಣದ್ವಾರದ ಕಡೆಗೆ ಹೋಗಿ ದೂರದಲ್ಲಿ ನಿಂತು ನೋಡಲಾರಂಭಿಸಿದಳು. ಸ್ವಲ್ಪ ಹೊತ್ತಿನೊಳಗಾಗಿ ಅರಮನೆಯು ಧಗಧಗನೆ ಉರಿಯಲಾರಂಭಿಸಿತು. ಅಗ್ನಿಜ್ವಾಲೆಗಳು ಆಕಾಶವನ್ನು ಅಡರುತ್ತಿದ್ದವು. ಆ ರಾಜಧಾನಿಯೆಲ್ಲವೂ ಧೂಮಾವೃತವಾಯಿತು. ಚಟಚಟ ಪಟಪಟ ಶಬ್ಧಗಳು ಕೇಳಲಾರಂಭವಾದವು. ಪುರಜನರೆಲ್ಲರೂ ಅರಮನೆಯಕಡೆಗೆ ಧಾವಿಸಲಾರಂಭಿಸಿದರು. ಸೈನಿಕರು ಅರಮನೆಯಕಡೆಗೆ ಓಡಿದರು. ಮಹಮದಾಲಿಯವರು ತಮ್ಮ ಕುದುರೆಯನ್ನು ಅರಮನೆಯಕಡೆಗೆ ತಿರುಗಿಸಿದರು. ಅವರ ಸೈನ್ಯವು ಅವರನ್ನು ಹಿಂಬಾಲಿಸಿತು. ಹೈದರಾಲಿಯವರು ಅರಮನೆಯ ಪ್ರಾಂಗಣಕ್ಕೆ ಸೈನ್ಯಸಮೇತರಾಗಿ ಪ್ರವೇಶಮಾಡಿದರು. ರಾಮರಾಯನು ಏಕಾಕಿಯಾಗಿ ತನ್ನ ಕುದುರೆಯನ್ನು ಅರಮನೆಯಕಡೆಗೆ ಓಡಿಸಿದನು.

ರಾಣಿಯು ಅರಮನೆಯಲ್ಲಿ ಬೆಂದುಹೋಗುತ್ತಿರಬಹುದೆಂದೂ ಆರ್ತನಾದ ಮಾಡುತ್ತಿರಬಹುದೆಂದೂ ತಲ್ಲಣಿಸತೊಡಗಿದನು. ಸೈನಿಕರು ಬಂದೀಖಾನೆಯ ಬಾಗಿಲುಗಳನ್ನೆಲ್ಲಾ ತೆರೆದುಬಿಟ್ಟರು. ಬಂದಿಗಳೆಲ್ಲರೂ ಹೊರಗೆ ಬಂದು ಆ ಅದ್ಭುತದೃಶ್ಯವನ್ನು ನೋಡುತ್ತಲಿದ್ದರು. ಈ ಬಂದೀಖಾನೆಯಿಂದ ಭೈರವಿಯು ಮುಕ್ತಳಾದಳೆಂದು ಬರೆಯುವ ಅಗತ್ಯವಿಲ್ಲ.

ಭೈರವಿಯು ಮಾತ್ರ ಎಲ್ಲರಂತೆ ಬಾಯಿಬಿಟ್ಟು ನೋಡುತ್ತ ನಿಂತಿರಲಿಲ್ಲ. ಅವಳು ಬೇಗಬೇಗ ಓಡಾಡುತ್ತಾ ಆದಷ್ಟು ವಿಷಯಗಳನ್ನು ಸಂಗ್ರಹಮಾಡಿದಳು. ಹೈದರಾಲಿಯವರ ಸೈನ್ಯಗಳು ಬಿದನೂರನ್ನು ಪೂರ್ತಿಯಾಗಿ ಆಕ್ರಮಿಸಿವೆಯೆಂದೂ ತಿಳಿದುಕೊಂಡಳು. ರಾಣಿಯು ಮಡಿದಿದ್ದಾಳೆಯೋ ಬದುಕಿದ್ದಾಳೆಯೋ ಎಂಬುದನ್ನು ಮಾತ್ರ ನಿರ್ಧರಿಸಲಾರದೇ ಹೋದಳು. ಬೇಗಬೇಗ ಮಲ್ಲಿಕಾರ್ಜುನ ಕ್ಷೇತ್ರದ ಕಡೆಗೆ ಹೊರಟಳು. ಆ ನಿಶರಾತ್ರಿಯಲ್ಲಿ ಎಷ್ಟೋ ಜನರು ಮಕ್ಕಳು ಮರಿಗಳನ್ನೂ ಹೆಂಗಸರನ್ನೂ ಕರೆದುಕೊಂಡು ಮಲ್ಲಿಕಾರ್ಜುನ ಕ್ಷೇತ್ರದಕಡೆಗೆ ಪರಿಧಾವಿಸುತ್ತಿದ್ದರು. ಅವರುಗಳು ಯುದ್ಧದ ವಿಚಾರಗಳನ್ನು ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ಆ ಮಾತುಗಳಲ್ಲಿ ಎಷ್ಟೋ ನಿಜ, ಎಷ್ಟೋ ಸುಳ್ಳು ಸೇರಿಕೊಂಡಿದ್ದಿತು. ಭೈರವಿಯು ಕೇಳುತ್ತ ಕೇಳುತ್ತ ಆ ಮಾತುಗಳಿಂದ ಎಷ್ಟು ನಿಜಾಂಶಗಳನ್ನು ಗ್ರಹಿಸಬಹುದೋ ಅಷ್ಟನ್ನು ಗ್ರಹಿಸಿಕೊಂಡಳು. ಮಹಾಮಂತ್ರಿ ರಾಮಕೃಷ್ಣರು ಸೆರೆ ಸಿಕ್ಕಿದ್ದಾರೆ. ಆದರೂ ಜೀವಂತರಾಗಿದ್ದಾರೆ. ಹೈದರಲ್ಲೀಖಾನನು ಅವರನ್ನೇನೂ ಮಾಡುವುದಿಲ್ಲ ಎಂದುಕೊಂಡಳು. ಮಲ್ಲಿಕಾರ್ಜುನ ಕ್ಷೇತ್ರವನ್ನು ಪ್ರವೇಶಮಾಡುತ್ತಲೇ ಚಂಡೀಶಾಲೆಯ ದುರಂತ ಕಥಾನಕವನ್ನು ಯಥಾವತ್ತಾಗಿ ಕೇಳಿದಳು. ಬಹುದಿನಗಳಿಂದ ಅಗ್ನಿಜ್ವಾಲೆಗಳಂತೆ ಕುದಿಯುತ್ತಿದ್ದ ಅವಳ ಕಣ್ಣುಗಳು ಕಂಬನಿತುಂಬಿದವು. ಅಭಿರಾಮಸ್ವಾಮಿಯ ದೇಹಪರಿತ್ಯಾಗವನ್ನು ನೆನೆನೆನೆದು ಹಸುಮಗಳಂತೆ ಅತ್ತಳು. ಕೊನೆಗೆ ಬಹುದೂರದಲ್ಲಿ ಒಂದು ಮರದಡಿಯಲ್ಲಿ ಹೋಗಿ ಕುಳಿತುಕೊಂಡು ದುಃಖಿಸಲಾರಂಭಿಸಿದಳು.

ಹೈದರಾಲೀಖಾನರೂ ದಿವಾನ್ ಮಹಮದಾಲಿಯವರೂ ಅರಮನೆಯ ಮುಂಭಾಗದಲ್ಲಿ ಪರಸ್ಪರ ಸಂಧಿಸಿದರು. ಸೈನಿಕರು ಬೆಂಕಿಯನ್ನಾರಿಸಲು ಪ್ರಯತ್ನಿಸುತ್ತಿದ್ದರು. ಹೈದರಾಲಿಯವರು "ಅರಮನೆಯು ಬುಡದಿಂದ ಶಿಖರದವರೆಗೆ ಹತ್ತಿಕೊಂಡು ಉರಿಯುತ್ತಿದೆ. ಇನ್ನು ಅದನ್ನಾರಿಸುವುದು ದುಃಸಾಧ್ಯವೇ ಸರಿ. ಆ ಅಗ್ನಿಜ್ವಾಲೆಗಳನ್ನು ಆರಿಸುವುದಕ್ಕೆ ಪ್ರಯತ್ನಿಸುವುದು ವೃಥಾ ಶ್ರಮ" ಎಂದು ಹೇಳಿ ಎಲ್ಲ ಜನಗಳನ್ನೂ ದೂರಕ್ಕೆ ಕಳುಹಿಸುವಂತೆ ಅಪ್ಪಣೆಮಾಡಿದರು. ಅರಮನೆಯ ಸುತ್ತಲೂ ಸೈನಿಕರ ಕಾವಲನ್ನಿಟ್ಟರು. ತಮ್ಮ ಶಿಬಿರವನ್ನು ಪೂರ್ವಭಾಗದ ಕೋಟೆಯ ಬಾಗಿಲಿನ ಒಳಾಂಗಣದಲ್ಲಿ ಏರ್ಪಡಿಸುವಂತೆ ಅಪ್ಪಣೆಯಿತ್ತು ಅಲ್ಲಿಂದ ತೆರಳಿದರು. ಮಹಮದಾಲಿಯವರು ಕೋಟೆಯ ಒಳಗಡೆಯೂ, ಕೋಟೆಯ ಮೇಲೆಯೂ ತಮ್ಮ ಸೈನ್ಯಗಳನ್ನು ಕಾವಲಿಟ್ಟರು. ಮೈಸೂರಿನ ಸೈನಿಕರಾರೂ ನಗರವನ್ನು ಕೊಳ್ಳೆ ಹೊಡೆಯಕೂಡದೆಂದು ಕಟ್ಟಪ್ಪಣೆಮಾಡಿದರು. ಹೀಗೆ ಏರ್ಪಾಡುಗಳನ್ನು ಮಾಡುತ್ತಿದ್ದಂತೆಯೇ ಬೆಳಗಾಗಿಹೋಯಿತು. ಮಹಮದಾಲಿಯವರು ವಿಶ್ರಾಂತಿಯನ್ನು ಪಡೆಯಲೇ ಇಲ್ಲ. ಕುದುರೆಯಿಂದ ಕೆಳಗಿಳಿಯಲೇ ಇಲ್ಲ. ರಾಜಧಾನಿಯಲ್ಲೆಲ್ಲಾ ಹೆಂಗಸರು ಮಕ್ಕಳಿಗೆ ಭಯವಿಲ್ಲವೆಂದೂ, ಪುರಜನರಿಗೆ ನೋವನ್ನುಂಟುಮಾಡುವುದಿಲ್ಲವೆಂದೂ ಡಂಗೂರವನ್ನು ಹೊಡೆಸಿದರು. ಅರಮನೆಯು ಉರಿಯುತ್ತಲೇ ಇದ್ದಿತು. ಹತ್ತಿಪ್ಪತ್ತುದಿನಗಳು ಆ ಬೆಂಕಿಯು ಹಾಗೆಯೇ ಇದ್ದಿತೆಂದು ಪೂರ್ವಿಕರು ದುಃಖದ ಗಾದೆಗಳನ್ನು ಹೇಳುತ್ತಿದ್ದರು. ಮೂರುದಿವಸಗಳು ರಾಜಧಾನಿಯಲ್ಲಿ ಗಲಿಬಿಲಿಯಾಗುತ್ತಲೇ ಇದ್ದಿತು. ಮೂರುದಿವಸಗಳನಂತರ ರಾಜಧಾನಿಯು ಶಾಂತವಾಯಿತು. ಊರುಬಿಟ್ಟು ಓಡಿಹೋಗಿದ್ದ ಪುರಜನರು ರಾಜಧಾನಿಯಲ್ಲಿರುವ ತಮ್ಮತಮ್ಮ ಮನೆಗಳಿಗೆ ಬಂದು ಸೇರಿಕೊಳ್ಳಲಾರಂಭಿಸಿದರು.

ಆ ಘೋರರಾತ್ರಿಯಲ್ಲಿ ಮಹಾರಾಣಿ ಚೆಲುವಮ್ಮಣ್ಣಿಯು ಅರಮನೆಯನ್ನು ಯಜ್ಞೇಶ್ವರನಿಗೆ ಆಹುತಿಕೊಟ್ಟು ಕೋಟೆಯ ದಕ್ಷಿಣದ್ವಾರದ

ಬಳಿ ಆ ಅಗ್ನಿಜ್ವಾಲೆಗಳನ್ನು ಒಂದೇ ದೃಷ್ಟಿಯಿಂದ ನೋಡುತ್ತಿದ್ದಳು. ತಾನು ಆ ಅರಮನೆಗೆ ಬಂದಾಗಿನಿಂದ ಇಂದಿನವರೆಗಿನ ವೃತ್ತಾಂತವೆಲ್ಲ ವನ್ನೂ ನೆನೆದುಕೊಂಡಳು. ಅವಳ ಹೃದಯವು ಶೂನ್ಯವಾಗಿತ್ತು. ತಲೆಯು ತಿರುಗುತ್ತಿತ್ತು. ಆ ಕ್ಷಣದಲ್ಲಿ ಮಹಾರಾಣಿಯು ಅನಾಥಳಾ ಗಿದ್ದಳು. ಅವಳ ಹೃದಯದಲ್ಲಿ ದುಃಖಸಾಗರವು ತುಂಬಿ ಅಲೆಗಳನ್ನೆಬ್ಬಿ ಸುತ್ತಿದ್ದಿತು. ಪುನಃ ಅರಮನೆಯ ಕಡೆಗೆ ದೃಷ್ಟಿಸಿ ನೋಡಿದಳು. ಒಂದು ಘಳಿಗೆಯ ಮುಂಚೆ ಇದ್ದುದಕ್ಕಿಂತಲೂ ದ್ವಿಗುಣೀಭೂತವಾಗಿ ಅಗ್ನಿಜ್ವಾಲೆಗಳು ಮೇಲಕ್ಕೆ ಎದ್ದು ಉರಿಯುತ್ತಿದ್ದವು. ಆ ಅಗ್ನಿಮಧ್ಯ ದಲ್ಲಿ ತಾನು ಪ್ರವೇಶಮಾಡಿಬಿಟ್ಟರೆ ತನ್ನದೆಲ್ಲವೂ ಪರಿಸಮಾಪ್ತಿಯಾಗು ವುದೆಂದು ಅವಳ ಮನಸ್ಸು ಪ್ರೇರೇಪಿಸುತ್ತಿದ್ದಿತು. ಆ ಮನಸ್ಸಿನಲ್ಲಿ ಕೋಪ, ದ್ವೇಷ, ಪ್ರೀತಿ, ಆಸೆ, ಭಯ, ಸಂತೋಷ ಈ ಭಾವಗಳೇ ಇಲ್ಲದೆ ಶೂನ್ಯವಾಗಿದ್ದಿತು. ಹಾಗೆಯೇ ರಾಣಿಯು ನೋಡುತ್ತಿರು ವಂತೆಯೇ ಹಿಂದುಗಡೆ ಯಾವುದೋ ಒಂದು ಧ್ವನಿಯು ಕೇಳಿಸಿತು. "ರಾಣಿಯವರೇ, ನೀವು ಇಲ್ಲಿರಕೂಡದು. ಶತ್ರುಗಳ ಕೈಗೆ ಸಿಕ್ಕಿಬೀಳು ತ್ತೀರಿ" ಎಂಬ ಮಾತುಗಳು ಕೇಳಿಬಂದವು. ರಾಣಿಯು ವ್ಯಗ್ರತೆಯಿಂದ ನಕ್ಕು, "ಶತ್ರುಗಳ ಕೈಗೆ ಸಿಕ್ಕಿದರೇನು? ನನ್ನನ್ನು ಯಾರೇನು ಮಾಡ ಬಲ್ಲರು?" ಎಂದು ಹೇಳಿ ಕುದುರೆಯ ಬೆನ್ನುತಟ್ಟಿ ಹಿಂದಕ್ಕೆ ತಿರುಗಿ ಸಿದಳು. ಎದುರಿಗೆ ಅಶ್ವಾರೋಹಿ ಪುರುಷನೊಬ್ಬನು ನಿಂತಿದ್ದನು. ಕ್ಷಣಹೊತ್ತು ರಾಣಿಯು ತಲೆಬಾಗಿದಳು. ಮರುಕ್ಷಣವೇ ಹೆಣ್ಣುಸಿಂಹ ದಂತೆ ತಲೆಯೆತ್ತಿ, "ಓಹೋ! ಸೇನಾಧಿಪತಿಗಳು ಬದುಕಿರುವಿರಾ? ನಾನಿಲ್ಲಿದ್ದರೆ ರಕ್ಷಿಸಲಾರಿರಾ?" ಎಂದು ಕೇಳಿದಳು. ರಾಮರಾಯನು ತನ್ನ ಕುದುರೆಯನ್ನಿಳಿದು ರಾಣಿಯ ಸಮೀಪಕ್ಕೆ ಬಂದು ಪಾದವನ್ನು ಮುಟ್ಟಿ ಕೈಮುಗಿದು "ಮಹಾರಾಣಿಯವರೇ, ಇಲ್ಲಿ ಒಂದುಕ್ಷಣವೂ ಇರಲು ನಮಗೆ ಅವಕಾಶವಿಲ್ಲ ನಡೆಯಿರಿ. ಈ ಕೋಟೆಯನ್ನು ದಾಟಿ ಹೊರಗೆ ಹೋಗೋಣ" ಎಂದನು. ರಾಣಿಯು ತಿರಸ್ಕಾರದ ನಗುವನ್ನು ನಕ್ಕು, "ಪುರುಷರಿಗೆ ಅಪಜಯವು ಬಂದಾಗ ಧೈರ್ಯವಿಲ್ಲವೆಂದು ನಾನು

ಚೆನ್ನಾಗಿ ಬಲ್ಲೆ. ನಮಗೆ ಇಲ್ಲಿ ಭಯವೆಂದರೇನು? ನಿಮಗೆ ಧೈರ್ಯ ವಿದ್ದರೆ ನನ್ನ ಜೊತೆಯಲ್ಲಿ ಬನ್ನಿರಿ. ನಾವಿಬ್ಬರೂ ಅಗೋ, ಅಲ್ಲಿ ಉರಿ ಯುತ್ತಿರುವ ಯಜ್ಞೇಶ್ವರನ ಗರ್ಭದಲ್ಲಿ ಹೋಗಿ ಸೇರೋಣ. ಅಲ್ಲಿ ನಮಗೆ ಶಾಶ್ವತವಾದ ನಿರ್ಭಯವಾದ ಸ್ಥಾನವಿದೆ. ಅದೋ! ಅಲ್ಲಿ ನೋಡಿರಿ. ಆ ಅಗ್ನಿ ಶಿಖೆಗಳು ಆಕಾಶವನ್ನು ಮುಟ್ಟುತ್ತಿವೆ. ಆ ಆಕಾಶ ದಲ್ಲಿ ಈ ಘೋರ ರಾತ್ರಿಯಲ್ಲಿಯೂ ಕಿಲಕಿಲನೆ ನಗುತ್ತಾ ಪ್ರಕಾಶಿಸು ತ್ತಿರುವ ಅಸಂಖ್ಯ ನಕ್ಷತ್ರಗಳನ್ನು ನೋಡಿರಿ. ಆ ಅಗ್ನಿ ಗರ್ಭವನ್ನು ನಾವಿಬ್ಬರೂ ಪ್ರವೇಶಮಾಡಿ ಆ ಮುಗಿಲು ಮುಟ್ಟುತ್ತಿರುವ ಅಗ್ನಿಜ್ವಾಲೆ ಗಳ ಮಾರ್ಗವಾಗಿ ಅಂತರಿಕ್ಷವನ್ನೇರಿಹೋಗಿ ನಕ್ಷತ್ರಲೋಕದಲ್ಲಿ ನಾವೂ ನಕ್ಷತ್ರಗಳಾಗುವ" ಎಂದು ಹೇಳಿದಳು. ಈ ಮಾತುಗಳನ್ನು ಉಚ್ಚರಿಸುವಾಗ ರಾಣಿಯ ಮಸ್ತಿಷ್ಕದಲ್ಲಿ ಪ್ರಜ್ಞೆಯು ಹಾರಿಹೋಗು ತ್ತಿತ್ತು. ರಾಣಿಯು ಬಿಟ್ಟ ಕಣ್ಣು ಬಿಟ್ಟಂತೆಯೇ ಜ್ಞಾನ ಶೂನ್ಯಳಾಗಿ ನೆಲದ ಮೇಲೆ ಬೀಳುತ್ತಿದ್ದಳು. ರಾಮರಾಯನು ಆ ಶರೀರವನ್ನು ಎರಡು ತೋಳುಗಳಿಂದಲೂ ಎತ್ತಿಕೊಂಡನು. ಮುಖದ ಹತ್ತಿರ ಮುಖ ವಿಟ್ಟು ನೋಡಿದನು. ಪ್ರಾಣವು ಹಾರಿಹೋಗಿದೆ ಎಂದೂ ಉದ್ವೇಗದಿಂದ ಶರೀರವು ಮಾತ್ರ ಕಂಪಿಸುತ್ತಿದೆ ಎಂದೂ ಈ ಕಂಪನವು ನಿಂತರೆ ಈ ದಿವ್ಯಜ್ಯೋತಿಯು ನಂದಿಹೋಯಿತೆಂದೂ ಬೋಧೆಯಾಯಿತು. ಅವನು ಮತ್ತಾವುದನ್ನೂ ಚಿಂತಿಸಲಿಲ್ಲ. ಶತ್ರುಗಳ ಕೈಗೆ ಈ ರಾಣಿಯ ಶರೀರ ವನ್ನು ಸಿಕ್ಕಗೊಡಬಾರದೆಂದೂ ಈ ಕಳೇಬರವನ್ನು ಈ ನಗರದ ರಾಜ್ಯ ದಲ್ಲಿ ಯಾರೂ ಕಾಣಬಾರದೆಂದೂ ದೃಢನಿಶ್ಚಯವನ್ನುಮಾಡಿ ರಾಣಿಯ ನ್ನೆತ್ತಿಕೊಂಡು ತನ್ನ ಕುದರೆಯನ್ನೇರಿ ದಕ್ಷಿಣದ್ವಾರದಿಂದ ಹೊರಗೆ ದಾಟಿ ಬಹುದೂರ ಹೊರಟುಹೋದನು.

---

## ೩೭

## ಹೈದರನ ಉದಾತ್ತ ರಾಜನೀತಿ

ರಾಜಧಾನಿಯು ಶಾಂತಸ್ಥಿತಿಗೆ ಬರುತ್ತಲೇ ಹೈದರಾಲಿಯು ಮುಂದಿನ ವ್ಯವಸ್ಥೆಯನ್ನು ಮಾಡಲು ಆಲೋಚಿಸತೊಡಗಿದನು. ನಗರವೇನೋ ಪೂರ್ಣವಾಗಿ ನಮ್ಮ ವಶವಾಗಿದೆ. ಆದರೆ ಈ ರಾಜ್ಯದಲ್ಲಿ ಭವಾನೀರಾಣಿ ಎಂಬ ಒಬ್ಬ ಯೋಗಿನಿಯಿದ್ದಾಳೆ. ಅವಳಿಗೆ ರಾಜಕೀಯದಲ್ಲಿ ಏನೋ ವಿಶೇಷ ಸಂಬಂಧವಿರುವಂತಿದೆ. ಮಹಾಮಂತ್ರಿ ರಾಮಕೃಷ್ಣರು ಬಂಧಿತರಾಗಿ ನಮ್ಮ ಶಿಬಿರದಲ್ಲಿದ್ದಾರೆ. ನಮ್ಮ ಶಿಬಿರದಲ್ಲಿ ಯುವರಾಜನು ಇದ್ದಾನೆ. ಈಗ ಅವನನ್ನು ಬಂಧನದಲ್ಲಿ ಇಡಿಸಿದ್ದೇವೆ. ಅವನು ಯುವರಾಜನಲ್ಲವೆಂದೂ ಯಾರೋ ನಾಮಾಂತರದಿಂದ ಬಂದು ನಮ್ಮಲ್ಲಿ ಸೇರಿಕೊಂಡಿದ್ದಾನೆಂದೂ ಕೆಲವರು ಹೇಳುವುದನ್ನು ಕೇಳಿದ್ದೇವೆ. ನಮ್ಮ ಶಿಬಿರದಲ್ಲಿರುವ ಮಂತ್ರಿ ಲಿಂಗಣ್ಣನು ನಗರದರಾಜ್ಯದಲ್ಲಿ ಹಿಂದೆ ಪರಾಭೂತನಾಗಿ ಈ ಯುದ್ಧದಲ್ಲಿ ನಮಗೆ ಬಹಳ ಸಹಾಯ ಮಾಡಿದ್ದಾನೆ. ಸೇನಾಧಿಪತಿ ರಾಮರಾಯನು ಜೀವಂತನಾಗಿಯೇ ಇದ್ದಾನೆ. ಅವನು ರಣಭೂಮಿಯಲ್ಲಿ ಮೃತಿಯನ್ನೈದಲೂ ಇಲ್ಲ. ನಮಗೆ ಸೆರೆಸಿಕ್ಕಲೂ ಇಲ್ಲ. ನಮ್ಮ ರಾಜಧಾನಿಗೆ ಬಂದು ಸಂಧಾನವನ್ನು ನಡಿಸಿದ ಭೈರವೀರಾಣಿಯು ಈ ರಾಜ್ಯದಲ್ಲಿಯೇ ಇದ್ದಾಳೆ. ಬಹುಮಂದಿ ಪಾಳೆಯಗಾರರು ಈ ಯುದ್ಧದಲ್ಲಿ ಮರಣಹೊಂದಿದ್ದಾರೆ. ರುದ್ರನಾಯಕರೊಬ್ಬರು ಮಾತ್ರ ನಮ್ಮ ಬಂಧನದಲ್ಲಿದ್ದಾರೆ. ಇವರೆಲ್ಲರೂ ಒಟ್ಟು ಕೂಡಿದರೆ ನಮಗೆ ವಿರೋಧವಾಗಿ ಒಂದು ಮಹಾಶಕ್ತಿಯು ಹುಟ್ಟುವುದರಲ್ಲೇನೂ ಸಂದೇಹವಿಲ್ಲ. ಈ ಮೈಸೂರಿನ ಮಹಾಸೈನ್ಯವು ಇಲ್ಲಿ ನೆಲಸಿರುವವರೆಗೆ ಈ ಶಕ್ತಿಗಳೆಲ್ಲವೂ ಅಡಗಿರುತ್ತವೆ. ನಾವು ನಮ್ಮ ಶಿಬಿರವನ್ನು ಎತ್ತುತ್ತಲೇ ನಗರವು ನಗರಕ್ಕೆ ಸೇರಿಹೋಗುತ್ತದೆ. ನಗರದ ರಾಜ್ಯವನ್ನು ನಾವು ಗೆದ್ದಂತಾದರೂ ನಗರದ ಶಕ್ತಿಗಳನ್ನು ನಾಶಮಾಡಿದಂತೆ ಆಗಲಿಲ್ಲ.

ಮಹಾರಾಣಿ ಚೆಲುವಮ್ಮಣ್ಣಿಯು ಅಂದಿನ ರಾತ್ರಿ ಆ ಅರಮನೆಯಲ್ಲಿ ಉರಿದುಹೋಗಿದ್ದಾಳೆ. ಇದು ನಮ್ಮ ಕಡೆಯವರ ಕಾರ್ಯವಲ್ಲ. ಇಲ್ಲೇ ಯಾರೋ ಅಂತರಂಗ ಶತೃಗಳಿದ್ದು ಈ ಕಾರ್ಯವನ್ನು ನಡೆಸಿದ್ದಾರೆ. ಅನ್ಯಾಯವಾಯಿತು. ಆ ಅರಮನೆಯು ನಮ್ಮ ಕೈಗೆ ಸಿಕ್ಕಿದ್ದರೆ ಮೈಸೂರಿಗೆ ಅಪಾರವಾದ ಲಾಭವಾಗುತ್ತಿದ್ದಿತು. ಅದಕ್ಕೆ ಆಸ್ಪದವಿಲ್ಲದೇ ಹೋಯಿತು. ನಮ್ಮ ಶಿಬಿರದಲ್ಲಿ ಕೆಲವು ದಿನಗಳಿದ್ದ ಭೈರವೀರಾಣಿಗೆ ಈ ನಗರದ ರಾಣಿಯಮೇಲೆ ಬಹಳ ದ್ವೇಷವಿದ್ದಿತು. ಅವಳು ರಾಣಿಯನ್ನು ಕೊಲೆಮಾಡಿಸುವುದಾಗಿ ನಮ್ಮಮುಂದೆ ಪ್ರತಿಜ್ಞೆಮಾಡಿ ಹೋಗಿದ್ದಳು. ಹುಚ್ಚು ಹೆಣ್ಣು. ಇಂಥಾ ಸೊಗಸಾದ ಸಂಪದ್ಯುಕ್ತವಾದ ಅರಮನೆಗೆ ಅವಳೇ ಬೆಂಕಿಯನ್ನು ಹಚ್ಚಿರಬೇಕು. ಬಹಳ ಸಾಹಸದ ಹೆಣ್ಣು. ಅಂತೂ ನಾವು ಇಷ್ಟು ವ್ಯವಸ್ಥೆಯನ್ನು ಮಾಡದೇ ಈ ರಾಜ್ಯವನ್ನು ಬಿಟ್ಟುಹೋಗುವಂತಿಲ್ಲ ಎಂದು ಹೈದರಾಲಿಯು ಆಲೋಚನೆ ಮಾಡುತ್ತಿದ್ದನು. ಮಹಮುದಾಲಿಯವರನ್ನು ಕರೆಸಿ ಈ ವಿಷಯಗಳನ್ನೆಲ್ಲಾ ಅವರೊಡನೆ ಸಮಾಲೋಚನೆ ಮಾಡಿದನು.

ಮಹಮುದಾಲಿಯವರು, "ಹುಜೂರ್ ನಮ್ಮ ಸೈನ್ಯಗಳು ಇಲ್ಲಿ ಒಂದುವರ್ಷಕಾಲ ಠಾಣ್ಯವನ್ನು ಮಾಡಬೇಕು. ಇಲ್ಲಿ ಮಹಾಬಲಿಷ್ಠರಾದ ಅಧಿಕಾರಿಗಳು ಈ ರಾಜ್ಯಭಾರವನ್ನು ವಹಿಸಿಕೊಂಡು ರಕ್ಷಣೆ ಮಾಡಬೇಕು" ಎಂದು ಹೇಳಿದರು. ಹೈದರಾಲಿಯವರು, "ಹೌದು ದಿವಾನರವರೇ, ಆ ಮಾತನ್ನು ಅಕ್ಷರಶಃ ನಾನು ಒಪ್ಪುತ್ತೇನೆ. ಈ ರಾಜ್ಯಭಾರವನ್ನು ಯಾರಿಗೆ ಒಪ್ಪಿಸಬೇಕು" ಎಂದು ಪ್ರಶ್ನೆಮಾಡಿದರು. ದಿವಾನರವರು "ಮತ್ತಾರಿದ್ದರೂ ಈ ರಾಜ್ಯವು ನಮ್ಮ ಕರಗತವಾಗುವುದಿಲ್ಲ. ಒಂದುವರ್ಷಕಾಲ ಚಿಕ್ಕ ನವಾಬರವರು ಇಲ್ಲಿ ಅಧಿಕಾರವನ್ನು ವಹಿಸಿಕೊಳ್ಳಬೇಕು. ಮಂಗಳೂರು ಈ ನಗರಕ್ಕೆ ಸೇರಿದೆ. ಆ ಕರಾವಳಿಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಇಂಗ್ಲೀಷರು ಆತುರಪಡುತ್ತಿದ್ದಾರೆ. ಈ ನಗರದ ರಾಜ್ಯವನ್ನು ಕೆಣಕಲು ಧೈರ್ಯವಿಲ್ಲದೇ ಅವರು ಸುಮ್ಮನಿದ್ದರು. ಈಗ ನಾಳೆಯಿಂದಲೇ ನಾವು ಯುದ್ಧಕ್ಕೆ ಸಿದ್ಧ

ರಾಗಬೇಕು. ಆದುದರಿಂದ ಚಿಕ್ಕ ನವಾಬರನ್ನು ಇಲ್ಲಿಯೇ ಇರಿಸ ಬೇಕು ಹುಜೂರ್" ಎಂದು ಸಲಹೆ ಹೇಳಿದರು.

ಹೈದರಾಲಿಯವರು ತಲೆದೂಗಿ "ದಿವಾನರವರ ಸಲಹೆಯನ್ನು ಮನ್ನಿಸ ಬೇಕಾದುದೇನೋ ಸತ್ಯ. ಟಿಪ್ಪೂಸುಲ್ತಾನರು ಈ ರಾಜ್ಯಭಾರಕ್ಕೆಸರಿ ಯಾದ ಮನುಷ್ಯರಲ್ಲ. ಅವರಿಗೆ ಧೈರ್ಯ ಪರಾಕ್ರಮಗಳಿವೆ. ಆದರೂ ಹಿಂದೂಜನರಲ್ಲಿ ತಿರಸ್ಕಾರ ಭಾವವಿದೆ. ಈ ರಾಜ್ಯದಲ್ಲಿ ಹಿಂದೂ ಸತ್ವವು ಸಜೀವವಾಗಿದೆ. ಇಲ್ಲಿಗೆ ಟಿಪ್ಪೂಸುಲ್ತಾನರು ಅನರ್ಹರು." ಎಂದರು. ದಿವಾನರವರು ತಲೆಬಾಗಿ "ಹಾಗಾದರೆ ಈ ರಾಜ್ಯಾಡಳಿತಕ್ಕೆ ಯಾರನ್ನು ನೇಮಿಸಬೇಕೆಂದು ಖಾವಂದರವರ ಅನುಗ್ರಹವಿದೆ" ಎಂದು ಕೇಳಿದರು. ನವಾಬರು ಕಿರುನಗುವನ್ನು ನಗುತ್ತಾ "ಸ್ವಯಂ ದಿವಾನರು ಈ ಅಧಿಕಾರ ವನ್ನು ಸ್ವೀಕರಿಸಬೇಕು" ಎಂದು ಹೇಳಿದರು. ದಿವಾನರು ವ್ಯಗ್ರರಾಗಿ, "ಜಹಾಪನಾ, ಮಾಫ್ ಮಾಡಬೇಕು. ನಾನು ಖಾವಂದರವರ ಸಮೀಪ ದಲ್ಲಿದ್ದು ಸೇವೆಮಾಡಲು ಅರ್ಹನು. ರಾಜ್ಯಾಡಳಿತಕ್ಕೆ ಲಾಯಕ್ಕಾದವ ನಲ್ಲ. ಮಹಾಸ್ವಾಮಿಯವರು ದೂರಮಾಡಿದರೆ ಮಕ್ಕಾಯಾತ್ರೆಗೆ ಹೊರಟು ಹೋಗುತ್ತೇನೆ" ಎಂದು ಹೇಳಿದರು. ಅಲ್ಲಿಗೆ ಆಮಾತು ನಿಂತುಹೋಯಿತು.

ಹೈದರಾಲಿಯವರು ದಿವಾನರನ್ನು ಕುರಿತು, "ದಿವಾನರವರೇ, ನಮ್ಮ ಶಿಬಿರದಲ್ಲಿರುವ ಯುವರಾಜ ಚಿನ್ನಬಳಪ್ಪನಾಯಕರಿಗೆ ಈ ರಾಜ್ಯದ ಪಟ್ಟಕಟ್ಟಿಸುವುದಾಗಿ ವಚನಕೊಟ್ಟು ಕರತಂದಿದ್ದೇವೆಲ್ಲವೇ. ಆ ವಚನವನ್ನು ನಾವು ಪೂರ್ಣವಾಗಿ ಪಾಲಿಸಬೇಕಷ್ಟೇ" ಎಂದರು.

ದಿವಾನರವರು ಸಣ್ಣನಗುವನ್ನು ನಕ್ಕು, "ಹುಜೂರ್, ಇನ್ನೂ ತಮ್ಮ ಕಿವಿಗೆ ಬಿದ್ದಿಲ್ಲವೇನು ? ನಮ್ಮ ಶಿಬಿರದಲ್ಲಿರುವವನು ಯುವರಾಜ ನಲ್ಲ. ಹುಜೂರ್, ಅವನೊಬ್ಬ ತಲೆತಿರುಕ. ಬುದ್ಧಿವಂತನೆಂದು ಕಾಣುತ್ತದೆ. ಈ ರಾಜ್ಯದ ರಾಜಕೀಯವನ್ನೆಲ್ಲಾ ಅರಿತವನೆಂದು ತೋರುತ್ತದೆ. ಅವನು ಯುವರಾಜನಾಗಿದ್ದರೆ ಈ ಯುದ್ಧವೇ

ನಡೆಯುತ್ತಿರಲಿಲ್ಲ. ಇಷ್ಟು ಪ್ರಾಣಹಾನಿಯಾಗುತ್ತಿರಲಿಲ್ಲ. ಇದೆಲ್ಲಾ ಅಂದೇ ಇತ್ಯರ್ಥವಾಗಿ ಹೋಗುತ್ತಿದ್ದಿತು" ಎಂದರು.

ಹೈದರಾಲಿಯವರು "ಅವನನ್ನೇ ನಮ್ಮ ಸಮ್ಮುಖಕ್ಕೆ ಕರೆತರಿಸಿರಿ. ಅವನೇನು ಹೇಳುತ್ತಾನೋ ನೋಡೋಣ" ಎಂದು ಹೇಳಿದರು.

ದಿವಾನರವರು, "ಹುಜೂರ್, ನನ್ನ ಬಿನ್ನಹವನ್ನು ಸ್ವಲ್ಪ ಲಾಲಿಸೋಣವಾಗಲಿ. ಮಹಾಮಂತ್ರಿ ರಾಮಕೃಷ್ಣರವರು ನಮ್ಮ ಶಿಬಿರದಲ್ಲಿ ಬಂದಿಗಳಾಗಿದ್ದಾರೆ. ಐದು ದಿನಗಳಾದವು, ಅವರನ್ನು ನಾವು ಹಾಗೆ ಬಂಧನದಲ್ಲಿಟ್ಟಿರುವುದು ಸರ್ವಥಾ ಯೋಗ್ಯವಲ್ಲ. ಮಹಾಮಂತ್ರಿಗಳನ್ನು ತಮ್ಮ ಸನ್ನಿಧಾನಕ್ಕೆ ಕರೆತರಿಸಿ, ಅವರನ್ನು ಗೌರವಿಸಿ ಅನಂತರ ಇತರ ರಾಜಕಾರ್ಯಗಳನ್ನು ಸಮಾಲೋಚನೆ ಮಾಡಬೇಕು. ಅವರನ್ನು ಒಂದು ಕ್ಷಣವೂ ಬಂಧನದಲ್ಲಿಡಕೂಡದು" ಎಂದು ಹೇಳಿದರು.

ಹೈದರಾಲಿಯವರು, "ಹೌದು, ಹೌದು. ಬಹಳ ತೂಕವಾದ ಸಲಹೆ. ನಾನು ತಪ್ಪುಮಾಡಿದೆ. ಈ ರಾಜಧಾನಿಯು ನಮ್ಮ ಸ್ವಾಧೀನವಾದ ದಿನವೇ ಯುದ್ಧವು ಪೂರ್ತಿಯಾಯಿತು. ಅಂದೇ ನಾನು ಖುದ್ದಾಗಿ ಹೋಗಿ ಅವರ ಭೇಟಿಯನ್ನು ತೆಗೆದುಕೊಳ್ಳಬೇಕಾಗಿದ್ದಿತು. ಮೂರುದಿನ ಮಹಾಮಂತ್ರಿಗಳನ್ನು ಬಂಧನದಲ್ಲಿಟ್ಟ ಅಪರಾಧವು ನನ್ನದು. ನೀವೇ ಖುದ್ದುಹೋಗಿ ಅವರನ್ನು ಜೊತೆಯಲ್ಲಿ ಕರೆತರತಕ್ಕದ್ದು" ಎಂದು ಆಜ್ಞೆ ಮಾಡಿದರು.

ಮಹಮದಾಲಿಯವರು ನವಾಬರವರ ಡೇರೆಯಿಂದ ತಾವೇ ನಡೆದುಹೋಗಿ ಬಂಧನದಲ್ಲಿಟ್ಟಿದ್ದ ಮಂತ್ರಿಯವರನ್ನು ಭೇಟಿಮಾಡಿ, ತಾವು ಮೈಸೂರಿನ ದಿವಾನರಾದ ಮಹಮದಾಲಿಯವರೆಂದು ಹೇಳಿಕೊಂಡರು.

ಮಂತ್ರಿಗಳು ಕೈಜೋಡಿಸಿ ಅಭಿವಂದನಮಾಡಿದರು. ಅನಂತರ ಸಾಮಾನ್ಯವಾಗಿ ಕುಶಲಪ್ರಶ್ನೆಗಳಾದ ತರುವಾಯ ಮಂತ್ರಿಗಳು "ನವಾಬರ ಭೇಟಿಗೆ ಬರಬೇಕೆಂದು ನವಾಬರವರ ಪ್ರಾರ್ಥನೆಯಿದೆ" ಎಂದು ತಿಳಿಸಿದರು. ಮಂತ್ರಿಗಳು ತಾವಿದ್ದ ಡೇರೆಯಿಂದ ಹೊರಹೊರಟು

ನವಾಬರವರ ಡೇರೆಯಕಡೆಗೆ ನಡೆದರು. ಮಹಮದಾಲಿಯವರು ಮುಂದೆ ಮುಂದೆ ದಾರಿತೋರುತ್ತಾ ನಡೆದರು. ಆ ಶಿಬಿರದಲ್ಲಿದ್ದ ಸೇನಾಧಿಪತಿಗಳೂ ಸೈನಿಕರೂ, ಮಂತ್ರಿಗಳಿಗೂ ದಿವಾನರವರಿಗೂ ಸಲಾಂ ಮಾಡಿ ಮರ್ಯಾದೆಯನ್ನು ತೋರುತ್ತಿದ್ದರು. ಮಂತ್ರಿಗಳು ದಿವಾನ ರೊಡನೆ ನವಾಬರ ಡೇರೆಯೊಳಗೆ ಪ್ರವೇಶಮಾಡುತ್ತಲೇ ಹೈದರಾಲಿ ಯವರು ಎದ್ದು ಮಂತ್ರಿಗಳಿಗೆ ಹಸ್ತಲಾಘವವನ್ನು ಕೊಟ್ಟು ಆಸನದಲ್ಲಿ ಕುಳ್ಳಿರಿಸಿ, ತಾವೂ ಸಮೀಪದಲ್ಲಿ ಕುಳಿತುಕೊಂಡರು. ಹೈದರಾಲಿ ಯವರು ಮಹಾಮಂತ್ರಿಗಳನ್ನು ಭೇಟಿಮಾಡಿದ್ದು ಇದೇ ಮೊದಲು ಆದಾಗ್ಯೂ ಚಿರಪರಿಚಿತರಂತೆ ಕುಶಲಪ್ರಶ್ನೆಗಳನ್ನುಮಾಡಿದರು. ನವಾಬ ರವರು, "ಮಹಾಮಂತ್ರಿಗಳೇ, ತಮ್ಮನ್ನು ಐದುದಿನಗಳಿಂದ ಬಂಧನ ದಲ್ಲಿಟ್ಟದ್ದು ಅಪರಾಧ ಮಾಡಿದ್ದೇವೆ. ಅದಕ್ಕಾಗಿ ಕ್ಷಮಾಪಣೆಯನ್ನು ಬೇಡುತ್ತೇವೆ" ಎಂದು ಹೇಳಿದರು.

ಅದಕ್ಕೆ ಮಂತ್ರಿಗಳು ತಲೆತಗ್ಗಿಸಿ "ಸೇನಾಧಿಪತಿಗಳೇ, ಅದು ಸಂಗ್ರಾಮಧರ್ಮ. ರಣಕ್ಷೇತ್ರದಲ್ಲಿ ನೀವು ನನ್ನನ್ನು ಸೆರೆಹಿಡಿದಿರಿ. ಬಂಧನದಲ್ಲಿಡುವುದು ನಿಮ್ಮ ಅಧಿಕಾರಕ್ಕೆ ಸೇರಿದ್ದು" ಎಂದರು.

ನವಾಬರು "ಮಂತ್ರಿಗಳೇ ಒಳ್ಳೆಯಮಾತು ಕಾರಣಾಂತಗಳಿಂದ ನಾವು ಈ ನಗರದ ಮೇಲೆ ಯುದ್ಧಕೆ ಬರಬೇಕಾಯಿತು ಯಾವಾಗಲೂ ನಮ್ಮ ಅಪಾರ ಗೌರವಕ್ಕೆ ತಾವು ಪಾತ್ರರಾಗಿದ್ದೀರಿ. ಆದರೆ ಮೈಸೂರು ದಂಡು ನಗರದಮೇಲೆ ಎದ್ದುಬಂದಾಗ ನಗರದ ಮಹಾರಾಣಿಯವರು ತಮ್ಮನ್ನು ಬಂಧನದಲ್ಲಿಡಿಸಿದ್ದರು. ಆಗ ತಮ್ಮೊಡನೆ ನಾವು ಸಂಧಾನ ವನ್ನು ನಡೆಸಲು ಆಸ್ಪದವಿರಲಿಲ್ಲ. ಆದ್ದರಿಂದ ಯುದ್ಧವನ್ನು ಮಾಡಲೇ ಬೇಕಾಯಿತು" ಎಂದು ಹೇಳಿದರು. ಮಂತ್ರಿಗಳು, "ನವಾಬರವರೇ, ಒಂದು ರಾಜ್ಯದಮೇಲೆ ಮತ್ತೊಂದು ರಾಜ್ಯದವರು ಯುದ್ಧಮಾಡುವುದು ಸಹಜವಾಗಿಯೇ ಇದೆ. ಯುದ್ಧವು ಮುಗಿದುಹೋದಮೇಲೆ ಆ ಮಾತುಗಳನ್ನು ಆಡುವುದರಿಂದ ಫಲವೇನಿದೆ" ಎಂದರು.

ಹೈದರಲ್ಲೀಖಾನರು, "ಮಂತ್ರಿಗಳೇ, ಅದು ಯುಕ್ತವಾದ ಮಾತು.

ಮುಂದೇನು ಮಾಡಬೇಕು. ಅಪ್ಪಣೆಕೊಡಿಸೋಣವಾಗಲೀ" ಎಂದರು. ಮಂತ್ರಿಗಳು, "ನವಾಬರವರೇ, ನಗರದ ರಾಜ್ಯವನ್ನು ನೀವು ಗೆದ್ದಿದ್ದೀರಿ. ಈ ರಾಜ್ಯವು ನಿಮ್ಮದು. ಚಿತ್ತಕ್ಕೆ ತೋರಿದಂತೆ ಮಾಡಬಹುದು" ಎಂದರು.

ನವಾಬರು, "ಮಂತ್ರಿಗಳೇ, ವಿಶೇಷವಾತನಾಡುವುದರಿಂದ ಫಲವೇನು. ಈ ನಗರದ ರಾಜ್ಯವು ಅನಾಯಕವಾಗಿದೆ. ನಾವು ನಿಮಗೆ ಈ ರಾಜ್ಯದ ಪಟ್ಟಕಟ್ಟಬೇಕೆಂದು ಸಂಕಲ್ಪಿಸಿದ್ದೇವೆ. ತಾವು ಈ ನಮ್ಮ ಸಂಕಲ್ಪವನ್ನು ಈಡೇರಿಸಿಕೊಡಬೇಕೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ" ಎಂದರು. ಮಂತ್ರಿಗಳು ಮೌನದಿಂದ ತಲೆಬಾಗಿದರು.

ನವಾಬರು, "ಮಂತ್ರಿಗಳೇ, ಮಾತನಾಡುವುದಿಲ್ಲವೇಕೆ? ಮೌನವು ಅರ್ಧ ಅಂಗೀಕಾರವಲ್ಲವೇ ?" ಎಂದರು.

ಮಂತ್ರಿಗಳು ಎದ್ದು ನಿಂತು, "ನವಾಬರವರೇ, ನಾನು ಯುದ್ಧದ ಬಂದಿಯಾಗಿದ್ದೇನೆ. ತಮ್ಮನ್ನು ತಿರಸ್ಕರಿಸುವುದು ಧರ್ಮವಲ್ಲವೆಂದು ಮೌನವನ್ನು ವಹಿಸಿದೆ. ಈ ರಾಜ್ಯವನ್ನು ಸ್ವೀಕರಿಸುವ ಅಧಿಕಾರವು ನನಗೆಲ್ಲಿದೆ? ನಾನು ಬ್ರಾಹ್ಮಣ. ವಂಶಪಾರಂಪರ್ಯವಾಗಿ ಈ ರಾಜ್ಯದ ಉಪ್ಪನ್ನುಂಡಿರುವ ಸೇವಕ. ತಮ್ಮ ಅನುಗ್ರಹದಿಂದಲೇ ಆಗಲೀ, ಸ್ವಪರಾಕ್ರಮದಿಂದಲೇ ಆಗಲೀ ಸಿಂಹಾಸನವನ್ನು ಬಯಸುವುದು ಸ್ವಾಮಿದ್ರೋಹ, ರಾಜದ್ರೋಹ, ದೇಶದ್ರೋಹ. ನಾನು ಬ್ರಾಹ್ಮಣ. ನನಗೆ ಸಿಂಹಾಸನವನ್ನೇರುವ ಅಧಿಕಾರವು ಶಾಸ್ತ್ರೋಕ್ತವಾಗಿ ಇಲ್ಲವೇ ಇಲ್ಲ. ನಾನು ವೇದಶಾಸ್ತ್ರಗಳನ್ನು ನಂಬಿರುವ ಆಸ್ತಿಕ. ತಮಗೆ ನನ್ನಲ್ಲಿ ನಂಬಿಕೆಯಿದ್ದರೆ ನನ್ನನ್ನು ಬಂಧನದಿಂದ ಬಿಟ್ಟುಬಿಡಿರಿ. ಇಲ್ಲದಿದ್ದರೆ ಪಂಜರದಲ್ಲಿ ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಗೆ ಸಾಗಿಸಿರಿ. ರಾಮಕೃಷ್ಣನನ್ನು ಪ್ರಲೋಭಮಾಡುವ ಯಾವ ಶಕ್ತಿಯೂ ಈ ಪ್ರಪಂಚದಲ್ಲಿ ಇಲ್ಲವೆಂದು ನಾನು ಎದೆತಟ್ಟಿ ಹೇಳುತ್ತೇನೆ" ಎಂದು ಹೇಳಿದರು. ನವಾಬರು ಆಸನದಿಂದೆದ್ದು ಮಂತ್ರಿಗಳನ್ನು ವಂದಿಸಿ "ಮಾಫ್ ಮಾಡಬೇಕು. ನನ್ನ ಅಪರಾಧವನ್ನು ಕ್ಷಮಿಸಬೇಕು. ತಾವು ಬಂಧನದಲ್ಲಿಲ್ಲ. ಈ ಕೋಟೆಯು ನಮ್ಮ ವಶವಾಗುತ್ತಲೇ ಬಂಧನವು ಕಡಿಯಲ್ಪಟ್ಟಿದೆ.

ತಾವು ಸ್ವತಂತ್ರರಾಗಿದ್ದೀರಿ. ತಮ್ಮ ಮಹಲಿಗೆ ಚಿತ್ತೈಸಬಹುದು. ನಾವು ನಿಮಗೆ ಸ್ವಲ್ಪವೂ ಅಪರಾಧಮಾಡಿಲ್ಲವೆಂದು ತ್ರಿಕರಣಪೂರ್ವಕವಾಗಿ ನಂಬಿದ್ದೇನೆ. ತಮ್ಮ ಮಾತಿನಿಂದಲೂ ಆ ವಚನವನ್ನು ಕೇಳಿದರೆ ಧನ್ಯರಾಗುತ್ತೇವೆ" ಎಂದರು.

ಮಂತ್ರಿಗಳು "ನವಾಬರವರೇ ಕ್ಷಮಿಸಬೇಕು. ತಾವು ನನಗಾಗಲೀ ಈ ರಾಜ್ಯಕ್ಕಾಗಲೀ ಏನೂ ಅಪರಾಧಮಾಡಿಲ್ಲ. ಈ ನಗರದ ಧರ್ಮವು ಪೂರೈಸಿ ಬರಿದಾಗಿಹೋಗಿತ್ತು. ನಾವೆಲ್ಲರೂ ಆಟದ ಬೊಂಬೆಗಳಂತೆ ಓಡಾಡುತ್ತಿದ್ದೆವು. ಅಂದು ಸದಾಶಿವನಾಯಕರು ಸ್ಥಾಪಿಸಿದ ಧರ್ಮರಾಜ್ಯವು ಎಂದೋ ಅಳಿದುಹೋಯಿತು. ನೀವು ಆ ಪ್ರಭುತ್ವವನ್ನು ನೆಲಕ್ಕುರುಳಿಸಿದಿರಿ. ಇದು ಶಿವಪ್ಪನಾಯಕರ ನಗರವಲ್ಲ. ಇನ್ನು ಮೇಲೆ ಇದು ಹೈದರ್ ನಗರ. ನನ್ನ ಮನಸ್ಸಿನಲ್ಲಿ ತಮ್ಮ ವಿಷಯದಲ್ಲಿ ಯಾವ ವಿರೋಧಭಾವವೂ ಉಳಿದಿಲ್ಲ. ತಾವು ವೀರಪುರುಷರೆಂದು ನಾನು ತಮ್ಮನ್ನು ಅಮರಣಾಂತ ಗೌರವಿಸುತ್ತೇನೆ. ಆದರೆ ನಾನು ತಮ್ಮಲ್ಲಿ ಬೇಡುವ ಭಿಕ್ಷೆಯೊಂದುಂಟು" ಎಂದು ಹೇಳಿದರು.

ಹೈದರಾಲಿಯವರು "ಮಂತ್ರಿಗಳೇ ತಮ್ಮ ಅಪೇಕ್ಷೆಯನ್ನು ಅಪ್ಪಣೆ ಕೊಡಿಸೋಣವಾಗಲಿ." ಎಂದು ಕೇಳಿದರು.

ಮಂತ್ರಿಗಳು "ನವಾಬರವರೇ ತಾವು ಮುಸಲ್ಮಾನರು. ಅವರವರ ಧರ್ಮವು ಅವರವರಿಗೆ ಪವಿತ್ರವಾದುದು. ಈ ರಾಜ್ಯವು ಶುದ್ಧ ಹದಿನಾರಾಣೆಯ ಹಿಂದೂ ಧರ್ಮದ ನೆಲಬೀಡಾಗಿದೆ. ಈ ರಾಜ್ಯದಲ್ಲಿ ಪುರಾತನ ದೇವಾಲಯಗಳೂ, ಮಠಗಳೂ, ಧರ್ಮ ಸಂಸ್ಥೆಗಳೂ ಬಹು ಕಾಲದಿಂದ ನೆಲಸಿವೆ. ತಮ್ಮ ಆಗ್ರಹದಿಂದ ಹಿಂದೂ ಧರ್ಮವು ಪದದಳಿತವಾಗದಂತೆ ಅಭಯಪ್ರದಾನಮಾಡಬೇಕು. ಹಿಂದೂ ಸ್ತ್ರೀಯರ ಮೇಲೆ ಅಪಚಾರವಾಗದಂತೆ ನೋಡಿಕೊಳ್ಳಬೇಕು. ಇದೇ ನಾನು ತಮ್ಮಲ್ಲಿ ಬೇಡುವ ಭಿಕ್ಷೆ. ನಾನು ಸಂತೋಷದಿಂದ ಈ ರಾಜ್ಯವನ್ನು ತೊರೆದು ಹೋಗುತ್ತೇನೆ. ಒಂದು ಕಿಲುಬು ಕಾಸನ್ನೂ ತೆಗೆದುಕೊಂಡು ಹೋಗುವುದಿಲ್ಲ. ನಾನು ವಾರಣಾಸಿಗೆ ಹೊರಟುಹೋಗುತ್ತೇನೆ. ಅಲ್ಲಿ

ಗಂಗೆಯಲ್ಲಿ ಈ ದೇಹವನ್ನು ಪರಿತ್ಯಾಗಮಾಡುತ್ತೇನೆ. ಅಪ್ಪಣೆಕೊಡಿರಿ" ಎಂದು ಕೈ ಜೋಡಿಸಿದರು.

ಹೈದರಾಲಿಯವರು ತಮ್ಮ ಎರಡು ಕೈಗಳಿಂದಲೂ ಮಂತ್ರಿಗಳ ಕೈಯನ್ನು ಹಿಡಿದುಕೊಂಡು ಅವರ ಹಸ್ತಗಳಿಂದ ತಮ್ಮ ಕಣ್ಣನ್ನೊತ್ತಿ ಕೊಂಡು ಎರಡು ಹಸ್ತಗಳನ್ನೂ ಚುಂಬಿಸಿ, "ಮಂತ್ರಿಗಳೇ ದೇವರಾಣೆಗೂ ನಾನು ಪ್ರಮಾಣಮಾಡಿ ಹೇಳುತ್ತೇನೆ. ನಾನು ಮುಸಲ್ಮಾನನೆಂಬುದು ನಿಜ. ಆದರೆ ಹಿಂದೂಧರ್ಮದ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ಅಪಾರ ಗೌರವ ಬುದ್ಧಿಯಿದೆ. ನಾನು ಸ್ವತಂತ್ರರಾಜನಲ್ಲ. ಮೈಸೂರು ರಾಜರ ಸೇವಕನಾಗಿದ್ದೇನೆ. ಮೈಸೂರಿನ ರಾಜರು ಧರ್ಮರಕ್ಷಕರೆಂದು ಬಿರುದು ಹೊತ್ತಿದ್ದಾರೆ. ತಮ್ಮ ಹಿಂದೂ ಧರ್ಮವೂ ಅವರ ಹಿಂದೂ ಧರ್ಮವೂ ಬೇರೆಬೇರೆಯಲ್ಲ. ಇಂದು ಈ ಶಿಬಿರದಮೇಲೆ ಹಾರುತ್ತಿರುವುದು ಮೈಸೂರಿನ ಧ್ವಜ. ನಾನು ಮೈಸೂರಿನ ಸೇನಾಧಿಪತಿ. ನನ್ನಿಂದ ಈ ರಾಜ್ಯದಲ್ಲಿ ಎಳ್ಳಷ್ಟೂ ದುರಾಗತವು ನಡೆಯದಂತೆ ನೋಡಿಕೊಳ್ಳುವುದು ನನ್ನ ಧರ್ಮ. ಆ ವಿಷಯದಲ್ಲಿ ತಾವು ಸಂದೇಹವಿಡಬೇಡಿರಿ. ಈ ರಾಜ್ಯದಲ್ಲಿಯೇ ತಾವು ನೆಲಸಬೇಕೆಂದು ನಮ್ಮ ಆಸೆಯಿದೆ" ಎಂದು ಹೇಳಿ ಮತ್ತೊಮ್ಮೆ ಸಲಾಂಮಾಡಿ ಅವರನ್ನು ಮಹಲಿಗೆ ರಾಜಮರ್ಯಾದೆ ಗಳೊಡನೆ ಕಳುಹಿಸಿಕೊಟ್ಟರು.

ಮಂತ್ರಿಗಳು ತಮ್ಮ ಮಹಲಿಗೆ ಹೋಗಿ ಏಕಾಂತದಲ್ಲಿ ಕುಳಿತು ಎಲ್ಲ ಸಮಾಚಾರಗಳನ್ನೂ ವಿಚಾರಿಸಿದರು. ಅಭಿರಾಮಸ್ವಾಮಿಗಳ ಶರೀರ ಪರಿತ್ಯಾಗವನ್ನು ಕೇಳಿ ಅವರಿಗೆ ಬಹಳ ದುಃಖವಾಯಿತು. ಮರುಕ್ಷಣದಲ್ಲಿಯೇ, "ಮಾನವನು ಎಂದಾದರೊಂದುದಿನ ಸಾಯಲೇ ಬೇಕು. ಸರಿಯಾದ ಸಮಯದಲ್ಲಿ ಸರಿಯಾದ ಪವಿತ್ರ ಮರಣವು ಅವರಿಗೆ ಪ್ರಾಪ್ತವಾಗಿದೆ. ಅದಕ್ಕಾಗಿ ದುಃಖಿಸಲೇಕೆ" ಎಂದು ಸಮಾಧಾನ ಮಾಡಿಕೊಂಡರು. ಮಹಾರಾಣಿ ಚೆಲುವಮ್ಮಣ್ಣಿಯ ಸಮಾಚಾರವು ಏನೆಂದು ವಿಚಾರಿಸಿದರು. ಎಷ್ಟೋ ವಿಚಾರಣೆಗಳಿಂದ ಅರಮನೆಯ ಅಗ್ನಿಯಲ್ಲಿ ಮಹಾರಾಣಿಯವರು ಭಸ್ಮವಾಗಿ ಹೋಗಿರಬೇಕೆಂದು

ನಿಶ್ಚಯಿಸಿದರು. ಕಟ್ಟಕಡೆಯಲ್ಲಿಯೂ ಮಹಾರಾಣಿಯವರು ವೈಭವೋಪೇತವಾದ ಮರಣವನ್ನು ಹೊಂದಿದರೆಂದು ಸಮಾಧಾನ ಮಾಡಿಕೊಂಡರು. ಇನ್ನು ಈ ನಗರದ ರಾಜ್ಯದಲ್ಲಿ ಅವರು ವಿಚಾರಿಸಬೇಕಾದದ್ದು ಏನಿದೆ ? ಭವಾನೀರಾಣಿಯವರ ವೃತ್ತಾಂತವನ್ನು ತಿಳಿಯಲು ಅವರಿಗೆ ಕುತೂಹಲವಿದ್ದಿತು. ಆದರೆ ಆ ವಿಷಯವಾಗಿ ಯಾವ ಸಮಾಚಾರಗಳೂ ತಿಳಿಯಲಿಲ್ಲ. ಭವಾನೀರಾಣಿಯವರಿಗಾಗಿ ಮಂತ್ರಿಗಳು ಹಂಬಲಿಸಬೇಕಾದುದೇನೂ ಇರಲಿಲ್ಲ. ಭವಾನೀರಾಣಿಯವರು ಸರ್ವಸಂಗ ಪರಿತ್ಯಾಗ ಮಾಡಿದ ಕರ್ಮಯೋಗಿನಿ. ಅವರಿಗೆ ಲಾಭಾಲಾಭಗಳ, ಜಯಾಜಯಗಳ ಎಣಿಕೆಯೇ ಇಲ್ಲ. ಅವರಿಗಾಗಿ ಮಂತ್ರಿಗಳು ಚಿಂತಿಸಬೇಕಾದುದೇನಿದೆ! ಇಷ್ಟೆಲ್ಲಾ ಯೋಚನೆಮಾಡಿ ತಮ್ಮ ಆಸ್ತಿಪಾಸ್ತಿಗಳನ್ನೂ ದ್ರವ್ಯಾಭರಣಗಳನ್ನೂ ವಿದ್ವಾಂಸರುಗಳಾದ ವೈದೀಕರುಗಳಿಗೆ ದಾನಮಾಡಿಬಿಡಬೇಕೆಂದು ಸಂಕಲ್ಪಿಸಿದರು. ಮಾರನೆಯದಿನ ಮಂತ್ರಿಗಳು ಸ್ನಾನಾಹ್ನೀಕಗಳನ್ನು ಪೂರೈಸಿ ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಿ ಅಲ್ಲಿ ಬ್ರಾಹ್ಮಣರನ್ನೆಲ್ಲಾ ಕರೆಸಿ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲಾ ಧಾರಾದತ್ತ ಮಾಡಿದರು. ಅಲ್ಲಿಂದ ತಮ್ಮ ಮನೆಗೆ ಬಂದು ಭೋಜನವನ್ನು ತೀರಿಸಿ ಹೊರಗೆ ಬರುವಷ್ಟರಲ್ಲಿ ಮೈಸೂರಿನ ನವಾಬರಾದ ಹೈದರಲ್ಲೀಖಾನರಿಂದ ಕರೆಯು ಬಂದಿತ್ತು. ಪಲ್ಲಕ್ಕಿಯು ಸಿದ್ಧವಾಗಿದ್ದಿತು. ಅದರಲ್ಲಿ ಕುಳಿತು ರಾಮಕೃಷ್ಣರವರು ಹೈದರಾಲಿಯವರ ಶಿಬಿರಕ್ಕೆ ತೆರಳಿದರು. ಆ ಶಿಬಿರದಲ್ಲಿ ಸೈನ್ಯವ್ಯೂಹದ ಮಧ್ಯದಲ್ಲಿ ಹೈದರಾಲಿಯವರ ದರಬಾರು ಸೇರಿಸಲ್ಪಟ್ಟದ್ದಿತು. ಮಂತ್ರಿಗಳು ಆ ದರಬಾರವನ್ನು ಪ್ರವೇಶಿಸುತ್ತಲೇ ಎಲ್ಲರೂ ಎದ್ದು ಅಭಿವಾದನ ಮಾಡಿದರು. ನವಾಬರ ಪಕ್ಕದಲ್ಲಿ ಸಿದ್ಧವಾಗಿದ್ದ ಆಸನದಮೇಲೆ ಹಸ್ತಲಾಘವವನ್ನು ಕೊಟ್ಟು ಮಂತ್ರಿಗಳನ್ನು ದರಬಾರಿನ ಮೊಖ್ತೇಸರರು ಕುಳ್ಳಿರಿಸಿದರು.

ಹೈದರಾಲಿಯವರು, "ಮಂತ್ರಿಗಳೇ ನಮಗೆ ಈ ರಾಜ್ಯದ ಸಂಪ್ರದಾಯಾನುಸಾರವಾಗಿ ಕೆಲವು ಸಲಹೆಗಳನ್ನು ಕೊಡಬೇಕೆಂದು ತಮ್ಮನ್ನು ಕರೆಸಿದ್ದೇವೆ. ಈ ರಾಜ್ಯದಲ್ಲಿ ನೂರಿಪ್ಪತ್ತು ಪಾಳೆಯಪಟ್ಟು

ಗಳಿವೆ. ಅವರಲ್ಲಿ ಬಹುಮಂದಿ ಈ ಯುದ್ಧದಲ್ಲಿ ಮಡಿದುಹೋಗಿದ್ದಾರೆ. ಆ ಪಾಳೆಯಪಟ್ಟುಗಳಿಗೆ ಮುಂದೇನುಮಾಡಬೇಕು" ಎಂದು ನವಾಬರು ಪ್ರಶ್ನೆಮಾಡಿದರು.

ಮಂತ್ರಿಗಳು ಎದ್ದುನಿಂತು "ನವಾಬರವರೇ ಅದಕ್ಕೆ ನಾನು ಸಲಹೆಕೊಡುವ ಅಗತ್ಯವಿಲ್ಲ. ಅವರೆಲ್ಲರೂ ಹಿಂದೂ ಧರ್ಮಿಗಳು. ಹಿಂದೂ ಧರ್ಮದ ಪ್ರಕಾರ ಅವರ ಮಕ್ಕಳು, ಮಕ್ಕಳಿಲ್ಲದಿದ್ದರೆ ದಾಯಾದಿಗಳು ಆಯಾ ಪಾಳೆಯ ಪಟ್ಟುಗಳಿಗೆ ಅಧಿಕಾರಿಗಳು. ಅವರ ವರುಗಳು ಆಯಾ ಪಾಳೆಯಪಟ್ಟುಗಳ ಅಧಿಕಾರವನ್ನು ಸ್ವೀಕರಿಸಲು ಅಪ್ಪಣೆ ಕೊಡಬೇಕು. ಈ ಪಾಳೆಯಗಾರರಿಗೆ ಒಬ್ಬ ಯಜಮಾನರನ್ನೂ ನಿಯಮಿಸುವ ಸಂಪ್ರದಾಯವುಂಟು. ಪಾಳೆಯಗಾರರಲ್ಲಿ ಯಾರು ಐಶ್ವರ್ಯವಂತರೋ, ಯಾರು ಧನಕನಕ ಸಮೃದ್ಧಿಯುಳ್ಳವರೋ ಅವರು ಯಜಮಾನರೆಂದು ಪರಿಗಣಿಸಲ್ಪಡುವುದಿಲ್ಲ. ಯಾರು ಜ್ಞಾನ ವೃದ್ಧರೋ ಯಾರು ವಯೋವೃದ್ಧರೋ, ಯಾರು ಧರ್ಮನಿಷ್ಠರೋ ಅವರಿಗೇ ಆ ಯಾಜಮಾನ್ಯದ ಪಟ್ಟವನ್ನು ಕಟ್ಟಬೇಕು. ಅದು ಈ ರಾಜ್ಯದಲ್ಲಿ ಕುಲಕ್ರಮಾಗತವಾಗಿ ಬಂದಿರುವ ಸಂಪ್ರದಾಯ. ಗೋಪಾಲ ನಾಯಕರು ರಣಕ್ಷೇತ್ರದಲ್ಲಿ ಮಡಿದುಹೋಗಿದ್ದಾರೆ. ಈಗ ಬಂಧನ ದಲ್ಲಿರುವ ರುದ್ರನಾಯಕರಿಗೆ ಯಜಮಾನ್ಯ ಪಟ್ಟವನ್ನು ಕಟ್ಟುವುದು ಉಚಿತವಾಗಿದೆ" ಎಂದು ಹೇಳಿದರು.

ನವಾಬರವರು ಆ ಎಲ್ಲ ವಿಷಯಗಳಿಗೂ ಆಗಲೇ ಆಜ್ಞೆಯನ್ನು ಕಳುಹಿಸುವಂತೆ ಅಪ್ಪಣೆಯಿತ್ತರು. ಇಂದು ನವಾಬರವರ ದರಬಾರು ಸೇರಿರುವುದು ಇಷ್ಟಕ್ಕೋಸ್ಕರವೇ ಅಲ್ಲ. ಒಂದು ಮಹತ್ಕಾರ್ಯವು ಉಳಿದಿತ್ತು. ಆ ಸಭೆಗೆ ಬಂಧನದಲ್ಲಿರುವ ಯುವರಾಜನನ್ನು ಕರೆತರಿಸಿ ದರು. ಅವನ ಕೈಗೂ ಕಾಲಿಗೂ ಸರಪಣಿಯ ಬೇಡಿಗಳು ಹಾಕಲ್ಪಟ್ಟಿ ದ್ದವು. ಅವನು ಬಂದು ತಲೆಬಾಗಿ ನವಾಬರ ಎದುರಿನಲ್ಲಿ ನಿಂತು ಕೊಂಡನು.

ದಿವಾನ್ ಮಹಮದಾಲಿಯವರು ಅವನನ್ನು ಕುರಿತು, "ನೀನು

ಈಗ ಅಪರಾಧಿಯೆಂಬುದನ್ನು ಬಲ್ಲೆಯೋ? ನೀನು ಚೆನ್ನಬಸಪ್ಪನಾಯಕ ನಲ್ಲವೆಂದು ಒಪ್ಪಿಕೊಳ್ಳುತ್ತೀಯೋ" ಎಂದು ಪ್ರಶ್ನೆ ಮಾಡಿದರು. ಆ ಬಂದಿಯು ಹುಚ್ಚನಂತೆ ಕೂಗುತ್ತಾ, "ನಾನು ಚೆನ್ನಬಸಪ್ಪನಾಯಕ ನಲ್ಲವೆಂದು ಹೈದರಾಲಿಯವರು ಸುಳ್ಳು ಹೇಳುತ್ತಿದ್ದಾರೆ. ನಾನು ಚೆನ್ನಬಸಪ್ಪನಾಯಕನಲ್ಲವೆಂದೂ, ಈ ರಾಜ್ಯದ ಯುವರಾಜನಲ್ಲವೆಂದೂ ಈ ನಗರದ ರಾಜ್ಯದ ಅಧಿಕಾರಿಯು ನಾನಲ್ಲವೆಂದೂ ದಾವೆ ಮಾಡುವರು ಇಲ್ಲಿ ಯಾರಿದ್ದಾರೆ ? ರಾಣಿ ಚೆಲುವಮ್ಮಣ್ಣಿಯವರಿದ್ದರೆ ಅವರು ಬಂದು ಸಾಬೀತು ಮಾಡಿಕೊಡಲಿ. ಹೈದರಾಲಿಯವರು ನನಗೆ ವಾಗ್ದಾನವಿತ್ತು ನನ್ನ ಹೆಸರಿನಲ್ಲಿ ಯುದ್ಧಮಾಡಿ ಗೆದ್ದಿರುವ ಈ ರಾಜ್ಯವನ್ನು ತಾವೇ ಉಳಿಸಿಕೊಳ್ಳಬೇಕೆಂಬ ದುರಾಸೆಯಿಂದ ಈ ಸುಳ್ಳು ಪ್ರವಾದವನ್ನು ಹುಟ್ಟಿಸಿದ್ದಾರೆ" ಎಂದು ಕೂಗಿಕೊಂಡನು. ಆ ಸಭೆಯಲ್ಲಿದ್ದವರ ಹೃದಯಗಳು ನಡುಗಿದವು.

ಮಹಮದಾಲಿಯವರು ಮಂತ್ರಿಗಳ ಕಡೆ ತಿರುಗಿ "ಮಂತ್ರಿಗಳೇ ತಾವು ಸ್ವಯಂ ಅಪ್ಪಣೆ ಕೊಡಿಸೋಣವಾಗಲಿ. ಈ ಮನುಷ್ಯನು ಈ ರಾಜ್ಯದ ಯುವರಾಜನೇ ? ಚೆನ್ನಬಸಪ್ಪನಾಯಕನೇ ?" ಎಂದು ಕೇಳಿದರು.

ಮಂತ್ರಿಗಳು ವಿಷಾದದಿಂದ ತಲೆತೂಗುತ್ತಾ "ಛೇ! ಛೇ! ಯುವ ರಾಜನು ಕಾಲವನ್ನೈದಿ ಎಷ್ಟೋ ದಿನಗಳಾಗಿಹೋದವು. ಇವನೊಬ್ಬ ವಂಚಕ. ಪಾಷಂಡ. ದೇಶದ್ರೋಹಿ" ಎಂದು ಹೇಳಿದರು. ಅಪರಾಧಿಯು ಕಿರುಚಲಾರಂಭಿಸಿದನು. ಮಂತ್ರಿಗಳನ್ನು ವಾಚಾಮಗೋಚರವಾಗಿ ಬೈಯ್ಯುವುದಕ್ಕೆ ಆರಂಭಿಸಿದನು ಹೈದರಾಲಿಯವರು "ಆ ದ್ರೋಹಿಯನ್ನು ಊರಿನಲ್ಲೆಲ್ಲಾ ಮೆರವಣಿಗೆ ಮಾಡಿಸಿ ಎಳೆತಂದು ತೋಪಿನ ಬಾಯಿಗೆ ಕಟ್ಟಿಸಿರಿ" ಎಂದು ಆಜ್ಞೆಯಿತ್ತರು. ಅಂದಿನ ಸಭೆಯು ಹೀಗೆ ಬರಖಾಸ್ತಾಯಿತು. ಮಂತ್ರಿಗಳು ಮಹಲಿಗೆ ಹೊರಟು ಹೋದರು. ಆ ದಿನವೇ ಬಂಧನದಲ್ಲಿದ್ದ ರುದ್ರನಾಯಕರನ್ನು ನವಾಬರು ಸಮ್ಮುಖಕ್ಕೆ ಕರೆತರಿಸಿ ಖಿಲ್ಲತ್ತುಗಳನ್ನು ಕೊಡಿಸಿ ಅವರ ಪಾಳೆಯದಟ್ಟಿಗೆ ಆನೆಯ

ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ ಮರ್ಯಾದೆಯಿಂದ ಕಳುಹಿಸಿ ಕೊಟ್ಟರು.

ಮಾರನೆಯ ದಿನವೇ ಮಂತ್ರಿ ರಾಮಕೃಷ್ಣರವರು ಹೈದರಲ್ಲೀ ಖಾನರ ಭೇಟಿಯನ್ನು ತೆಗೆದುಕೊಂಡರು. ತಾವು ಪತ್ನೀಸಮೇತರಾಗಿ ಕಾಶೀಯಾತ್ರೆಗೆ ಹೊರಡಲು ಅಪ್ಪಣೆ ಈಯಬೇಕೆಂದು ಕೇಳಿದರು. ನವಾಬರು ಎಷ್ಟೋ ವಿಧವಾಗಿ ಪ್ರಾರ್ಥಿಸಿದರೂ ಮಂತ್ರಿಗಳು ಗಂಗಾ ಯಾತ್ರೆಯ ಸಂಕಲ್ಪದಿಂದ ಹಿಂತೆಗೆಯಲು ಒಪ್ಪಲಿಲ್ಲ. ಹೈದರಾಲಿ ಯವರು ಅತ್ಯಂತ ಖಿನ್ನರಾಗಿ ಮಂತ್ರಿಗಳಿಗೆ ಕಾಶೀಯಾತ್ರೆಗೆ ಅಪ್ಪಣೆ ಯನ್ನಿತ್ತರು. ಕಾಶಿಯವರೆಗೂ ಮಂತ್ರಿ ದಂಪತಿಗಳು ಪಲ್ಲಕ್ಕಿಯಲ್ಲಿಯೇ ಪ್ರಯಾಣಮಾಡಬೇಕೆಂದೂ ಅದಕ್ಕೆ ಬೇಕಾದ ವ್ಯವಸ್ಥೆಗಳನ್ನು ಮಾಡಲು ತಮಗೆ ಅನುಮತಿಕೊಡಬೇಕೆಂದೂ ಹೈದರಾಲಿಯವರು ಪ್ರಾರ್ಥನೆಮಾಡಿ ಮಂತ್ರಿಗಳನ್ನು ಒಪ್ಪಿಸಿದರು. ಮಾರನೆಯ ಪ್ರಾತಃಕಾಲ ಮಂತ್ರಿಗಳು ಸ್ನಾನಾನ್ಹಿಕಗಳನ್ನು ಪೂರೈಸಿ ಪತ್ನೀಸಮೇತರಾಗಿ ಮಲ್ಲಿಕಾರ್ಜುನಕ್ಷೇತ್ರಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಯಾತ್ರಾಪ್ರದಾನಗಳನ್ನು ಕೊಟ್ಟು ಪಲ್ಲಕ್ಕಿಯಲ್ಲಿ ಕುಳಿತು ನಗರದ ರಾಜ್ಯ ವನ್ನು ಪರಿತ್ಯಜಿಸಿ ಹೊರಟು ಹೋದರು.

---

## ೩೭

## ರಾಣಿಯು ಬದುಕಿರುವಳೇ !

ಮಂತ್ರಿಗಳು ಹೊರಟು ಹೋದಮೇಲೆ ನವಾಬರು ನಗರದ ಅರಮನೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಬಿಡಾರಮಾಡಲು ಆರಂಭಿಸಿದರು. ಸಮೀಪದಲ್ಲಿದ್ದ ಪಾಳೆಯಪಟ್ಟುಗಳಿಗೆಲ್ಲಾ ತಾವೇ ಖುದ್ದಾಗಿ ಹೋಗಿ ಅವರೆಲ್ಲರನ್ನೂ ಹೈದರಾಲಿಯವರು ಸಂತೈಸಿ ಸ್ನೇಹ ಮಾಡಿಕೊಂಡು ಬರುತ್ತಿದ್ದರು. ರಾಜ್ಯಾಡಳಿತಗಳನ್ನೆಲ್ಲಾ ವ್ಯವಸ್ಥೆ

ಮಾಡುವಂತೆ ದಿವಾನ ಮಹಮದಾಲಿಯವರಿಗೆ ಅಪ್ಪಣೆಯಿತ್ತರು. ಒಂದು ತಿಂಗಳಕಾಲ ಕಳೆದುಹೋಯಿತು. ಒಂದುದಿನ ನಗರದ ಅರಮನೆಯ ಬಾಗಿಲಿನಲ್ಲಿ ಭೈರವಿಯು ಬಂದು ಛಾವಡಿಯ ಕಛೇರಿಯಲ್ಲಿದ್ದ ಅಧಿಕಾರಿಗಳೊಡನೆ ತಾನು ನವಾಬರ ಭೇಟಿಮಾಡಬೇಕೆಂದು ಹೇಳಿದಳು.

ಈ ಸಮಾಚಾರವನ್ನು ಬಾಗಿಲಿನವರು ನವಾಬರಿಗೆ ಅರಿಕೆಮಾಡುತ್ತಲೇ, ಅವರು ಅಚ್ಚರಿಗೊಂಡರು. ಈ ಭೈರವಿಯು ಏತಕ್ಕೆ ಬಂದಿದ್ದಾಳೆ? ಇಷ್ಟುದಿನಗಳು ಇವಳೆಲ್ಲಿಗೆ ಹೋಗಿದ್ದಳು. ಇವಳು ಯುವರಾಜನಿಗೆ ರಾಜ್ಯವನ್ನು ಕೇಳುವುದಕ್ಕೆ ಬಂದಿದ್ದಾಳೇನು? ಅಥವಾ ಯುವರಾಜನನ್ನು ನಾವು ಕೊಲ್ಲಿಸಿದ ಸಮಾಚಾರವನ್ನು ಕೇಳಿ ಕ್ರೋಧದಿಂದ ರೇಗಿ ನಮ್ಮೊಡನೆ ಜಗಳವಾಡಲು ಬಂದಿರಬಹುದೇ. ನಮ್ಮಲ್ಲಿ ಇವಳಿಗೇನು ಕೆಲಸವಿದೆ. ಯುವರಾಜನಿಗೆ ಶಿಕ್ಷೆಯಾದದ್ದು ಇವಳಿಗೆ ತಿಳಿದೇಯಿರಬೇಕಷ್ಟೆ. ಅವನಜೊತೆಯಲ್ಲಿ ಇವಳೂ ಅಪರಾಧಿನಿಯೆಂದೂ ನಾವು ಇವಳನ್ನೂ ಶಿಕ್ಷಿಸಬಹುದೆಂದೂ ಭಯಪಡದೇ ಇಲ್ಲಿಗೆ ಹೇಗೆ ಬಂದಳು? ಇವಳು ಅವಳೇನೋ ಅಥವಾ ಬೇರೊಬ್ಬ ಭೈರವಿಯೋ ನೋಡೋಣ ಎಂದುಕೊಂಡು ಅವಳನ್ನು ಒಳಗೆ ಕರತರುವಂತೆ ಅಪ್ಪಣೆಯಿತ್ತರು. ಭೈರವಿಯು ಹೈದರಾಲಿಯವರ ಸಮೀಪಕ್ಕೆ ಬಂದು ಸಲಾಂ ಮಾಡಿದಳು.

ನವಾಬರವರು, “ಬನ್ನಿರಿ ಭೈರವೀರಾಣಿಯವರೇ, ಆಸನದಲ್ಲಿ ಕುಳಿತುಕೊಳ್ಳಿರಿ” ಎಂದು ಆಸನದಕಡೆಗೆ ಕೈತೋರಿದರು.

ಭೈರವಿಯು ಕುಳಿತುಕೊಳ್ಳುತ್ತಾ “ರಾಣಿಯೆಂದರೇನು? ನೀವು ಪರಿಹಾಸ್ಯಮಾಡುವಿರೇನು? ನಾನು ಭೈರವಿ. ಅಷ್ಟೇ ನನ್ನ ಹೆಸರು” ಎಂದಳು.

ಹೈದರಾಲಿಯವರು ನಗುತ್ತಾ, “ನೀವು ಯುವರಾಜರವರ ಧರ್ಮಪತ್ನಿಯವರಲ್ಲವೇನು?” ಎಂದರು.

ಭೈರವಿಯು, “ಯುವರಾಜನೆಂದರೇನು? ಅವನ ಪತ್ನಿಯು

ಯಾರು? ಅನ್ಯಾಯವಾಗಿ ಆ ಬಡಪಾಯಿಯನ್ನು ತೋಪಿನ ಬಾಯಿಗೆ ಕಟ್ಟಿಸಿ ಕೊಲ್ಲಿಸಿದಿರಿ. ಅದರಿಂದ ನಿಮಗೆ ಬಂದ ಭಾಗ್ಯವೇನು?" ಎಂದಳು.

ಹೈದರಾಲಿಯವರು, "ಓಹೋ, ನೀವು ಎಲ್ಲವನ್ನೂ ಅರಿತಿರುವಿರಿ, ಎಲ್ಲವನ್ನೂ ಬಲ್ಲಿರಿ. ಹಾಗಾದರೆ ಅವನನ್ನು ನೀವು ಯುವರಾಜನೆಂದು ಹೇಳಿ ನಮ್ಮಲ್ಲಿ ಕರೆತಂದುದೇಕೆ? ಸುಳ್ಳುಹೇಳಿ ಈ ಯುದ್ಧವನ್ನು ಎತ್ತಿ ಕಟ್ಟಿದುದೇಕೆ?" ಎಂದರು.

ಭೈರವಿಯು ಅಲಕ್ಷ್ಯದಿಂದ ನಗುತ್ತಾ, "ನಾವು ಸುಳ್ಳುಹೇಳಿದರೆ ನಿಮಗಾದ ನಷ್ಟವೇನು? ಲಾಭವೇ ಆಯಿತಷ್ಟೆ? ನಗರದ ರಾಜ್ಯವು ನಿಮ್ಮ ಕೈಗೆ ಸಿಕ್ಕಿತಷ್ಟೆ? ಸುಳ್ಳುಹೇಳಿದವರು ನೀವು" ಎಂದು ಮೂದಲಿಸಿದಳು.

ಅವಳ ಧೈರ್ಯವನ್ನು ನೋಡಿ ಅಪ್ರತಿಭರಾಗಿ, "ಸುಳ್ಳುಹೇಳಿದವರು ನಾವು. ನಾವೇನು ಸುಳ್ಳುಹೇಳಿದೆವು" ಎಂದರು.

ಭೈರವಿಯು "ನಾನು ಕರೆತಂದ ಚೆನ್ನಬಸಪ್ಪನಾಯಕನಿಗೆ ಪಟ್ಟ ಕಟ್ಟುವುದಾಗಿ ವಚನವಿತ್ತು ಮೋಸಮಾಡಲಿಲ್ಲವೇ?" ಎಂದಳು. ಹೈದರಾಲಿಯವರು "ಯುವರಾಜನೆಂದು ಅವನೂ ಸುಳ್ಳುಹೇಳಿದನು. ನೀವೂ ಸುಳ್ಳುಹೇಳಿದಿರಿ. ಅವನಿಗೆ ತಕ್ಕ ಶಿಕ್ಷೆಯಾಯಿತು. ನಿಮಗೆ ಶಿಕ್ಷೆಯಾಗಬೇಕು" ಎಂದರು.

ಭೈರವಿಯು, "ನವಾಬರೇ, ನನಗೇಕೆ ಶಿಕ್ಷೆಯಾಗಬೇಕು. ಅವನು ಯುವರಾಜನಾದರೇನು? ಯಾರಾದರೇನು? ಯುವರಾಜನಾಗಿದ್ದರೆ ನಿಮಗೆ ಏನು ಭಾಗ್ಯ ಬರುತ್ತಿತ್ತು? ನನಗೆ ಅದರಿಂದ ಆಗಬೇಕಾದುದೇನು? ನಿಮಗೆ ಒಂದು ಅತಿಮುಖ್ಯವಾದ ಸಮಾಚಾರವನ್ನು ಹೇಳಿ ಹೋಗಲು ಬಂದಿದ್ದೇನೆ" ಎಂದಳು.

"ಅದೇನು ಹೇಳಿರಿ ನೋಡೋಣ. ಅದರಿಂದ ನಿಮಗೆ ಲಾಭವೋ ನಮಗೆ ಲಾಭವೋ?"

ಭೈರವಿಯು, "ಅಯ್ಯೋ ನವಾಬರೇ, ಈ ನಿಮ್ಮ ಲಾಭನಷ್ಟಗಳ

ಮಾತು ಯಾರಿಗೆಬೇಕು. ನನಗೆ ಲಾಭದ ಆಸೆಯಿದ್ದಿದ್ದರೆ ನಾನೊಂದು ರಾಜ್ಯವನ್ನೇ ಸಂಪಾದಿಸುತ್ತಿದ್ದೆ. ಲಾಭದ ಆಸೆಯಿರುವುದು ನಿಮಗೆ. ನಿಮ್ಮಲ್ಲಿ ಒಂದು ಸಮಾಚಾರವನ್ನು ವಿಕ್ರಯಿಸಲು ಬಂದಿದ್ದೇನೆ" ಎಂದಳು.

ಹೈದರಾಲಿಯವರು ಆಶ್ಚರ್ಯದಿಂದ, "ಭೈರವೀ, ನಿಮ್ಮ ಕ್ರಯ ವಿಕ್ರಯದ ವ್ಯಾಪಾರವಾವುದು" ಎಂದು ಕೇಳಿದರು. ಭೈರವಿಯು "ಕೇಳಿ, ನವಾಬರೇ, ನಗರವು ನಿಮ್ಮ ಕೈಗೆ ಸಿಕ್ಕಿತು. ಪಾಳೆಯಗಾರ ರೆಲ್ಲರೂ ಸತ್ತು ನಿಮ್ಮ ರಾಜ್ಯವು ನಿಷ್ಕಂಟಕವಾಯಿತು. ಮಂತ್ರಿ ರಾಮಕೃಷ್ಣರು ತೀರ್ಥಯಾತ್ರೆಗೆ ಹೋದರು. ರಾಣಿಯು ಮಾತ್ರ ಬದುಕಿದ್ದಾಳೆ" ಎಂದಳು.

ಹೈದರಾಲಿಯವರು, "ಸುಳ್ಳು. ಅದಕ್ಕೆ ಸಾಕ್ಷಿಯೇನು? ಮತ್ತೊಮ್ಮೆ ಸುಳ್ಳು ಹೇಳಲು ಬಂದಿದ್ದೀರಾ?" ಎಂದು ಗದ್ದರಿಸಿದರು. ಭೈರವಿಯು ನಗುತ್ತಾ, "ನಿಮ್ಮ ಬೆದರಿಕೆಗೆ ನಾನು ಹೆದರುವೆನೇ? ರಾಣಿಯು ಬದುಕಿರುವುದಕ್ಕೆ ಸಾಕ್ಷಿಯು ಬೇಕೇ? ನಾನು ಸಾಕ್ಷಿ ನನ್ನ ಕಣ್ಣುಗಳು ಸಾಕ್ಷಿ" ಎಂದಳು.

ಹೈದರಾಲಿಯವರು, "ಒಳ್ಳೆಯದು. ಬದುಕಿದ್ದರೆ ನಮಗೇನು? ಅವರೇನು ಮಾಡಬಲ್ಲರು" ಎಂದರು.

ಭೈರವಿಯು, "ಓಹೋ ನವಾಬರೇ, ಇಲ್ಲಿ ನಿಮ್ಮ ಬುದ್ಧಿಯು ಮೊಂಡಾಗಿ ಹೋಗಿದೆ. ರಾಣಿಯು ಬದುಕಿದ್ದರೆ ನೀವು ನಗರದ ರಾಜ್ಯವನ್ನು ಗೆದ್ದಿದ್ದೇ ಸುಳ್ಳು. ಈ ರಾಜ್ಯದಲ್ಲಿ ಜನರೆಲ್ಲರನ್ನೂ ಅವಳು ಎತ್ತಿಕಟ್ಟುತ್ತಾಳೆ. ಹೊರಗಡೆ ಮರಾಟರೊಡನೆಯೂ, ಇಂಗ್ಲೀಷರೊಡನೆಯೂ ಸಂಧಿಮಾಡಿ ನಿಮ್ಮಮೇಲೆ ಯುದ್ಧಕ್ಕೆ ಬರುವಂತೆ ಮಾಡುತ್ತಾಳೆ. ಅವಳಲ್ಲಿ ಬೇಕಾದಷ್ಟು ಚಿನ್ನವಿದೆ. ಅವಳು ಏನುಬೇಕಾದರೂ ಮಾಡ ಬಲ್ಲಳು" ಎಂದಳು. ಹೈದರಾಲಿಯವರು, "ಭೈರವೀರಾಣೀ, ಆ ನಗರದ ರಾಣಿಯವರು ಸತ್ತುಹೋಗಲಿಲ್ಲವೇನು. ಆ ಅರಮನೆಗೆ ಬೆಂಕಿಹತ್ತಿದ ದಿನ ಅದರೊಳಗೆ ಅವರು ಸುಟ್ಟುಹೋಗಲಿಲ್ಲವೇನು?" ಎಂದರು.

ಭೈರವಿಯು, “ಅರಮನೆಗೆ ಬೆಂಕಿಹಚ್ಚಿದವಳಾರು ? ಆ ರಾಣಿಯೇ ಬೆಂಕಿ ಹಚ್ಚಿದಳು” ಎಂದಳು. ಹೈದರಾಲಿಯವರು ಆಶ್ಚರ್ಯದಿಂದ “ಆ ರಾಣಿಯಮೇಲಿನ ಛಲದಿಂದ ನೀವು ಆ ಅರಮನೆಗೆ ಬೆಂಕಿಯನ್ನು ಹಚ್ಚಿ ರಾಣಿಯನ್ನು ಕೊಂದುಹಾಕಿದಿರೆಂದು ನಮ್ಮ ಭಾವನೆಯಿತ್ತು” ಎಂದರು.

ಭೈರವಿಯು “ನಾನು ಬೆಂಕಿಹಚ್ಚಿ ಆ ಅರಮನೆಯಲ್ಲಿ ಆ ರಾಣಿಯನ್ನು ಕೊಂದುಹಾಕಿದ್ದರೆ ನನ್ನ ಕೈಗಳಿಂದಲೇ ನನ್ನ ಛಲವನ್ನು ತೀರಿಸಿಕೊಂಡಂತೆ ಆಗುತ್ತಿದ್ದಿತು ಹಾಗಾಗಿದ್ದರೆ ನಾನು ಈ ಪ್ರಪಂಚದಲ್ಲಿ ಮತ್ತಾರನ್ನೂ ಒಂದು ಕೇಳಬೇಕಾದ ಪ್ರಸಂಗವೇ ಇರುತ್ತಿರಲಿಲ್ಲ. ಸ್ವಯಂ ನಗರದರಾಣಿಯೇ ಆ ಅರಮನೆಗೆ ಬೆಂಕಿಹಚ್ಚಿ ಓಡಿಹೋಗಿದ್ದಾಳೆ” ಎಂದಳು.

ಹೈದರಾಲಿಯವರು “ಒಳ್ಳೆಯದು ರಾಣಿಯವರೇ,' ನಾವು ಪತ್ತೆ ಮಾಡಿಸುತ್ತೇವೆ. ನಿಮಗೇನು ಬೇಕು ಕೇಳಿರಿ, ಕೊಡಿಸುತ್ತೇನೆ. ನನಗೆ ನಿಮ್ಮಮೇಲೆ ಬಹಳ ಅಭಿಮಾನವಿದೆ” ಎಂದು ಹೇಳಿದರು. ಭೈರವಿಯು ಗಹಗಹಿಸಿ ನಕ್ಕಳು. “ಅಯ್ಯೋ ನವಾಬರೇ, ನಿಮಗೆ ಹುಚ್ಚು ಹಿಡಿದಿದೆ. ರಾಣಿಯನ್ನು ನೀವು ಪತ್ತೆಹಚ್ಚಬಲ್ಲಿರಾ ? ಅದು ಭ್ರಾಂತಿ! ನನಗೆ ಪುರಸ್ಕಾರ ಕೊಡುವಿರಾ! ಪುರಸ್ಕಾರವು ಬೇಕಾಗಿದ್ದರೆ ನನಗೆ ರಾಣಿಯೇ ಕೊಡುತ್ತಿದ್ದಳು. ಸಕಲ ಸೌಭಾಗ್ಯಗಳನ್ನೂ ಕೊಡುತ್ತಿದ್ದಳು. ಆದರಿಂದ ನಾನೆಷ್ಟು ಲಾಭ ಪಡೆಯಬಹುದಿತ್ತೋ ಅದರಲ್ಲಿ ಶತಾಂಶದಲ್ಲಿ ಒಂದಂಶವನ್ನು ನೀವು ಕೊಡಲಾರಿರಿ. ಇಂದಿಗೂ ರಾಣಿಯ ವಶದಲ್ಲಿರುವ ಐಶ್ವರ್ಯದಲ್ಲಿ ಒಂದಾಣೆಯ ಭಾಗವೂ ತಮ್ಮಲ್ಲಿಲ್ಲ. ಪುರಸ್ಕಾರವು ಬೇಕಾಗಿದ್ದರೆ ಇಂದಿಗೂ ರಾಣಿಯು ತಮಗಿಂತಲೂ ಹೆಚ್ಚಾಗಿ ಕೊಡಬಲ್ಲಳು. ನಾನು ಅವಳಿಗೆ ಸಹಾಯ ಮಾಡಿದರೆ ನಿಮ್ಮಮೇಲೆ ಮತ್ತೊಂದು ಭಯಂಕರವಾದ ಯುದ್ಧವನ್ನು ತಂದು ಒಡ್ಡಬಲ್ಲೆ. ನನಗೆ ಪುರಸ್ಕಾರವೇತಕ್ಕೆ. ನಿಮಗೆ ರಾಣಿಯನ್ನು ಹಿಡಿಯುವ ಶಕ್ತಿ ಇಲ್ಲ. ನಾನು ಹಿಡಿದುಕೊಡಬಲ್ಲೆ. ಅಲ್ಲಿಗೆ ನನ್ನ ಸಂಕಲ್ಪವು ಪೂರ್ತಿಯಾ

ದಂತಾಗುತ್ತದೆ. ನಾನು ಸುಖವಾಗಿ ಯಾವುದೋ ಪಾಳುಮಂಟಪದಲ್ಲಿ ಮಲಗಿ ಪ್ರಾಣಬಿಡಬಹುದು. ಅಷ್ಟಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ."

ಹೈದರಾಲಿಯು "ಒಳ್ಳೆಯದು. ನಗರದ ರಾಣಿಯವರು ಎಲ್ಲಿದ್ದಾರೆ ಹೇಳಿರಿ" ಎಂದು ಕೇಳಿದರು.

ಭೈರವಿಯು "ನವಾಬರೇ, ಮತ್ತೆಮತ್ತೆ ಅದೇ ತಪ್ಪನ್ನು ನೀವು ಮಾಡುತ್ತೀರಿ. ನಾನು ರಾಣಿ ಇರುವ ಗುಪ್ತಸ್ಥಳವನ್ನು ಹೇಳಿದರೆ ನೀವು ಅವಳನ್ನು ಹಿಡಿಯುವುದಕ್ಕಾಗುವುದಿಲ್ಲ. ನಾನೇ ಹಿಡಿದುಕೊಡಬೇಕು. ನನ್ನ ಹಿಂದೆ ನೀವು ಬರಬೇಕು" ಎಂದಳು. "ಒಳ್ಳೆಯದು ರಾಣಿಯವರೇ, ನಾವು ಒಬ್ಬ ಸಮರ್ಥರಾದ ಸೇನಾಧಿಪತಿಗಳನ್ನು ನಿಮ್ಮೊಡನೆ ಕಳುಹಿಸುತ್ತೇವೆ. ನೀವು ರಾಣಿಯನ್ನು ಹಿಡಿದುಕೊಡಿರಿ. ನೀವು ಕೇಳಿದ ಪುರಸ್ಕಾರವನ್ನು ಕೊಡಿಸುತ್ತೇನೆ" ಎಂದು ಹೇಳಿದರು.

ಭೈರವಿಯು "ಅದು ಸರಿಯಾಗಿದೆ. ಆದರೆ ಆ ಸೇನಾಧಿಪತಿಯು ನಾನು ಹೇಳಿದಂತೆ ಕೇಳಬೇಕು. ಮತ್ತು ಹೋರಾಟವು ಬಂದರೆ ಪ್ರಾಣದಮೇಲೆ ಹಂಗುತೊರೆದು ಹೋರಾಡಬೇಕು. ನನಗೆ ಕೊಡುವ ಪುರಸ್ಕಾರವನ್ನು ಈಗಲೇ ಇಲ್ಲಿಯೇ ಕೊಡಬೇಕು." ಎಂದಳು.

ಹೈದರಾಲಿಯವರು "ರಾಣಿಯವರೇ, ನಿಮಗೆ ಕೊಡಬೇಕಾದ ಪುರಸ್ಕಾರವೇನು ಹೇಳಿರಿ. ನೀವು ಹೇಳುವ ಮಾತು ನಿಜವಾಗಲೀ, ಸುಳ್ಳಾಗಲೀ ನಮಗೆ ನಿಮಗೊಂದು ಪುರಸ್ಕಾರವನ್ನು ಕೊಡಬೇಕೆಂಬ ಆಸೆಯಿದೆ. ಆ ನಗರದರಾಣಿಯವರು ವೀರರಮಣಿಯೆಂದು ಕೇಳಿದ್ದೇವೆ. ನೀವು ಅವರಿಗಿಂತಲೂ ಬಹದ್ದೂರಿ ಹೆಣ್ಣು. ಹೇಳಿರಿ" ಎಂದರು.

ಭೈರವಿಯು ಪುನಃ ನಕ್ಕಳು. "ನವಾಬರೇ, ಆಗಲಿ. ಮತ್ತೊಮ್ಮೆ ನಿಮ್ಮ ವಾಗ್ದಾನವನ್ನು ಪರೀಕ್ಷಿಸುತ್ತೇನೆ. ಪುನಃ ತಪ್ಪಿದರೆ ನಿಮಗೂ ತಕ್ಕ ಪ್ರತೀಕಾರವನ್ನು ಮಾಡಿಯೇ ಮಾಡುತ್ತೇನೆ" ಎಂದಳು. ನವಾಬರು "ಅದೆಲ್ಲಾ ಇರಲಿ. ಭೈರವೀರಾಣೀ, ನಿಮಗೇನು ಬೇಕು ಕೇಳಿರಿ" ಎಂದರು.

ಭೈರವಿಯು "ಕೇಳಿ ನವಾಬರೇ, ರಾಣಿಯನ್ನು ನಾನು ಹಿಡಿದು ಕೊಡುತ್ತೇನೆ. ಅದು ನನ್ನ ಬೇಟೆ. ಅವಳನ್ನು ನೀವು ಕೊಲ್ಲಿಸುವುದಿಲ್ಲ. ಏಕೆಂದರೆ ರಾಣಿಯು ನಿಮಗೇನೂ ಅಪರಾಧಮಾಡಿಲ್ಲ. ವಿಶೇಷತಃ ರಾಣಿಯವರಿಗೆ ನೀನೇ ಅಪಕಾರಮಾಡಿದ್ದೀರಿ. ನೀವು ಅವರನ್ನು ಸಾಯುವವರೆಗೆ ಬಂಧನದಿಲ್ಲಿಡಿಸುತ್ತೀರಿ. ಆ ಮೇಲ್ವಿಚಾರಣೆಯನ್ನು ನನಗೊಪ್ಪಿಸಬೇಕು. ರಾಣಿಯವರಿಗೆ ಊಟಉಪಚಾರ ಮಾಡಿಸುವ ಅಧಿಕಾರವು ನನ್ನದು. ಬೀಗಗಳನ್ನು ಹಾಕಿಸಿ ಬೀಗದ ಕೈ ಇಟ್ಟುಕೊಳ್ಳುವ ಅಧಿಕಾರವು ನನ್ನದು. ಪರಿಚಾರಕರು ಕಾವಲುಗಾರರು ಎಲ್ಲರೂ ನನ್ನ ಆಜ್ಞಾಧಾರಕರಾಗಿರಬೇಕು. ಇಂದಿನಿಂದ ನಾನು ನಿಮ್ಮ ಸೈನ್ಯದಲ್ಲಿ ಒಬ್ಬ ಸೇನಾನಾಯಕಿಯಾಗಿ ಸೇರಿದ್ದೇನೆಂದು ಭಾವಿಸಬೇಕು. ರಾಣಿಯನ್ನು ಹಿಡಿಯುವ ಹುದ್ದೆ ನನ್ನದು. ಅವಳನ್ನು ಬಂಧನದಲ್ಲಿಡುವ ಅಧಿಕಾರ ನನ್ನದು. ಅವಳು ಸಾಯುವವರೆಗೆ ನಾನು ನಿಮ್ಮ ಚಾಕರಿಯಲ್ಲಿರುತ್ತೇನೆ. ಅವಳು ಬೇಗ ಸತ್ತುಹೋಗುತ್ತಾಳೆ. ಅಂದಿನಿಂದ ನಾನು ಸ್ವತಂತ್ರಳು. ಅಥವಾ ಆ ರಾಣಿಯ ಜೊತೆಯಲ್ಲಿಯೇ ಸತ್ತರೂ ನನಗೆ ಆನಂದವೇ. ಮೂರು ದಿವಸಗಳಾದರೂ ನನ್ನ ಕೈಕೆಳಗೆ ಆ ರಾಣಿಯನ್ನು ಬಂದಿಯಾಗಿ ಇಟ್ಟುಕೊಳ್ಳಬೇಕೆಂದು ನನ್ನ ಛಲವಿದೆ. ಇದೇ ನನ್ನ ಪುರಸ್ಕಾರ" ಎಂದಳು. ಹೈದರಾಲಿಯವರು ಅವಾಕ್ಕಾಗಿ "ಆಗಲೀ ರಾಣಿಯವರೇ ನೀವು ಹೊರಡಬಹುದು" ಎಂದು ಹೇಳಿದರು. ರಣದುಲ್ಲಾ ಖಾನರನ್ನು ಸನ್ನಿಧಾನಕ್ಕೆ ಬರಮಾಡುವಂತೆ ದ್ವಾರಪಾಲಕನಿಗೆ ಅಪ್ಪಣೆಮಾಡಿದರು. ಸ್ವಲ್ಪಹೊತ್ತಿನಲ್ಲಿಯೇ ಸಮ್ಮುಖಕ್ಕೆ ಬಂದ ರಣದುಲ್ಲಾ ಖಾನರನ್ನು ಉದ್ದೇಶಿಸಿ "ಸೇನಾಧಿಪತಿಗಳೇ ನಿಮಗೊಂದು ಮಹತ್ವದ ಕಾರ್ಯವನ್ನು ನಿಯಮಿಸಿದ್ದೇವೆ. ನಗರದ ರಾಣಿಯವರು ಸುಟ್ಟುಹೋಗಿದ್ದಾರೆಂದು ಈ ರಾಜ್ಯದಲ್ಲೆಲ್ಲಾ ಪ್ರತೀತಿಯಿದೆ. ಅವರು ಬದುಕಿದ್ದಾರೆಂದು ಈಗ ನಮಗೆ ಸಮಾಚಾರವು ಬಂದಿದೆ. ಅದು ತಾಜಾ ಸಮಾಚಾರ. ಅವರನ್ನು ಹಿಡಿಯುವ ಕೆಲಸಕ್ಕೆ ನಿಮ್ಮನ್ನು ನಿಯೋಗಿಸಿದ್ದೇವೆ." ಎಂದು ಹೇಳಿದರು. ರಣದುಲ್ಲಾ ಖಾನರು "ಅಪ್ಪಣೆ ಹುಜೂರ್,

ನಾನು ಆ ಕಾರ್ಯವನ್ನು ಸಾಧಿಸಿಕೊಂಡು ಬರುತ್ತೇನೆ." ಎಂದು ನೆಲ ಮುಟ್ಟಿ ಸಲಾಂಮಾಡಿದರು.

ನವಾಬರು, "ಸೇನಾಪತಿಗಳೇ, ಇನ್ನೂ ಹೇಳತಕ್ಕದ್ದಿದೆ. ಸ್ವಲ್ಪ ನಿಲ್ಲಿರಿ" ಎಂದುಹೇಳಿ ಭೈರವಿಯನ್ನು ಕರೆಸಿದರು. "ನೋಡಿರಿ ಸೇನಾಧಿಪತಿಗಳೇ, ಈ ಭೈರವೀರಾಣಿಯವರ ಜೊತೆಯಲ್ಲಿ ನೀವು ಹೋಗಬೇಕು. ಅವರು ಹೇಳಿದಂತೆ ಕೇಳಬೇಕು. ಚಾಚು ತಪ್ಪಿದರೂ ನಿಮ್ಮ ತಲೆಯನ್ನು ಹಾರಿಸಬೇಕಾದೀತು. ಇವರೊಬ್ಬ ಪರದೇಶೀ ಬೈರಾಗಿಯೆಂದು ಭಾವಿಸಬೇಡಿರಿ. ಇವರು ಈ ಸಿಂಹಾಸನಕ್ಕೆ ಹಕ್ಕುದಾರರಂತೆ. ಅದಕ್ಕೆ ಬೇಕಾದ ದಾಖಲೆಗಳನ್ನೆಲ್ಲಾ ಅವರು ಕೊಡುತ್ತಾರೆ. ನಗರದ ರಾಣಿಯವರನ್ನು ಹಿಡಿದುಕೊಡುವುದಾಗಿ ಪಣತೊಟ್ಟಿದ್ದಾರೆ. ನಾವು ಈ ನಗರದ ರಾಜ್ಯಕ್ಕೆ ಅವರನ್ನು ಅಧಿಕಾರಿಣಿಯಾಗಿ ಮಾಡುವುದಾಗಿ ವಚನ ಕೊಟ್ಟಿದ್ದೇವೆ. ನೀವು ಅದಕ್ಕೆ ಸಾಕ್ಷಿ. ಅವರ ಜೊತೆಯಲ್ಲಿ ಹೋಗಬೇಕು. ಅವರು ಹೇಳಿದಂತೆ ಕೇಳಬೇಕು. ಇದು ನಮ್ಮ ಅಪ್ಪಣೆ" ಎಂದು ಹೇಳಿದರು.

ರಣದುಲ್ಲಾ ಖಾನರ ಮುಖವು ವಿವರ್ಣವಾಯಿತು. ಭೈರವಿಯ ಕಡೆ ತಿರುಗಿನೋಡಿದರು. ಅವಳು ಆ ವಿಶಾಲವಾದ ಕಣ್ಣುಗಳನ್ನು ತಿರುಗಿಸಿ ನಕ್ಕಳು. ರಣದುಲ್ಲಾ ಖಾನರು ನವಾಬರಿಗೆ ಮತ್ತೊಮ್ಮೆ ಅಭಿವಾದನಮಾಡಿ "ಹುಜೂರ್ ಮಾಫ್ ಮಾಡಬೇಕು. ಇಷ್ಟುದಿನಗಳು ತಮ್ಮ ಸೇವೆಯಲ್ಲಿ ಕೀರ್ತಿಪಡೆದ ನಾನು ಈ ಸೈತಾನಿಯ ಜೊತೆಯಲ್ಲಿ ಹೋಗಲು ಭಯಪಡುತ್ತೇನೆ. ಹಿಂದೆ ಹುಜೂರಿನಲ್ಲಿ ಇವಳು ಸಾವಿರ ಸುಳ್ಳುಗಳನ್ನು ಹೇಳಿದ್ದು ಚಿತ್ತಕ್ಕೆ ನೆನಪಿಲ್ಲವೇ. ಆಗಲೇ ಇವಳು ಹೇಳುವುದೆಲ್ಲಾ ಸುಳ್ಳೆಂದು ನಾವುಗಳೆಲ್ಲರೂ ತಿಳಿದಿದ್ದೆವು. ಹುಜೂರಿಗೆ ಮಾತ್ರ ಈ ಭೈರವಿಯಲ್ಲಿ ಅಚಲ ವಿಶ್ವಾಸವಿತ್ತು. ಇವಳ ಮಾತು ನಿಜವಾಗಲೀ ಸುಳ್ಳಾಗಲೀ ಅದು ಅಷ್ಟು ಮುಖ್ಯವಲ್ಲ. ಆ ಸತ್ಯಾಸತ್ಯಗಳನ್ನು ನಾನು ಪರಿಶೋಧನೆಮಾಡಬಲ್ಲೆ. ಇವಳು ನನ್ನನ್ನು ಕೊಂಡುಹೋಗಿ ಎಲ್ಲಿಯೋ ಸಿಕ್ಕಿಸಿಬಿಡುತ್ತಾಳೆ. ಆಗ ಹುಲಿಯಂತಹ ನಾನು ಇಲಿ

ಯಂತೆ ನರಳಬೇಕಾಗುತ್ತದೆ. ಆ ಅಪಖ್ಯಾತಿಯು ಖಾವಂದರವರಿಗೆ ತಟ್ಟುತ್ತದೆ. ಹುಜೂರ್, ಇವಳ ಸಹವಾಸ ಬೇಡ. ಈ ನಗರದ ರಾಣಿಯು ಬದುಕಿದ್ದರೆ ಅವರು ಈ ಭೂಮಂಡಲದಲ್ಲಿ ಎಲ್ಲಿದ್ದರೂ ನಾನು ಪತ್ತೆಹಚ್ಚಿ ಹಿಡಿದುತರುತ್ತೇನೆ. ಇವಳನ್ನು ಬಂದೀಖಾನೆಯಲ್ಲಿರಿಸಲು ಅಪ್ಪಣೆಕೊಡೋಣವಾಗಲಿ. ನನ್ನ ಬುದ್ಧಿಸಾಮರ್ಥ್ಯವನ್ನು ಪರೀಕ್ಷೆ ಮಾಡೋಣವಾಗಲಿ" ಎಂದರು. ಭೈರವಿಯು ಉದ್ರೇಕದಿಂದ "ನವಾಬರೇ, ಈ ಸೇನಾಧಿಪತಿಗಳು ಬೇಕೂಫರಂತೆ ಮಾತನಾಡುತ್ತಾರೆ. ಇವರು ರಾಣಿಯವರನ್ನು ಪತ್ತೆಹಚ್ಚಿ ಹಿಡಿದುತರುತ್ತಾರಂತೆ. ನನ್ನನ್ನು ಬಂದಿಸಿ ಖಾನೆಯಲ್ಲಿ ಇರಿಸಬೇಕಂತೆ. ರಾಣಿಯವರ ಅನ್ವೇಷಣೆಗೆ ಇವರು ಹೊರಟರೆ ಇವರ ಮೂಳೆಯ ಚೂರುಗಳು ಕೂಡಾ ಹಿಂದಕ್ಕೆ ಬರುವುದಿಲ್ಲ" ಎಂದು ಘರ್ಜಿಸಿದಳು.

ನವಾಬರು ಮನಸ್ಸಿನಲ್ಲಿಯೇ, "ಒಳ್ಳೆಯ ಸಂದೇಹಕಿಟ್ಟುಕೊಂಡಿತು" ಎಂದುಕೊಂಡು ಭೈರವಿಯ ಕಡೆಗೆ ತಿರುಗಿ, "ರಾಣಿಯವರೇ, ಬೇರೊಬ್ಬ ಸರದಾರನನ್ನು ನಿಮ್ಮ ಜೊತೆಗೆ ಕಳುಹಿಸುತ್ತೇನೆ" ಎಂದರು.

ಭೈರವಿಯು, "ಏಕೆ ನವಾಬರೇ, ನಾನು ಬೇರೊಬ್ಬ ರಾಣಿಯನ್ನು ಹಿಡಿದು ತರಬೇಕೇನು? ಈ ಸರದಾರರು ತಮ್ಮ ಸಮ್ಮುಖದಲ್ಲಿಯೇ ಹಿಂದಕ್ಕೆ ಹೆಜ್ಜೆಯಿಟ್ಟರು. ಇನ್ನೊಬ್ಬ ಸರದಾರರು ಮಾರ್ಗಮಧ್ಯದಲ್ಲಿ ನನ್ನನ್ನು ಕೈಬಿಟ್ಟು ಓಡಿಹೋಗಬಹುದು. ಇವರೇ ಬರಲಿ. ನೆಪ ಮಾತ್ರಕ್ಕೆ ಇಂತಹ ಪುರುಷರೊಬ್ಬರು ನನ್ನ ಜೊತೆಯಲ್ಲಿದ್ದರೆ ಸಾಕು. ನಾನೇ ಎಲ್ಲ ಕೆಲಸಗಳನ್ನೂ ಸಾಧಿಸಿಕೊಳ್ಳುತ್ತೇನೆ" ಎಂದು ಹೇಳಿದಳು.

ನವಾಬರವರು ರಣದುಲ್ಲಾಖಾನರವರಿಗೆ ಭೈರವಿಯ ಜೊತೆಯಲ್ಲಿ ಹೋಗಲೇಬೇಕೆಂದು ಕಟ್ಟಪ್ಪಣೆ ಮಾಡಿದರು. ಮತ್ತು ನಗರದ ರಾಣಿಯವರು ಬದುಕಿದ್ದಾರೆಂದು ಯಾರಿಗೂ ತಿಳಿಯಬಾರದೆಂದು ಅಪ್ಪಣೆಯಿತ್ತರು. ರಣದುಲ್ಲಾಖಾನರು ಸಮ್ಮುಖದಿಂದ ಹೊರಗೆ ಹೊರಟರು. ಭೈರವಿಯು ನವಾಬರನ್ನು ವಂದಿಸಿ "ಮತ್ತೆ ಬರುತ್ತೇನೆ" ಎಂದು ಹೇಳಿ ದಿಟ್ಟತನದಿಂದ ಹೊರಟುಹೋದಳು.

ಮಾರನೆಯ ದಿನ ಸಂಧ್ಯಾಕಾಲ ಭೈರವಿಯು ರಣದುಲ್ಲಾ ಖಾನ ರವರ ಡೇರೆಗೆ ಹೋಗಿ "ಬೆಳಗಿನ ಝಾವದಲ್ಲಿಯೇ ಈ ಶಿಬಿರವನ್ನು ಬಿಟ್ಟು ರಾಣಿಯವರ ಅನ್ವೇಷಣಕ್ಕೆ ಹೊರಡಬೇಕೆಂದೂ ವೇಷಾಂತರ ವನ್ನು ಧರಿಸಿ ಹೋಗಬೇಕೆಂದೂ ಜೊತೆಯಲ್ಲಿ ಯಾವ ಪರಿವಾರವೂ ಇರಬಾರದೆಂದೂ" ತಿಳಿಸಿದಳು. ತಾನು ಮಧ್ಯಮಾರ್ಗದಲ್ಲಿ ಬಂದು ಸೇರಿ ಕೊಳ್ಳುವುದಾಗಿ ಸಂಕೇತವನ್ನು ಮಾಡಿದಳು. ರಣದುಲ್ಲಾ ಖಾನರು ಅದಕ್ಕೆಲ್ಲಾ ಒಪ್ಪಿಕೊಂಡರು. ಮುಂದೆ ಏನೇನು ಮಾಡಬೇಕು. ಹೇಗೆ ಹೇಗೆ ಕಾರ್ಯಸಾಧನೆಗೆ ಪ್ರಯತ್ನಪಡಬೇಕು ಎಂಬಿವೇ ಅಂಶಗಳನ್ನು ಇಬ್ಬರೂ ಮಾತನಾಡಿಕೊಂಡರು. ಭೈರವಿಯು ಹೊರಟು ಹೋಗು ವಾಗ ರಣದುಲ್ಲಾ ಖಾನರನ್ನು ಕುರಿತು ಒಂದು ಪ್ರಶ್ನೆ ಮಾಡಿದಳು "ಖಾನರೇ, ನಿನ್ನೆಯ ದಿನ ನವಾಬರ ಸಮ್ಮುಖದಲ್ಲಿ ನನ್ನೊಡನೆ ಬರಲು ನೀವೇಕೆ ತಿರಸ್ಕರಿಸಿದಿರಿ. ಹೆಂಗಸರೊಡನೆ ಯುದ್ಧವಿಗ್ರಹಗಳಿಗೆ ಹೊರಡಲು ನಿಮ್ಮಂತಹ ಧೀರರಿಗೆ ಭಯವಾಗುವುದೇನು ?" ಎಂದು ಕೇಳಿದಳು. ಖಾನರು, "ಭೈರವೀರಾಣಿಯವರೇ, ಆ ಮಾತು ಬಿಡಿರಿ. ಅದು ದೊಡ್ಡ ರಗಳೆಗಿಟ್ಟುಕೊಳ್ಳುತ್ತದೆ. ಹುಜೂರಿನಲ್ಲಿ ನಾನು ತಮ್ಮೊಡನೆ ಬರಲು ಒಪ್ಪಿದ್ದೇನೆ. ತಾವು ಹೇಳಿದಂತೆ ಕಾರ್ಯಸಾಧಕ ನಾಗಿ ಕೆಲಸಮಾಡುತ್ತೇನೆ. ನಿಜವಾಗಿ ಹೇಳುವುದಾದರೆ ಇವೆಲ್ಲಾ ನನಗೆ ಅಭ್ಯಾಸವಿಲ್ಲದ ಕೆಲಸಗಳು. ಮನಸ್ಸು ಒಪ್ಪುವುದೂ ಇಲ್ಲ. ಹೆಂಗಸರೊಡನೆ ರಾಜಕಾರ್ಯಗಳೆಂದರೆ ನನಗೆ ಆಶ್ಚರ್ಯವೇ ಸರಿ. ರಾಜ್ಯವನ್ನು ಬಿಟ್ಟು ಎಲ್ಲಿಗೋ ಓಡಿಹೋಗಿರುವ ರಾಣಿಯನ್ನು ಹಿಡಿ ತರಲು ಹೊರಡುವುದು ನಮ್ಮಂತಹ ಪರಾಕ್ರಮಶಾಲಿಗಳಿಗೆ ಒಪ್ಪತಕ್ಕ ಕಾರ್ಯವಲ್ಲ. ಅದು ಹೇಡಿತನ. ನಿಮ್ಮಂಥ ಭೈರಾಗಿಣಿಯ ಆಜ್ಞಾನು ವರ್ತಿಯಾಗಿ ನಡೆಯುವುದೆಂದರೆ ಅದೊಂದು ವಿಧವಾದ ಶಿಕ್ಷೆಯೆಂದೇ ಭಾವಿಸಬೇಕು" ಎಂದರು.

ಭೈರವಿಯು, "ನೀವು ಎಲ್ಲ ಹೆಣ್ಣುಗಳನ್ನೂ ಹೆಣ್ಣುಗಳೆಂದೇ ಭಾವಿಸುತ್ತೀರಾ? ಶ್ರೀರಂಗಪಟ್ಟಣದ ಮಾತು ಹೇಗಿದೆಯೋ ನಾನರಿಯೆ

ನಗರದ ಮಾತು ಹಾಗಲ್ಲ. ನಗರದ ರಾಣಿ ಎಂದರೆ ಸಾಮಾನ್ಯಳಲ್ಲ. ನವಾಬರ ಅದೃಷ್ಟದಿಂದ ಇಲ್ಲಿ ಜಯವಾಯಿತು. ಕಡೆಯತನಕ ನಿಮ್ಮ ನವಾಬರು ನಗರದ ರಾಣಿಯನ್ನು ಜಯಿಸಬಲ್ಲರೆಂದು ನನಗೆ ಕನಸು ಮನಸುಗಳಲ್ಲೂ ಧೈರ್ಯವಿರಲಿಲ್ಲ. ಈಗಲೂ ನೀವು ಗೆದ್ದಿರುವುದೇನು? ಪೇಷ್ವೆಗಳನ್ನಾದರೂ ಉದಾಸೀನವಮಾಡಿಬಿಡಬಹುದು. ನಗರದ ರಾಣಿಯನ್ನು ಬಿಟ್ಟರೆ ನಿಮ್ಮ ನವಾಬರಿಗೆ ಮೃತ್ಯುವೆಂದು ತಿಳಿಯಿರಿ. ನವಾಬರು ಬೇಕೂಫರಲ್ಲ. ಅವರು ಅತಿ ಬುದ್ಧಿವಂತರು. ನಾವು ಹೊರಡುವ ಕಾರ್ಯದ ಮಹತ್ವವನ್ನು ಅರಿಯದೇ ಅವರು ಈ ಕೆಲಸಕ್ಕೆ ಒಪ್ಪಿಕೊಳ್ಳಲೂ ಇಲ್ಲ, ನಿಮ್ಮನ್ನು ನಿಯೋಜಿಸಲೂ ಇಲ್ಲ. ಅವರೇ ನನ್ನ ಜೊತೆಯಲ್ಲಿ ಹೊರಟು ಬರುತ್ತಿದ್ದರು. ಈ ಕೆಲಸಕ್ಕೆ ನವಾಬರು ಹೊರಟರೆ ನಾವು ಬೀಸಿದ ಬಲೆಯಿಂದ ಆ ರಾಣಿಯು ತಪ್ಪಿಸಿಕೊಂಡು ಹಾರಿಹೋದರೆ ನವಾಬರಿಗೆ ಈ ಲೋಕದಲ್ಲೆಲ್ಲಾ ಅಪಮಾನವಾಗುವುದು. ಅದಕ್ಕೆ ಹೆದರಿ ಈ ಕಾರ್ಯಕ್ಕೆ ನಿಮ್ಮನ್ನು ಕಳುಹಿಸುತ್ತಿದ್ದಾರೆ. ನನ್ನ ಹಿಂದೆ ಬರುವುದು ನಿಮಗೆ ಅಪಮಾನವೋ? ಹಾಗಾದರೆ ಈ ಮೈಸೂರಿನ ಐವತ್ತು ಸಹಸ್ರ ದಂಡು, ಸ್ವಯಂ ನವಾಬರು ಯಾರ ಹಿಂದೆ ನಗರಕ್ಕೆ ಬಂದಿರಿ. ಈಗಲೂ ನಿಮಗೆ ಮನಸ್ಸಿದ್ದರೆ ಬನ್ನಿರಿ. ಇಲ್ಲದಿದ್ದರೆ ಬೇಡ. ನನ್ನ ಜೊತೆಯಲ್ಲಿ ಬಂದಮೇಲೆ ನಾನು ಹೇಳಿದಹಾಗೆ ಕೇಳಬೇಕು. ಆ ಕಾರ್ಯಕ್ಕೆ ಕೈಹಚ್ಚಿದಮೇಲೆ ಚಾಚೂ ತಪ್ಪಿದರೆ ನಿಮ್ಮ ತಲೆಯನ್ನು ಕಡಿದು ನವಾಬರ ಪಾದಕ್ಕೆತಂದು ಒಪ್ಪಿಸುತ್ತೇನೆ" ಎಂದಳು. ರಣದುಲಾಖಾನನು ನಗುತ್ತಾ, "ಭೈರವೀರಾಣಿ, ನಿಮ್ಮ ಭುಜಗಳಲ್ಲಿ ಅಷ್ಟು ಶಕ್ತಿ ಸಾಮರ್ಥ್ಯಗಳಿವೆಯೋ?" ಎಂದು ಕೇಳಿದನು. ಭೈರವಿಯು, "ಖಾನರೇ, ಶಕ್ತಿಯಮಾತು! ಅದು ಅತಿ ಸಾಮಾನ್ಯವಾದುದು. ನನ್ನ ಬುದ್ಧಿಯಲ್ಲಿ ಅಂತಹ ತೀಕ್ಷ್ಣತೆ ಇದೆ. ಒಂದೇ ಏಟಿನಲ್ಲಿ ನಿಮ್ಮಂಥ ನೂರುಮಂದಿ ಸರದಾರರುಗಳ ತಲೆಗಳನ್ನಾದರೂ ಭೂಮಿಗೆ ಉರುಳಿಸುವ ಸಾಹಸವಿದೆ. ಅದನ್ನು ಈಗ ನನ್ನೊಡನೆ ಬಂದು ಪರೀಕ್ಷಿಸಿ ನೋಡಿರಿ. ಆಗ ನಿಮಗೆ ನಗರದ ಹೆಣ್ಣು ಎಂತಹ ಹೆಣ್ಣೆಂಬುದು ಗೊತ್ತಾಗುವುದು" ಎಂದು ಹೇಳಿ

ಹೊರಟುಹೋದಳು. ರಣದುಲ್ಲಾ ಖಾನನ ಮನಸ್ಸಿನಮೇಲೆ ಎಷ್ಟೋ ಕಲ್ಪನೆಗಳು ಬರತೊಡಗಿದವು. "ಈ ಹೆಣ್ಣು ಎಂತಹ ಕ್ರೂರಸ್ವಭಾವ ದವಳು. ಇವಳಿಗೆ ಏನೋ ಬಲವಾದ ಪೆಟ್ಟು ಬಿದ್ದಿರಬೇಕು. ಇಲ್ಲದಿದ್ದರೆ ಇಷ್ಟೊಂದು ದ್ವೇಷಸಾಧನೆ ಮಾಡುತ್ತಿರಲಿಲ್ಲ. ಇವಳ ಈ ಬೈರಾಗಿಣಿಯ ವೇಷವು ಶುದ್ಧ ಠಕ್ಕು. ಈ ಹೆಣ್ಣು ಕ್ರೂರಿಯಾದರೂ ಒಳ್ಳೆಯ ಚಾಲಕ್ಕಿದೆ. ಸಾಮಾನ್ಯವಾಗಿ ಹೈದರಾಲಿಯುವರಲ್ಲಿ ಎಂತೆಂಥಾ ಶಕ್ತಿ ವಂತರಾದ ರಾಜಪುರುಷರುಗಳು ಹಿಂಜರಿದು ಮುಗ್ಗರಿಸಿದ್ದಾರೆ. ಈ ಹೆಣ್ಣು ಎಷ್ಟು ಧೈರ್ಯದಿಂದ ನವಾಬರೊಡನೆ ವಾದಿಸುತ್ತಾಳೆ. ಹಟ ಮಾಡುತ್ತಾಳೆ. ಛಲ ಮಾಡುತ್ತಾಳೆ. ಎಷ್ಟೋ ಸಂದರ್ಭಗಳಲ್ಲಿ ನವಾಬರನ್ನು ಬಗ್ಗಿಸಿಬಿಟ್ಟಿದ್ದಾಳೆ. ನವಾಬರೇಕೆ ಇವಳಿಗೆ ಇಷ್ಟು ವಶ ವರ್ತಿಗಳಾಗಿದ್ದಾರೆ. ಈ ರಹಸ್ಯವೇನು ? ಈ ಬೈರಾಗಿಣಿ ನಿಜವಾಗಿ ಬೈರಾಗಿಣಿಯೇ ಇರಬಹುದು. ನವಾಬರಿಗೂ ಮಂಕುಬೂದಿಯನ್ನು ಹಾಕಿರಬಹುದು. ನವಾಬರ ಭ್ರಾಂತಿ ನಮ್ಮ ಪ್ರಾಣಕ್ಕೆ ಸಂಚಕಾರ ವನ್ನು ತಂದಿದೆ.

"ಆ ಯುವರಾಜನನ್ನು ಶ್ರೀರಂಗಪಟ್ಟಣಕ್ಕೆ ಕರೆತಂದವಳು ಈ ಬೈರಾಗಿಣಿಯೇ ಅಲ್ಲವೇ? ಆ ಫಿದವಿ ಯುವರಾಜನು ಇವಳ ಬೆನ್ನುಹತ್ತಿ ಬಂದುದೇಕೆ ? ಅಥವಾ ಈ ಹೆಣ್ಣನ್ನು ಅವನೇ ಹಿಡಿತಂದನೋ ಅದು ಹೇಳುವುದೂ ಕಷ್ಟ. ಅವನಿಗೇಕೆ ಅಷ್ಟು ಮಂಕು ಬಡಿಯಿತು. ಯುವರಾಜ ನೆಂದೇಕೆ ಹೇಳಿಕೊಂಡ! ಇವಳೇಕೆ ಅವನಿಗೆ ಆ ಹೆಸರನ್ನಿಟ್ಟಳು. ಅದೂ ಅತ್ಯಂತ ಗೂಢ ರಹಸ್ಯ. ಆದರೂ ಇವಳ ಮಾತು ಕೇಳಿ ಹೆಬ್ಬುಲಿಯ ಬಾಯಿಗೆ ತಲೆಯಿಟ್ಟಂತೆ ನವಾಬರಲ್ಲಿ ಸುಳ್ಳುಹೇಳಿ ಮೃತ್ಯುವನ್ನು ಆಲಿಂಗಿಸಿದ. ಆದರೆ ಒಂದು ಮಾತು ಖಂಡಿತ. ಈ ಹೆಣ್ಣು ಅವನ ಪ್ರೇಯಸಿಯಾಗಿರಲಿಲ್ಲವೇನು ? ನವಾಬರು ಕೂಡಾ ಇವಳನ್ನು ಯುವರಾಣಿಯೆಂದು ಕರೆಯುತ್ತಿರಲಿಲ್ಲವೇನು ? ಆಗ ಎಷ್ಟೊಂದು ವೈಯ್ಯಾರವಾಡುತ್ತಿದ್ದಳು. ಆ ಪಾಪಿಯು ಇವಳ ಮೋಹದಲ್ಲಿ ಸಿಕ್ಕಿ ಬಲಿಬಿದ್ದನು. ಆದರೇನು! ಎಲ್ಲರೂ ಎಂದಾದರೊಂದುದಿನ ಸಾಯಲೇ

ಬೇಕು. ಈ ಹೆಣ್ಣಿನ ಗುಣದೋಷಗಳು ಹಾಗಿರಲಿ. ಎಂತಹ ಚೆಲುವೆಯಾದ ಹೆಣ್ಣು. ಆ ಹಾಳು ಬೈರಾಗೀ ವೇಷದಲ್ಲಿಯೂ ಆ ಹರುಕು ಬಟ್ಟೆಗಳಲ್ಲಿಯೂ ಎಷ್ಟೊಂದು ಉಜ್ವಲರೂಪ. ಎಂಥಾ ಮೋಹಕವಾದ ಕಣ್ಣುಗಳು. ಈ ಹೆಣ್ಣನ್ನು ಪೂರ್ತಿಯಾಗಿ ವಲಿಸಿಕೊಳ್ಳಲಾರದವರು ಯುವರಾಜನಂತೆ ಅಧೋಗತಿಗೆ ಹೋಗುವರು. ವಲಿದರೆ ಎಂತಹ ಬಹದ್ದೂರಿ ಹೆಣ್ಣು. ರಾಣಿಗಿಂತಲೂ ಮಹಾರಾಣಿಯಾಗಬಲ್ಲಳು. ಅಂಥಾ ಪುರುಷನಾವನಿರುವನು?" ಎಂಬುದಾಗಿ ಭೈರವಿಯನ್ನು ನಾನಾವಿಧವಾಗಿ ನೆನೆಯುತ್ತಾ ಈಗ ನಾವು ಹೊರಡುವ ಸಂಧಾನದಲ್ಲಿ,ಸಹವಾಸದಲ್ಲಿ, ಸಾಹಸದಲ್ಲಿ ನಾನು ಈ ಹೆಣ್ಣನ್ನು ವಲಿಸಿಕೊಳ್ಳಲಾರೆನೇ? ಸನ್ಯಾಸಿನಿಯೇ ನೀನು ನನ್ನವಳಾಗಲಾರೆಯಾ? ನಾನು ನಿನಗಾಗಿ ನನ್ನ ಸರ್ವಸ್ವವನ್ನೂ ಅರ್ಪಣೆಮಾಡಬಲ್ಲೆ. ಪ್ರಪಂಚದಲ್ಲಿ ಮಾನವರು ಹುಟ್ಟುವುದು ವಿರಕ್ತ ಸನ್ಯಾಸಿನಿಯರಾಗಿ ಒಣಗಿ ಸಾಯುವುದಕ್ಕಲ್ಲ. ಸಂಸಾರಿಗಳಾಗಿ ಸುಖಮಯ ಜೀವನವನ್ನು ಸಾಗಿಸುವುದಕ್ಕಾಗಿಯೇ ಈ ಮಾನವ ಜನ್ಮ. ಇದನ್ನು ನೀನೆಂದಿಗೆ ಅರಿಯುವೆ? ಈ ರೀತಿಯಾಗಿ ಹಂಬಲಿಸುತ್ತಿದ್ದನು. ಹೀಗೆಯೇ ರಾತ್ರಿಯಲ್ಲಾ ಜಾಗರಣೆಯಲ್ಲಿ, ಸ್ವಪ್ನಗಳಲ್ಲಿ ಕಳೆಯಿತು.

---

## ೩೭

## ದಗ್ಧ ಹೃದಯೆ ಚೆಲುವಮ್ಮಣ್ಣಿ

ರಾಮರಾಯನು ಬಿದನೂರು ಕೋಟೆಯ ದಕ್ಷಿಣ ದ್ವಾರದಿಂದ ಮೃತಪ್ರಾಯಳಾಗಿದ್ದ ರಾಣಿಯ ಕಳೇಬರವನ್ನು ಕುದುರೆಯ ಮೇಲೆತ್ತಿಕೊಂಡು ಪಲಾಯನಮಾಡಿದ್ದನಷ್ಟೆ. ಆ ರಾತ್ರಿ ಬೆಳಗಾಗುವುದರೊಳಗೆ ರಾಮರಾಯನು ಬಹುದೂರ ಹೋಗಿಬಿಟ್ಟಿದ್ದನು. ಹೆದ್ದಾರಿಯನ್ನು ಬಿಟ್ಟು ಕಾಡುಹಾದಿಯನ್ನು ಹಿಡಿದಿದ್ದನು. ಆ ಮಾರ್ಗಗಳೆಲ್ಲವೂ ಅವನಿಗೆ ಚಿರಪರಿಚಿತವಾಗಿದ್ದವು. ಆ ಕಾಡಿನಲ್ಲಿ ಒಂದೇ ಒಂದು ಮನೆ. ಅದು

ಒಬ್ಬ ರೈತನ ಮನೆ. ಸಮೀಪದಲ್ಲಿ ಕೊಂಚ ಗದ್ದೆ ತೋಟಗಳಿದ್ದವು. ಆ ಮನೆಯ ಸಮೀಪದಲ್ಲಿ ಕುದುರೆಯನ್ನಿಳಿದು ರಾಣಿಯನ್ನು ಜಗಲಿಯ ಮೇಲೆ ಮಲಗಿಸಿದನು. ಮಾರ್ಗಮಧ್ಯದಲ್ಲಿಯೇ ರಾಣಿಯು ಮರಣ ಹೊಂದಿಲ್ಲವೆಂದೂ, ಬದುಕಿದ್ದಾಳೆಂದೂ ಅವನಿಗೆ ಅರಿವಾಗಿದ್ದಿತು. ರಾಣಿಯ ಶರೀರವು ಬೆಂಕಿಯಂತೆ ಕಾಯುತ್ತಿದ್ದಿತು. ಆ ಜಗಲಿಯ ಮೇಲೆ ರಾಣಿಯನ್ನು ಮಲಗಿಸಿ ಉಪಚರಿಸತೊಡಗಿದನು. ಆ ರೈತನ ಮನೆಯಲ್ಲಿ ಯಾರೂ ಜನರಿರಲಿಲ್ಲ. ಇಪ್ಪತ್ತೈದು ಮೂವತ್ತು ವರ್ಷ ಪ್ರಾಯದ ಬಲಿಷ್ಠವಾದ ಶರೀರವುಳ್ಳ ರೈತ, ಅವನ ತಾಯಿ ಇವರಿಬ್ಬರೇ ಆ ಮನೆಯಲ್ಲಿದ್ದರು. ಅವರಿಬ್ಬರೂ ಹೊರಗೆ ಬಂದು ಈ ಆಗಂತುಕರನ್ನು ನೋಡಿ ಗಾಬರಿಗೊಂಡರು. ಯಾರೋ ದೊಡ್ಡ ಮನುಷ್ಯರೆಂದು ನೋಡುತ್ತಲೇ ಅವರು ಅರಿತುಕೊಂಡರು. ರಾಮರಾಯನು ಆ ರೈತನನ್ನು ಕುರಿತು, "ಅಯ್ಯಾ ಒಂದೆರಡು ದಿನಗಳು ನಮಗೆ ನಿಮ್ಮ ಮನೆಯಲ್ಲಿ ಆಶ್ರಯಕೊಡುವಿಯಾ" ಎಂದು ಕೇಳಿದನು. ಆ ರೈತನು ಮೂವತ್ತು ವರ್ಷದ ಪ್ರಾಯದವನಾಗಿದ್ದರೂ ಹದಿನೈದು ವರ್ಷಗಳ ಹುಡುಗನಂತೆ ಚಟುವಟಿಕೆಯಿಂದ ಇದ್ದನು. ಅವನು ಕೈ ಜೋಡಿಸಿ, "ಇದೇನು ಸ್ವಾಮಿ ಹೀಗೆ ಹೇಳುತ್ತೀರಿ? ಈ ಮನೆಯು ತಮ್ಮದೇ ಇದೆ. ನಾನು ತಮ್ಮ ಮಗನಾಗಿ ಸೇವೆಮಾಡುತ್ತೇನೆ" ಎಂದು ಹೇಳಿ ತಾಯಿ ಯನ್ನು ಕರೆದನು. ತಾಯಿಯು ರಾಮರಾಯನಿಗೆ ಕೈಜೋಡಿಸಿ, "ಸ್ವಾಮೀ, ಈ ತಾಯಿಗೆ ಏನಾಗಿದೆ? ನಾನು ಇವರನ್ನು ನೋಡಿಕೊಳ್ಳು ತ್ತೇನೆ. ತಾವು ಹೆದರಬೇಡಿರಿ. ನಮ್ಮ ಮನೆಯಲ್ಲಿ ಹಸುವಿನ ಹಾಲಿದೆ ಅದನ್ನು ಕಾಸಿ ಕುಡಿಸುತ್ತೇನೆ. ಕಷಾಯಮಾಡಿ ಕುಡಿಸುತ್ತೇನೆ" ಎಂದು ಧೈರ್ಯ ಹೇಳಿ ರಾಣಿಯ ಸಮೀಪಕ್ಕೆ ಬಂದು, "ಸ್ವಾಮೀ, ನಾನಿವರನ್ನು ಮುಟ್ಟಬಹುದೇ" ಎಂದು ಕೇಳಿದಳು. ರಾಮರಾಯನು ನಗುತ್ತಾ, "ಏಕೆ ಹೆದರುತ್ತೀರಿ, ನೀವು ಅವರನ್ನು ಉಪಚರಿಸಿದರೆ ನಾವು ಎಷ್ಟೋ ಋಣಿಗಳಾಗಿರುತ್ತೇವೆ. ಸ್ವಲ್ಪ ನೋಡಿಕೊಳ್ಳಿರಿ. ನಿಮಗೆ ಹಣ ಕೊಡುತ್ತೇನೆ" ಎಂದು ಹೇಳಿ ಸೊಂಟದಿಂದ ಒಂದು ಚಿನ್ನದ ವರಹ ವನ್ನು ತೆಗೆದು ಆ ಮುದುಕಿಯ ಕೈಯ್ಯಲ್ಲಿ ಇಟ್ಟನು.

ಆ ಮುದುಕಿಯು ಗಾಬರಿಯಿಂದ ಅದನ್ನು ನೋಡಿ ಕಣ್ಣಿಗೊತ್ತಿಕೊಂಡು ಸೆರಗಿನಲ್ಲಿ ಕಟ್ಟಿಕೊಂಡು ರಾಣಿಯ ಪಕ್ಕದಲ್ಲಿ ಕುಳಿತಳು.

ಸಂಧ್ಯಾಕಾಲದ ಸಮಯಕ್ಕೆ ರಾಣಿಯ ಶರೀರದಲ್ಲಿ ಜ್ವರ ವೇಗವು ಇಳಿಯುತ್ತಿತ್ತು. ರಾಣಿಯು ಕಣ್ಣು ಬಿಟ್ಟು ನೋಡಿದಳು. ಮುದುಕಿಯ ಮುಖವನ್ನು ಅರಳಿದ ಕಣ್ಣುಗಳಿಂದ ದಿಟ್ಟಿಸಿ ನೋಡಿದಳು. "ನೀನಾರು ತಾಯಿ? ನಾನೆಲ್ಲಿದ್ದೇನೆ? ನನ್ನನ್ನಾರು ಕರೆತಂದರು" ಎಂದು ಕೇಳಿದಳು.

ವೃದ್ಧೆಯು, "ನೀವು ಭದ್ರವಾದ ಸ್ಥಾನದಲ್ಲಿದ್ದೀರಿ ತಾಯಿ. ಯಾರೋ ಮಹಾಪುರುಷರೊಬ್ಬರು ತಮ್ಮನ್ನಿಲ್ಲಿಗೆ ಕರೆತಂದರು. ಅವರೊಬ್ಬ ರಾಜಪುರುಷರೆಂದು ಕಾಣುತ್ತದೆ" ಎಂದಳು.

"ಅವರೆಲ್ಲಿ?" ಎಂದು ರಾಣಿಯು ಅರ್ಧೋಕ್ತಿಯಿಂದ ಕೇಳಿದಳು.

ವೃದ್ಧೆಯು, "ಎಲ್ಲಿಯೋ ಹೋಗಿದ್ದಾರೆ. ತಮ್ಮ ಸೇವೆಯನ್ನು ನನಗೊಪ್ಪಿಸಿ ಹೋಗಿದ್ದಾರೆ. ತಮಗೇನು ಬೇಕು ತಾಯೀ" ಎಂದು ಕೇಳಿದಳು.

ರಾಣಿಯು ಒಣಗಿದ ತುಟಿಗಳನ್ನು ನಾಲಿಗೆಯಿಂದ ಸವರುತ್ತಾ "ಬಾಯಾರುತ್ತದೆ, ನೀರು ಕೊಡು" ಎಂದು ಕೇಳಿ ಕಣ್ಣುಮುಚ್ಚಿದಳು. ಹಾಗೆಯೇ "ಮಹಾಪುರುಷ, ರಾಜಪುರುಷ" ಎಂದು ಒಂದೆರಡುಬಾರಿ ನುಡಿದಳು. ಮುದುಕಿಯು ಒಳಗೆಹೋಗಿ ನೀರುತಂದು ಕುಡಿಸಿದಳು. ರಾಣಿಯು ಕೊಂಚಕೊಂಚವಾಗಿ ನೀರನ್ನು ನುಂಗುತ್ತಿದ್ದಳು. ಹಾಗೆಯೇ ಪುನಃ ರಾಣಿಗೆ ಅಜ್ಞಾನಾವಸ್ಥೆಯು ಪ್ರಾಪ್ತವಾಯಿತು. ಬೆಳಗಾಗುವವರೆಗೆ ರಾಣಿಯು ಜ್ವರದಿಂದ ನರಳುತ್ತಾ ಹೊರಳಾಡುತ್ತಿದ್ದಳು. ಬೆಳಗಿನ ಜಾವದಲ್ಲಿ ಕಣ್ಣುಗಳಿಗೆ ನಿದ್ದೆ ಹತ್ತಿತ್ತು. ರಾಣಿಯು ಶಾಂತಳಾಗಿ ನಿದ್ರಿಸಿದಳು.

ಬೆಳಗ್ಗೆ ಸೂರ್ಯೋದಯವಾಗುವ ಸಮಯದಲ್ಲಿ ರಾಮರಾಯನು ಕುದುರೆಯಿಂದ ಇಳಿದನು. ಅವನ ಜೊತೆಯಲ್ಲಿ ನಾಲ್ವರು ಭಟರು ಕುದುರೆಗಳಿಂದ ಇಳಿದರು. ರಾಮರಾಯನು ಗಾಬರಿಯಿಂದ ಜಗಲಿಯ ಮೇಲಕ್ಕೆ ಬಂದು ಮುದುಕಿಯನ್ನು ಕುರಿತು "ಹೇಗಿದ್ದಾರೆ?" ಎಂದು

ಮೆಲುದನಿಯಿಂದ ಕೇಳಿದನು. ಮುದುಕಿಯು "ಜ್ವರವೇಗವು ಕಡಿಮೆ ಯಾಗಿದೆ. ನಿತ್ರಾಣವಾಗಿರುವಂತಿದೆ. ಈಗ ಬೆಳಗಿನ ಜಾವದಲ್ಲಿ ನಿದ್ರೆ ಹತ್ತಿದಂತಿದೆ" ಎಂದಳು.

ರಾಮರಾಯನು ಸದ್ದಿಲ್ಲದೆ ಹೆಜ್ಜೆಗಳನ್ನಿಟ್ಟುಕೊಂಡು ಮುಂದೆ ಬಂದು ರಾಣಿಯ ಮುಖವನ್ನು ಬಗ್ಗಿನೋಡಿದನು. ಹಾಗೆಯೇ ನೆಲದ ಮೇಲೆ ಕುಳಿತುಕೊಂಡನು. ಸ್ವಲ್ಪಹೊತ್ತಿನೊಳಗಾಗಿ ರಾಣಿಯು ನಿಟ್ಟುಸಿರುಬಿಟ್ಟು ನಿದ್ರೆಯಿಂದೆಚ್ಚೆತ್ತಳು. ಕಣ್ಣು ತೆರೆದಳು. ಸಣ್ಣ ನಗುವನ್ನು ನಕ್ಕು "ನೀವೇ ನನ್ನನ್ನು ಇಲ್ಲಿಗೆ ಕರೆತಂದಿರಾ? ನಾನೆಲ್ಲಿ ದ್ದೇನೆ" ಎಂದು ಕೇಳಿದಳು. ರಾಮರಾಯನು "ರಾಣಿಯವರೇ, ಹೌದು. ನಾನೇ ತಮ್ಮನ್ನಿಲ್ಲಿಗೆ ಕರೆತಂದೆ. ನಾವು ನಿರ್ಭಯವಾದ ಸ್ಥಳದಲ್ಲಿ ದ್ದೇವೆ. ತಮ್ಮ ಶರೀರವು ಜ್ವರವೇಗದಿಂದ ಸಂತಪ್ತವಾಗಿದೆ. ತಾವು ಮಾತನಾಡಬಾರದು" ಎಂದು ಹೇಳಿದನು. ಪುನಃ ರಾಣಿಯು ರಾಮರಾಯನ ಕಡೆಗೆ ತಿರುಗಿ "ನಗರದ ಸಮಾಚಾರವೇನು?" ಎಂದು ಕೇಳಿದಳು.

ರಾಮರಾಯನು ವಿಷಣ್ಣವದನನಾಗಿ ತಲೆಬಾಗಿಸಿ ಕುಳಿತಿದ್ದನು. ರಾಣಿಯ ಕಣ್ಣುಗಳಲ್ಲಿ ಅಶ್ರುಧಾರೆಯು ಹರಿಯಲಾರಂಭವಾಯಿತು. ಪುನಃ ಅಜ್ಞಾನಾವಸ್ಥೆಯು ಪ್ರಾಪ್ತವಾಯಿತು. ಹೀಗೆ ಆ ಸ್ಥಳದಲ್ಲಿ ರಾಣಿಯು ಎಂಟು ಹತ್ತು ದಿವಸಗಳನ್ನು ಕಳೆಯಬೇಕಾಯಿತು. ಆ ಮುದುಕಿ, ಆ ಮುದುಕಿಯ ಮಗ ಮಲ್ಲಪ್ಪ ಇವರಿಬ್ಬರಲ್ಲದೇ ಅಲ್ಲಿ ಮತ್ತಾರೂ ಇರುತ್ತಿರಲಿಲ್ಲ. ರಾಮರಾಯನು ಬೆಳಗಾಗುತ್ತಲೆ ಎಲ್ಲಿಯೋ ಹೊರಟು ಹೋಗುತ್ತಿದ್ದನು. ಪುನಃ ರಾತ್ರಿ ಬಂದು ಆ ಮನೆಯ ಜಗುಲಿಯಮೇಲೆ ಮಲಗಿಕೊಳ್ಳುತ್ತಿದ್ದನು. ಅವನ ಜೊತೆಯಲ್ಲಿ ನಾಲ್ವರು ಕುದುರೆಯ ಸವಾರರು ಬರುತ್ತಿದ್ದರು. ಅವರೆಲ್ಲರೂ ದೂರ ದಲ್ಲಿದ್ದು ಕಾವಲು ಕಾಯುತ್ತಿದ್ದರು. ಹಗಲು ಹೊತ್ತಿನಲ್ಲಿ ಅವರೆಲ್ಲಿರು ತ್ತಿದ್ದರೋ ಯಾರಿಗೂ ತಿಳಿಯದು. ರಾಣಿಗೆ ಇದೊಂದೂ ತಿಳಿದಿರಲಿಲ್ಲ. ಹಳ್ಳಿಗಾಡಿನವರು ಆ ಗದ್ದೆಗಳಮೇಲೆ ಎಲ್ಲಿಯೋ ಒಬ್ಬೊಬ್ಬನು

ತಿರುಗಾಡುತ್ತಿದ್ದರು. ಅವರಿಗೆ ಈ ಮನೆಯ ಕಡೆ ದೃಷ್ಟಿಯೇ ಬೀಳುತ್ತಿರ ಲಿಲ್ಲ. ಹತ್ತು ಹನ್ನೆರಡು ದಿವಸಗಳ ಹೊತ್ತಿಗೆ ರಾಣಿಗೆ ಜ್ವರಬಿಟ್ಟಿತ್ತು. ಆದರೆ ಮನಸ್ಸಿನ ಸ್ಥಿತಿಯು ಮಾತ್ರ ವಿಚಿತ್ರವಾಗಿದ್ದಿತು. ಶರೀರದಲ್ಲಿ ಬಹಳ ನಿತ್ರಾಣವಿದ್ದಿತು. ರಾಣಿಯು ಅನೇಕಬಾರಿ ಮೂರ್ಛೆ ಹೋಗು ತ್ತಿದ್ದಳು. ಒಂದೊಂದುಬಾರಿ ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿದು ಹೋಗುತ್ತಿದ್ದಿತು. ತನ್ನಷ್ಟಕ್ಕೆತಾನೇ ಒಂದೊಂದು ಮಾತು ಗಳನ್ನು ಆಡಿಕೊಳ್ಳುತ್ತಿದ್ದಳು. ಅದು ಹುಚ್ಚಲ್ಲ. ಮೂರ್ಛೆ ರೋಗವಲ್ಲ. ಒಂದು ವಿಧವಾದ ಮನಸ್ಸಿನ ಅಧೀರಾವಸ್ಥೆ. ಅಂತೂ ಆ ಸ್ಥಳದಿಂದ ರಾಣಿಯವರನ್ನು ಬೇರೆಯ ಸ್ಥಳಕ್ಕೆ ಕರೆದುಕೊಂಡು ಹೋಗುವ ಸನ್ನಾಹ ಗಳನ್ನೆಲ್ಲಾ ರಾಮರಾಯನು ಮಾಡಿದ್ದನು. ಆ ಮಲಸೀಮೆಯ ಹಳ್ಳಿ ಗಳಲ್ಲಿ ರೋಗಿಗಳನ್ನು ಡೋಲಿಗಳಲ್ಲಿ ಒಂದೂರಿನಿಂದ ಮತ್ತೊಂದೂರಿಗೆ ಸಾಗಿಸುವ ಸಂಪ್ರದಾಯವುಂಟು. ಅದೇ ರೀತಿಯಲ್ಲಿ ರಾಮರಾಯನು ಸಮೀಪದ ಒಂದು ಹಳ್ಳಿಯಿಂದ ಡೋಲಿಯೊಂದನ್ನು ತರಿಸಿದನು. ಅದರಲ್ಲಿ ರಾಣಿಯನ್ನು ಮಲಗಿಸಿ ಮೇಲೆ ಬಟ್ಟೆಗಳನ್ನು ಹೊದ್ದಿಸಿದರು. ಆ ಮನೆಯ ವೃದ್ಧೆಯೂ ಅವಳ ಮಗನೂ ಡೋಲಿಯ ಜೊತೆಯಲ್ಲಿ ನಡೆದು ಹೋಗುತ್ತಿದ್ದರು. ರಾಮರಾಯನು ಮುಂದೆ ಮುಂದೆ ಕುದುರೆ ಯನ್ನು ನಡೆಸಿಕೊಂಡು ಹೋದನು. ಡೋಲಿಯನ್ನು ಹೊತ್ತಿದ್ದವರು ಬೋಯಿಗಳಲ್ಲ. ಸಮರ್ಥರಾದ ಕಟ್ಟಾಳುಗಳು. ಅವರು ರಾಮರಾಯನಿಗೆ ಪ್ರಾಣಕ್ಕೆ ಪ್ರಾಣಕೊಡಬಲ್ಲ ಸೈನಿಕರಾಗಿದ್ದರು. ಈ ರೀತಿಯಾಗಿ ಗುಪ್ತ ಮಾರ್ಗದಲ್ಲಿ ಪ್ರಯಾಣಮಾಡುತ್ತಾ ಕಾಡು ಹಾದಿಗಳಲ್ಲಿಯೇ ನಡೆ ಯುತ್ತಾ ಬಹುದೂರಹೋಗಿ ಗಮ್ಯಸ್ಥಾನವನ್ನು ಸೇರಿದರು. ಅದು ಕಬ್ಬಾಳದುರ್ಗದಲ್ಲಿದ್ದ ಭವ್ಯವಾದ ಅರಮನೆ. ಆ ಸ್ಥಳವು ರಾಣಿಗೆ ಅಪರಿಚಿತವಾದ ಸ್ಥಳವಲ್ಲ. ರಾಣಿಯು ಆ ಚಿಕ್ಕ ಅರಮನೆಯಲ್ಲಿ ಎಷ್ಟೋ ದಿನಗಳನ್ನೂ, ರಾತ್ರಿಗಳನ್ನೂ ಕಳೆದಿದ್ದಾಳೆ. ಅಲ್ಲಿ ಎಷ್ಟೋ ರಾಜಕೀಯ ಮಹತ್ಕಾರ್ಯಗಳನ್ನೂ ಚಿಂತಿಸಿದ್ದಾಳೆ. ಅಲ್ಲಿ ತನ್ನ ಶೃಂಗಾರ ವಿಲಾಸ ಗಳನ್ನು ಅನುಭವಿಸಿದ್ದಾಳೆ. ಅಂತಹ ಸ್ಥಳದಲ್ಲಿ ಇಂದು ರಾಣಿಯು

ತನ್ನ ನೀರವವಾದ ದಗ್ಧಹೃದಯವನ್ನು ಹೊರಲಾರದೇ ಹೊತ್ತುಕೊಂಡು ದುಃಖಪಡುತ್ತಾ ಕಾಲಕಳೆಯುತ್ತಿದ್ದಾಳೆ.

ಯಾವಾಗಲೋ ಆಹಾರವನ್ನು ಸ್ವೀಕರಿಸುತ್ತಾಳೆ. ಊಟ ಮಾಡುತ್ತಾ ಮಧ್ಯದಲ್ಲಿ ಏನೋ ದುಃಖದ ಆವೇಗದಿಂದ ಊಟವನ್ನು ಬಿಟ್ಟು ಎದ್ದು ಹೊರಟುಹೋಗುತ್ತಾಳೆ. ದುಃಖದಿಂದ ಕಣ್ಣೀರು ಸುರಿಸಲು ಆರಂಭಿಸುತ್ತಾಳೆ. ಸ್ವಲ್ಪಹೊತ್ತು ಜ್ಞಾನಾವಸ್ಥೆಯಲ್ಲಿರು ತ್ತಾಳೆ. ಆಗ ಮನಸ್ಸು ಸ್ವಲ್ಪ ಶಾಂತಸ್ಥಿತಿಯಲ್ಲಿರುತ್ತದೆ. ಅಂತಹ ಸಮಯವನ್ನು ಕಾದಿದ್ದು ರಾಮರಾಯನು ಬಂದು ಸ್ವಲ್ಪಹೊತ್ತು ರಾಣಿ ಯೊಡನೆ ಸಂಭಾಷಣೆ ಮಾಡುತ್ತಾನೆ. ರಾಣಿಯು ರಾಜಕೀಯವನ್ನು ಮಾತನಾಡಲು ಒಂದೊಂದುಬಾರಿ ರಾಮರಾಯನನ್ನು ಕುರಿತು, "ರಾಮರಾಯ, ನಾವು ಇಲ್ಲೇಕಿರಬೇಕು. ಎಲ್ಲಿಗಾದರೂ ದೂರಕ್ಕೆ, ಬಲು ದೂರಕ್ಕೆ ಹೊರಟುಹೋಗಬಾರದೇ" ಎಂದು ಕೇಳುತ್ತಾಳೆ. ರಾಮ ರಾಯನು ಯಾವುದನ್ನೂ ಚರ್ಚಿಸುವುದಿಲ್ಲ. ಎಲ್ಲವನ್ನೂ ಅಂಗೀಕಾರ ಮಾಡುತ್ತಾನೆ. ಹೀಗೆ ಒಂದು ಸಂದರ್ಭದಲ್ಲಿ ರಾಣಿಯು ಮಾತ ನಾಡುತ್ತಾ ಪುಣೆಗೆ ಹೋಗಬೇಕೆಂದೂ, ವಾರಣಾಸಿಗೆ ಹೋಗ ಬೇಕೆಂದೂ ತಿಳಿಸಿದಳು. ರಾಮರಾಯನು ಅದಕ್ಕೊಪ್ಪಿಕೊಂಡನು. ಆದರೆ ರಾಣಿಯವರ ಮನಸ್ಸಿನಮೇಲೆ ಏಕೆ ಈ ಭಾವನೆಯು ಹುಟ್ಟಿದೆ ಎಂದು ತನ್ನಷ್ಟಕ್ಕೆ ತಾನೇ ಆಲೋಚಿಸಿದನು. ರಾಣಿಯ ಶರೀರಸ್ಥಿತಿಯು ನಾಲ್ಕಾರು ದಿನಗಳಲ್ಲಿ ಬಹಳಮಟ್ಟಿಗೆ ಉತ್ತಮ ಗೊಂಡಿತು. ಆದರೆ ರಾಣಿಯು ಅನೇಕಬಾರಿ ಪುಣೆ, ವಾರಾಣಸಿಗಳ ಪ್ರಯಾಣದ ಮಾತನ್ನು ಹೇಳುತ್ತಲೇ ಇದ್ದಳು. ರಾಮರಾಯನು "ರಾಣಿಯವರೇ, ಪುಣೆಗೆ ಏಕೆ ಹೋಗಬೇಕು. ವಾರಾಣಸಿಯಾತ್ರೆ ಯಿಂದ ತಮ್ಮ ಮನಸ್ಸಿಗೆ ಶಾಂತಿ ದೊರೆಯುತ್ತದೇನು? ಅಥವಾ ಪುಣೆ ಯಲ್ಲಿ ಪೇಶ್ವೆಯವರನ್ನು ಭೇಟಿಮಾಡಿ ಹೈದರನಮೇಲೆ ಪ್ರತೀಕಾರ ಮಾಡಬೇಕೆಂದು ತಮ್ಮ ಚಿತ್ತದಲ್ಲಿ ಆಸೆಯಾಗಿದೆಯೇನು?" ಎಂದು ಕೇಳಿದನು.

ರಾಣಿಯು ನಕ್ಕು ಹೇಳಲಾರಂಭಿಸಿದಳು. "ರಾಮರಾಯ ಪ್ರತೀಕಾರದ ಕಲ್ಪನೆಯೇ ನನಗೆ ಆಗಬೊಲ್ಲದು. ರಾಜ್ಯದಮೇಲೆ ನನಗೆ ಆಸೆಯಿಲ್ಲ. ಪ್ರಾಣದಮೇಲೆಯೂ ಆಸೆಯಿಲ್ಲ. ಆದರೆ ಇನ್ನೂ ಬಹುಕಾಲ ನಾನು ಬದುಕಿರಬೇಕೆಂದು ಭಗವಂತನ ಇಚ್ಛೆಯಿದೆಯೆಂದು ತೋರುತ್ತದೆ. ಇಲ್ಲದಿದ್ದರೆ ಆ ಉರಿಯುವ ಬಿದನೂರು ಅರಮನೆಯ ಬೆಂಕಿಯ ಗರ್ಭದಲ್ಲಿ ನುಗ್ಗಿ ಪ್ರಾಣಬಿಡುತ್ತಿದ್ದೆ. ಅಥವಾ ಅಂದಿನ ರಾತ್ರಿಯೇ ಪ್ರಾಣವು ಹೋಗಬೇಕಾಗಿತ್ತು. ಉಳಿದಿದ್ದೇನೆ. ಉಳಿದೂ ಬದುಕಿಕೊಂಡಿದ್ದೇನೆ. ಕಾಶಿಯಲ್ಲಿ ಹೋಗಿ ದಾನಧರ್ಮಗಳನ್ನು ಮಾಡುತ್ತಾ ಭಗವದಾರಾಧನೆಯಲ್ಲಿ ಕಾಲಕಳೆಯಬೇಕೆಂದು ಸಂಕಲ್ಪಿಸಿದ್ದೇನೆ. ಅದಕ್ಕೆ ಪೇಷ್ವೆಯವರ ರಕ್ಷಣೆಯನ್ನು ಪಡೆಯುವುದಕ್ಕಾಗಿ ಪುಣೆಗೆ ಹೋಗಬೇಕು."

ರಾಮರಾಯನಿಗೆ ವಾರಾಣಸಿಗೆ ಹೋದರೂ ಒಂದೇ, ಎಲ್ಲಿದ್ದರೂ ಒಂದೇ. ರಾಜ್ಯವನ್ನು ಕಟ್ಟಬೇಕೆಂಬ ಆಶೋತ್ತರಗಳು ರಾಮರಾಯನಿಗೆ ಇರಲಿಲ್ಲ. ಅವನಿಗೆ ರಾಣಿಯ ಸಾನ್ನಿಧ್ಯದಲ್ಲಿರಬೇಕೆಂಬ ಭಾವನೆಯು ಮಾತ್ರ ಪರಿಪೂರ್ಣವಾಗಿದ್ದಿತು. ಅದು ರಾಣಿಯವರಲ್ಲಿದ್ದ ಐಶ್ವರ್ಯದ ಆಸೆಯಲ್ಲ. ಅಥವಾ ಮೋಹದ ಆಸೆಯೂ ಅಲ್ಲ. ರಾಣಿಯಲ್ಲಿ ಅವನಿಗೆ ಅಪಾರವಾದ ಸ್ನೇಹವಿದ್ದಿತು. ಈಗ ರಾಣಿಗೆ ಆಪತ್ತಿನ ಸಮಯ. ಅಕಸ್ಮಾತ್ತಾಗಿ ಅಂದಿನರಾತ್ರಿ ಅವನು ರಾಣಿಯನ್ನು ಕಂಡನು. ಅವಳನ್ನು ಪ್ರಾಣಸಹಿತ ಉಳಿಸುವುದು ಅವನ ಕರ್ತವ್ಯವಾಗಿದ್ದಿತು. ಈಗ ಮರ್ಯಾದೆಯಿಂದ ರಾಣಿಯನ್ನು ರಕ್ಷಿಸುವುದು ಅವನ ಕರ್ತವ್ಯವಾಗಿದೆ. ಆದರೆ ಇಂತಹದೊಂದು ದುರ್ಘಟಸನ್ನಿವೇಶವು ಪ್ರಾಪ್ತವಾಗುತ್ತದೆಂದು ರಾಮರಾಯನಾಗಲೀ, ರಾಣಿಯಾಗಲೀ ನೆನಸಿರಲಿಲ್ಲ. ಈ ಸ್ಥಳದಲ್ಲಿಯೂ ನಿರ್ಭಯವಾಗಿ ಬಹಳ ದಿನಗಳು ಕಾಲಕಳೆಯಲು ಸಾಧ್ಯವಿಲ್ಲವೆಂದು ರಾಮರಾಯನಿಗೆ ತಿಳಿದಿತ್ತು. ರಾಣಿಗೂ ಅದೇ ಭಾವನೆ ಇದ್ದಿತು. ಆದರೆ ರಾಣಿಯ ಮನಸ್ಸು ಕಾಶಿಯಕಡೆಗೆ ಹರಿಯುತ್ತಿದ್ದಿತು. ರಾಮರಾಯನು ಮಾತ್ರ ಅಷ್ಟು ದೂರದೇಶ ರಾಣಿಯನ್ನು ಗೋಪ್ಯವಾಗಿ

ಕರೆದುಕೊಂಡು ಹೋಗುವುದು ಪ್ರಯಾಸವೆಂದು ಮಲಬಾರಿಗೆ ಹೋಗಿ ಅನಂತಶಯನ ರಾಜ್ಯದಲ್ಲಿ ಕೆಲವು ದಿವಸಗಳು ಆಶ್ರಯವನ್ನು ಹೊಂದು ವುದು ಒಳ್ಳೆಯದೆಂದು ಭಾವಿಸಿದ್ದನು. ಮಲೆಯಾಳಕ್ಕೆ ಹೋಗಬೇಕೆ, ಕಾಶೀ ಯಾತ್ರೆಗೆ ಹೊರಡಬೇಕೆ ಎಂಬ ವಿಷಯದಲ್ಲಿ ಮಾತ್ರ ಆಗಾಗ ಚರ್ಚೆಗಳು ನಡೆಯುತ್ತಿದ್ದವು. ರಾಣಿ ಚೆಲುವಮ್ಮಣ್ಣಿಯು ಮೊದಲೇ ಹಟವಾದಿ. ಈಗ ಅವಳ ಹೃದಯವು ಮತ್ತೂ ಕರ್ಕಶವಾಗಿದ್ದಿತು. ಹಿಡಿದ ಹಟವನ್ನು ಬಿಡುವಂತಿರಲಿಲ್ಲ.

ಈ ಸಮಯದಲ್ಲಿ ಒಂದುದಿನ ಪ್ರಾತಃಕಾಲ ಮುದುಕಿ ಬಸಮ್ಮನು ಒಬ್ಬ ಸ್ತ್ರೀಯನ್ನು ರಾಣಿಯವರ ಸಮ್ಮುಖಕ್ಕೆ ಕರೆತಂದಳು. ಮೊದಲು ಅವಳಾರೆಂಬುದು ರಾಣಿಗೆ ತಿಳಿಯಲಿಲ್ಲ. ಮುದುಕಿಯು "ಮಹಾರಾಣಿ ಯವರೇ, ಇವಳೊಬ್ಬ ತಿರುಕದ ಹೆಂಗಸು. ತಿನ್ನಲಿಕ್ಕಿಲ್ಲದೆ ಅಲೆಯುತ್ತಿ ದ್ದಾಳೆ. ತಮ್ಮ ಸನ್ನಿಧಾನಕ್ಕೆ ಕರೆತಂದಿದ್ದೇನೆ" ಎಂದು ಹೇಳಿದಳು. ರಾಣಿಯವರು ಅರಕ್ಷಣದಲ್ಲಿ ಅವಳಾರೆಂದು ಕಂಡುಕೊಂಡು ನಕ್ಕರು.

ರಾಣಿಯು ವೃದ್ಧೆಯನ್ನು ಕುರಿತು "ಒಳ್ಳೆಯದು, ಅವಳನ್ನು ನನ್ನ ಸಮೀಪದಲ್ಲಿ ಬಿಟ್ಟುಹೋಗು. ನಾನು ವಿಚಾರಿಸುತ್ತೇನೆ" ಎಂದು ಹೇಳಿ ಆಗಂತುಕಳನ್ನು ಕುಳಿತುಕೊಳ್ಳುವಂತೆ ಹೇಳಿದಳು ಮತ್ತು ಅವಳನ್ನುದ್ದೇಶಿಸಿ "ಗಿರಿಜೆ, ನೀನು ಇಲ್ಲಿಗೆ ಹೇಗೆ ಬಂದೆ? ನಿನಗೆ ಈ ದುರವಸ್ಥೆಯು ಹೇಗೆ ಬಂದಿತು. ನಗರದ ಸಮಾಚಾರವೇನು?" ಎಂದು ವಿಚಾರಿಸಿದಳು. ಭೈರವಿಯು ಮೃದುನುಡಿಯಿಂದ ರಾಣಿಗೆ ಉತ್ತರ ವಿತ್ತಳು. "ರಾಣಿಯವರೇ, ನನಗೆ ಏನೂ ಕಷ್ಟವು ಪ್ರಾಪ್ತವಾಗಿಲ್ಲ. ಹೈದರಲ್ಲೀಖಾನನು ಭವಾನೀರಾಣಿಯವರನ್ನೂ, ತಮ್ಮನ್ನೂ, ನನ್ನನ್ನೂ ಹಿಡಿದುಕೊಟ್ಟವರಿಗೆ ಬಹುಮಾನ ಕೊಡುವುದಾಗಿ ಡಂಗೂರ ಹೊಡೆಸಿ ದ್ದಾನೆ. ಆದ್ದರಿಂದ ನಾನು ಸ್ವತಂತ್ರಳಾಗಿ ತಿರುಗುವಂತಿಲ್ಲ. ಗುಪ್ತ ವಾಗಿ ಅಲೆದು ಅಲೆದು ಈ ದುರ್ಗತಿಗೆ ಬಂದಿದ್ದೇನೆ." ರಾಣಿಯು ಗಹಗಹಿಸಿ ನಕ್ಕಳು. "ಹೌದು ಗಿರಿಜೆ, ಅದು ನನ್ನ ಪುಣ್ಯವೆಂದು ಭಾವಿಸುತ್ತೇನೆ. ಭವಾನೀರಾಣಿಯವರನ್ನೂ, ನನ್ನನ್ನೂ, ನಿನ್ನನ್ನೂ

ಹಿಡಿದು ಒಂದುಕಡೆ ಬಂಧನದಲ್ಲಿಟ್ಟರೆ ಅದು ನಮ್ಮ ಭಾಗ್ಯವೆಂದೇ ಹೇಳ ಬೇಕು. ಈ ದುರವಸ್ಥೆಯುಳ್ಳಾದರೂ ಭವಾನೀರಾಣಿಯುವರ ಜೊತೆಯುಲ್ಲಿ ರುವುದು ನನಗೆಷ್ಟೋ ಸಂತೋಷಕರವಾಗಿರುತ್ತದೆ. ನೀನೇಕೆ ಭಯ ಪಡುವೆ? ಇಷ್ಟುದಿನಗಳು ಯಾವುದಕ್ಕೂ ಅಂಜದ ನಿನಗೆ ಈಗ ಈ ಭಯವೇಕೆ ಬಂದಿತು? ಗಿರಿಜೆ, ಹೇಗೇ ಆಗಲಿ, ನೀನು ನನ್ನೊಡನೆ ಬಂದು ಸೇರಿದೆ. ನಿನಗೆ ನನ್ನಮೇಲೆ ಕೋಪ, ಛಲ ಹಿಡಿದು ನನ್ನ ಜೊತೆಯನ್ನು ಬಿಟ್ಟು ದೂರ ಹೋಗಿದ್ದೆ. ಈಗ ಪುನಃ ಬಂದುಸೇರಿದೆ. ನನಗೆ ಈ ಜಗತ್ತಿನಲ್ಲಿ ನಿನ್ನಂತಹ ಗೆಳತಿಯು ಮತ್ತಾರೂ ಇಲ್ಲ. ನಾವಿಬ್ಬರೂ ಜೊತೆಯಲ್ಲಿರೋಣ. ಜೊತೆಯಾಗಿಯೇ ಸಾಯೋಣ. ನನ್ನನ್ನು ಬಿಟ್ಟುಹೋಗಬೇಡ. ಇಲ್ಲಿಯೇ ಇರು" ಎಂದಳು. ಭೈರವಿಯು "ರಾಣಿಯುವರೇ, ನಿಮ್ಮ ಮಾತು ನನಗೆ ಆಶ್ಚರ್ಯಕರವಾ ಗಿದೆ. ಈ ಸ್ಥಳದಲ್ಲಿ ನಮಗೆ ಆಪತ್ತಿದೆ. ಈ ಸ್ಥಳವನ್ನು ಮೊದಲು ಪರಿತ್ಯಾಗಮಾಡಿ ಹೊರಟುಹೋಗೋಣ" ಎಂದು ಹೇಳಿದಳು. ಆದಿನ ಸಂಧ್ಯಾಕಾಲ ರಾಣಿಯು ರಾಮರಾಯನೊಡನೆ ಆಲೋಚನೆಮಾಡಿದಳು. ಆಮಧ್ಯದಲ್ಲಿ ಭೈರವಿಯು ಬಂದು ಸೇರಿಕೊಂಡಳು. ಮಲೆಯಾಳಕ್ಕೆ ಪ್ರಯಾಣಮಾಡುವುದೇ ಕ್ಷೇಮಕರವೆಂದು ಮೂವರೂ ನಿಶ್ಚಯಿಸಿದರು ಮಾರನೆಯದಿನ ಪ್ರಾತಃಕಾಲ ರಾಣಿಯೂ, ಭೈರವಿಯೂ, ರಾಮ ರಾಯನೂ ಕುದುರೆಗಳನ್ನೇರಿ ಕಬ್ಬಾಳದುರ್ಗದ ಅರಮನೆಯನ್ನು ಬಿಟ್ಟು ಹೊರಟರು. ಜೊತೆಯಲ್ಲಿ ನಂಬಿಕಸ್ಥರಾದ ಎಂಟುಮಂದಿ ಸೈನಿಕರು ಕುದುರೆಗಳನ್ನೇರಿ ಹೊರಟರು. ಈ ಸಣ್ಣಗುಂಪಿನಲ್ಲಿ ಹತ್ತು ಹನ್ನೆರಡು ಜನರಿದ್ದರು. ಇಬ್ಬರು ಕುದುರೆಯ ರಾವುತರು ಕುದುರೆ ಗಳನ್ನು ವೇಗವಾಗಿ ನಡೆಸಿಕೊಂಡು ಮುಂದುಮುಂದೆ ಹೋಗುತ್ತಿದ್ದರು. ಎರಡುಮೈಲಿ ದೂರ ಅವರ ನಡೆಯು ಮುಂದಿದ್ದಿತು. ಹಿಂದುಗಡೆ ಇಬ್ಬರು ಸವಾರರು ಹಿಂದುಗಡೆಯಿಂದ ಏನಾದರೂ ಅಪಾಯ ಸಂಭವಿಸ ಬಹುದೋ ಎಂದು ಹುಷಾರಿನಿಂದ ಗಮನಿಸುತ್ತಿದ್ದರು. ಹೀಗೆ ಈ ಸಣ್ಣಗುಂಪು ಕಾಡುದಾರಿಗಳನ್ನು ಹಿಡಿದು ಹೊರಟಿತು. ಆದಿನ

ಇಪ್ಪತ್ತುವೈಲಿಗಳು ನಡೆದು ಅಲ್ಲಿ ಒಂದು ಪ್ರಶಸ್ತವಾದ ಸ್ಥಳದಲ್ಲಿ ಬಿಡಾರಮಾಡಿದರು.

ಭೈರವಿಯು ಕಬ್ಬಾಳದುರ್ಗದ ಅರಮನೆಯನ್ನು ಪ್ರವೇಶ ಮಾಡುವಾಗಲೇ ರಣದುಲ್ಲಾಖಾನನಿಗೆ ಎಲ್ಲ ಸ್ಥಳಗಳನ್ನೂ ತೋರಿಸಿದ್ದಳು. ಗುಪ್ತ ಮಾರ್ಗವನ್ನೂ ತೋರಿಸಿದ್ದಳು. ತಾನು ರಾಣಿಯನ್ನು ಪ್ರೇರೇಪಿಸಿ ಆ ಸ್ಥಳದಿಂದ ಹೊರಡಿಸುವುದಾಗಿಯೂ ಆ ಸಮಯವನ್ನು ಕಾದಿದ್ದು ಅನುಸರಿಸಿಬಂದು ಹಿಡಿಯಬೇಕೆಂದೂ ಹೇಳಿದ್ದಳು. ರಣದುಲ್ಲಾಖಾನನಿಗೆ ರಾಮರಾಯನ ಪರಿಚಯವಿದ್ದಿತು. ಅಲ್ಲಿರುವ ಕಾವಲುಗಾರರು ಅವರ ಶರೀರವು ಚೂರು ಚೂರಾಗುವವರೆಗೂ ಹೋರಾಡುತ್ತಾರೆಂದು ಅವನಿಗೆ ತಿಳಿದಿದ್ದಿತು. ಅವನೊಡನೆ ಇಪ್ಪತ್ತು ಇಪ್ಪತ್ತೈದು ಮಂದಿ ಸೈನಿಕರಿಗಿಂತಲೂ ಹೆಚ್ಚು ಸೈನಿಕರಿರಲಿಲ್ಲ. ರಾಣಿಯ ಗುಂಪು ಸಣ್ಣದಿದ್ದರೂ ಎದುರಿನಲ್ಲಿ ಆಕ್ರಮಣ ಮಾಡುವ ಧೈರ್ಯವು ಖಾನನಿಗಿರಲಿಲ್ಲ.

ಆದಿನ ಒಂದು ಗಿಡದಡಿಯಲ್ಲಿಯೇ ರಾಣಿಗೆ ಮಲಗಿಕೊಳ್ಳಲು ಸ್ಥಳವನ್ನು ಏರ್ಪಡಿಸಿದರು. ರಾಣಿಯು ಅಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಳು. ಭೈರವಿಯು ರಾಣಿಯ ಪಕ್ಕದಲ್ಲಿಯೇ ಕುಳಿತಿದ್ದಳು. ದೂರದಲ್ಲಿ ಸೈನಿಕರು ನಾಲ್ಕು ನಾಲ್ಕು ಮಂದಿ ಸರದಿಯ ಪ್ರಕಾರ ಕಾವಲು ಕಾಯುತ್ತಿದ್ದರು. ರಾಮರಾಯನು ಅಲ್ಲಿಯೇ ಸಮೀಪದಲ್ಲಿ ಒಂದು ಕಂಬಳಿಯನ್ನು ಹಾಸಿಕೊಂಡು ಅದರಮೇಲೆ ಕುಳಿತಿದ್ದನು. ರಾಣಿಯೂ ಭೈರವಿಯೂ ಏನೇನೋ ಕಥೆಗಳನ್ನು ಆಡಿಕೊಳ್ಳುತ್ತಿದ್ದರು. ಸುಮಾರು ರಾತ್ರಿ ಹನ್ನೆರಡು ಗಂಟೆಯ ಸಮಯವಾಗಿರಬಹುದು. ರಾಮರಾಯನು ಎದ್ದುನಿಂತು ಅರಣ್ಯದಕಡೆಗೆ ಕಿವಿಗೊಟ್ಟು ಆಲಿಸಿದನು. ಎದ್ದುಹೋಗಿ ಕಾವಲುಗಾರರನ್ನು ಎಚ್ಚರಿಸಿ ಬಂದನು. ಅವನು ತನ್ನ ಕಂಬಳಿಯಮೇಲೆ ಕುಳಿತುಕೊಳ್ಳುತ್ತಲೇ ರಾಣಿಯು, "ರಾಮರಾಯ, ಏನು ಸಂದೇಹಪಡುತ್ತಿದ್ದೀ" ಎಂದು ಕೇಳಿದಳು. ರಾಮರಾಯನು ಪುನಃ ಕಿವಿಗೊಟ್ಟು ಆಲಿಸಿ "ಏನೋ ಕುದುರೆಯ ಕಾಲುಗಳ ಸಪ್ಪಳವು

ಕೇಳಿದಂತಾಗುತ್ತದೆ. ಪುನಃ ನಿಂತುಹೋಗುತ್ತದೆ. ಹೀಗೆ ಒಂದೇ ದಿಕ್ಕಿನಿಂದ ಸದ್ದು ಕೇಳಿಸುತ್ತದೆ. ಈ ಅರಣ್ಯಮಾರ್ಗದಲ್ಲಿ ಈ ನಿಶಿ ರಾತ್ರಿಯಲ್ಲಿ ಈ ಸದ್ದು ಕೇಳಿಬರಲು ಕಾರಣವೇನೆಂದು ಯೋಚಿಸುತ್ತಿದ್ದೇನೆ" ಎಂದನು. ರಾಣಿಯು ನಕ್ಕು "ಸೇನಾಧಿಪತಿಗಳಿಗೆ ಯಾವಾಗಲೂ ಅದೇ ಸಂದೇಹ. ಕುದುರೆಯ ಕಾಲುಸಪ್ಪಳವು ಕೇಳಿದಂತಾಗುತ್ತದೆ. ಕತ್ತಿಯ ಝಣಝಣರವವು ಕೇಳಿದಂತಾಗುತ್ತದೆ. ಸೈನಿಕರ ಘೋಷಣೆಗಳು ಕೇಳಿಬಂದಂತಾಗುತ್ತದೆ. ಇವೆಲ್ಲಾ ಸೇನಾಧಿಪತಿಗಳ ಜಾಗ್ರದವಸ್ಥೆಯ ಸ್ವಪ್ನಗಳು" ಎಂದು ಹೇಳಿದಳು. ಭೈರವಿಯು "ರಾಣಿಯವರೇ ಹಾಗೆನ್ನಬೇಡಿ. ನಮ್ಮ ಕಿವಿಗಳಿಗಿಂತಲೂ ಸೇನಾಧಿಪತಿಗಳ ಕಿವಿಗಳಿಗೆ ಸೂಕ್ಷ್ಮ ಗ್ರಹಣದ ಶಕ್ತಿ ಇರುತ್ತದೆ. ನಾವು ಸರ್ವದಾ ಅಪಾಯದಲ್ಲಿದ್ದೇವೆ" ಎಂದಳು. ರಾಣಿಯು "ಗಿರಿಜೆ ನಿನಗೆ ಈಗ ಚೆನ್ನಾಗಿ ಬುದ್ಧಿ ಬಂದಿದೆ. ನಿನ್ನ ಹೆಣ್ಣು ಜನ್ಮವು ಈಗ ಆರಂಭವಾಗಿದೆ. ನೀನು ಅಂಜುಬುರುಕಳಾಗಿದ್ದೀಯೆ. ಇದೇಕೆ ನಿನ್ನ ಸ್ಥಿತಿಯು ಹೀಗಾಗಿದೆ? ನಿನ್ನ ಆ ಭೈರವಿಯ ಅವತಾರವನ್ನೆಲ್ಲಾ ಏನು ಮಾಡಿದೆ? ಆ ಜೋಳಿಗೆಯನ್ನು ಎಲ್ಲಿ ಬಿಸಾಡಿದೆ? ಆ ಜೋಳಿಗೆಯಲ್ಲಿ ಮುಚ್ಚಿಟ್ಟುಕೊಂಡಿದ್ದ ವಿಷದಗುಳಿಗೆಗಳೆಲ್ಲಿ ಹೋದವು? ನಮ್ಮಂತಹ ಸ್ತ್ರೀಯರಿಗೆ ಆಪತ್ತಿನಲ್ಲಿ ವಿಷದಗುಳಿಗೆಗಳಿಗಿಂತಲೂ ಆಪದ್ಬಾಂಧವರು ಮತ್ತಾರಿರುವರು?" ಎಂದಳು. ಭೈರವಿಯು ವಿಷಾದ ಧ್ವನಿಯಿಂದ "ಜೋಳಿಗೆಯು ನನ್ನಲ್ಲಿಯೇ ಇದೆ. ಅದರಲ್ಲಿದ್ದ ವಿಷದ ಗುಳಿಗೆಗಳನ್ನೆಲ್ಲಾ ಬಿಸಾಡಿಬಿಟ್ಟೆ. ಮನಸ್ಸಿನಲ್ಲಿ ಯಾವಾಗ ಪ್ರಾಣಭಯವು ಹುಟ್ಟಿತೋ ಆಗ ಎಲ್ಲಿಯಾದರೂ ಅಚಾತುರ್ಯದಿಂದ ವಿಷವನ್ನು ನುಂಗಿಬಿಟ್ಟೇನೆಂಬ ಭಯದಿಂದ ಬಿಸಾಡಿಬಿಟ್ಟೆ" ಎಂದು ಹೇಳಿದಳು. ರಾಣಿಯು ನಕ್ಕು "ಆಹಾ! ಎಂತಹ ಬುದ್ಧಿವಂತಳು. ಮನಸ್ಸಿನಲ್ಲಿ ಧೈರ್ಯವಿರುವಾಗ ವಿಷದಿಂದೇನು ಫಲ? ನಿನಗೆ ಪ್ರಾಣದಮೇಲೆ ಎಷ್ಟು ಆಸೆಯೇ ತಂಗಿ?" ಎಂದು ಹಾಸ್ಯ ಮಾಡಿದಳು. ಹೀಗೆ ಸುಮಾರು ಎರಡು ಘಂಟೆಗಳಕಾಲ ಕಳೆಯಿತು. ರಾಮರಾಯನು ಜಗ್ಗನೆದ್ದನು. ಕಾವಲುಗಾರರ ಸಮೀಪಕ್ಕೆ ಹೋಗಿ

ಅವರೆಲ್ಲರೂ ಕುದುರೆಗಳನ್ನೇರಬೇಕೆಂದು ಆಜ್ಞೆಯಿತ್ತನು. ತಾನೂ ಕುದುರೆಯನ್ನೇರಿದನು. ರಾಣಿಯವರ ಸಮೀಪಕ್ಕೆ ಬಂದು, "ರಾಣಿಯವರೇ ಈ ಸ್ಥಳವನ್ನು ಬಿಟ್ಟೇಳಿರಿ. ನೀವಿಬ್ಬರೂ ನಮ್ಮ ಎಡಭಾಗದಲ್ಲಿ ದೂರದಲ್ಲಿ ಹೋಗಿ ನಿಂತುಕೊಳ್ಳಿರಿ. ನಾವು ಈ ಬಲಗಡೆಯಲ್ಲಿ ಶೋಧನೆಮಾಡಿ ನೋಡುತ್ತೇವೆ. ಇಲ್ಲಿ ಯಾರನ್ನೋ ಕಂಡಂತಾಯಿತು. ಯಾವನೋ ಒಬ್ಬ ಮನುಷ್ಯನು ನಮ್ಮ ಹಿಂದುಗಡೆ ನೋಡಿಕೊಂಡು ಓಡಿಹೋದಂತಾಯಿತು. ಈ ರಾತ್ರಿಯು ನಮಗೆ ಅಪಾಯಕರವಾದ ರಾತ್ರಿ ಎಂದು ನನ್ನ ಮನಸ್ಸಿಗೆ ಹೊಳೆಯುತ್ತಿದೆ" ಎಂದು ಹೇಳುವಷ್ಟರಲ್ಲಿ ಸಮೀಪದಲ್ಲಿಯೇ ತುತ್ತೂರಿಯ ಸದ್ದು ಕೇಳಿಸಿತು. ರಾಮರಾಯನು "ರಾಣಿಯವರೇ ಇದು ಶತೃಸೈನ್ಯದ ತುತ್ತೂರಿ. ನಿಮ್ಮ ಗೆಳತಿಯು ಹೇಳಿದ ಮಾತು ನಿಜ. ಶತೃಗಳು ನಮ್ಮ ದಾರಿಯನ್ನು ಹಿಡಿದು ಬಂದಿದ್ದಾರೆ. ನಮ್ಮನ್ನು ಆಕ್ರಮಣಮಾಡುತ್ತಾರೆ. ತಮ್ಮ ಸೇವೆಯಲ್ಲಿ ಇದು ಕಟ್ಟಕಡೆಯ ದಿನ. ನೀವಿಬ್ಬರೂ ಈ ಸ್ಥಳವನ್ನು ಬಿಟ್ಟು ಎಡಗಡೆ ಕಾಡಿನಲ್ಲಿ ನುಗ್ಗಿ ಅವಿತುಕೊಳ್ಳಿರಿ. ನಾವುಗಳು ಹನ್ನೊಂದು ಜನರಿದ್ದೇವೆ. ನಾವು ಮುಂದೆ ನುಗ್ಗಿ ಹೋರಾಡುತ್ತೇವೆ. ಬದುಕಿಬಂದರೆ ತಮ್ಮ ಸನ್ನಿಧಾನವನ್ನು ಸೇರುತ್ತೇವೆ. ಇಲ್ಲದಿದ್ದರೆ ನೀವಿಬ್ಬರೂ ಕಾಡುಗಳಲ್ಲಿ ಕಾಡುಮಾರ್ಗದಲ್ಲಿ ತಲೆತಪ್ಪಿಸಿಕೊಳ್ಳಿರಿ. ನಾವು ಪ್ರಾಣಹೋಗುವವರೆಗೂ ಹೋರಾಡುತ್ತೇವೆ. ಈಹೋರಾಟದಲ್ಲಿ ಮರಣಹೊಂದಿದರೆ ಇದೇ ನನ್ನ ಕಡೆಯ ಪ್ರಣಾಮಗಳು" ಎಂದು ಹೇಳಿ ಒರೆಯಿಂದ ಕತ್ತಿಯನ್ನು ಹಿರಿದು ವಂದಿಸಿ ಕುದುರೆಯನ್ನು ಮುಂದಕ್ಕೆ ಚುಕಾಯಿಸದನು.

ಅಷ್ಟರಲ್ಲಿ ರಣದುಲ್ಲಾಖಾನನು ರಾಣಿಯವರ ಬಿಡಾರವನ್ನು ಸುತ್ತುಗಟ್ಟಿದ್ದನು. ಹೋರಾಟವು ಬಹಳ ತೀಕ್ಷ್ಣವಾಗಿಯೇ ನಡೆಯಿತು. ಆದರೆ ರಣದುಲ್ಲಾಖಾನನ ಪರಾಕ್ರಮವು ಸಾಧಾರಣವಾದುದಲ್ಲ. ರಾಮರಾಯನಿಗಿಂತಲೂ ಒಂದು ಕೈ ಮೇಲೆಂದೇ ಹೇಳಬೇಕು. ಆದರೆ ರಾಮರಾಯನಿಗಿದ್ದಷ್ಟು ತೀವ್ರತೆಯು ಖಾನನಿಗೆ ಇದ್ದಿತೆಂದು ಹೇಳಲು

ಸಾಧ್ಯವಾಗುವುದಿಲ್ಲ. ಸುಮಾರು ಹತ್ತು ಹದಿನೈದು ಮಂದಿ ಮೈಸೂರಿನ ಸೈನಿಕರು ಪ್ರಾಣಬಿಟ್ಟದ್ದರು. ಇನ್ನು ಒಂಭತ್ತು ಮಂದಿ ಮಾತ್ರ ಉಳಿದಿದ್ದರು. ರಾಮರಾಯನ ಕಡೆ ನಾಲ್ವರು ಮಾತ್ರ ಉಳಿದಿದ್ದರು. ರಣದುಲ್ಲಾ ಖಾನನು ತನಗೆ ವಿಜಯವಾಗುವುದೆಂಬುದರಲ್ಲಿ ಸಂದೇಹಪಡಲಾರಂಭಿಸಿದನು. ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ಒಂದು ದೊಡ್ಡ ಮರದ ಹಿಂದುಗಡೆ ನಿಂತುಕೊಂಡು ಬಂದೂಕನ್ನು ತೆಗೆದು ರಾಮರಾಯನ ಎದೆಗೆ ಗುರಿಯಿಟ್ಟು ಹಾರಿಸಿದನು. ಢಂ ಎಂದು ಸದ್ದಾಯಿತು. ರಾಮರಾಯನಾಗಲೀ, ಅವನ ಅನುಚರರಾಗಲೀ ಶತೃಗಳ ಕೈಯ್ಯಲ್ಲಿ ಬಂದೂಕು ಇರಬಹುದೆಂದು ಎಣಿಸಿರಲಿಲ್ಲ. ಗುಂಡಿನ ಪೆಟ್ಟು ತಗಲಿ ರಾಮರಾಯನು ಕೆಳಕ್ಕೆ ಬಿದ್ದನು. ನಾಲ್ವರು ಸೈನಿಕರೂ ಅಲ್ಲಿಂದ ಓಡಿಹೋಗಲಿಲ್ಲ. ರಾಮರಾಯನ ಶರೀರವನ್ನು ಎತ್ತಿಕೊಂಡು ಸ್ವಲ್ಪದೂರ ಮರದಡಿಯಲ್ಲಿಟ್ಟರು. ರಾಮರಾಯನ ಪ್ರಾಣವು ಇನ್ನೂ ಹೋಗಿರಲಿಲ್ಲ. ಸೈನಿಕರು ಹಿಂತಿರುಗಿ ರಣದುಲ್ಲಾ ಖಾನನನ್ನು ದಿಟ್ಟತನದಿಂದ ಎದುರಿಸಿದರು. ನಾಲ್ವರೂ ಸತ್ತುಬೀಳುವವರೆಗೆ ರಣದುಲ್ಲಾ ಖಾನನು ಒಂದು ಹೆಜ್ಜೆ ಮುಂದಿಡಲೂ ಆಗಲಿಲ್ಲ. ಖಾನನು ಕುದುರೆಯಿಂದಿಳಿದು ರಾಣಿಯವರಿದ್ದ ಸ್ಥಳಕ್ಕೆ ಕಾಲುನಡೆಯಿಂದಲೇ ಹೋದನು. ಅವನ ಹಿಂದುಗಡೆ ಅವನ ಕಡೆ ಸೈನಿಕರು ಗುಂಪುಕಟ್ಟಿಕೊಂಡು ಹೋದರು. ರಾಣಿಯು ಅಬಲೆಯಂತೆ ಹಿಂತೆಗೆಯಲಿಲ್ಲ. ಸೊಂಟದಿಂದ ಕತ್ತಿಯನ್ನು ಹಿರಿದು ರಣದುಲ್ಲಾ ಖಾನನನ್ನು ಎದುರಿಸಲು ಸಿದ್ಧಳಾಗಿ ನಿಂತಳು. ಆಗ ಭೈರವಿಯು "ರಾಣಿಯವರೇ, ಇದೇನು ಹುಚ್ಚು? ಹತ್ತೆಂಟುಯೋಧರನ್ನು ತಾವೊಬ್ಬರು ಎದುರಿಸಬಲ್ಲಿರಾ?" ಎಂದು ಕೂಗಿಕೊಂಡಳು. ರಾಣಿಯು "ಎದುರಿಸುತ್ತೇನೆ. ಹೋರಾಟದಲ್ಲಿ ಮಡಿಯುತ್ತೇನೆ" ಎಂದು ಅರಚಿದಳು. ಭೈರವಿಯು ರಾಣಿಯ ಕೈಯನ್ನು ಬಲವಾಗಿ ಹಿಡಿದು ಜಗ್ಗಿಸಿ ಕತ್ತಿಯನ್ನು ಕಸಿದುಕೊಳ್ಳುತ್ತಾ "ರಾಣಿಯವರೇ, ಸ್ತ್ರೀಯರು ಹೋರಾಟದಲ್ಲಿ ಸತ್ತರೆ ವೀರಸ್ವರ್ಗ ಸಿಕ್ಕುವುದಿಲ್ಲ" ಎಂದು ಹೇಳಿ ಕತ್ತಿಯನ್ನು ಕಸಿದು ತನ್ನ ಕೈಗೆ ತೆಗೆದುಕೊಂಡಳು. ಅಷ್ಟರಲ್ಲಿ

ರಣದುಲ್ಲಾಖಾನನು ಸಮೀಪಕ್ಕೆ ಬಂದು ರಾಣಿಯ ಕೈಗಳನ್ನು ಹಿಡಿದು ಕೊಳ್ಳುವುದಕ್ಕೆ ಹೋದನು. ಭೈರವಿಯು ಉದ್ರೇಕದಿಂದ ಗದ್ದರಿಸಿ "ರಾಣಿಯವರ ಕೈಮುಟ್ಟಬೇಡ. ಹಿಂದಕ್ಕೆ ಸರಿದುನಿಲ್ಲು. ಕೈಗಳನ್ನು ಕತ್ತರಿಸಿ ತುಂಡರಿಸಿ ಬಿಸಾಡುತ್ತೇನೆ. ಮ್ಲೇಚ್ಛನು ಹಿಂದೂರಾಣಿಯನ್ನು ಮುಟ್ಟಬಾರದೆಂಬಷ್ಟು ಜ್ಞಾನವಿಲ್ಲವೇ ನಿನಗೆ" ಎಂದು ಗರ್ಜಿಸಿದಳು. ರಣದುಲ್ಲಾಖಾನನು ನಾಲ್ಕುಹೆಜ್ಜೆ ಹಿಂದಕ್ಕೆ ಸರಿದುನಿಂತು "ರಾಣಿಯವರೇ, ನೀವಿಬ್ಬರೂ ನನ್ನ ಬಂದಿಗಳಾಗಿದ್ದೀರಿ. ನಾನು ಏನುಮಾಡಬೇಕೆಂದು ಹೇಳುವಿರಿ?" ಎಂದನು. ಭೈರವಿಯು "ಸೇನಾಧಿಪತಿಯೇ, ನಾವು ಬಂದಿಗಳಾಗಿದ್ದೇವೆಂದು ಒಪ್ಪಿಕೊಳ್ಳುತ್ತೇವೆ. ನೀವು ಹೇಳಿದ ಕಡೆಗೆ ನಾವೇ ಬರುತ್ತೇವೆ. ನೀವಾಗಲೀ, ನಿಮ್ಮ ಸೈನಿಕರಾಗಲೀ ನಮ್ಮನ್ನು ಮುಟ್ಟಕೂಡದು" ಎಂದು ಹೇಳಿದಳು. ರಣದುಲ್ಲಾಖಾನನು ಎಲ್ಲದಕ್ಕೂ ಒಪ್ಪಬೇಕಾಯಿತು. ಅವನೇಕೆ ಒಪ್ಪಿಕೊಂಡನೆಂಬುದು ರಾಣಿಗೆ ಆಶ್ಚರ್ಯವಾಯಿತು. ವಾಚಕರಿಗೆ ಮಾತ್ರ ಏನೂ ಆಶ್ಚರ್ಯವಾಗಿರಲಾರದು. ಭೈರವಿಯು ನಗರದರಾಣಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಹೋಗಬೇಕೆಂದೂ, ಒಂದು ಹೆಜ್ಜೆಯನ್ನೂ ನಡೆಸಿಕೊಂಡು ಹೋಗಕೂಡದೆಂದೂ, ಪಲ್ಲಕ್ಕಿಯು ಬರುವವರೆಗೆ ತಾವು ಇಲ್ಲಿಯೇ ಇರುವುದಾಗಿ ಹೇಳಿದಳು. ರಣದುಲ್ಲಾಖಾನನು ಪಲ್ಲಕ್ಕಿಯನ್ನು ತರಲು ಇಬ್ಬರು ಸವಾರರನ್ನು ಅಟ್ಟಿದನು. ನಗರದರಾಣಿಯು ರಾಮರಾಯನು ಬಿದ್ದಿದ್ದೆಡೆಗೆ ಹೋಗಿ ನೋಡಿದಳು. ಆ ಮರಣಾವಸ್ಥೆಯಲ್ಲಿಯೂ ರಾಮರಾಯನ ಮುಖದಲ್ಲಿ ನೋವಿನ ಚಿನ್ಹೆಗಳಾಗಲೀ, ದುಃಖದ ಛರಿವೆಯಾಗಲೀ ಇರಲಿಲ್ಲ. ರಾಣಿಯು ರಾಮರಾಯನ ಸಮೀಪಕ್ಕೆ ಹೋಗಿ ಬಗ್ಗಿನೋಡಿದಳು. ರಾಮರಾಯನಿಗೆ ರಾಣಿಯು ತನ್ನ ಸಮೀಪದಲ್ಲಿದ್ದಾಳೆಂದು ಬೋಧೆಯಾಯಿತು. ಅವನ ಮುಖವು ಪ್ರಫುಲ್ಲಿತವಾಯಿತು. ಸಣ್ಣ ನಗುವನ್ನು ನಕ್ಕು "ಚೆಲುವಮ್ಮಣ್ಣಿಯವರೇ, ಸಂತೋಷದಿಂದ ಸಾಯುತ್ತೇನೆ" ಎಂದು ಹೇಳಿದನು. ಪ್ರಾಣವು ಹಾರಿಹೋಯಿತು. ರಾಣಿಯ ಕಣ್ಣುಗಳಲ್ಲಿ

ನೀರು ಬರಲಿಲ್ಲ. ಆದರೆ ಕಾಲುಗಳು ನಡುಗಿದವು. ಶರೀರವು ಕಂಪಿಸಿತು. ತಲೆಯು ಗಿರ್ರನೆ ತಿರುಗಿತು. ರಾಣಿಯು ಜ್ಞಾನಶೂನ್ಯಳಾಗಿ ನೆಲದಮೇಲೆ ಬಿದ್ದುಬಿಟ್ಟಳು. ಸ್ವಲ್ಪಹೊತ್ತಿನೊಳಗಾಗಿ ಎಚ್ಚೆತ್ತಳು. ಬೆಳಕು ಹರಿದಿದ್ದಿತು. ಭೈರವಿಯು ಅಲ್ಲಿದ್ದ ಕಾವಲುಗಾರರನ್ನು ಪ್ರಾರ್ಥನೆಮಾಡಿ ಅವರ ಸಹಾಯದಿಂದ ಚಿತೆಯನ್ನು ಸಿದ್ಧಪಡಿಸಿದಳು. ಅದೇ ಸೈನಿಕರ ಸಹಾಯದಿಂದ ರಾಮರಾಯನ ಶರೀರವನ್ನು ಚಿತೆಯ ಮೇಲಿರಿಸಿದಳು. ನಾಲ್ಕು ದಿಕ್ಕುಗಳಲ್ಲಿಯೂ ಬೆಂಕಿಯನ್ನು ಹತ್ತಿಸಿದಳು. ರಾಣಿಯು ದೂರದಲ್ಲಿ ಶಿಲಾಪ್ರತಿಮೆಯಂತೆ ನೋಡುತ್ತಾ ಸ್ತಂಭಿತಳಾಗಿ ಕುಳಿತಿದ್ದಳು.

ಭಗವಾನ್ ಸೂರ್ಯದೇವನು ಮಧ್ಯಾಹ್ನಕ್ಕೇರುವಹೊತ್ತಿಗೆ ರಾಮರಾಯನ ಶರೀರವು ಭಸ್ಮವಾಗಿಹೋಯಿತು. ಸಮೀಪದಲ್ಲಿ ಹರಿಯುತ್ತಿದ್ದ ಹಳ್ಳ ಒಂದರಲ್ಲಿ ಭೈರವಿಯೂ, ರಾಣಿಯೂ ಮಿಂದು ಬಿಸಿಲಿನಲ್ಲಿ ಬಟ್ಟೆಗಳನ್ನು ಒಣಗಿಸಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಪಲ್ಲಕ್ಕಿಯು ಸಿದ್ಧವಾಯಿತು. ಭೈರವಿಯು ರಾಣಿಯವರನ್ನು ಒತ್ತಾಯಪಡಿಸಿ ಪಲ್ಲಕ್ಕಿಯಲ್ಲಿ ಕೂಡಿಸಿದಳು. ತಾನು ನಡೆದುಕೊಂಡೇಬರುವುದಾಗಿ ಹೇಳಿದಳು. ಹಾಗೆಯೇ ಕೊಂಚದೂರ ದಾರಿ ಸವೆಯಿತು. ಮಧ್ಯಮಾರ್ಗದಲ್ಲಿ ಸೇನಾಧಿಪತಿಯ ಪ್ರಾರ್ಥನೆಯಂತೆ ಭೈರವಿಯು ಕುದುರೆಯಮೇಲೇರಿ ಮುಂದಕ್ಕೆ ಹೊರಟಳು. ಸೂರ್ಯಾಸ್ತಮಾನದ ಸಮಯಕ್ಕೆ ಇಪ್ಪತ್ತೈದು ಮೈಲಿಗಳ ಮಾರ್ಗಾನುಕ್ರಮಣಮಾಡಿ ಅರಣ್ಯಮಧ್ಯದಲ್ಲಿದ್ದ ಮಲ್ಲಪ್ಪನ ಮನೆಗೆ ಬಂದು ಸೇರಿದರು. ಯಾವ ಸ್ಥಳದಲ್ಲಿ ಮೊದಲನೇಯದಿನ ರಾಮರಾಯನು ನಗರದಿಂದ ರಾಣಿಯವರನ್ನು ಕರತಂದು ಇಳಿಸಿದನೋ ಅದೇ ಸ್ಥಳದಲ್ಲಿ ಇಂದು ಭೈರವಿಯು ರಾಣಿಯವರ ಪಲ್ಲಕ್ಕಿಯನ್ನು ತಂದಿಳಿಸಿದಳು. ಅದೇ ಜಗಲಿಯಮೇಲೆ ರಾಣಿಯೂ, ಭೈರವಿಯೂ ಆ ರಾತ್ರಿಯನ್ನೆಲ್ಲಾ ಕಳೆದರು.

## ೩೮

## ಅಂತಿಮ ಯಾತ್ರೆ

ಪ್ರಾತಃಕಾಲ ಭೈರವಿಯು ರಣದುಲ್ಲಾ ಖಾನನನ್ನು ಕರೆಸಿದಳು. ರಣದುಲ್ಲಾ ಖಾನನು ನಗರದ ರಾಣಿಯವರಿಗೆ ಸಲಾಂಮಾಡಿ ಅಪ್ಪಣೆ ಏನೆಂದು ಕೇಳಿದನು. ಭೈರವಿಯು "ಸೇನಾಧಿಪತಿಗಳೇ ನೀವು ಹೈದರಲ್ಲಿ ಖಾನರವರ ಸೇನಾಧಿಪತಿಗಳೆಂದು ತಿಳಿದುಕೊಂಡಿದ್ದೇನೆ. ನಾವಿಬ್ಬರೂ ನಿಮ್ಮ ಬಂದಿಗಳಾಗಿದ್ದೇವೆಂಬುದು ನಿಜ. ನಮ್ಮನ್ನು ಎಲ್ಲಿಗೆ ಕರೆದು ಕೊಂಡು ಹೋಗಬೇಕೆಂದಿದ್ದೀರಿ? ಹೇಳಿರಿ" ಎಂದು ಕೇಳಿದಳು. ಭೈರವಿಯ ಈ ಪ್ರಶ್ನೆಯಿಂದ ರಣದುಲ್ಲಾ ಖಾನನು ತಬ್ಬಿಬ್ಬಾದನು. "ರಾಣಿಯವರೇ, ನನಗೆ ಇಂತಹ ಸ್ಥಳಕ್ಕೆ ಕರೆತರಬೇಕೆಂದು ತಾಕೀತಾಗಿಲ್ಲ. ನವಾಬರವರ ಸಮ್ಮುಖಕ್ಕೆ ಕರೆತರಬೇಕೆಂದು ಹುಕುಂ ಆಗಿದೆ". ಭೈರವಿಯು "ಅದು ಸರಿಯಾಗಿದೆ. ನಿಮ್ಮ ನವಾಬರವರು ಎಲ್ಲಿದ್ದಾರೆ?" ಎಂದು ಕೇಳಿದಳು. ಸೇನಾಧಿಪತಿಯು "ನಗರದಲ್ಲಿದ್ದಾರೆ" ಎಂದು ಹೇಳಿದನು. ಭೈರವಿಯು "ಸೇನಾಧಿಪತಿಗಳೇ, ನಮಗೆ ನಿಮ್ಮ ನವಾಬರ ಸಮ್ಮುಖಕ್ಕೆ ಬರಲು ಭಯವೇನೂ ಇಲ್ಲ. ನಿಮ್ಮ ನವಾಬರು ನಗರವನ್ನು ಜಯಿಸಿದಾಗ್ಯೂ ನಮ್ಮ ರಾಣಿಯವರು ಶಾಶ್ವತವಾಗಿ ನಗರದ ರಾಣಿಯವರೆಂದೇ ತಿಳಿಯಿರಿ. ಅವರು ಹೀಗೆ ಬಂದಿಗಳಾಗಿ ನಗರವನ್ನು ಪ್ರವೇಶಮಾಡುವುದಿಲ್ಲ. ನಗರದ ಸೀಮೆಯಲ್ಲಿ ಇರುವುದಕ್ಕೂ ಒಪ್ಪುವುದಿಲ್ಲ. ನೀವು ಎಷ್ಟೇ ಸಾಹಸಮಾಡಿದರೂ ನಮ್ಮಿಬ್ಬರನ್ನೂ ಸಜೀವವಾಗಿ ನಗರಕ್ಕೆ ಕೊಂಡುಹೋಗಲಾರಿರಿ. ನಮ್ಮ ಶವಗಳನ್ನು ಬೇಕಾದರೆ ತೆಗೆದುಕೊಂಡು ಹೋಗಬಹುದು" ಎಂದು ಹೇಳಿದಳು. ರಣದುಲ್ಲಾ ಖಾನನು ಭೈರವಿಯ ತಂತ್ರವನ್ನರಿಯದೇ ಅವಾಕ್ಕಾಗಿ ನಿಂತನು. ರಾಣಿಯವರು ಅಪ್ಪಣೆಕೊಡಿಸಿದಂತೆ ನಡೆಯುತ್ತೇನೆಂದು ಹೇಳಿದನು. ಭೈರವಿಯು ನಕ್ಕು, "ಸೇನಾಧಿಪತಿಗಳೇ, ಅಪ್ಪಣೆ ಮಾಡುವುದಕ್ಕೆ ನಾವಾರು? ನಾವು ಬಂದಿಗಳು. ನೀವು ಹೋಗಿ ನಿಮ್ಮ ನವಾಬರಿಗೆ ಈ ವಿದ್ಯಮಾನಗಳನ್ನೆಲ್ಲಾ ಅರಿಕೆಮಾಡಿರಿ.

ನಾವು ಇಲ್ಲಿಂದ ಎಲ್ಲಿಗೂ ಓಡುಹೋಗುವುದಿಲ್ಲ. ಅವರು ಹೇಗೆ ಅಪ್ಪಣೆ ಮಾಡುತ್ತಾರೋ ಹಾಗೆ ನಡೆಯಿರಿ. ನಮಗೆ ಒಪ್ಪಿಗೆಯಾದರೆ ನಾವು ಒಪ್ಪುತ್ತೇವೆ. ಇಲ್ಲದಿದ್ದರೆ ಸಂತೋಷದಿಂದ ನಾವಿಬ್ಬರೂ ಪ್ರಾಣಗಳನ್ನು ಪರಿತ್ಯಜಿಸುತ್ತೇವೆ. ನಮ್ಮ ಕಳೇಬರವನ್ನು ತೆಗೆದುಕೊಂಡುಹೋಗಿ ನಿಮ್ಮ ನವಾಬರಿಗೆ ಒಪ್ಪಿಸಿ" ಎಂದು ಹೇಳಿದಳು. ರಣದುಲ್ಲಾ ಖಾನನು "ರಾಣಿಯವರೇ, ಅದೊಂದು ಮಾತನ್ನು ಮಾತ್ರ ನಡೆಸ ಲಾಗುವುದಿಲ್ಲ ನಾನು ಈ ಸ್ಥಳವನ್ನು ಬಿಟ್ಟು ಕದಲುವುದಿಲ್ಲ" ಎಂದನು. ಭೈರವಿಯು ನಗುತ್ತ, "ಸೇನಾಧಿಪತಿಗಳೇ, ನನ್ನ ಮಾತನ್ನು ನಂಬ ಲಾರಿರಾ!" ಎಂದು ಕೇಳಿದಳು. ರಣದುಲ್ಲಾಖಾನನು ಕೈಜೋಡಿಸಿ "ರಾಣಿಯವರೇ, ತಮ್ಮ ಮಾತನ್ನು ದೇವರ ಮಾತಿನಂತೆ ನಂಬುತ್ತೇನೆ. ಆದರೆ ನವಾಬರ ಮನಸ್ಸನ್ನು ನಂಬಲಾಗುವುದಿಲ್ಲ. ಕೈಗೆ ಸಿಕ್ಕಿದ ರಾಣಿ ಯವರನ್ನು ಬಿಟ್ಟುಬಂದನೆಂದು ನವಾಬರು ಮೊದಲು ನನ್ನ ತಲೆ ಹಾರಿಸುತ್ತಾರೆ" ಎಂದು ಹೇಳಿ, "ಈಗ ತಮ್ಮ ಆಜ್ಞೆಯನ್ನುನಡೆಸಬೇಕು. ನವಾಬರ ಮರ್ಜಿಯನ್ನೂ ಅನುಸರಿಸಬೇಕು. ಹಾಗೆ ನಡೆಯುತ್ತೇನೆ" ಎಂದು ಹೇಳಿ ಹೊರಟನು. ಮನೆಯಸುತ್ತಲೂ ಸೈನಿಕರನ್ನು ಕಾವ ಲಿಟ್ಟು ಹೈದರಾಲಿಯವರ ಸಮ್ಮುಖಕ್ಕೆ ಈ ವಿದ್ಯಮಾನಗಳನ್ನೆಲ್ಲಾ ಬರೆದು ಒಬ್ಬ ಕುದುರೆ ಸವಾರನ ಕೈಯ್ಯಲ್ಲಿ ಕೊಟ್ಟು ಉತ್ತರವನ್ನು ತರ ಬೇಕೆಂದು ನಗರಕ್ಕೆ ಕಳುಹಿಸಿಕೊಟ್ಟನು.

ಮಾರನೆಯದಿನ ಸಂಧ್ಯಾಕಾಲದಹೊತ್ತಿಗೆ ಸವಾರನು ನಗರವನ್ನು ಸೇರಿ ಹೈದರಾಲಿಯವರ ಕೈಗೆ ಕಾಗದವನ್ನು ಒಪ್ಪಿಸಿದನು. ಹೈದರಾಲಿ ಯವರು ಮುತ್ಸದ್ದಿಯನ್ನು ಕರೆಸಿ ಆ ಕಾಗದವನ್ನು ಸುಲಾವಣೆಮಾಡು ವಂತೆ ಅಪ್ಪಣೆಯಿತ್ತರು. ಕಾಗದದ ಒಕ್ಕಣೆಯು ಈಪರಿಯಾಗಿದ್ದಿತು.

ಪರ್ಹಾಪಹಾರ್‌ವರ ಸನ್ನಿಧಾನಕ್ಕೆ,

ನಾನು ಖಾವಿಂದರ ಅಪ್ಪಣೆಯಪ್ರಕಾರ ನಗರದ ರಾಣಿಯವರನ್ನು ಕಬ್ಬಾಳದುರ್ಗದ ಅರಣ್ಯಮಧ್ಯದಲ್ಲಿ ಸೆರೆಹಿಡಿದಿರುತ್ತೇನೆ. ಅವರು ಜೀವಂತರಾಗಿದ್ದಾರೆ. ಭೈರವೀರಾಣಿಯವರೂ ಇಲ್ಲೇ ಇದ್ದಾರೆ. ನಗರದ

ಸೇನಾಧಿಪತಿ ರಾಮರಾಯನು ಹೋರಾಡಿ ಪ್ರಾಣಬಿಟ್ಟನು. ರಾಣಿಯವರು ನಗರಕ್ಕೆ ಬರುವುದಿಲ್ಲವೆಂದೂ, ಬಲಾತ್ಕರಿಸಿದರೆ ಪ್ರಾಣಪರಿತ್ಯಾಗ ಮಾಡುವುದಾಗಿಯೂ ಹೇಳುತ್ತಾರೆ. ಹುಜೂರಿನ ಅಪ್ಪಣೆಯಂತೆ ನಡೆಸುತ್ತೇನೆ. ಹುಕುಂ ಆಗಬೇಕು.

ತಮ್ಮ ಸೇವಕ,

**ರಣದುಲ್ಲಾ ಖಾ.**

ಈ ಪತ್ರವನ್ನು ಓದಸಿಕೇಳಿ ಹೈದರಾಲಿಯವರು ಅಂತಃಗೃಹಕ್ಕೆ ಹೊರಟುಹೋದರು. ರಾತ್ರಿಯೆಲ್ಲಾ ಆಲೋಚನೆಮಾಡತೊಡಗಿದರು. "ರಾಣಿಯು ಬದುಕಿದ್ದಾಳೆ. ನಮ್ಮ ಸೆರೆ ಸಿಕ್ಕಿದ್ದಾಳೆ. ನಗರಕ್ಕೆ ಬರುವುದಿಲ್ಲವೆಂದೂ ಹೇಳುತ್ತಾಳೆ. ಎಲ್ಲವೂ ಸರಿಯಾಗಿಯೇ ಇದೆ. ಸ್ತ್ರೀಯರನ್ನು ಕೊಲ್ಲಿಸುವುದು ಧರ್ಮವಲ್ಲ. ಆ ರಾಣಿಯನ್ನು ಸೆರೆಯಲ್ಲಿಡಬೇಕು. ನಗರದ ರಾಜ್ಯದಲ್ಲಿ ಸೆರೆಯಲ್ಲಿಡುವುದು ಯುಕ್ತವಾದುದಲ್ಲ. ನಗರದ ರಾಜ್ಯದಿಂದ ರಾಣಿಯನ್ನು ಹೊರಗಿಡುವುದೇ ಕ್ಷೇಮ. ಮದ್ದುಗಿರಿಯ ಕೋಟೆಯಲ್ಲಿ ರಾಣಿಯನ್ನು ಸದ್ಯಕ್ಕೆ ಸೆರೆಯಲ್ಲಿಡೋಣ. ಮುಂದೆ ನೋಡಿಕೊಳ್ಳೋಣ" ಎಂದು ಆಲೋಚಿಸಿದರು. ಬೆಳಗಾಗುತ್ತಲೇ ರಾಜಯೋಗ್ಯವಾದ ಮ್ಯಾನಾವನ್ನೂ ಒಂದು ಸಣ್ಣ ಸೈನ್ಯದ ತುಕ್ಕಡಿಯನ್ನೂ ರಣದುಲ್ಲಾಖಾನರು ಇದ್ದ ಸ್ಥಳಕ್ಕೆ ಕಳುಹಿಸಿಕೊಟ್ಟರು. ಮಾರನೆಯದಿನ ನವಾಬರ ಆಜ್ಞೆಯು ರಣದುಲ್ಲಾಖಾನರಿಗೆ ತಲುಪಿತು. ಭೈರವಿಯು ಉಪಾಯದಿಂದ ರಾಣಿಯನ್ನು ಅಲ್ಲಿಂದ ಹೊರಡಲು ಒಪ್ಪಿಸಿದಳು. ರಣದುಲ್ಲಾಖಾನನು ಆ ರಾತ್ರಿಯೇ ರಾಣಿಯವರನ್ನು ಮ್ಯಾನಾದಲ್ಲಿ ಕುಳ್ಳಿರಿಸಿಕೊಂಡು ಸೈನ್ಯದ ಕಾವಲಿನೊಡನೆ ಮದ್ದುಗಿರಿಯ ಕಡೆಗೆ ಪ್ರಯಾಣಮಾಡಿದನು.

ಹೈದರಾಲಿಯ ಅಪ್ಪಣೆಯಂತೆ ನಗರದ ರಾಣಿಯು ಮದ್ದುಗಿರಿಯ ಕೋಟೆಯಲ್ಲಿ ಬಂಧನದಲ್ಲಿ ಇಡಲ್ಪಟ್ಟಳು. ಭೈರವಿಯು ರಾಣಿಯ ಜೊತೆಯಲ್ಲಿಯೇ ಇರುತ್ತಿದ್ದಳು. ರಾಣಿಯ ಮರ್ಯಾದೆಗೆ ತಕ್ಕಂತೆ ಮಿತಪರಿವಾರವೂ ಸಕಲ ಏರ್ಪಾಡುಗಳೂ ಅಲ್ಲಿ ಸಿದ್ಧವಾಗಿದ್ದವು.

ರಾಣಿ ಚೆಲುವಮ್ಮಣ್ಣಿಯು ಮದ್ದುಗಿರಿಯ ಕೋಟೆಗೆ ಬರುತ್ತಲೇ ಆಕೆಯಲ್ಲಿ ಏನೋ ಒಂದು ವಿಧವಾದ ಬದಲಾವಣೆಯು ಕಂಡುಬರಲಾರಂಭವಾಯಿತು. ರಾಣಿಗೆ ಸ್ನಾನಮಾಡಿಸುವುದು ಕಷ್ಟವಾಯಿತು. ಬಟ್ಟೆಯನ್ನುಡಿಸುವುದು ಪ್ರಯಾಸವಾಗುತ್ತಿತ್ತು. ತಲೆಯನ್ನು ಬಾಚಿ ಹೆರಳು ಕಟ್ಟುವುದು ಅಸಾಧ್ಯವೇ ಆಗಿ ಪರಿಜನರು ತಲೆಬಾಚುವುದನ್ನೇ ಬಿಟ್ಟುಬಿಟ್ಟಿದ್ದರು. ರಾಜಯೋಗ್ಯವಾದ ಪರ್ಯಂಕ ಸುಪ್ಪತ್ತಿಗೆ ಸುಖಾಸನಗಳು ಎಲ್ಲವೂ ಇದ್ದಾಗ್ಯೂ ರಾಣಿಯು ನೆಲದಮೇಲೆಯೇ ಕುಳಿತುಕೊಳ್ಳುತ್ತಿದ್ದಳು. ನೆಲದಮೇಲೆಯೇ ಮಲಗುತ್ತಿದ್ದಳು. ಯಾರೊಡನೆಯೂ ಸರಿಯಾಗಿ ಮಾತನಾಡುತ್ತಿರಲಿಲ್ಲ. ಭೈರವಿಯು ಬಂದು ಕುಳಿತುಕೊಂಡು ಮಾತನಾಡಲಾರಂಭಿಸಿದರೆ ರಾಣಿಯು ಸರಿಯಾಗಿಯೇ ಮಾತನಾಡುತ್ತಿದ್ದಳು. ಒಂದೊಂದುದಿನ ಭೈರವಿಯು ರಾಣಿಯ ತಲೆಬಾಚಿ ಹೆರಳುಕಟ್ಟಿ ಅಲಂಕರಿಸಿದರೆ ಸುಮ್ಮನಿರುತ್ತಿದ್ದಳು. ಆದರೆ ಇದು ನಿತ್ಯವೂ ಸಾಧ್ಯವಾಗುತ್ತಿರಲಿಲ್ಲ. ರಾಣಿಯು ಯಾವುದೋ ಮಾತನ್ನೆತ್ತಿ ಅಳುತ್ತಾ ಉದ್ರೇಕದಿಂದ ಮಾತನಾಡುತ್ತಾ ತಲೆಯನ್ನು ಬಡಿದುಕೊಳ್ಳುತ್ತಾ ನೆಲದಮೇಲೆ ಬೀಳುತ್ತಿದ್ದಳು. ಪುನಃ ಸಮಸ್ಥಿತಿಗೆ ಬರುವುದಕ್ಕೆ ಒಂದೆರೆಡು ದಿನಗಳಾಗುತ್ತಿದ್ದವು. ಬರಬರುತ್ತಾ ರಾಣಿಯು ಅನ್ನಾಹಾರಗಳನ್ನು ತೊರೆಯಲಾರಂಭಿಸಿದಳು. ಒಂದು ತಿಂಗಳೊಳಗಾಗಿ ಬಹಳ ಕೃಶಳಾಗಿಹೋಗಿದ್ದಳು. ಆದರೇನು? ಮುಖಕಾಂತಿಯು ಕುಂದಿರಲಿಲ್ಲ. ಕಣ್ಣುಗಳು ಮತ್ತೂ ಉಜ್ವಲವಾಗಿದ್ದವು. ರಾಣಿಯ ಪ್ರವೃತ್ತಿಯನ್ನು ನೋಡಿ ಪರಿಜನರು "ರಾಣಿಗೆ ಹುಚ್ಚುಹಿಡಿಯುತ್ತಿದೆ" ಎಂದು ಹೇಳಿಕೊಳ್ಳುತ್ತಿದ್ದರು. ಈ ಮಾತುಗಳನ್ನು ಭೈರವಿಯೊಡನೆಯೂ ಹೇಳುತ್ತಿದ್ದರು. ಭೈರವಿಯು ನಕ್ಕು ಸುಮ್ಮನಾಗುತ್ತಿದ್ದಳು. ಕಾವಲುಗಾರರ ಯಜಮಾನನಾದ ಹವಾಲ್ದಾರ್ ಬಾಬಾಸಾಬಿಯು ಪ್ರತಿದಿನವೂ ರಾಣಿಯುವರ ಭೇಟಿಮಾಡಿ ಹೋಗುತ್ತಿದ್ದನು. ನವಾಬರವರ ಅಪ್ಪಣೆಯಂತೆ ವಾರಕ್ಕೊಂದು ಬಾರಿ ನವಾಬರಿಗೆ ರಾಣಿಯುವರ ಸಮಾಚಾರವನ್ನು ಬರೆದು ಕಳುಹಿಸುತ್ತಿದ್ದನು.

ಈ ಸಮಯದಲ್ಲಿ ನವಾಬರವರ ಸವಾರಿಯು ಚಿತ್ರದುರ್ಗದ ಕೋಟೆಯಲ್ಲಿತ್ತು. ಇಷ್ಟರಲ್ಲಿ ಒಂದು ದಿನ ಮದ್ದುಗಿರಿಯ ಕೋಟೆಗೆ ನವಾಬರ ಸಮ್ಮುಖದಿಂದ ವರ್ತಮಾನವು ಬಂದಿತ್ತು. ಪ್ರಾತಃಕಾಲ ರಾಣಿಯವರು ಸ್ನಾನವನ್ನು ತೀರಿಸಿಕೊಂಡು ಬಿಸಿಲಿನಲ್ಲಿ ತಲೆಯನ್ನು ಬಿಚ್ಚಿಕೊಂಡು ಕುಳಿತಿದ್ದರು. ಭೈರವಿಯು ರಾಣಿಯ ಕೇಶದಾಮವನ್ನು ಬಿಚ್ಚುತ್ತಾ ಬಿಸಿಲಿನಲ್ಲಿ ಆ ತಲೆಗೂದಲುಗಳನ್ನು ಆರಿಸುತ್ತಾ ರಾಣಿ ಯೊಡನೆ ಮಾತುಕಥೆಗಳನ್ನು ಆಡುತ್ತಿದ್ದಳು. ಮಾತುಗಳು ನಗರದ ಹಳೆಯ ವೈಭವದ ವಿಚಾರವಾಗಿದ್ದವು. ಆ ಸಮಯಕ್ಕೆ ಹವಾಲ್ದಾರನು ಬಂದು ರಾಣಿಯವರಿಗೆ ಮುಜರೆಮಾಡಿ ಅಂದಿನ ಸಂಧ್ಯಾಕಾಲ ನವಾಬ ರವರು ಮದ್ದುಗಿರಿಗೆ ದಯಮಾಡಿಸುತ್ತಾರೆಂದೂ ರಾಣಿಯವರ ಭೇಟಿ ಗಾಗಿಯೇ ಇಲ್ಲಿಗೆ ಚಿತ್ತೈಸುತ್ತಾರೆಂದೂ ಅರಿಕೆಮಾಡಿದನು. ರಾಣಿ ಯವರು "ಒಳ್ಳೆಯದು ಸಂತೋಷ" ಎಂದು ಹೇಳಿ ಎದ್ದು ಒಳಗೆ ಹೊರಟುಹೋದರು. ಪರಿಜನರು ಎಷ್ಟೇ ಹೇಳಿದರೂ ಆದಿನ ರಾಣಿಯು ಊಟಮಾಡಲಿಲ್ಲ. ಭೈರವಿಯು ಬಂದು ಹೇಳಿದರೂ ರಾಣಿಯು ಊಟಮಾಡಲೊಪ್ಪಲಿಲ್ಲ. ಆದರೆ ಇಂದು ಉದ್ರೇಕಭಾವವಿರಲಿಲ್ಲ. ರಾಣಿಯು ಶಾಂತಭಾವದಿಂದ "ಗಿರಿಜೆ, ಇಂದು ಊಟ ಬೇಡ. ನಾನು ಶಾಂತಚಿತ್ತಳಾಗಿದ್ದೇನೆ. ನೀನು ಅನ್ಯಥಾ ಭಾವಿಸಬೇಡ. ಈ ದಿನ ಹೈದಗಲ್ಲೀಖಾನನು ನನ್ನನ್ನು ನೋಡಲು ಬರುತ್ತಾನಂತೆ. ಏಕೆ ಬರು ತ್ತಾನೆ? ಅವನು ನನ್ನನ್ನು ನೋಡುವ ಕಾರಣವೇನಿದೆ? ನನ್ನೊಡನೆ ರಾಜಕೀಯವನ್ನು ಮಾತನಾಡಲು ಬರುವನೇನು? ಇರಲಿ ಈ ದಿನ ಆ ಹೈದರನಿಗೆ ನನ್ನ ಕೈ ತೋರಿಸುತ್ತೇನೆ!" ಎಂದು ಹೇಳಿದಳು.

ಸಂಧ್ಯಾಕಾಲವು ಸಮೀಪಿಸುತ್ತಿದ್ದಹಾಗೆಯೇ ರಾಣಿಯು ಎದ್ದು ಭೈರವಿಯನ್ನು ಕರೆದು, "ಗಿರಿಜೇ, ನನ್ನ ತಲೆಯನ್ನು ಬಾಚಿ ಹೆರಳುಹಾಕು. ನನಗೆ ಸಾಧಾರಣವಾದ ಒಂದು ಸೀರೆಯನ್ನುಡಿಸಿ ಕಂಚುಕವನ್ನು ತೊಡಿಸು. ನಾನು ನವಾಬರ ಭೇಟಿಗೆ ಸಿದ್ಧಳಾಗಬೇಕು" ಎಂದು ಹೇಳಿದಳು. ಭೈರವಿಯು ಆಶ್ಚರ್ಯದಿಂದ "ರಾಣಿಗೆ ನವಾಬರ

ಭೇಟಿಯಲ್ಲಿ ಏಕೆ ಇಷ್ಟೊಂದು ಕುತೂಹಲ!" ಎಂದು ಮನಸ್ಸಿನಲ್ಲಿಯೇ ಆಶ್ಚರ್ಯಪಟ್ಟಳು. ರಾಣಿಗೆ ತಲೆಬಾಚಿ, ಸೀರೆಯನ್ನುಡಿಸಿ, ಕಂಚುಕವನ್ನು ತೊಡಿಸಿ ಆಪಾದಮಸ್ತಕವಾಗಿ ಮೇಲುಡುವನ್ನು ಹೊದಿಸಿ ಅಲಂಕರಿಸಿದಳು. ರಾಣಿಯು ಮುಕ್ತಾಹಾರಗಳಿಂದಲೂ, ನವದುಕೂಲ ದಿಂದಲೂ ನಗರದಲ್ಲಿ ಎಷ್ಟು ಶೋಭಿಸುತ್ತಿದ್ದಳೋ, ಇಂದು ನಿರಾಭರಣೆಯಾಗಿ ಅದಕ್ಕಿಂತಲೂ ನಾಲ್ಮಡಿ ಶೋಭಿಸುತ್ತಿದ್ದಳು. ಹಜಾರದಲ್ಲಿ ಹೈದರಾಲಿಯವರ ಭೇಟಿಗೆ ಸಿದ್ಧಗೊಳಿಸಬೇಕೆಂದು ಗಿರಿಜೆಗೆ ಅಪ್ಪಣೆ ಮಾಡಿದಳು. ಗಿರಿಜೆಯು ಎಲ್ಲವನ್ನೂ ಸಿದ್ಧಗೊಳಿಸಿದಳು. ಹಜಾರದಲ್ಲಿ ಎರಡೇ ಎರಡು ಆಸನಗಳು ಸಿದ್ಧಗೊಳಿಸಲ್ಪಟ್ಟಿದ್ದವು. ನೆಲದಮೇಲೆ ಒಂದು ಚಾಪೆಯು ಹಾಸಿದ್ದಿತು. ರಾಣಿಯು ಹಜಾರಕ್ಕೆ ಬಂದುನೋಡಿ "ಎಲ್ಲವೂ ಸರಿಯಾಗಿದೆ" ಎಂದು ಸಮಾಧಾನದಿಂದ ಸಂತೋಷಪಟ್ಟು ಕೊಂಡು ಒಳಗೆ ಹೋಗಿ ಕುಳಿತುಕೊಂಡಳು. ಅಷ್ಟರಲ್ಲಿ ನವಾಬರ ಸವಾರಿಯು ಕೋಟೆಯ ಮೇಲಕ್ಕೆ ಬಂದಿದೆಯೆಂದೂ ರಾಣಿಯವರ ಭೇಟಿಗಾಗಿ ಕಾದಿರುವುದಾಗಿಯೂ ಪರಿಚಾರಿಕೆಯರು ಬಂದು ತಿಳಿಸಿದರು. ರಾಣಿಯು ಗಿರಿಜೆಯನ್ನು ನವಾಬರ ಸಮ್ಮುಖದಲ್ಲಿ ಎದುರುಗೊಂಡು ಕರೆತರುವಂತೆ ಆಜ್ಞೆಮಾಡಿದಳು. ಭೈರವಿಯು ಹೋಗುತ್ತಾ ಮನಸ್ಸಿನಲ್ಲಿ "ಈ ರಾಣಿಯು ಎಂತಹ ವೈಖರಿಯನ್ನು ಅಭ್ಯಾಸ ಮಾಡಿದ್ದಾಳೆ. ಈಗ ಬಂಧನದಲ್ಲಿದ್ದರೂ ಹೇಗೆ ರಾಣಿಗಿರಿಯನ್ನು ಚಲಾಯಿಸುತ್ತಾಳೆ. ಅದೃಷ್ಟವು ಮಾತ್ರ ದುರದೃಷ್ಟ" ಎಂದುಕೊಳ್ಳುತ್ತಾ ನವಾಬರ ಸಮ್ಮುಖಕ್ಕೆ ಬಂದು ನವಾಬರನ್ನು ಅಭಿವಂದಿಸಿದಳು. ಹೈದರಲ್ಲೀಖಾನರು ನಗುಮುಖದಿಂದ "ಭೈರವೀರಾಣಿಯವರೇ, ಸುಖದಿಂದ ಇರುವಿರಾ! ನಮಗೆ ನಿಮ್ಮ ರಾಣಿಯವರ ಭೇಟಿಮಾಡಿಸುವಿರಾ" ಎಂದು ಕೇಳಿದರು. ಭೈರವಿಯು, "ನವಾಬರೇ, ನಮ್ಮ ರಾಣಿಯವರು ತಮ್ಮ ದರ್ಶನಕ್ಕಾಗಿ ಕುತೂಹಲದಿಂದ ನಿರೀಕ್ಷಿಸುತ್ತಿರುವರು" ಎಂದು ಹೇಳಿದಳು. ಈ ಮಾತನ್ನು ಕೇಳಿ ಹೈದರಲ್ಲೀಖಾನರಿಗೆ ಆಶ್ಚರ್ಯವಾಯಿತು. ಅವರು ಭೈರವಿಯನ್ನು ಕುರಿತು, "ಭೈರವೀರಾಣಿ, ನಿಮ್ಮ ರಾಣಿಯವರಿಗೆ

ಬುದ್ಧಿಭ್ರಮಣವಾಗುತ್ತಿದೆಯೆಂದು ಕೇಳಿದ್ದೇವೆ. ನೀವು ಹೀಗೆ ಹೇಳು ವಿರಿ. ಇದೇನು ವಿಚಿತ್ರವಾಗಿದೆ ?" ಎಂದರು. ಭೈರವಿಯು, "ಯಾರಿಗೆ ಬುದ್ಧಿಭ್ರಮಣೆ? ತಮಗೆ ಯಾರು ಹೇಳಿದರು ?" ಎಂದಳು. ನವಾಬರು "ನಿಮ್ಮ ರಾಣಿಯವರು ಅನ್ನಾಹಾರಗಳನ್ನು ತೆಗೆದುಕೊಳ್ಳುವುದಿಲ್ಲವಂತೆ. ಸ್ನಾನಪಾನಗಳಲ್ಲಿ ಆಸಕ್ತಿಯೇ ಇಲ್ಲವಂತೆ. ಸರ್ವದಾ ಅಳುತ್ತಿರುತ್ತಾ ರಂತೆ. ಏನೇನೋ ಅಸಂಬದ್ಧವಾಗಿ ಮಾತನಾಡುತ್ತಾರಂತೆ. ಇದೆಲ್ಲಾ ಉನ್ಮಾದದ ಚಿನ್ಹೆಗಳಲ್ಲವೇನು ?" ಎಂದರು.

"ನವಾಬರೇ, ಮಾಫ್ ಮಾಡಬೇಕು. ಅದೆಲ್ಲಾ ನಿಜ. ಆದೊಂದೂ ಉನ್ಮಾದ ಚಿನ್ಹೆಗಳಲ್ಲ. ದುಃಖದ ಚಿನ್ಹೆಗಳು. ನಿರಾಶೆಯ ಚಿನ್ಹೆಗಳು. ರಾಣಿಯವರ ಸ್ಥಿತಿಯು ನವಾಬರಿಗೆ ಪ್ರಾಪ್ತವಾಗಿದ್ದರೆ ತಿಳಿಯುತ್ತಿತ್ತು ಆ ವೇದನೆ. ಎಂತಹ ಸಂಪದ್ಯುಕ್ತವಾದ ರಾಜ್ಯ! ಎಂತಹ ತುಂಬಿ ತುಳುಕುವ ಐಶ್ವರ್ಯ! ಎಂತಹ ಭೋಗಭಾಗ್ಯಗಳು! ಇಂದಿನ ಅವಸ್ಥೆ ಏನು ? ಇಂದು ರಾಣಿಯವರು ತಮ್ಮ ಬಂದಿಗಳು. ತಮ್ಮ ಅನ್ನ ವನ್ನುಂಡು ದೇಹವನ್ನು ಬೆಳೆಸುವುದು ಮಹಾರಾಣಿಗೆ ಸಲ್ಲುತ್ತದೇನು ?" ಎಂದು ಗಡಸು ಧ್ವನಿಯಿಂದ ಭೈರವಿಯು ನವಾಬರಿಗೆ ಉತ್ತರವಿತ್ತಳು. ನವಾಬರು ಅವಾಕ್ಕಾದರು. ಸ್ವಲ್ಪದೂರದಲ್ಲಿ ನವಾಬರ ಹಿಂದೆ ನಿಂತಿದ್ದ ಸೇನಾಧಿಪತಿ ರಣದುಲ್ಲಾಖಾನನು ನಡುಗಿದನು. ಮನಸ್ಸಿನಲ್ಲಿಯೇ, "ಸೈತಾನಿ, ಸೈತಾನಿ ನವಾಬರ ಸಮ್ಮುಖದಲ್ಲಿ ಹೇಗೆ ನಿಲ್ಲುತ್ತಾಳೆ, ಹೇಗೆ ಮಾತನಾಡುತ್ತಾಳೆ. ಇವಳಿಗೆ ಲಜ್ಜೆ ಇದೆಯೇ ? ಭಯವಿದೆಯೇ ? ಅದೊಂದೂ ಇಲ್ಲ. ಬೈರಾಗಿಣಿ. ಒಂದು ಬಾರಿ ಇವಳನ್ನು ನಮ್ಮ ಶಿಬಿರ ದಲ್ಲಿ ಛಡಿ ಹೊಡೆಸಬೇಕೆಂದು ನನ್ನ ಮನಸ್ಸಿಗೆ ಬರುತ್ತದೆ. ಆದರೂ ಇವಳಿಗೆ ಈ ಧೀರತೆ ಇದ್ದರೆ ನಾನು ಇವಳ ಪಾದಾಕ್ರಾಂತನಾಗುತ್ತೇನೆ" ಎಂದು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡನು.

ಭೈರವಿಯು ನವಾಬರ ಕೈಹಿಡಿದು ಹಜಾರಕ್ಕೆ ಕರೆದುಕೊಂಡು ಹೋಗಿ ಆಸನದಮೇಲೆ ಕುಳ್ಳಿರಿಸಿದಳು. ಉತ್ತರಕ್ಷಣದಲ್ಲಿಯೇ ಹಜಾರದ ಒಳಬಾಗಿಲು ತೆಗೆಯಲ್ಪಟ್ಟಿತು. ರಾಣಿಯವರು ನವಾಬರ ಎದುರಿನಲ್ಲಿ

ಸ್ವಲ್ಪ ದೂರದಲ್ಲಿ ತಲೆಬಾಗಿ ನಿಂತುಕೊಂಡರು. ರಾಣಿಯುವರನ್ನು ಕಾಣುತ್ತಲೇ ಹೈದರಲ್ಲೀಖಾನರು ಆಸನದಿಂದೆದ್ದು ರಾಣಿಯುವರಿಗೆ ಅಭಿವಂದಿಸಿ ಅಲ್ಲಿದ್ದ ಮತ್ತೊಂದು ದಿವ್ಯಾಸನದಮೇಲೆ ಕುಳಿತುಕೊಳ್ಳಬೇಕೆಂದು ಎರಡು ಕೈಗಳನ್ನೂ ಆ ಆಸನದಕಡೆಗೆ ತೋರಿಸಿ ಪ್ರಾರ್ಥನೆ ಮಾಡಿದರು. ರಾಣಿಯುವರು ತಲೆದೂಗಿ ನಿಷೇಧಿಸಿದರು. ಮಾತನಾಡಲಿಲ್ಲ. ನವಾಬರು ಪುನಃ ಪ್ರಾರ್ಥನೆಮಾಡಿದರು. ರಾಣಿಯುವರು ಮೃದು ಧ್ವನಿಯಿಂದ "ನವಾಬರವರು ಆಸನದಮೇಲೆ ಕುಳಿತುಕೊಳ್ಳೋಣವಾಗಲೀ" ಎಂದು ಹೇಳಿದಳು. ನವಾಬರು ಸಂಕೋಚದಿಂದ ಆಸನದ ಮೇಲೆ ಕುಳಿತುಕೊಂಡು ರಾಣಿಯುವರ ಯೋಗಕ್ಷೇಮಗಳನ್ನು ಯಥೋಚಿತವಾಗಿ ವಿಚಾರಿಸಿದರು.

ರಾಣಿಯುವರು "ಎಲ್ಲವೂ ಸರಿಯಾಗಿದೆ. ನಾವು ಇಲ್ಲಿ ಬಂದಿಗಳಾಗಿ ಇಡಲ್ಪಟ್ಟದ್ದೇವೆ. ಆದಾಗ್ಯೂ ನಮಗಾವ ತೊಂದರೆಗಳೂ ಇಲ್ಲ. ನವಾಬರು ದರ್ಶನವಿತ್ತುದು ನಮಗೆ ಬಹಳ ಸಂತೋಷ" ಎಂದು ಹೇಳಿದರು.

ನವಾಬರು "ಮಹಾರಾಣಿಯುವರೇ, ರಾಜಕೀಯ ಕಾರಣಗಳಿಗಾಗಿ ನಿಮ್ಮನ್ನು ಬಂಧನದಲ್ಲಿಡಲಾಗಿದೆ. ಅಷ್ಟೇ ಹೊರತು ತಮ್ಮನ್ನು ನಿರ್ಬಂಧದಲ್ಲಿಡುವ ಉದ್ದೇಶವು ನಮಗೆ ಸರ್ವಥಾ ಇರುವುದಿಲ್ಲ. ತಮ್ಮನ್ನು ರಕ್ಷಣೆಮಾಡಬೇಕಾದುದು ಈಗ ನಮ್ಮ ಕರ್ತವ್ಯವಾಗಿದೆ. ಯಾರಾದರೂ ಶತ್ರುಗಳು ತಮ್ಮ ಪ್ರಾಣಹಾನಿಯುನ್ನುಂಟುಮಾಡಬಹುದು. ಇಷ್ಟು ದೂರದಲ್ಲಿ ಇಷ್ಟೊಂದು ಜಾಗರೂಕತೆಯಿಂದ ಕಾವಲಿಟ್ಟಿರುವುದಕ್ಕೆ ಅದೊಂದು ಕಾರಣವಿದೆ." ಎಂದರು.

ರಾಣಿಯುವರು ಮಧ್ಯದಲ್ಲಿ ಮಾತನಾಡತೊಡಗಿದರು. "ನಗರದ ರಾಜ್ಯದಲ್ಲಿ ನಮಗೆ ಶತ್ರುಗಳೇ ಇಲ್ಲ. ಒಂದು ಪಕ್ಷ ಶತ್ರುಗಳಿದ್ದರೂ ಈಗ ಅವರು ನಮ್ಮ ಮೇಲಿನ ದ್ವೇಷವನ್ನು ತೀರಿಸಿಕೊಂಡರೂ ಅದರಿಂದೇನೂ ಹಾನಿಯಿಲ್ಲ."

ನವಾಬರು "ರಾಣಿಯುವರೇ ನಮಗೆ ನಿಮ್ಮಿಂದ ಮಹತ್ತರವಾದ

ಕೆಲಸವಾಗಬೇಕಾಗಿದೆ. ಈ ನಗರದ ರಾಜ್ಯವನ್ನು ಪುನಃ ಪ್ರತಿಷ್ಠಾಪನ ಗೊಳಿಸಿ ನಾವು ಶ್ರೀರಂಗಪಟ್ಟಣಕ್ಕೆ ಹಿಂತಿರುಗಬೇಕು. ಅದು ತಮ್ಮ ಅನುಗ್ರಹದಿಂದ ನಡೆಯಬೇಕಾದ ಕಾರ್ಯ." ಎಂದರು.

ರಾಣಿಯವರು ಗಾಬರಿಯಿಂದ "ನಗರದ ಪುನಃ ಪ್ರತಿಷ್ಠಾಪನೆಯೇ! ಅದಕ್ಕೆ ನನ್ನಿಂದೇನಾಗಬೇಕು?" ಎಂದರು.

ನವಾಬರವರು "ತಾವು ಒಬ್ಬ ರಾಜಕುಮಾರನನ್ನು ಸ್ವೀಕಾರ ತೆಗೆದುಕೊಳ್ಳಲು ಅಪ್ಪಣೆಕೊಡಬೇಕು. ಆ ತಮ್ಮ ಸ್ವೀಕೃತ ಪುತ್ರಂಗೆ ನಾವು ಪಟ್ಟಕಟ್ಟುತ್ತೇವೆ. ತಾವು ನಗರದಲ್ಲಿಯೇ ವಾಸಮಾಡಬೇಕು." ಎಂದರು.

ರಾಣಿಯವರು "ಸ್ವೀಕಾರ—ನನಗೆಲ್ಲಿ ಅಧಿಕಾರವಿದೆ? ನಾನು ಅದಕ್ಕೆ ಒಪ್ಪುವುದಿಲ್ಲ. ನಾನು ನಗರದ ರಾಜ್ಯಕ್ಕೆ ಪುನಃ ಕಾಲಿಡುವುದಿಲ್ಲ. ಬಸಪ್ಪನಾಯಕರ ವಂಶವು ನಂದಿಹೋಗಿದೆ. ನನಗೆ ಸ್ವೀಕಾರ ತೆಗೆದುಕೊಳ್ಳಲು ಅಧಿಕಾರವಿಲ್ಲ." ಎಂದರು.

ನವಾಬರು "ರಾಣಿಯವರೇ, ತಾವು ದುಃಖದ ಆವೇಗದಲ್ಲಿ ತಪ್ಪು ಮಾತನಾಡುತ್ತಿದ್ದೀರಿ. ನಾವು ನಗರದ ಸೀಮೆಯ ಪಾಳೇಗಾರರನ್ನೆಲ್ಲಾ ಕರೆಸಿ ಅಭಿಪ್ರಾಯ ತೆಗೆದುಕೊಂಡಿದ್ದೇವೆ. ನಗರದ ಸೀಮೆಯ ವಿದ್ವಾಂಸರುಗಳನ್ನೆಲ್ಲಾ ಕರೆಸಿ ಶಾಸ್ತ್ರಸಂಪ್ರದಾಯಗಳನ್ನು ಕೇಳಿದ್ದೇವೆ. ಅವರೆಲ್ಲರೂ ತಮಗೆ ಸ್ವೀಕಾರಮಾಡಿಸಿ ಆ ಸ್ವೀಕೃತ ಪುತ್ರನಿಗೆ ಪಟ್ಟ ಕಟ್ಟಬೇಕೆಂದು ಹೇಳುತ್ತಾರೆ." ಎಂದರು.

ರಾಣಿಯು "ಅದೆಲ್ಲಾ ಸುಳ್ಳು ಶಾಸ್ತ್ರ. ಆ ಪಾಳೆಯಗಾರರೆಲ್ಲರೂ ಅನುಭವವಿಲ್ಲದ ಹುಡುಗರು. ನವಾಬರ ಮರ್ಜಿಯನ್ನನುಸರಿಸಿ ಹೇಳುತ್ತಾರೆ. ಹೀಗೆಲ್ಲಾ ನಿಮ್ಮ ಮನಸ್ಸಿಗೆ ಅನುಕೂಲವಾಗಿ ಹೇಳುವುದರಿಂದಲೇ ಆ ಪಾಳೆಯಗಾರರೆಲ್ಲರೂ ಸತ್ವವಿಹೀನರಾಗಿ ಗುಲಾಮರಾಗಿದ್ದಾರೆಂದು ನಾನು ಹೇಳುತ್ತೇನೆ. ಆ ವಿದ್ವಾಂಸರೆಲ್ಲರೂ ಹೀಗೆ ಧರ್ಮವಿರುದ್ಧವಾದ ಶಾಸ್ತ್ರಗಳನ್ನು ಹೇಳುವುದರಿಂದಲೇ ತೇಜೋಹೀನರಾಗಿದ್ದಾರೆ.

ನವಾಬರವರೇ, ಕ್ಷಮಿಸಿರಿ, ನಾನು ಆ ಸ್ವೀಕಾರಕ್ಕೆ ಒಪ್ಪುವುದಿಲ್ಲ." ಎಂದು ಹೇಳಿದಳು.

ನವಾಬರು ವಿಷಾದದಿಂದ "ಈ ನಗರದ ರಾಜ್ಯವನ್ನು ಏನು ಮಾಡಬೇಕೆನ್ನುವಿರಿ" ಎಂದು ವ್ಯಗ್ರರಾಗಿ ಕೇಳಿದರು.

ರಾಣಿಯು, "ನವಾಬರವರೇ ಆ ರಾಜ್ಯವನ್ನು ನೀವು ಯುದ್ಧದಿಂದ ಗೆದ್ದಿದೀರಿ. ಅದು ಪೂರ್ತಿಯಾಗಿ ನಿಮ್ಮ ಸ್ವತ್ತು. ನೀವೇ ಅದಕ್ಕೆ ರಾಜರು. ಇದು ನನ್ನ ತ್ರಿಕರ್ಣಪೂರ್ವಕವಾದ ಮಾತು" ಎಂದು ಹೇಳಿದಳು.

ನವಾಬರವರು "ರಾಣಿಯುವರೇ, ನಾನು ಚರ್ಚೆಮಾಡುವುದಕ್ಕೆ ತಮ್ಮಲ್ಲಿಗೆ ಬಂದಿಲ್ಲ. ತಾವು ಈ ಸ್ವೀಕಾರಕ್ಕೆ ಒಪ್ಪಲೇಬೇಕು. ನಗರದ ರಾಜ್ಯವೆಲ್ಲವೂ ತಮಗೆ ಸ್ವೀಕಾರಮಾಡಿಸಬೇಕೆಂದು ಮೊರೆಯಿಡುತ್ತದೆ. ತಾವು ಈ ಸ್ವೀಕಾರವನ್ನು ತಿರಸ್ಕರಿಸಲಾಗುವುದಿಲ್ಲ. ಎಷ್ಟು ಜಾಗ್ರತೆ ಯಾಗಿ ಇದಕ್ಕೆ ನೀವು ಸಮ್ಮತಿ ಇತ್ತರೆ ಅಷ್ಟು ಕ್ಷೇಮವಾಗುವುದು. ಬೇರೆ ಮಾರ್ಗವೇ ಇಲ್ಲ. ತಮ್ಮ ಇಷ್ಟ" ಎಂದು ಹೇಳಿ ಎದ್ದುನಿಂತರು.

ರಾಣಿಯುವರು ತಲೆದೂಗಿ ನಿರಾಕರಣೆಮಾಡಿದರು. ಹೈದರಾಲಿ ಯುವರು ಭೈರವಿಯು ಕಡೆ ತಿರುಗಿ "ಭೈರವೀರಾಣಿಯುವರೇ, ನನ್ನ ಸಲಹೆಯು ಸೂಕ್ತವಾಗಿದೆ ಎಂದು ತಮಗೆ ಮನವರಿಕೆಯಾಗಿದೆ ಎಂದು ನಂಬುತ್ತೇನೆ. ನೀವು ಈ ರಾಣಿಯುವರನ್ನು ಈ ಸ್ವೀಕಾರಕ್ಕೆ ಒಪ್ಪಿಸ ಬೇಕು." ಎಂದು ಹೇಳಿ ಹಜಾರವನ್ನು ಬಿಟ್ಟು ಹೊರಟುಹೋದರು.

ಭೈರವಿಯು ನವಾಬರ ಹಿಂದೆಯೇ ಹೋದಳು. ನವಾಬರು ಆ ಕೋಟೆಯನ್ನು ಬಿಟ್ಟು ಪಲ್ಲಕ್ಕಿಯಲ್ಲಿ ಕುಳಿತು, "ಭೈರವೀರಾಣಿಯುವರೇ, ನಗರದ ಭಾರವೆಲ್ಲವೂ ನಿಮ್ಮ ಮೇಲೆ ಬಿದ್ದಿದೆ. ನಗರದರಾಣಿಯುವರನ್ನು ನಯಭಯಗಳಿಂದ ಈ ಸ್ವೀಕಾರಕ್ಕೆ ಒಪ್ಪಿಸಬೇಕು. ಅವರು ಮೂರ್ಖ ತನದಿಂದ ಸರ್ವಥಾ ಸ್ವೀಕಾರಕ್ಕೊಪ್ಪದಿದ್ದರೆ ರಾಣಿಯುವರನ್ನು ಬಲಾತ್ಕರಿಸಿ ನಗರಕ್ಕೆ ಕರೆದುಕೊಂಡು ಹೋಗಿ ನಿರ್ಬಂಧದಿಂದ ಸ್ವೀಕಾರ ವನ್ನು ಮಾಡಿಸಬೇಕಾಗುತ್ತದೆ. ಪೂರ್ವದಲ್ಲಿ ನಗರದ ರಾಜವಂಶದಲ್ಲಿ

ಸ್ವೀಕಾರವು ನಡೆದಿಲ್ಲವೇ? ಮೈಸೂರಿನಲ್ಲಿ ರಾಜಮನೆತನದಲ್ಲಿ ಆ ಪದ್ಧತಿ ಇಲ್ಲವೇ? ಹಿಂದೂ ಶಾಸ್ತ್ರ. ನಾವೇನು ಮಾಡೋಣ. ಹಿಂದುಗಳೇ ಆ ಶಾಸ್ತ್ರಕ್ಕೆ ಒಪ್ಪದಿದ್ದರೆ ಹೇಗೆ? ನಿಮ್ಮ ರಾಣಿಯವರು ಪುನಶ್ಚ ರಾಣಿಗಿರಿಯನ್ನು ತಾವೇ ಮಾಡಬೇಕೆಂದು ಅಪೇಕ್ಷಿಸುತ್ತಿರುವಂತಿದೆ. ಅದು ನಡೆಯದ ಮಾತು" ಎಂದು ಗದ್ದರಿಸಿದರು. ಭೈರವಿಯು "ನವಾಬರೇ, ನೀವು ಬಹಳ ಬುದ್ಧಿವಂತರೆಂದು ತಿಳಿದಿದ್ದೆ. ಈ ರಾಣಿಯು ಎಂದೆಂದಿಗೂ ನಿಮ್ಮಲ್ಲಿ ರಾಜ್ಯಭಿಕ್ಷೆಯನ್ನು ಬೇಡುತ್ತಾಳೆಂದು ತಿಳಿಯಬೇಡಿರಿ. ರಾಣಿಯನ್ನು ಬಂಧನದಿಂದ ಬಿಡಿಸಿಕೊಡಿರಿ. ಅವರೂ ನನ್ನಂತೆ ಬೈರಾಗಿಗಳಾಗಿ ನಾವಿಬ್ಬರೂ ಹೊರಟುಹೋಗುತ್ತೇವೆ" ಎಂದಳು. ನವಾಬರು "ನಿಮ್ಮಂತಹ ರಾಜಸ್ತ್ರೀಯರು ಬೈರಾಗಿನಿಯರಾಗುವುದು ಸುಲಭವೆಂದು ತಿಳಿದಿದ್ದೀರಿ. ಅದೆಲ್ಲಾ ನಡೆಯದ ಮಾತು. ನಿಮ್ಮ ರಾಣಿಯವರು ಮರ್ಯಾದೆಯಿಂದ ಈ ಸ್ವೀಕಾರಕ್ಕೆ ಒಪ್ಪಲೇಬೇಕು" ಎಂದು ಹೇಳಿ ಹೊರಟುಹೋದರು. ಈ ಮಾತುಗಳನ್ನೆಲ್ಲಾ ರಾಣಿಯು ಕೇಳಿಸಿಕೊಳ್ಳುತ್ತಿದ್ದಳು. ಭೈರವಿಯು ಒಳಕ್ಕೆ ಬರುತ್ತಲೇ ಅವಳನ್ನಪ್ಪಿಕೊಂಡು ರಾಣಿಯು ಅಳಲಾರಂಭಿಸಿದಳು

ರಾಣಿಯು ಭೈರವಿಯನ್ನು ಕುರಿತು "ಇದೇನು ಈ ನವಾಬರ ಮಾತುಗಳು ವಿಚಿತ್ರವಾಗಿವೆ. ನಾನು ಸ್ವೀಕಾರ ಮಾಡಿಕೊಂಡು ನಗರಕ್ಕೊಬ್ಬರಾಜರನ್ನು ಮಾಡಿಕೊಡಬೇಕಂತೆ ನಾನೆಂದಿಗೂ ಅದನ್ನು ಮಾಡಲಾರೆ. ಈ ನಗರದ ರಾಜ್ಯವು ಹಾಳಾಗಿಹೋಯಿತು. ಅದಕ್ಕೆ ಯಾರು ಕಾರಣಭೂತರೆಂದು ಹೇಳುವಹಾಗಿಲ್ಲ. ಬಸಪ್ಪನಾಯಕರವರು ಮರಣಹೊಂದುತ್ತಲೇ ಯುವರಾಜ ಚೆನ್ನಬಸಪ್ಪನಾಯಕನಿಗೆ ಪಟ್ಟ ಕಟ್ಟಿದ್ದರೆ ನನಗೆ ಇಷ್ಟು ವ್ಯಥೆಗೆ ಕಾರಣವೇ ಇರುತ್ತಿರಲಿಲ್ಲ. ಮಹಾಮಂತ್ರಿ ರಾಮಕೃಷ್ಣರವರು, ಅಭಿರಾಮಸ್ವಾಮಿಗಳು, ಪುರಜನರು, ಪಾಳೆಯಗಾರರು, ವಿದ್ವಾಂಸರು ಅಂದು ನನಗೆ ಈ ನಗರದ ಪಟ್ಟ ಕಟ್ಟಿದರು. ಅದಕ್ಕೆ ಶಾಸ್ತ್ರವೆಲ್ಲಿತ್ತು? ಅಂದು ಮಹಾಮಂತ್ರಿಗಳು ಇಷ್ಟಪಟ್ಟರು. ವಿದ್ವಾಂಸರೆಲ್ಲಾ ಅವರಿಗೆ ಅನುಕೂಲವಾಗಿ ಶಾಸ್ತ್ರವನ್ನು

ಹೇಳಿದರು. ಇಂದು ಈ ನವಾಬರಿಗೆ ಗುಲಾಮನಾಗಿ ಬಿದ್ದಿರುವ ಒಬ್ಬ ರಾಜ ಬೇಕಾಗಿದೆ. ಅದಕ್ಕೂ ಆ ವಿದ್ವಾಂಸರಶಾಸ್ತ್ರದಲ್ಲಿ ಆಧಾರವಿದೆ. ಈ ಹಾಳುಶಾಸ್ತ್ರವನ್ನು ಸುಡಬೇಕು. ಈ ಸಮಾಜವನ್ನು ಸುಡಬೇಕು" ಎಂದು ಹೇಳಿದಳು.

ಭೈರವಿಯು ನಗುತ್ತಾ "ರಾಣಿಯವರೇ, ಸಮಾಜದ ತಪ್ಪೋ, ರಾಜರ ತಪ್ಪೋ ಅಥವಾ ಶಾಸ್ತ್ರಗಳ ತಪ್ಪೋ, ಹೇಗೇ ಇರಲಿ, ಋಷಿಗಳು ಬರೆದಿಟ್ಟ ಶಾಸ್ತ್ರಗಳಲ್ಲೇನೂ ತಪ್ಪಿಲ್ಲ. ನೋಡಿ ರಾಣಿಯವರೇ, ನಿಮ್ಮಂಥಾ ಯುವತಿಯನ್ನು ವಾರ್ಧಿಕ್ಯದ ಸಮಯದಲ್ಲಿ ಬಸಪ್ಪ ನಾಯಕರು ಮದುವೆಯಾದುದೇ ತಪ್ಪು. ಅವರು ನಿಮ್ಮ ಲೋಕೋತ್ತರ ಸೌಂದರ್ಯವನ್ನು ಕಂಡು ಮೋಹಿತರಾಗಿ ನಿಮ್ಮನ್ನು ಮದುವೆ ಯಾದರು. ಅದೇ ದೊಡ್ಡ ತಪ್ಪು. ಅದರಿಂದಲೇ ಇಷ್ಟೊಂದು ಅನರ್ಥಗಳು. ಆ ಮಹಾರಾಜರು ನಿಮ್ಮನ್ನು ಮದುವೆಯಾದದ್ದೇ ಇಷ್ಟು ಅನರ್ಥಗಳಿಗೆ ಕಾರಣ" ಎಂದಳು. ಭೈರವಿಯು ಆ ಮಾತು ಗಳನ್ನು ಹೇಳುತ್ತಲೇ ರಾಣಿಯ ದುಃಖವು ಇಮ್ಮಡಿಯಾಗಿ ಅವಳು ಕ್ರೋಧೋದ್ದೀಪಿತಳಾದಳು. ರಾಣಿಯು ಉದ್ವೇಗದಿಂದ "ಹೌದು ಗಿರಿಜೆ, ನನ್ನ ಮದುವೆಯಾದುದೇ ಅಪರಾಧ ಅದೇ ನಗರದರಾಜ್ಯದ ನಾಶಕ್ಕೆ ಮೂಲ. ನೀನು ನನ್ನ ಚಿಕ್ಕಂದಿನ ಕಥೆಗಳನ್ನೆಲ್ಲಾ ಬಲ್ಲೆ. ಇಂದು ದುಃಖವು ತಡೆಯಲಾರದೆ ಬರುತ್ತಿದೆ. ಅದರ ಜೊತೆಯಲ್ಲಿ ಹಳೆಯ ನೆನಪುಗಳಲೆಲ್ಲಾ ಹೊಸ ಹೊಸದಾಗಿ ನನ್ನ ಮುಂದೆ ಬಂದು ನಿಲ್ಲುತ್ತಿವೆ. ಎಷ್ಟೋ ನೆನಪುಗಳು ಅಂದು ಸಿಹಿಯಾಗಿದ್ದವು. ಅವೆಲ್ಲವೂ ಇಂದು ಕಹಿಯಾಗಿ ಕಾಣುತ್ತಿವೆ. ನನಗೆ ಈ ಜಗತ್ತೇ ಕಹಿಯಾಗಿ ಕಾಣುತ್ತಿದೆ. ಯಾವುದರಲ್ಲಿಯೂ ಪ್ರಕಾಶವಿಲ್ಲ. ಎಲ್ಲವೂ ಕರಾಳ ಕತ್ತಲೆಯಂತೆ ಭಾಸವಾಗುತ್ತಿವೆ. ಇನ್ನು ನಾನು ಬದುಕಿರಲಾರೆ. ಈ ಜೀವವನ್ನು ಧರಿಸಿರಲಾರೆ ಹಳೆಯ ನೆನಪುಗಳು ಈ ಜೀವವನ್ನು ಚುಚ್ಚಿ ಚುಚ್ಚಿ ನೋಯಿಸುತ್ತವೆ. ಈ ನೋವಿಗಿಂತಲೂ ಸಾವು ಸುಖಮಯವಾಗಿರುತ್ತದೆ. ನೀನು ಋಷಿಗಳು ಬರೆದ ಶಾಸ್ತ್ರಗಳಲ್ಲಿ

ತಪ್ಪಿಲ್ಲವೆಂದು ಹೇಳಿದೆಯಲ್ಲವೇ ? ಆ ಶಾಸ್ತ್ರಗಳು ನಿಜವಾದವುಗಳಾ ಗಿದ್ದರೆ ನಾನು ಪಾಪಿ. ಆ ಶಾಸ್ತ್ರಗಳು ನಿಜವಾಗಿಯೇ ಇರಬೇಕು. ಆದ್ದರಿಂದಲೇ ಈ ಲೋಕವು ನನ್ನನ್ನು ಮಹಾಪಾಪಿಯೆಂದು ಕರೆಯುತ್ತದೆ. ನನ್ನ ಅಂತರಾತ್ಮ ಸಾಕ್ಷಿಯು ನನ್ನನ್ನು ಸಾವಿರಬಾರಿ ಪಾಪಿಯೆಂದು ಹೇಳುತ್ತದೆ. ಗಿರಿಜೆ, ನಾನು ಪಾಪಿಯೆಂದು ನೀನು ಹೇಳುತ್ತಿ. ನಿನ್ನ ಸರ್ವ ನಾಶಕ್ಕೆ ನಾನೇ ಕಾರಣಳೆಂದು ನೀನು ಎಷ್ಟೋ ಬಾರಿ ಹೇಳಿದ್ದೀಯೆ. ಅಂದು ನಾನು ಅದನ್ನು ಒಪ್ಪಿಕೊಳ್ಳಲಿಲ್ಲ. ಇಂದು ಮನಸ್ಸಾಕ್ಷಿಯಿಂದ ನಾನು ಅದನ್ನು ಒಪ್ಪಿಕೊಳ್ಳುತೇನೆ. ನಿನ್ನ ಸರ್ವ ನಾಶಕ್ಕೆ ನಾನೇ ಕಾರಣ. 'ನೀನು ನನ್ನನ್ನು ಹುಲ್ಲುಕಡ್ಡಿಯಂತೆ ತಿರಸ್ಕರಿಸಿ, ಈಗ ಪಾಪವನ್ನೊಪ್ಪಿಕೊಂಡರೆ ಫಲವೇನು?' ಎಂದು ನೀನು ಹೇಳಬಹುದು. ಫಲವಿಲ್ಲ. ಅದನ್ನು ನಾನು ಬಲ್ಲೆ. ಪಾಪವನ್ನೊಪ್ಪಿ ಕೊಳ್ಳುವುದರಿಂದ ಮನಸ್ಸಿಗೆ ಸಮಾಧಾನವಾಗುತ್ತದೆ. ಅದರಲ್ಲಿಯೂ ನನ್ನ ಪಾಪಗಳನ್ನೆಲ್ಲಾ ಪ್ರತ್ಯಕ್ಷವಾಗಿ ಬಲ್ಲ ನಿನ್ನ ಮುಂದೆ ಒಪ್ಪಿ ಕೊಂಡರೆ ಶಾಂತಿಯು ಸಿಗುತ್ತದೆ. ಇಂದು ಇಷ್ಟೊಂದು ಕೆಟ್ಟ ಪರಿಸ್ಥಿತಿ ಯಲ್ಲಿಯೂ ನನ್ನ ದುಃಖಗಳನ್ನು ಹೇಳಿಕೊಂಡು ನನ್ನ ಪಾಪಗಳನ್ನು ಒಪ್ಪಿಕೊಳ್ಳುವುದಕ್ಕೆ ನೀನೊಬ್ಬಳು ನನ್ನ ಸನ್ನಿಧಾನದಲ್ಲಿದ್ದೀಯೆ. ನಿನ್ನೊಡನೆ ಇಂದು ನನ್ನ ಪಾಪಗಳನ್ನೆಲ್ಲಾ ಒಪ್ಪಿಕೊಳ್ಳುತ್ತೇನೆ. ಇಂದೇ ಈ ಪ್ರಾಣಗಳನ್ನು ಪರಿತ್ಯಾಗಮಾಡಬೇಕೆಂದು ಸಂಕಲ್ಪಿಸಿದ್ದೇನೆ. ನಾನು ಅರಿಯದ ಹುಡುಗನೊಬ್ಬನನ್ನು ದತ್ತು ತೆಗೆದುಕೊಂಡು ಅವನ ಸರ್ವ ನಾಶಕ್ಕೆ ಕಾರಣಭೂತಳಾಗಲು ಇಷ್ಟಪಡುವುದಿಲ್ಲ. ನನ್ನ ಪಾಪಗಳನ್ನು ಮುಚ್ಚಿಡಲು ಸಾಧ್ಯವೇ ? ಈ ಲೋಕವು ಅವುಗಳನ್ನೆಲ್ಲಾ ಕಥೆಗಳಾಗಿ ಕಟ್ಟಿ, ಹಾಡುಗಳಾಗಿ ಹಾಡುತ್ತವೆ. ಆ ಹುಡುಗನು ದೊಡ್ಡವನಾಗಿ 'ನನ್ನ ಮಾತೃದೇವತೆಯು ಪಾತಕೀ ಮಹಾಪಾತಕೀ' ಎಂದು ತಿಳಿದು ಕೊಂಡು ಈ ಪ್ರಪಂಚದಲ್ಲಿ ತಲೆ ತಗ್ಗಿಸುವಂತೆ ಮಾಡಲೇ ? ನಾನು ಅದಕ್ಕೊಪ್ಪುವುದಿಲ್ಲ. ಕೇಳು ಗಿರಿಜೆ, ನನ್ನ ಮದುವೆಯಾದಾಗ ನೀನು ಹುಡುಗಿಯಾಗಿದ್ದೆ. ಎಲ್ಲವನ್ನೂ ನೀನು ನೆನೆದುಕೊಳ್ಳಬಹುದು.

ಉತ್ಸಾಹ ವೈಭವಗಳಿಂದ ನನ್ನ ಮದುವೆಯಾಯಿತು. ಅಂದು ಐಶ್ವರ್ಯದಿಂದ ನನ್ನನ್ನು ಎರಕಹೊಯ್ದರು. ಮಹಾರಾಜರವರು ನನ್ನನ್ನು ತಮ್ಮ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದರು. ನನಗೆ ಅವರನ್ನು ಕಂಡರೆ ಬಹಳ ಗೌರವವಿತ್ತು. ಆದರೆ ನಾನು ಅವರನ್ನು ಎಂದೂ ಪ್ರೀತಿಸಲಿಲ್ಲ. ಆ ಪ್ರೀತಿಯ ಜಾಗದಲ್ಲಿ ಯೌವನ ಪ್ರಾದುರ್ಭಾವದಿಂದ ಮೋಹವು ಅಂಕುರಿಸಿತು. ಆ ನನ್ನ ಮೋಹಾಗ್ನಿ ಯಲ್ಲಿ ಎಷ್ಟೋ ಮಂದಿ ಪತಂಗಗಳಂತೆ ಬಿದ್ದು ತಮ್ಮ ಜೀವನವನ್ನು ಮಣ್ಣುಮಾಡಿಕೊಂಡರು. ನಾನು ನನ್ನ ಆ ಕಥೆಯಲ್ಲಾ ಗುಪ್ತವಾಗಿ ತ್ತೆಂದು ಮೊದಮೊದಲು ಭಾವಿಸಿದ್ದೆ. ಅನಂತರ ಅದು ಅನೇಕರ ಬಾಯಿಯಲ್ಲಿ ಹೊರಡುತ್ತಿದ್ದ ಕಥೆಯಾಗಿದ್ದಿತು.

ಬಸಪ್ಪನಾಯಕರ ಹೃದಯಾಂತರಾಳದಲ್ಲಿಯೂ ಆ ಸಂಶಯ ಕೀಟವು ಕುಟುಕುತ್ತಿತ್ತೆಂದು ನನಗೆ ಸಂದೇಹಬಂದಿತ್ತು. ಅದೇ ಸಮಯದಲ್ಲಿ ನಿರ್ಭಾಗ್ಯ ವಿರೂಪಾಕ್ಷನು ನನ್ನ ಮನಸ್ಸನ್ನು ಸೂರೆ ಗೊಂಡನು. ಅವನೇ ನನ್ನ ಸರ್ವನಾಶಕ್ಕೆ ಕಾರಣ. ಅಂದು ಮೋಸದಿಂದ ಮಹಾರಾಜರಿಗೆ ವಿಷವನ್ನು ಕುಡಿಸಿದವನೂ ಆ ವಿರೂಪಾಕ್ಷ. ಆದರೆ ಆ ಕೃತ್ಯವನ್ನು ನನ್ನ ಕೈಗಳಿಂದ, ಈ ಕೈಗಳಿಂದ ಮಾಡಿಸಿದನು. ಈ ಕೈಗಳೆರಡೂ ಧಗಧಗನೆ ಉರಿಯುತ್ತಿವೆ. ನನ್ನ ಕಣ್ಣಿಗೆ ಕಾಣುತ್ತಿದೆ. ನಿನಗೆ ಅದು ಗೋಚರವಾಗುತ್ತಿಲ್ಲ. ನಾನು ಆ ತಪ್ಪನ್ನು ವಿರೂಪಾಕ್ಷನ ಮೇಲೆ ಹೊರಿಸುವುದಿಲ್ಲ. ಮಹರಾಜರಿಗೆ ವಿಷವನ್ನು ಕೊಟ್ಟ ಪಾತಕವು ನನ್ನದು. ಆ ಮಹಾಪಾಪಿಯು ನಾನು. ಅಂದು ವಿಷಪಾನಮಾಡಿ ಮಹಾರಾಜರ ಶರೀರವು ಒದ್ದಾಡಿ ಒದ್ದಾಡಿ ಆ ತೀವ್ರವೇದನೆಯಿಂದ ಪ್ರಾಣವು ಹಾರಿಹೋಯಿತು. ಆ ದೃಶ್ಯವು ಮಾತ್ರಾ ನನ್ನ ಕಣ್ಣು ಮುಂದೆ ಕಟ್ಟಿದಂತಿದೆ. ಆ ಅರಮನೆಯನ್ನು ನಾನು ಬೆಂಕಿ ಹಚ್ಚಿ ಸುಟ್ಟಾಗ, ಆ ಉರಿಯು ಆಕಾಶಮಾರ್ಗವನ್ನು ಮುಟ್ಟುತ್ತಿದ್ದಾಗ ಅದ ರೊಡನೆ ನನ್ನ ಪಾಪಗಳೆಲ್ಲವೂ ಸುಟ್ಟುಹೋಗುತ್ತವೆಂದು ಭಾವಿಸಿದ್ದೆ. ನಾನು ಆ ಅಗ್ನಿಜ್ವಾಲೆಯಲ್ಲಿ ಬಿದ್ದು ಸುಟ್ಟುಹೋಗಿದ್ದರೆ ನನ್ನ ಪಾಪ

ಗಳೆಲ್ಲವೂ ಸುಟ್ಟುಹೋಗುತ್ತಿದ್ದವು. ಅಂದು ಆ ಅಗ್ನಿಯನ್ನು ಪ್ರವೇಶಿಸಲು ಧೈರ್ಯವುಂಟಾಗಲಿಲ್ಲ. ಬದುಕಿಕೊಂಡೆ. ಆ ಅರಮನೆಯಲ್ಲಿ ಅಡಗಿದ್ದ ನನ್ನ ಪಾಪಗಳೆಲ್ಲವೂ ನನ್ನ ಹೃದಯವನ್ನು ಆಕ್ರಮಿಸಿ ಸುಡುತ್ತಿವೆ. ಅದೇ ಅರಮನೆಯಲ್ಲಿ ವಿರೂಪಾಕ್ಷನನ್ನು ಕೂಡಿ ಎಷ್ಟೋ ಭೋಗಗಳನ್ನು ಅನುಭವಿಸಿದೆ. ಅಂದು ಅವನನ್ನು ನಿನಗೆ ದಾನಮಾಡಿದ್ದರೆ ನೀನೆಷ್ಟೋ ಸುಖಿಯಾಗಿರುತ್ತಿದ್ದೆ. ನಾನೂ ಪಾಪಮಾರ್ಗದಿಂದ ಹಿಂತಿರುಗಬಹುದಾಗಿತ್ತು. ಅಂದು ನಿನ್ನನ್ನು ಹಾಳುಮಾಡಿದೆ. ಆ ವಿರೂಪಾಕ್ಷನನ್ನಾದರೂ ಉಳಿಸಿಕೊಳ್ಳುವ ಸ್ವಾಮರ್ಥ್ಯವು ನನಗೆ ಇದ್ದಿತೇನು? ಅಂದು ಭವಾನೀರಾಣಿಯ ಸಮ್ಮುಖದಲ್ಲಿ ವಿರೂಪಾಕ್ಷನು ಸತ್ತುಬಿದ್ದಾಗ ಅವನ ಪಾಪವು ಅಂತ್ಯವಾಗಿಹೋಯಿತು. ಆ ಪಾಪವು ನನ್ನ ಹೃದಯದಲ್ಲಿ ತುಂಬಿಕೊಂಡಿತು. ಆ ಪಾಪದ ವೇದನೆಯು ಮಾತ್ರ ಇಂದಿಗೂ ನನ್ನ ಹೃದಯವನ್ನು ಸುಡುತ್ತಿದೆ. ಸುಖದ ನೆನಪೇ ಬರುವುದಿಲ್ಲ. ಸುಖವೆಂಬುದು ಸುಳ್ಳು ಕಲ್ಪನೆ. ಪಾಪವೆಂಬುದು ಕರ್ಮದ ಶಾಶ್ವತ ಪ್ರತೀಕಾರ. ಭವಾನೀರಾಣಿಯ ಮೇಲೆ ನಾನು ಕ್ರೋಧದಿಂದ ಆಚರಿಸಿದ ದುರುಳತನ. ಅವಳ ಐಶ್ವರ್ಯವನ್ನೂ ದಾನ ಧರ್ಮಗಳನ್ನೂ ಕೇಳಿ ಸಹಿಸಲಾರದೇ ಅವಳ ಪವಿತ್ರನಾಮದೊಡನೆ ಅಸೂಯೆಯಿಂದ ಅವಳನ್ನು ಭಿಕಾರಿಣಿಯಾಗಿ ಮಾಡುತ್ತೇನೆಂದು ಅಷ್ಟು ದುರುಳುತನವನ್ನು ಮಾಡಿಸಿದೆ.

ಭವಾನೀರಾಣಿಯನ್ನು ಭಿಕಾರಿಣಿಯಾಗಿ ಮಾಡುತ್ತೇನೆಂದು ಹಟತೊಟ್ಟೆ. ಇಂದು ನಾನು ನಿಜವಾಗಿಯೂ ಭಿಕಾರಿಣಿಯಾಗಿದ್ದೇನೆ. ಭವಾನೀರಾಣಿಯ ಅಂದಿನ ಸ್ಥಿತಿಯನ್ನೂ ನನ್ನ ಇಂದಿನ ಸ್ಥಿತಿಯನ್ನೂ ಹೋಲಿಸಿಕೊಂಡು ನೋಡಿದರೆ ನನ್ನ ದುರವಸ್ಥೆಯು ನಾಚಿಕೆಗೇಡಾಗಿದೆ. ನನ್ನ ಪಾಪಗಳನ್ನು ಮುಚ್ಚುವುದಕ್ಕಾಗಿ ಮಂತ್ರಿ ರಾಮಕೃಷ್ಣನನ್ನು ಸೆರೆಯಲ್ಲಿಡಿಸಿದೆ. ಯುವರಾಜನು ನನಗೆ ಅವಿಧೇಯನಾಗಿದ್ದಾನೆಂದು ನನ್ನ ಪಾಪಮಾರ್ಗಗಳನ್ನು ಹುಡುಕುತ್ತಿದ್ದಾನೆಂದೂ ದ್ವೇಷದಿಂದ ಅವನನ್ನು ಕೊಲೆಮಾಡಿಸಿದೆ. ಯುವರಾಜನನ್ನು ಕೊಲೆಮಾಡಿದವ

ರಾರು ? ಆ ರಾಮರಾಯನಲ್ಲವೆ? ಅವನಿಗೆ ಎಂತಹ ಮರಣವು ಪ್ರಾಪ್ತವಾಯಿತು. ನನ್ನ ಕಣ್ಣೆದುರಿಗೆ ಅವನನ್ನು ಕತ್ತರಿಸಿ ಹಾಕಿದರು. ನಾನು ಉಳಿಸಿಕೊಳ್ಳಲಾಯಿತೆ? ನನಗೆ ಪ್ರೀತ್ಯಾಸ್ಪದರಾದವರನ್ನೆಲ್ಲಾ ವಿಧಿಯು ಬಲಾತ್ಕಾರದಿಂದ ಕಿತ್ತುಕೊಂಡಿತು ನನ್ನ ಪಾಪವನ್ನು ಮಾತ್ರ ಕಿತ್ತುಕೊಳ್ಳಲಾರದೇ ಹೋಯಿತು, ಯುವರಾಜನ ಕೊಲೆ ಯಿಂದ ನಗರದ ರಾಜ್ಯವೇ ಪಾಪಮಯವಾಯಿತು. ಆ ರಾಜ್ಯದ ಜನರೆಲ್ಲರೂ ಎಷ್ಟು ಪಾಪಿಗಳು. ಅವರೇಕೆ ನನ್ನನ್ನು ಶಿಕ್ಷಿಸಲಿಲ್ಲ. ಮಲ್ಲಿಗಮ್ಮನು ನಿರಪರಾಧಿನಿ. ಅವಳ ಬಾಳನ್ನು ಹಾಳುಮಾಡಿ ಅವಳನ್ನು ಕಾರಾಗೃಹದಲ್ಲಿಟ್ಟು ನೋಯಿಸಿದೆ. ಆ ಜನರು ಅದನ್ನು ನೋಡುತ್ತಿದ್ದರು. ನನ್ನನ್ನೇಕೆ ಶಿಕ್ಷಿಸಲಿಲ್ಲ? ಆ ಮಲ್ಲಿಗಮ್ಮನು ಕಟ್ಟಕಡೆಯಲ್ಲಿ ಹೋಗಿ ಅಗ್ನಿಪ್ರವೇಶ ಮಾಡಿದಳು. ಅವಳು ಒಂದು ದಿನವಾದರೂ ಸುಖವನ್ನು ಕಾಣಲಿಲ್ಲ. ನನ್ನ ಮನಸ್ಸಿನ ಹುಚ್ಚು ಸುಖಕ್ಕಾಗಿ ಮಲ್ಲಿಗಮ್ಮನ ಸುಖವನ್ನು ಬಿಸುಟೆ. ಆದರೇನು! ಅವಳು ಪುಣ್ಯ ಶರೀರದಿಂದ ಪುಣ್ಯ ಮಯಿಯಾಗಿ ಪಾಪಿಷ್ಠಳಾದ ನನ್ನನ್ನು ನೋಡಿ ನಗುತ್ತಿದ್ದಾಳೆ. ಯುವರಾಜನ ಕೊಲೆ, ಮಂತ್ರಿಯ ಬಂಧನ ಇವೆರಡು ಕಾರಣಗಳಿಂದಲೇ ಹೈದರನು ನಗರದ ಮೇಲೆ ದಂಡೆತ್ತಿ ಬಂದನು. ನಾನು ಇದನ್ನೆಲ್ಲಾ ಅರಿಯೆನೆಂದು ತಿಳಿಯಬೇಡ ನೀನು ಹೇಗೆ ನನ್ನ ಸುಖವಿಲಾಸಗಳಿಗೆಲ್ಲಾ ದೂತಿಯಾಗಿದ್ದೆಯೋ ಹಾಗೆಯೇ ನನ್ನ ಪ್ರಾಯಶ್ಚಿತ್ತಕ್ಕೂ ನೀನು ದೂತಿಯಾಗಿ ಶ್ರೀರಂಗಪಟ್ಟಣಕ್ಕೆ ಹೋದೆ. ಅದು ವಿಧಿಯ ಪ್ರೇರಣೆ. ಆ ಕರ್ಮದಲ್ಲಿ ನಿನ್ನ ಜೊತೆಸೇರಿದ್ದ ನೀಲಕಂಠನಿಗೆ ತಕ್ಕ ಪ್ರಾಯಶ್ಚಿತ್ತ ವಾಯಿತು. ಆದರೆ ಇನ್ನೂ ನನ್ನ ಪ್ರಾಯಶ್ಚಿತ್ತವು ಆಗಿಲ್ಲ. ನಾನು ಇದನ್ನೆಲ್ಲಾ ಬಲ್ಲೆ. ನಾನೇ ನನಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ ಬೇಕು.

ಅಭಿರಾಮಸ್ವಾಮಿಯು ನನಗೆ ವಿಜಯವಾಗಲೆಂದು ಚಂಡೀಯಾಗ ವನ್ನು ಮಾಡಿ ಆ ಅಗ್ನಿಕುಂಡದಲ್ಲಿ ದೇಹಪರಿತ್ಯಾಗ ಮಾಡಿದನು. ಅದೇ ಅಗ್ನಿಕುಂಡದಲ್ಲಿ ಮಲ್ಲಿಗಮ್ಮನು ದೇಹತ್ಯಾಗ ಮಾಡಿದಳು. ಮಲ್ಲಿಗಮ್ಮನ

ಸಂಕಲ್ಪವು ಸಿದ್ಧಿಸಿತು. ಅಭಿರಾಮಸ್ವಾಮಿಯ ಸಂಕಲ್ಪವು ಸಿದ್ಧಿಸದೇ ಹೋಯಿತು. ಜ್ಞಾನಿಯೂ ಪವಿತ್ರಾತ್ಮನೂ ಆದ ಅಭಿರಾಮಸ್ವಾಮಿಯು ಏಕೆ ನನಗಾಗಿ ಅಷ್ಟೊಂದು ದಾನಧರ್ಮಗಳನ್ನೂ ದೇವತಾರಾಧನೆಯನ್ನೂ ಕೊನೆಯಲ್ಲಿ ಆ ಮಹಾಯಾಗವನ್ನೂ ಮಾಡಿ ದೇಹಪರಿತ್ಯಾಗ ಮಾಡಿದನೆಂಬುದು ಒಂದು ಅಭೇದ್ಯ ರಹಸ್ಯ. ಆ ಮಹಾನುಭಾವನು ನನ್ನ ಅಪರಾಧಗಳನ್ನೆಲ್ಲಾ ತಿಳಿದೂ ತಿಳಿದೂ ಏಕೆ ಶಿಕ್ಷಿಸಲಿಲ್ಲವೆಂಬುದು ಒಂದು ರಹಸ್ಯ. ಅದನ್ನು ನೀನೂ ಅರಿಯೆ. ಈ ಜಗತ್ತಿನಲ್ಲಿ ಮತ್ತಾರಾದರೂ ಅರಿತಿರುವರೋ ಇಲ್ಲವೋ ನಾನು ಕಾಣೆ. ಆದರೂ ಇಂದು ನನ್ನ ಕಡೆಯದಿನ. ನಾನು ಹೇಳುತ್ತೇನೆ. ಅವನು ನನ್ನ ಜನ್ಮದಾತನಾದ ತಂದೆ." ಈ ಮಾತು ಹೇಳುವಾಗ ಭೈರವಿಯು ಅಪ್ರತಿಭಳಾಗಿ ಕೇಳುತ್ತಿದ್ದಳು. "ಗಿರಿಜೆ, ನಾನು ಶರೀರವನ್ನು ಧಾರಣೆ ಮಾಡಿದಂದಿನಿಂದ ಪಾಪದ ಬೆಟ್ಟಗಳು ಬೆಳೆಯುತ್ತಿವೆ. ಇನ್ನು ಒಂದು ಕ್ಷಣವೂ ನಾನು ಬದುಕಿರಲಾರೆ. ನನ್ನಿಂದ ಮರಣವನ್ನು ಹೊಂದಿದ ಮಹಾರಾಜರು, ಅಭಿರಾಮಸ್ವಾಮಿ, ವಿರೂಪಾಕ್ಷ, ಯುವರಾಜ, ಮಲ್ಲಿಗಮ್ಮ, ರಾಮರಾಯ ಇನ್ನೂ ಎಷ್ಟೋ ಜನ ಅಜ್ಞಾತ ಮರಣವನ್ನು ಹೊಂದಿದ ಪಾಪಿಗಳು, ಇವರೆಲ್ಲರೂ ಮೇಲು ಲೋಕದಲ್ಲಿ ನನ್ನನ್ನು ನೋಡಿ ನಗುತ್ತಿದ್ದಾರೆ. ಈ ಭೂಮಿಯೆಲ್ಲವೂ ನನ್ನನ್ನು ನೋಡಿ ನಗುತ್ತಿದೆ. ನೀನೂ ನನ್ನ ಎದುರಿನಲ್ಲಿ ನಗುತ್ತಿರುವೆ. ಈ ಜಗತ್ತೆಲ್ಲವೂ ನನ್ನನ್ನು ಪರಿಹಾಸ್ಯಮಾಡಿ ನಗುತ್ತಿರುವಂತೆಯೂ ನಾನೊಬ್ಬಳು ಸದಾ ಅಳುತ್ತಿರುವಂತೆಯೂ ನನಗೆ ಭಾಸವಾಗುತ್ತಿದೆ. ನನ್ನ ರೋದನವು ಕೊನೆಗಾಣದ ರೋದನ. ಈ ರಾತ್ರಿ ನನ್ನ ಜೀವನದ ಕಡೆಯರಾತ್ರಿ. ನಾಳೆ ಉದಯಿಸುವ ಸೂರ್ಯನು ನನ್ನನ್ನು ನೋಡಲಾರನು. ಅಲ್ಲಿ ದೂರದಲ್ಲಿರುವ ಕೊಳದಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳಬೇಕು. ಅಥವಾ ರಾಮರಾಯನಿಗೆ ನಿರ್ಮಿಸಿದ್ದಂಥಾ ಚಿತಿಯನ್ನು ನಿರ್ಮಿಸಿ ಚಿತಾರೋಹಣ ಮಾಡಬೇಕು. ಅಥವಾ ಈ ಅರಮನೆಗೆ ಬೆಂಕಿಯನ್ನಿಟ್ಟು ಆ ಉರಿಯುವ ಯಜ್ಞೇಶ್ವರನಲ್ಲಿ ಈ ದೇಹವನ್ನು ಅರ್ಪಣೆಮಾಡಬೇಕು. ಇದಕ್ಕೆಲ್ಲಾ

ನೀನೇ ಸಾಕ್ಷಿ. ಗಿರಿಜೆ, ಇದೊಂದು ಪ್ರಾಯಶ್ಚಿತ್ತವೂ ನನಗೆ ತಕ್ಕ ಪ್ರಾಯಶ್ಚಿತ್ತವಲ್ಲ. ಇದರಿಂದ ನನ್ನ ದುಃಖವು ಪರಿಹಾರವಾಗುವುದಿಲ್ಲ. ನನ್ನ ಪಾಪವು ಪರಿಹಾರವಾಗುವುದಿಲ್ಲ. ಗಿರಿಜೆ, ನೀನು ಅಂದು ಹೇಳಿದ್ದೆ ಯಲ್ಲವೇ ನಿನ್ನ ಜೋಳಿಗೆಯಲ್ಲಿ ಘೋರ ವಿಷವಿದೆಯೆಂದು! ನಾನು ಅದನ್ನು ಮರೆತಿಲ್ಲ. ಅದನ್ನು ನಿನ್ನ ಕೈಯ್ಯಾರ ನನಗೆ ಕೊಡು. ನಾನು ಆ ವಿಷವನ್ನು ನನ್ನ ಹೊಟ್ಟೆಯಲ್ಲಿ ಅಡಗಿಸುತ್ತೇನೆ. ಮಹಾರಾಜರು, ಅವರಿಗೆ ನಾನು ಮಾಡಿದ ಅಪರಾಧಕ್ಕೆ ನೀನು ನನಗೆ ತಕ್ಕ ಶಿಕ್ಷೆ ಮಾಡಿದೆಯೆಂದು ಸಂತೋಷಪಡುತ್ತಾರೆ. ಅವರ ಸಂತೋಷದಿಂದ ನಿನ್ನ ಪಾಪಗಳೆಲ್ಲವೂ ಪರಿಹಾರವಾಗುತ್ತದೆ. ನೀನು ಮಾತ್ರ ಪಾಪಿ ಯಲ್ಲವೆಂದು ಭಾವಿಸಬೇಡ. ನನ್ನ ಪಾಪಕ್ಕೆ ಪ್ರಾಯಶ್ಚಿತ್ತವು ಆರಂಭ ವಾಗಿದೆ. ನಿನಗೂ ಇಂತಹ ಪ್ರಾಯಶ್ಚಿತ್ತದ ದಿನವೊಂದು ಬರುತ್ತದೆ. ಗಿರಿಜೆ, ತಾ ಇನ್ನು ತಡಮಾಡಬೇಡ" ಎಂದು ಕೂಗಲಾರಂಭಿಸಿದಳು.

ಭೈರವಿಯು ಅಷ್ಟರೊಳಗಾಗಿ ತನ್ನ ಜೋಳಿಗೆಯಿಂದ ಒಂದು ಚಿನ್ನದ ಬಟ್ಟಲನ್ನು ಹೊರಕ್ಕೆ ತೆಗೆದು ಅದನ್ನು ನೋಡಿ ನಗಲಾರಂಭಿ ಸಿದಳು. ಆ ಬಟ್ಟಲನ್ನು ನೋಡಿ ರಾಣಿಯು ಚೀತ್ಕಾರಮಾಡಿದಳು. ಭೈರವಿಯು ಜೋಳಿಗೆಯಿಂದ ವಿಷದ ಮಾತ್ರೆಯನ್ನು ತೆಗೆದು ಆ ಬಟ್ಟಲಿನಲ್ಲಿ ಕದರಿ, "ಮಹಾರಾಣಿಯವರೇ, ತೆಗೆದುಕೊಳ್ಳಿರಿ. ನನ್ನ ಛಲವು ಇಂದಿಗೆ ಪೂರ್ತಿಯಾಗುತ್ತದೆ. ನೀವು ಯಾವ ಬಟ್ಟಲಿನಿಂದ ಮಹಾರಾಜರವರಿಗೆ ವಿಷವನ್ನು ಕುಡಿಸಿದರೋ ಅದೇ ಬಟ್ಟಲನ್ನು ನಿಮಗಾಗಿ ರಕ್ಷಿಸಿ ಇಟ್ಟಿದ್ದೇನೆ. ಅದೇ ವಿಷ. ವಿರೂಪಾಕ್ಷನು ಯಾವ ವಿಷವನ್ನು ಮುಚ್ಚಿಟ್ಟುಕೊಂಡಿದ್ದನೋ ಅದೇ ವಿಷ. ತೆಗೆದುಕೊಳ್ಳಿರಿ" ಎಂದು ರಾಣಿಯ ಕೈಗೆ ಕೊಟ್ಟಳು.

ರಾಣಿಯು ಆ ಬಟ್ಟಲನ್ನು ಕೈಗೆ ತೆಗೆದುಕೊಂಡವಳೇ ಎರಡು ಕಣ್ಣುಗಳಿಗೂ ಒತ್ತಿಕೊಂಡಳು. ಅನಂತರ ತಲೆಯಮೇಲಿರಿಸಿಕೊಂಡು ಕ್ಷಣಮಾತ್ರದಲ್ಲಿ ನುಂಗಿಬಿಟ್ಟಳು. ಭೈರವಿಯು ರಾಣಿಯ ಕೈಗೆ ಬಟ್ಟ

ಲನ್ನು ಕೊಟ್ಟು ಅವಳು ಆ ವಿಷವನ್ನು ಬಾಯಿಯೊಳಗೆ ಹಾಕಿಕೊಳ್ಳುವ ವರೆಗೂ ಬಹಳ ಜಾಗರೂಕತೆಯಿಂದ ನೋಡುತ್ತಿದ್ದು ತನ್ನ ಕೈಯ್ಯಲ್ಲಿದ್ದ ಮತ್ತೊಂದು ವಿಷದ ಗುಳಿಗೆಯನ್ನು ಆತುರದಿಂದ ನುಂಗುತ್ತಾ ರಾಣಿಯನ್ನು ತಬ್ಬಿಕೊಂಡಳು. ಎರಡು ಪ್ರಾಣಗಳೂ ಹಾರಿಹೋದವು.



ಶ್ರೀ ಪರಿಮಳ ಪವರ್ ಪ್ರೆಸ್, ಸುಬ್ಬರಾಯನಕೆರೆ ಮೈಸೂರು

## ವೀರಕೇಸರಿಯವರ ಕೃತಿಗಳು



ಪ್ರಕಟವಾಗಿರುವುವು :

೧. **ದೌಲತ್** (ಐತಿಹಾಸಿಕ ಕಾದಂಬರಿ, ಮೂರು ಭಾಗಗಳಲ್ಲಿ)

೨. **ನೇತಾಜಿ** (ಜೀವನ ಚರಿತ್ರೆ)

೩. **ನಗರದ ರಾಣಿ** (ಐತಿಹಾಸಿಕ ಕಾದಂಬರಿ)

